ಅಂತರ ಭಾರತೀಯ ಪುಸ್ತಕ ಮಾಲೆ

# ನಾಡು ಕಾಡಾಯಿತು

ಬಲಿವಾಡ ಕಾಂತಾರಾವ್

ಅನುವಾದ:

ಉಪೇಂದ್ರ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮೊದಲ ಮುದ್ರಣ: 1979 (ಶಕ 1901)
ದ್ವಿತೀಯ ಮುದ್ರಣ: 1990 (ಶಕ 1912)

ರೂ. **24.00**
*Original Title in Telugu* : Dagapadina Thammudu
*by* Balivada Kantharao
*Kannada Translation* : NADU KADAYITU
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016,
ಇವರಿಂದ ಪ್ರಕಟಿತ

# "ದಗಾಪಡಿನ ತಮ್ಮುಡು"

ಕಾವ್ಯರೂಪದಲ್ಲಿ ಹೇಳಲಾಗದ ವಿಷಯಗಳನ್ನು ಸಾಧಾರಣವಾಗಿ ಕಥನಾತ್ಮಕವಾದ ಗದ್ಯರೂಪದಲ್ಲಿ ಹೇಳಲಾಗುತ್ತದೆ. ಛಂದಸ್ಸನ್ನು ಮತ್ತು ಆಲಂಕಾರಿಕ ಶೈಲಿಯನ್ನು ತ್ಯಜಿಸಿ, ವರ್ಣನಾಚಾತುರ್ಯಕ್ಕೆ, ಕಥನ ಕೌಶಲ್ಯಕ್ಕೆ ಮತ್ತು ಪಾತ್ರಗಳನ್ನು ಸೃಷ್ಟಿಸುವುದಕ್ಕೆ ಪ್ರಾಧಾನ್ಯತೆಯನ್ನು ನೀಡಿ ಬರೆಯಲಾದ ಕೃತಿಗಳೇ ಕಾದಂಬರಿಗಳಾಗಿವೆ. ಮಾನವನು, ತನ್ನ ಕಾಲಕ್ಷೇಪಕ್ಕಾಗಿ ಚತುರತೆಯಿಂದ ಹೇಳುವ ಕಥೆಯೇ—ಕಾದಂಬರಿಯ ಮೂಲ.

ಕೀರ್ತಿಶೇಷರಾದ ಕೊಕ್ಕೊಂಡ ವೆಂಕಟರತ್ನಂ ಪಂತುಲು ಅವರ "ಮಹಾಶ್ವೇತ" (1864) ಮತ್ತು ಗೋಪಾಲಕೃಷ್ಣಮ್ಮ ಸೆಟ್ಟಿ ಅವರ "ರಂಗರಾಜ ಚರಿತ" (1872) ಪ್ರಕಟವಾದ ನಂತರ ಬೆಳಕು ಕಂಡ ವೀರೇಶಲಿಂಗಂ ಪಂತುಲು ಅವರ "ರಾಜಶೇಖರ ಚರಿತ್ರಮು" (1878) ಅನ್ನು ಆಂಧ್ರ ಭಾಷೆಯಲ್ಲಿ ಪ್ರಕಟವಾದ ಮೊಟ್ಟಮೊದಲನೆಯ ಕಾದಂಬರಿ ಎಂದು ಪರಿಗಣಿಸಲಾಗುತ್ತಿದೆ. "ವಿಕಾರ್ ಆಫ್ ವೇಕ್‌ಫೀಲ್ಡ್"—ಅನ್ನು ಹೋಲುವ ಈ ಕಾದಂಬರಿ, ಅಂದಿನ ಸಾಮಾಜಿಕ ಜೀವನದ ದೂರದರ್ಶಿನಿಯಂತಿದೆ. ಆಂಧ್ರ ಸಾಮಾಜಿಕ ಕಾದಂಬರಿಗಳ ಪಿತಾಮಹರೆಂದು ಪ್ರಸಿದ್ಧಿಯಾಗಿರುವ ಯನದಗು ಕಂದಕೂರಿ ಅವರು ಮೂಲತಃ ಮಾನವತಾವಾದಿ. ಆಂಧ್ರರ ಸುಪ್ತ ಚೈತನ್ಯವನ್ನು ಜಾಗೃತಗೊಳಿಸಲು ಚಲಂ ಅವರು ವಿಫಲಗೊಂಡರಾದರೂ, ಕಂದಕೂರಿ ಅವರು ಇದರಲ್ಲಿ ಯಶಸ್ವಿಯಾದರು. ಆಂಧ್ರರ ಹೃದಯವೀಣೆ ಮಿಡಿಯುವಂತೆ ಮಾಡಲು ಚಲಂ ವಿಫಲರಾದರು. ಆದರೆ ಕಂದಕೂರಿ ಅವರು, ಆಂಧ್ರರ ಹೃದಯವೀಣೆಗೆ ಶ್ರುತಿ ನೀಡಿ ಸಂಗೀತ ಹೊರಹೊಮ್ಮುವಂತೆ ಮಾಡಿದರು.

ಆಂಧ್ರ ಸ್ಕಾಟ್—ಎಂಬ ಬಿರುದು ಪಡೆದಿರುವ ಲಕ್ಷ್ಮೀನರಸಿಂಹಂ ಅವರು, ತಮ್ಮ ಕಥೆಯ ಪರಿಸರ ಮತ್ತು ಸನ್ನಿವೇಶಗಳನ್ನು ಸೃಷ್ಟಿಸುವಲ್ಲಿ "ಸ್ಕಾಟ್", "ಮೆಡೋನ್ ಟೆಯಲರ್" ಮತ್ತು "ಡಿಕನ್ಸ್"ನನ್ನೂ ಸಹ ಮರೆಸುವಂತಹ ಪ್ರತಿಭೆ ಪಡೆದಿದ್ದರು. ಇವರಿಂದಾಗಿಯೇ ಆಂಧ್ರ ಕಾದಂಬರಿಗಳು, ಚತುರ ಸಂವಾದಗಳಿಂದ ಕೂಡಿದ ನಾಟಕೀಯ ಮೆರಗು ಪಡೆದವು. ಕಲ್ಪನಾ ಚಮತ್ಕಾರ ಮತ್ತು ಪರಿಹಾಸ ಕುಶಲತೆಗಳು ಇವರ ಕಾದಂಬರಿಗಳ ಆಸ್ತಿಯಾಗಿವೆ.

ಆಧುನಿಕ ಕಾದಂಬರಿ ಸಾಹಿತ್ಯವನ್ನು ಆಧರಿಸಿದ "ಆಂಧ್ರ ಪ್ರಚಾರಿಣಿ ಗ್ರಂಥಮಾಲ", ಪತ್ತೆದಾರಿ ಕಾದಂಬರಿಗಳೂ ಸೇರಿದಂತೆ ಸಾಮಾಜಿಕ ಮತ್ತು ಸಾಹಿತ್ಯಪೂರ್ಣವಾದ ಕೃತಿಗಳನ್ನೂ ಸಹ ಮನ್ನಿಸಿ, ಅವುಗಳನ್ನು ಪ್ರಕಟಿಸುವಲ್ಲಿ ನೆರವಾಯಿತು. ಇದೇ ಸಮಯದಲ್ಲಿ, ಭೋಗರಾಜು ನಾರಾಯಣ ಮೂರ್ತಿ ಅವರ ಪ್ರಸಿದ್ಧ ಕಾದಂಬರಿ "ವಿಮಲಾದೇವಿ"—ಯನ್ನು ಪ್ರಕಟಿಸಿದ "ವಿಜ್ಞಾನಚಂದ್ರಿಕಾ ಮಂಡಲಿ"—ಯು ಇತರ ಕೆಲವು ಕಾದಂಬರಿಗಳನ್ನೂ ಸಹ ಪ್ರಕಟಿಸಿತು. "ಆಸ್ತಮಯಮು", "ಆಂಗ್ಲರಾಜ್ಯ ಸ್ಥಾಪನಮು", "ಧರಣಿ ಕೋಟ"—ಮುಂತಾದ ಕಾದಂಬರಿಗಳನ್ನು ಬರೆದು ಕೀರ್ತಿವಂತ ರಾದ ಭೋಗರಾಜು ಅವರು, "ಆಂಧ್ರ ರಾಷ್ಟ್ರಮು"—ಎಂಬ ವೈಜ್ಞಾನಿಕವಾದ ಮತ್ತು ಕಾಲ್ಪನಿಕವಾದ ಕಾದಂಬರಿಯನ್ನು ಬರೆದು ಅಮರ ಖ್ಯಾತಿ ಪಡೆದರು.

ಭಾರತದ ಸ್ವಾತಂತ್ರ್ಯ ಸಂಗ್ರಾಮದ ಪ್ರತಿಫಲವಾಗಿ ಪ್ರಕಟವಾದ ಸಮಕಾಲೀನ ಐತಿಹಾಸಿಕ ಕಾದಂಬರಿಗಳಲ್ಲಿ ಅಕ್ಕಿರಾಜು ಅವರ "ಟಿಪ್ಪುಸುಲ್ತಾನ್", ವೆಂಕಟಶಾಸ್ತ್ರಿ ಅವರ "ರಾಯಚೂರು ಯುದ್ಧಮು", ರಾಘವ ಚಂದ್ರಯ್ಯನವರ "ವಿಜಯನಗರ ಸಾಮ್ರಾಜ್ಯಮು", ವೆಂಕಟ ಪಾರ್ವತೀಶ್ವರರ "ಪ್ರಮದಾವನಮು", ವೆಲಾಲ ಸುಬ್ಬ ರಾವು ಅವರ "ರಾಣಿ ಸಂಯುಕ್ತ"—ಮುಂತಾದವು ಹೆಚ್ಚು ಪ್ರಸಿದ್ಧಿಯಾಗಿವೆ. ಐತಿಹಾ ಸಿಕ ಮತ್ತು ಸಾಮಾಜಿಕ ಕಾದಂಬರಿಗಳಲ್ಲಿ ವೆಂಕಟ ಪಾರ್ವತೀಶ್ವರರ "ಮಾತೃ ಮಂದಿರಮು", ದೇವಾಲಯಗಳಲ್ಲಿ ಪರಿಜನರಿಗೆ ಪ್ರವೇಶ ನೀಡುವುದು, ಮದ್ಯಪಾನ ನಿಷೇಧ ಮತ್ತು ಸತ್ಯಸಂಧತೆಯಂತಹ ಗಾಂಧೀಜಿ ಅವರ ಉದಾತ್ತ ಧ್ಯೇಯಗಳನ್ನು ಒಳಗೊಂಡ ಕಾದಂಬರಿಯಾಗಿದೆ. ಇಪ್ಪತ್ತನೆಯ ಶತಮಾನದ ಆರಂಭದೊಡನೆ, ಹೊಸ ಹೊಸ ಸಾಮಾಜಿಕ ಸಮಸ್ಯೆಗಳು ಹುಟ್ಟಿಕೊಂಡದ್ದರಿಂದ, ಸಾಹಿತ್ಯಪೂರ್ಣವಾದ ಮತ್ತು ಐತಿಹಾಸಿಕ ಕಾದಂಬರಿಗಳ ಬಗ್ಗೆ ಜನಸಾಮಾನ್ಯರಿಗಿದ್ದ ಆದರಾಭಿಮಾನ ತಕ್ಕಮಟ್ಟಿಗೆ ಕಡಿಮೆಯಾಯಿತು.

ಆಧುನಿಕ ಕಾದಂಬರಿಗಳ ಯುಗವಾದ ಈ ಶತಮಾನದ ಆರಂಭದಲ್ಲಿ, "ಆಂಧ್ರ ಪ್ರಚಾರಿಣಿ ಗ್ರಂಥಮಾಲ", "ವಿಜ್ಞಾನಚಂದ್ರಿಕಾ ಮಂಡಲಿ", "ವೆಗುಜುಕ್ಕ ಗ್ರಂಥಮಾಲ", "ಸರಸ್ವತಿ ಗ್ರಂಥ ಮಂಡಲಿ", "ಆಂಧ್ರ ಭಾಷಾಭಿವರ್ಧಿನಿ ಸಂಘಮು", "ಸಾಧನ ಸಮಿತಿ"—ಮುಂತಾದ ಸಂಸ್ಥೆಗಳು, ಕಾದಂಬರಿ ಲೇಖನ ಸ್ಪರ್ಧೆಗಳನ್ನು, ಬಂಗಾಳಿ

ಮತ್ತು ಕನ್ನಡ ಭಾಷೆಯಲ್ಲಿನ ಕೃತಿಗಳ ಅನುವಾದಗಳನ್ನು ಪ್ರಕಟಿಸಿದವು. ಇದೇ ಸಮಯದಲ್ಲಿ ಕೆಲವೊಂದು ವೃತ್ತಪತ್ರಿಕೆಗಳೂ ಸಹ ಕಾದಂಬರಿಗಳ ಪ್ರಕಟಣೆಗೆ ಪ್ರೋತ್ಸಾಹ ನೀಡಿದ್ದರಿಂದ, ಕಾದಂಬರಿಗಳ ಲೇಖಕರಿಗೆ ಹೆಚ್ಚಿನ ಉತ್ತೇಜನ ದೊರೆತಿತು. ಗಾಂಧೀಜಿ ಅವರು ರಾಜಕೀಯ ರಂಗವನ್ನು ಪ್ರವೇಶಿಸಿದಾಗ, ಆಂಧ್ರದಲ್ಲಿ ಕ್ರಮೇಣವಾಗಿ ಸಾಹಿತಿಕ (Literary) ಕಾದಂಬರಿಗಳ ಸಂಖ್ಯೆ ಕ್ಷೀಣಿಸತೊಡಗಿತು.

ವಿಶ್ವನಾಥರ "ಏಕವೀರ"—ಮಾತ್ರ ಇದಕ್ಕೆ ಅಪವಾದವಾಗಿದೆ. ಆಂಧ್ರದಲ್ಲಿ, ಆಗಿನ್ನೂ ಆಧುನಿಕ ಕಾದಂಬರಿಗಳು ಉತ್ಪತ್ತಿಯ ದೆಸೆಯಲ್ಲಿದ್ದುದೇ ಇದಕ್ಕೆ ಕಾರಣವಾಗಿರಬಹುದು.

"ವಂದೆ ಮಾತರಂ–ಮಂದೆ ರಾಜ್ಯಂ"—ಘೋಷಣೆಯೊಡನೆ ಪ್ರಾರಂಭವಾದ ರಾಷ್ಟ್ರೀಯತೆಯ ಕಿಚ್ಚಿನಿಂದ, ಸುಮಾರು ನಾಲ್ಕು ದಶಕಗಳಲ್ಲಿ ಆಂಧ್ರ ಸಾಹಿತ್ಯ ಸ್ವರೂಪವೇ ಬದಲಾಯಿತು. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ನಾಯಕ—ಭಗೀರಥರು ತೋರಿಸಿದ ದಾರಿಯಲ್ಲಿ ಆಂಧ್ರ ಸಾಹಿತಿಗಳು ಮುಂದುವರಿದರು. ಎಲ್ಲಾ ನದಿಗಳು ಸಮುದ್ರವನ್ನು ಸೇರುವಂತೆ, ಆಂಧ್ರತ್ವದ ಭಾವನೆಯು, ಅಖಂಡ ರಾಷ್ಟ್ರೀಯತೆಯಲ್ಲಿ ಲೀನವಾಯಿತು. ಆಂಧ್ರತ್ವವು ಭಾರತೀಯ ಅಭಿಮತಕ್ಕೆ ಅಲಂಕಾರಪ್ರಾಯವಾಗಿದೆ—ಎಂದು ಭಾವಿಸಲಾಯಿತು. ಇದರ ಫಲವಾಗಿ 'ಗುರಜಾಡ' ರಾಯಪ್ರೊಲು, ವಿಶ್ವನಾಥ ಮುಂತಾದವರು ದೇಶಭಕ್ತಿಯಿಂದ ಕೂಡಿದ ಕಾವ್ಯಗಳನ್ನು ರಚಿಸಿದರು. ಇದೇ ಸಮಯದಲ್ಲಿ ದೇಶಭಕ್ತಿಯನ್ನು ಮತ್ತು ಸಾಂಸ್ಕೃತಿಕ ಅಭಿಮತಗಳನ್ನು ಕೂಡ ಕಾದಂಬರಿಗಳು ಪ್ರಚುರಗೊಳಿಸಿದವು.

"ವೆಯಿ ಪಡಗಲು"—ಆಂಧ್ರದಲ್ಲಿ ಪ್ರಕಟವಾದ ಮೊಟ್ಟಮೊದಲನೆಯ ಸಾಂಸ್ಕೃತಿಕ ಕಾದಂಬರಿ. ಇದರ ಹಿಂದಿ ಅನುವಾದ–"ಸಹಸ್ರ ಫಣ್". ಈ ಬೃಹತ್ ಕಾದಂಬರಿಗೆ, ಆಂಧ್ರ ಸಾಹಿತ್ಯದಲ್ಲಿ ಒಂದು ಪ್ರತ್ಯೇಕ ಸ್ಥಾನವಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಜೀರ್ಣಗೊಳ್ಳಲು ಆರಂಭಿಸಿದ್ದ ಭಾರತದ ಸಂಸ್ಕೃತಿಯ ಪ್ರತಿರೂಪವೇ—"ವೆಯಿ ಪಡಗಲು."

ಸ್ವರ್ಗೀಯ ಅಡವಿ ಬಾಪಿರಾಜು ಅವರು, ತಮ್ಮ "ಹಿಮಬಿಂದು" ಕಾದಂಬರಿಯೊಡನೆ, ಕಾದಂಬರಿ ಸಾಹಿತ್ಯದಲ್ಲಿ ಒಂದು ಹೊಸ ಶಾಖೆಯನ್ನೆ ಆರಂಭಿಸಿದರು. ಅವರ ಈ ಕಾದಂಬರಿಯು, ಅತ್ತ ಸಾರಸ್ವತ ಲೋಕದ ಮೇಲೂ, ಇತ್ತ ಚಿತ್ರಕಲಾ ಕ್ಷೇತ್ರದ ಮೇಲೂ ತನ್ನ ಪ್ರಭಾವ ಬೀರಿತು. ಅಡವಿ ಬಾಪಿರಾಜು ಅವರ "ನಾರಾಯಣ ರಾವು", ಆಧುನಿಕ ಆಂಧ್ರ ಸಾಂಸ್ಕೃತಿಕ ಜೀವನದ ಪೂರ್ವಭಾಗಕ್ಕೆ ಸಂಬಂಧಿಸಿದ ಒಂದು ಕಾಲ್ಪನಿಕ ಚಿತ್ರಣವಾಗಿದೆ. ಬಾಪಿರಾಜು ಅವರ ಕಾದಂಬರಿಗಳು ಗದ್ಯಕಾವ್ಯ ಪಕ್ಷಪಾತಿಯಾಗಿವೆ. ವಿಶ್ವನಾಥ ರಾವು ಅವರ ಕಾದಂಬರಿಗಳು ಧರ್ಮ ಪ್ರಬೋಧಕ ಕಾವ್ಯ ಪಕ್ಷಪಾತಿಯಾಗಿವೆ.

ಉನ್ನವ ಲಕ್ಷ್ಮೀನಾರಾಯಣರ "ಮಾಲಪಲ್ಲಿ"—ಯಲ್ಲಿ ಅಭ್ಯುದಯಗಾಮಿಗಳ

ಪ್ರಗತಿಯನ್ನು ನಿರೋಧಿಸುವ ಸಾಮಾಜಿಕ ಕಟ್ಟಳೆಗಳನ್ನು ಚಿತ್ರಿಸಲಾಗಿದೆ. ಲಕ್ಷ್ಮೀ ನಾರಾಯಣರು, ಜಾತಿ ಮತ್ತು ಕುಲಗಳ ಮೇಲೆ ಆಧಾರಗೊಂಡ ನಮ್ಮ ಸಮಾಜ ವನ್ನು ವಿಶ್ಲೇಷಿಸಿ, ನಮ್ಮ ಸಮಾಜವು ಹರಿಜನರನ್ನು ಶೋಷಿಸುತ್ತಿದೆ ಎಂಬ ಅಭಿಪ್ರಾಯ ವನ್ನು ವ್ಯಕ್ತಪಡಿಸಿದರು. ಲಕ್ಷ್ಮೀನಾರಾಯಣರ ಈ ಕಾದಂಬರಿಯನ್ನು ಆರ್ಥಿಕ ದೃಷ್ಟಿಯಿಂದಲೂ ವಿಶ್ಲೇಷಿಸಿದವರಿದ್ದಾರೆ. ಉಳ್ಳವರು, ಇಲ್ಲದವರನ್ನು ಶೋಷಿಸು ವುದು—ಅಂದರೆ—ಅಧಿಕಾರವುಳ್ಳವರು—ಎಂಬ ವಿವರಣೆ ನೀಡಿದವರಿದ್ದಾರೆ. ಇಲ್ಲ ದವರು ಉಳ್ಳವರನ್ನು ಶೋಷಿಸುವುದು ಅಂದರೆಯೇ—"ಸಮಾಜವಾದ"—ಎಂಬ ಅರ್ಥವಿವರಣೆಯನ್ನು ಸಹ ನೀಡಲಾಗಿದೆ. ಅದು ಏನೇ ಆಗಿರಲಿ, "ವೆಯಿ ಪಡಗಲು", "ಏಕವೀರ" ಮತ್ತು "ನಾರಾಯಣ ರಾವು"—ಕಾದಂಬರಿಗಳಂತೆಯೇ, "ಮಾಲಪಲ್ಲಿ" ತನ್ನದೇ ಆದ ಒಂದು ವಿಶಿಷ್ಟತೆಯನ್ನು ಹೊಂದಿದೆ. ಶಿಷ್ಟ ವ್ಯವಹಾರ ಮತ್ತು ಭಾಷಾ ಶ್ರೇಷ್ಠತೆಯು ಈ ಕಾದಂಬರಿಯ ವಿಶೇಷತೆಯಾಗಿದೆಯಲ್ಲದೆ, ಆ ದಿನಗಳಲ್ಲಿ, ಭಾಷೆಗೆ ಸಂಬಂಧಪಟ್ಟಂತೆ ತಲೆದೋರಿದ್ದ ವಿವಾದವನ್ನು ಉಪಶಮನಗೊಳಿಸಿತ್ತು.

ಇಲ್ಲಿ "ಚಲಿಯಲಿ ಕಟ್ಟ"—ದ ಬಗ್ಗೆ ಎರಡು ಮಾತು. ವ್ಯಕ್ತಿಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಈ ಕಾದಂಬರಿಯು, ತೆಲುಗು ಕಾದಂಬರಿ ಕ್ಷೇತ್ರದಲ್ಲಿ ಎರಡು ಮುಖ್ಯ ಧೋರಣೆಗಳಿಗೆ ನಾಂದಿಯಾಯಿತು. ಸೀತಾರಾಮಯ್ಯನಂತಹ ವಿರುದ್ಧ ನಾಯಕನ (Anti - Hero), ಮತ್ತು ರತ್ನಾವಳಿಯಂತಹ ಬುದ್ಧಿಪ್ರಧಾನ ನಾಯಕಿಯನ್ನು ಸೃಷ್ಟಿ ಸಿದ ವಿಶ್ವನಾಥ ರಾವು, ಕೇವಲ ಸಂಪ್ರದಾಯಬದ್ಧರಾದ ಮತ್ತು ಗುಣಸಂಪನ್ನರಾದ ನಾಯಕರ ಹಾಗೂ ಶೃಂಗಾರಪ್ರಿಯ ನಾಯಕಿಯರನ್ನು ಮೂಲೆಗೊತ್ತಿದರು. "ಅಸ ಮರ್ಥುನಿ ಜೀವಯಾತ್ರ", "ಅಲ್ಪಜೀವಿ"—ಮುಂತಾದ ಇತರ ಅನೇಕ ಕಾದಂಬರಿಗಳ ವಿರುದ್ಧ ನಾಯಕನ ಪಾತ್ರಗಳ ಸೃಷ್ಟಿಗೆ ವಿಶ್ವನಾಥ ರಾವು ಪ್ರೇರಕಶಕ್ತಿಯಾಗಿದ್ದಾರೆ. ಒಟ್ಟಿನಲ್ಲಿ, ಕಾಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಬರೆಯಲಾದ ಕಾದಂಬರಿಗಳ ಬಗ್ಗೆ ಹೇಳಬೇಕಾದರೆ, ಪರೋಕ್ಷವಾಗಿ ಅಥವಾ ಸೂಕ್ಷ್ಮವಾಗಿ ಪ್ರಸ್ತಾಪಿಸಲಾದ ಕಾಮವು, ನಿಸ್ಸಂಕೋಚವಾಗಿ ಮತ್ತು ಯಾವ ಮುಚ್ಚುಮರೆಯೂ ಇಲ್ಲದೆ ವ್ಯಕ್ತಪಡಿಸಲಾದ ಕಾಮಕ್ಕಿಂತ ಮೇಲು.

ಆಂಧ್ರ ಕಾದಂಬರಿಗಳಲ್ಲಿನ ವಿಭಿನ್ನ ವಾದಗಳು ಮತ್ತು ಶಾಖೆಗಳ ಬೀಜೋತ್ಪತ್ತಿ ಮೊದಲೆಯಾಗಿತ್ತಾದರೂ, ಸ್ವಾತಂತ್ರ್ಯ ಸಂಗ್ರಾಮದೊಡನೆ ಹೊಸ ಶೈಲಿ, ಸಾಮಗ್ರಿ, ಸಂವಿಧಾನ. ಸನ್ನಿವೇಶ ಮತ್ತು ಪಾತ್ರಗಳ ಸೃಷ್ಟಿಗೆ ಪ್ರತ್ಯೇಕ ರೂಪ ದೊರೆತು ಅವು ಪ್ರವರ್ಧಮಾನವಾದವು. ಇದರ ಪ್ರಸ್ಫುಟ ರೂಪವೇ ಬುಚ್ಚಿ ಬಾಬು ಅವರ "ಚಿವರಕು ಮಿಗಿಲೆದಿ". ಶ್ರೀದೇವಿ ಅವರ "ಕಾಲಾತೀತ ವ್ಯಕ್ತಿಲು"—ಮುಂತಾದ ಕಾದಂಬರಿಗಳಲ್ಲಿ ಮನೋವೈಜ್ಞಾನಿಕ ವಿಷಯಗಳನ್ನು ಕುರಿತ ಕಾದಂಬರಿಗಳಲ್ಲಿನ ಲೋಪದೋಷಗಳನ್ನು ಹೋಗಲಾಡಿಸುವಲ್ಲಿ ನೆರವಾದವು. ವಿಶುದ್ಧ ಸಮಾಜವಾದಿಯು ಕ್ರಿಯಾಸ್ವಾತಂತ್ರ್ಯ

ವಾದಿಯು, ವೈಯಕ್ತಿಕ ಕಾದಂಬರಿಗಳ ಪ್ರಚಾರಕರೂ ಆದ ಗೋಪಿಚಂದರ "ಅಸಮರ್ಥುನಿ ಜೀವಯಾತ್ರ" ಯಾವುದೇ ಒಂದು ಪ್ರತ್ಯೇಕ ಮನಃಶಾಸ್ತ್ರ ಸಿದ್ಧಾಂತ ವನ್ನು ಪ್ರತಿಪಾದಿಸುವ ಕಾದಂಬರಿಯಲ್ಲ. ಆದಾಗ್ಯೂ, ವಿರುದ್ಧನಾಯಕ ಪ್ರಧಾನವಾದ ಈ ಕಾದಂಬರಿಯಲ್ಲಿ ವಿವೇಕ ಮತ್ತು ಲೌಕಿಕವಾದ (Materialism). ನಿತ್ಯ ನೈಮಿತ್ತಿಕ ಜೀವನಾವಶ್ಯಕತೆಗಳಿಂದ ಹಾಗೂ ಅಸಂಪೂರ್ಣತೆಗಳಿಂದ ಕೂಡಿದ ಜೀವನದಲ್ಲಿ ಯಾವ ರೀತಿಯಿಂದ ಸಮಾಧಾನಪಟ್ಟುಕೊಳ್ಳಬೇಕೆಂಬುದನ್ನು ಈ ಕಾದಂಬರಿಯಲ್ಲಿ ಚೆನ್ನಾಗಿ ನಿರೂಪಿಸಲಾಗಿದೆ. ವೈಯಕ್ತಿಕ ಮತ್ತು ಸಾಮಾಜಿಕ ಆದರ್ಶಗಳ ಘರ್ಷಣೆಗೆ ತುತ್ತಾದ ವ್ಯಕ್ತಿಯೊಬ್ಬನ ನಾಟಕೋಚಿತ ರೂಪವೇ ಈ ಕಾದಂಬರಿಯ ನಾಯಕ ಸೀತಾರಾಮರಾವು. ಸ್ವಗತ ಸಂಭಾಷಣೆಗಳ ಮೂಲಕ ಕಥೆಯನ್ನು ನಿರೂಪಿಸುವಾಗ ಈ ಕಾದಂಬರಿಯು, ಗೋಪಿಚಂದರ ರಚನಾ ಪ್ರತಿಭೆಯ ಪ್ರತೀಕವಾಗಿದೆ.

"ಚಿವರಕು ಮಿಗಿಲೆದಿ" ಮನಸ್ತತ್ವ ನಿರೂಪಕ ಕಾದಂಬರಿಯಾಗಿದೆ. ಈ ಕಾದಂಬರಿಯ ನಾಯಕ ದಯಾನಿಧಿ ಒಂದು ರೀತಿಯಲ್ಲಿ ಆತ್ಮ ತತ್ವಜ್ಞಾನಿಯಾಗಿದ್ದಾನಲ್ಲದೆ. ಲೈಂಗಿಕ ವಿಷಯಗಳಲ್ಲಿ ಭಾವಸಂಕಿರಣವನ್ನು ಹೊಂದಿದ ಶೀಲಸ್ವಭಾವವುಳ್ಳ ವ್ಯಕ್ತಿ. ಈತ ತನ್ನ ನರಮಂಡಳದ ದೌರ್ಬಲ್ಯವನ್ನು ಜಯಿಸಿ. ಆತ್ಮಪರಿಶೋಧನೆಯಿಂದ ಲೌಕಿಕ ಸಂಗ ಪರಿತ್ಯಾಗವನ್ನು ಸಾಧಿಸುತ್ತಾನೆ. ಈ ದಶಾಬ್ದಿಯಲ್ಲಿ ಸಾಮಾಜಿಕ ಅಥವಾ ಸಂಘ ಸಂಸ್ಕಾರಕ್ಕೆ ಮೊದಲು, ಆತ್ಮಸಂಸ್ಕಾರವನ್ನು ಸಿದ್ಧಿಸಿಕೊಳ್ಳುವುದು ಅಗತ್ಯವೆಂಬ ಭಾವ ನೆಯು ಪ್ರಚುರವಾಗಿದ್ದರಿಂದ, ಸಾಮಾಜಿಕ ಕಾದಂಬರಿಗಳ ರಚನೆಯು ಕುಂಠಿತಗೊಂಡು. ಮನೋವೈಜ್ಞಾನಿಕ ಕಾದಂಬರಿಗಳ ರಚನೆಗೆ ಮಾರ್ಗವಾಯಿತು. ಈ ರೀತಿಯಲ್ಲಿ. ವೀರೇಶಲಿಂಗಂ ಅವರಿಂದ, ಗೋಪಿಚಂದ್, ಬುಚ್ಚಿಬಾಬು ಅವರ ವರೆಗೆ. ಆಂಧ್ರ ಕಾದಂಬರಿ ಗಳ ರಚನೆಯು ಅವಿಚ್ಛಿನ್ನವಾಗಿ, ಸುಸಂಪನ್ನವಾಗಿ ಮುಂದುವರಿದುಕೊಂಡುಬಂದಿದೆ.

ರಾಷ್ಟ್ರೀಯ ಅಭ್ಯುದಯದ ಕಲ್ಪನಾಪರ ಯುಗದ ನಂತರ, ಪ್ರಗತಿಪರ ಅಥವಾ ಅಭಿವೃದ್ಧಿಗಾಮಿಗಳ ಪ್ರಾಬಲ್ಯ ಹೆಚ್ಚಿತೆಂದು ಹೇಳಬಹುದಾಗಿದೆ. ವಿಶ್ವವ್ಯಾಪಿಯಾದ ಮಾರ್ಕ್ಸ್‌ನ ಆರ್ಥಿಕ ಸಿದ್ಧಾಂತಗಳಿಂದ ಹೊರಹೊಮ್ಮಿದ ವಿಚಾರಧಾರೆಗಳು, ಆಂಧ್ರ ಸಾಹಿತ್ಯದ ಮೇಲೂ ಸಹ ತಮ್ಮ ಪ್ರಭಾವವನ್ನು ಬೀರಿದವು. ಅಂದಿನ ದಿನಗಳಲ್ಲಿನ ರಾಜಕೀಯ ಮತ್ತು ಸಾಮಾಜಿಕ ಜನಜೀವನಕ್ಕೆ ಆಗಿನ ಕೆಲವು ಕಾದಂಬರಿಗಳು ಒಳ್ಳೆಯ ಮಣಿದರ್ಪಣಗಳಾಗಿವೆ. ಡಾ॥ ಜಿ. ವಿ. ಕೃಷ್ಣರಾವು ಅವರ ರಾಜಕೀಯ ಅವಹೇಳನ ರೂಪಕವಾದ ಮತ್ತು ಬುದ್ಧಿ ಪ್ರಧಾನವಾದ ಸಾಮಾಜಿಕ ಕಾದಂಬರಿ, "ಕೀಲುಬೊಮ್ಮಲು". ರಾಚಕೊಂಡ ವಿಶ್ವನಾಥ ಶಾಸ್ತ್ರಿ ಮತ್ತು ಬಲಿವಾಡ ಕಾಂತಾರಾವು ಅವರ ಶೀಲಪ್ರಧಾನ ಕಾದಂಬರಿಗಳಾದ "ಅಲ್ಪಜೀವಿ" ಹಾಗೂ "ಗೋಡಮೀದಿ ಬೊಮ್ಮ". ಕೊಡವಟಿಗಂಟಿ ಕುಟುಂಬರಾವು ಅವರ "ಬೆದರಿನ ಮನುಷ್ಯಲು"—ತತ್ಕಾಲ ಪರಿಸ್ಥಿತಿಗಳ ಅತ್ಯುತ್ತಮ ಪ್ರತಿಬಿಂಬಗಳಾಗಿವೆ.

ತೆಲಂಗಾಣಾದಲ್ಲಿ, ನಿಜಾಮರ ಆಡಳಿತದ ವಿರುದ್ಧ ನಡೆದ ಸಂಘರ್ಷಣೆಗೆ ಪೂರಕವಾಗಿ ತೆಲುಗು ಸಾಹಿತಿಗಳೂ ಸಹ ತಮ್ಮ ಲೇಖಣಿಯನ್ನು ಝಳಪಿಸಿದರು. "ಪುಲುಲ ಸತ್ಯಾಗ್ರಹಮು", "ರಥಚಕ್ರಾಲು", "ಓನಮಾಲು", "ದವಾನಲಂ", "ಮೃತ್ಯುಂಜ ಯುಲು". "ಸಿಂಪಗರ್ಜನಂ", "ಕತ್ತುಲವಂತೆನ", "ಪ್ರಜಲ ಮನಿಷಿ" "ಯುಗಸಂಧಿ". "ವೆಲ್ಲುವಲೊ ಪೂಚಿಕ ಪುಲ್ಲಲು"—ಮುಂತಾದ ಕಾದಂಬರಿಗಳು. ಆಗಿನ ಕಾಲದ ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗತಿಗಳ ವಿಶ್ಲೇಷಣಾತ್ಮಕ ಚಿತ್ರಣಗಳಾಗಿವೆ. ಈ ಎಲ್ಲ ಕಾದಂಬರಿಗಳು ರಕ್ತವನ್ನು ಹೆಪ್ಪುಗಟ್ಟಿಸುತ್ತವೆ.

ಆಧುನಿಕ ಸಾಹಿತ್ಯದ ಉಪದೇಶವು ಸೀಮಿತವಾಗಿದ್ದು. ವಿಜ್ಞಾನ ಶಾಸ್ತ್ರಕ್ಕೆ ಅನುರೂಪ ವಾಗಿ ತೀವ್ರತೆಯನ್ನು ಪಡೆದಿದೆ. ವಿಜ್ಞಾನ, ಆಧ್ಯಾತ್ಮಿಕವಾದುದಕ್ಕೆ ಭೌತಿಕ ರೂಪು ಕೊಟ್ಟಿತು. ಇದರಿಂದಾಗಿ, ಸಮಕಾಲೀನ ಕಾದಂಬರಿಗಳು ಹೆಚ್ಚು ಭಾವನಾತ್ಮಕ ವಾಗಿರದೆ, ಪರಿಶೀಲನಾತ್ಮಕವಾದ ರೂಪ ತಳೆದವು. ಇದೇ ಸಮಯದಲ್ಲಿ, ಮನೋ ವಿಶ್ಲೇಷಣಾತ್ಮಕವಾದ ಮತ್ತು ಮನೋವಿಕಾರಗಳಿಗೆ ಸಂಬಂಧಪಟ್ಟ ಕಾದಂಬರಿಗಳು ಹೆಚ್ಚಿ, ಅವು ವೈಜ್ಞಾನಿಕ ಕಾದಂಬರಿಗಳ ಯುಗಕ್ಕೆ ನಾಂದಿಯಾದುವು. ಇವೆಲ್ಲಕ್ಕೂ ಮುದ್ರಣಯಂತ್ರಗಳು, ಗ್ರಂಥಾಲಯಗಳು ಮತ್ತು ಆಕಾಶವಾಣಿಯ ನಿಲಯಗಳು ಒದಗಿಸಿದ ನೆರವನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸಂಪೂರ್ಣವಾದ "ಚೈತನ್ಯ ಪ್ರವಂತಿ"—ಕಾದಂಬರಿ, ಈ ಹಿಂದಿನ ಶತಾಬ್ದಿಯ ವರೆಗೂ ನಮಗೆ ಲಭ್ಯವಾಗಲಿಲ್ಲ. ಆದಾಗ್ಯೂ, ಕೀರ್ತಿಶೇಷರಾದ ಬುಚ್ಚಿಬಾಬು, ಗೋಪಿಚಂದ್, ಶ್ರೀದೇವಿ ಅವರನ್ನು ಮತ್ತು ಕೀರ್ತಿವಂತರಾದ ರಾಚಕೊಂಡ, ಜಿ. ವಿ. ಕೃಷ್ಣರಾವು ಹಾಗೂ ಇತರರು, ತಮ್ಮತಮ್ಮ ಕಾದಂಬರಿಗಳಲ್ಲಿ ನವ ಚೈತನ್ಯವನ್ನು ಮೂಡಿಸುವಂತಹ ದೃಶ್ಯಗಳನ್ನು ಚಿತ್ರಿಸಿದ್ದಾರೆ.

ಶ್ರೀ ಬಲಿವಾಡ ಕಾಂತಾರಾವು ಅವರ "ಪುಣ್ಯಭೂಮಿ" (1969) ಪ್ರಧಾನವಾಗಿ ಭಾರತದ ಭವಿಷ್ಯದ ಬಗ್ಗೆ ಆಶಾಭಾವನೆಯನ್ನು ಮೂಡಿಸುವ ಅಂದವಾದ ಕಾದಂಬರಿ ಯಾಗಿದೆ. ಅವರ "ಗೋಡಮೀದ ಬೊಮ್ಮ" ಮತ್ತು "ದಗಾಪಡಿನ ತಮ್ಮುಡು"— ಸಾಮಾಜಿಕ, ಸಾಂಸ್ಕೃತಿಕ ಹಾಗೂ ಮನೋವಿಶ್ಲೇಷಣಾತ್ಮಕದ "ಗುಣತ್ರಯ"—ಗಳ ಸಮ್ಮಿಳನವಾಗಿದ್ದು, ಜೀವನದ ಸತ್ಯಸಂಗತಿಗಳನ್ನು ಪ್ರತಿಪಾದಿಸುತ್ತವೆ.

"ಗೋಡಮೀದ ಬೊಮ್ಮ"—ಕಾದಂಬರಿಯ ದುರಾಗ್ರಹಿಯಾದ "ಭದ್ರಂ", ರಂಗಯ್ಯ ನಾಯ್ಡುವಿನ ಏಕೈಕ ಪುತ್ರ. "ಇಲ್ಲಾಲ ಶೋಭಯೆ—ಇಂಟಿ ಶೋಭ" (ಮನೆ ಒಡತಿಯ ಶೋಭೆಯೆ, ಮನೆಯ ಶೋಭೆ)—ಎಂದು ಭಾವಿಸಿದ್ದ ಪುಣ್ಯವಂತೆ ಪಾರ್ವತಿ, ನಾಯ್ಡು ವಿನ ಸೊಸೆ. ಸ್ತ್ರೀಗೆ ಸೋದರರನು ಹೆಚ್ಚೋ, ಪತಿಯು ಹೆಚ್ಚೊ—ಎಂದು ತನ್ನ ಪತಿ ಪೀಡಿಸುತ್ತಿದ್ದರೂ, ಸಂಯಮದಿಂದ ಬಾಳುತ್ತಿದ್ದಳು—ಪಾರ್ವತಿ. "ರಸ್ತೆಯ ಮೇಲೆ ಇಜ್ಜಲಿನಿಂದ ಬರೆದ ಗೊಂಬೆ"—ಎಂಬುದರ ಅರ್ಥ ಗ್ರಹಿಸಿಯೂ ಕೂಡ, ಪಾರ್ವತಿಗೆ

ಸೋದರ ಸಮಾನಸಾದ "ರಾಮಂ", ಆಕೆಯ ಮುಖ ನೋಡಿ, ತನ್ನ ಸಾಧುತ್ವ, ಸಾಹಸತ್ವ ಮತ್ತು ಶಾಂತಸ್ವಭಾವದಿಂದ, ಭಾವನಿಗೆ ಸಮಾನನಾದ "ಭದ್ರಂ"ನ ಸ್ವಭಾವ ವನ್ನು ಪರಿವರ್ತಿಸುವ ಈ ಕಾದಂಬರಿಯಲ್ಲಿನ ಪ್ರಸಂಗವು, ಅತ್ಯಂತ ಮನೋಹರವಾಗಿ ಚಿತ್ರಿತವಾಗಿದೆ. ರಂಗಯ್ಯ ನಾಯ್ಡುವಿನ ಅಂತ್ಯಕ್ರಿಯೆಗಳನ್ನು "ಭದ್ರಂ"ನ ಕೈಯಿಂದಲೇ ಮಾಡಿಸುವಲ್ಲಿ ಯಶಸ್ವಿಯಾದ "ರಾಮಂ", ತನ್ನ ಸಹೋದರಿಗೆ ಸಮಾನಳಾದ ಪಾರ್ವತಿಗೆ ಸುಖವನ್ನು ದೊರಕಿಸಿಕೊಟ್ಟು, ಅವಳಿಗೆ ವಿಷಾದವಾಗುವುದನ್ನೂ ಸಹ ಪರಿಗಣಿಸದೆ ಅವರ ಮನೆ ಬಿಟ್ಟು ಹೋಗುವುದರೊಡನೆ ಈ ಕಾದಂಬರಿಯು ಮುಕ್ತಾಯ ವಾಗುತ್ತದೆ. ಹಿರಿಯರಲ್ಲಿ ಇರಬೇಕಾದ ಸತ್‌ಸಂಪ್ರದಾಯಗಳನ್ನು ಮೈಗೂಡಿಸಿ ಕೊಂಡಿದ್ದ ರಂಗಯ್ಯನಂತಹವರು, ಕಿರಿಯರಲ್ಲಿ "ರಾಮಂ"ನಂತಹವರು. ನಮ್ಮ ಸಮಾ ಜದ ಮೇಲು ಪಂಕ್ತಿಗೆ ಸೇರಿದ ವ್ಯಕ್ತಿಗಳು. ಪಾತ್ರಗಳ ಪರಿಚಯ ಮತ್ತು ಅವುಗಳ ಪರಿಚಯ ನೀಡುವ ವೈಖರಿಗೆ. "ಗೋಡಮೀದಿ ಬೊಮ್ಮ" ಪ್ರಸಿದ್ಧಿಯಾಗಿದೆ. ಈ ಕಾದಂಬರಿಯ ಸಂಕ್ಷಿಪ್ತ (Abridged) ಪ್ರಕಟಣೆಯೂ ಸಹ ಈಗ (1974) ಹೊರಬಿದ್ದಿದೆ.

ಕಾಂತಾರಾವು ಅವರ ಇತ್ತೀಚಿನ ಕಾದಂಬರಿ "ಇದೇ ಸ್ವರ್ಗಂ—ಇದೇ ನರಕಂ" (1974) —ಅನ್ನು, ಡಾ॥ ಐ. ಪಾಂಡುರಂಗರಾವು ಅವರು, "ಗಿರಾ ಅನಯನ—ನಯನ ಬಿನ ಬಾಣಿ"—ಎಂಬ ಹೆಸರಿನಲ್ಲಿ ಹಿಂದೀಗೆ ಅನುವಾದಿಸಿದ್ದಾರೆ. ಇಷ್ಟೇ ಅಲ್ಲದೆ, ಈ ಕಾದಂಬರಿಯನ್ನು ಶ್ರೀ ಜಿ. ಸತ್ಯಾರಾವ್, ಇಂಗ್ಲೀಷಿನಲ್ಲೂ ಕೂಡ ಭಾಷಾಂತರಿಸಿದ್ದಾರೆ. ಜೀವನದಲ್ಲಿನ ಅನೇಕ ಕಷ್ಟ—ನಷ್ಟಗಳನ್ನು ಅನುಭವಿಸಿ, ಸಮಾಜದಿಂದ ಬಹಿಷ್ಕೃತನಾಗಿ ಸಲ್ಲದ ಅಪವಾದ ಮತ್ತು ಅವಮಾನಗಳಿಗೆ ಗುರಿಯಾದ ಒಬ್ಬ ವ್ಯಕ್ತಿಯ ಕಥೆಯೇ, ಈ ಕಾದಂಬರಿಯ ವಸ್ತುವಾಗಿದೆ. ತನ್ನ ವ್ಯರ್ಥ ಬಾಳಿನ ಬಗ್ಗೆ ಆತನೆಂದೇ ಆಗಲಿ ಹತಾಶ ಗೊಳ್ಳುವುದಿಲ್ಲ. ಈ ಲೋಕಕ್ಕೆ ತನ್ನ ಅವಶ್ಯಕತೆ ಇದೆ—ಎಂದೇ ಆತ ನಂಬಿದ್ದ. ದಾಸಿ "ಬುಚ್ಚಿ", ಅತ್ತೆಯಾದ "ಮಂಜುಳ" ಮುಂತಾದವರ ಆದರಾಭಿಮಾನಗಳ ನೆರಳಿನಲ್ಲಿ ಬೆಳೆದು ದೊಡ್ಡವನಾದ "ಕಾಂತಂ", ಕೊನೆಯಲ್ಲಿ ಪ್ರಸಿದ್ಧ ಗಾಯಕನಾಗಿ, "ಕಲ್ಯಾಣಿ"— ಎಂಬ ಮೂಕಿಯನ್ನು ಮದುವೆಯಾಗಿ, ವಿಧಿವಿಲಾಸವನ್ನು ಗುರುತಿಸಿ ಚಕಿತನಾಗುತ್ತಾನೆ. ಆತನಿಗೆ ತನ್ನ ಮನಸ್ಸೇ ಒಂದು ಸಾಮ್ರಾಜ್ಯ. ಸ್ವರ್ಗದಲ್ಲಿದ್ದೂ ಅದನ್ನು ನರಕವೆಂದು ಭಾವಿಸುವ, ಮತ್ತು ನರಕದಲ್ಲಿದ್ದೂ ಅದನ್ನು ಸ್ವರ್ಗವೆಂದು ಭಾವಿಸುವ ಮಾನವನ ಸ್ಥೈರ್ಯ ಮತ್ತು ಸಾಮರ್ಥ್ಯಕ್ಕೆ ಈ ಕಾದಂಬರಿಯು ಒಂದು ಒಳ್ಳೆಯ ಉದಾಹರಣೆ ಯಾಗಿದೆ.

"ಪ್ರವಾಹಂ", "ಇದೆದಾರಿ", "ಪುಣ್ಯಭೂಮಿ". "ಸಂಪಂಗಿ", "ನಾಲುಗು ಮಂಚಾಲು" —ಮುಂತಾದ ಕಾಂತಾರಾವು ಅವರ ಇತರ ಕಾದಂಬರಿಗಳು ಕೂಡ ಸಾಕಷ್ಟು ಪ್ರಸಿದ್ಧಿ ಯಾಗಿವೆ. ಇವರ "ಪುಣ್ಯಭೂಮಿ"—ಕಾದಂಬರಿಗೆ, ಆಂಧ್ರಪ್ರದೇಶ ಸಾಹಿತ್ಯ ಅಕಾ

ಡಮಿಯ (1972) ಬಹುಮಾನ ದೊರೆತಿದೆ. ಇವರ "ಸಂಪಂಗಿ" ಎಂಬ ಕಾದಂಬರಿಯನ್ನು, ಆಂಧ್ರ ಪ್ರದೇಶದ ಹೈದ್ರಾಬಾದ್ ಆಕಾಶವಾಣಿಯು ನಾಟಕರೂಪದಲ್ಲಿ ಪ್ರಸಾರ ಮಾಡಿ ಗೌರವಿಸಿದೆ.

"ದಗಾಪಡಿನ ತಮ್ಮುಡು", ಕಾಂತಾರಾವು ಅವರ ಸರ್ವೋತ್ಕೃಷ್ಟ ಕಾದಂಬರಿ. ಈ ಕಾದಂಬರಿಗೆ ಈ ಹೆಸರು ಬಂದಿರುವುದು, ಶ್ರೀಶ್ರೀ ಅವರ "ಮಹಾಪ್ರಸ್ಥಾನಂ"—ನ ಪ್ರಭಾವಫಲವಾಗಿದೆ. ಶ್ರೀ ಕಾಂತರಾವು, ತಮ್ಮ ಈ ಕಾದಂಬರಿಯಲ್ಲಿ ಉದಾತ್ತ ಆದರ್ಶಗಳ ವೈಫಲ್ಯವನ್ನು ಚಿತ್ರಿಸಿದ್ದಾರೆ. ಈ ಕಾದಂಬರಿಯಲ್ಲಿನ ಜನಜೀವನದ ಚಿತ್ರಣ ತೀರ ಸ್ವಾಭಾವಿಕವಾಗಿದ್ದು, ಸಾಮಾನ್ಯ ಕಥೆ-ಕಾದಂಬರಿಗಳಲ್ಲಿ ಸಾಧಾರಣವಾಗಿ ಕಂಡುಬರುವ ಲೋಪದೋಷಗಳು ಇದರಲ್ಲಿಲ್ಲ. ಗ್ರಾಮೀಣ ಜೀವನದ ನಿಷ್ಕಪಟ ವಾತಾವರಣ ಮತ್ತು ಗೌರವ–ಮರ್ಯಾದೆಗಳನ್ನು, ಪಟ್ಟಣದ ಸ್ವಾರ್ಥಪರ ಹಾಗೂ ಕಪಟತೆಯಿಂದ ಕೂಡಿದ ಜೀವನದಲ್ಲಿನ ತಾರತಮ್ಯಗಳನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಆಧುನಿಕ ನೀಚ ರಾಜಕೀಯವು, ಸಂಪ್ರದಾಯಬದ್ಧರಾಗಿದ್ದ ಹಳ್ಳಿಗರ ಜೀವನದಲ್ಲಿನ ಸುಖ–ಸೌಭಾಗ್ಯಗಳನ್ನು ದೋಚಿಕೊಂಡು, ಹಳ್ಳಿಗರು ತಿಂಗಳ ವೇತನ ದೊರೆಯುವಂತಹ ಉದ್ಯೋಗದ ಅನ್ವೇಷಣೆಯಲ್ಲಿ ಅನಿವಾರ್ಯವಾಗಿ ಪಟ್ಟಣಗಳಿಗೆ ವಲಸೆ ಹೋಗುವುದನ್ನು ಈ ಕಾದಂಬರಿಯಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಜನರು ತಮ್ಮ ತಲೆಮಾರುಗಳಿಂದ ಬಂದ ವೃತ್ತಿಯನ್ನು—ವಂಶವೃತ್ತಿಯನ್ನು ಬಿಟ್ಟುಕೊಟ್ಟದ್ದರಿಂದ ಸಾಮಾಜಿಕ ಮತ್ತು ಸಾಂಸಾರಿಕ ಜೀವನದಲ್ಲಿ ತಲೆದೋರಿರುವ ಅನುಬಂಧಗಳನ್ನು ಮತ್ತು ಸಮಸ್ಯೆಗಳನ್ನು ಮನಮುಟ್ಟುವಂತೆ ನಿರೂಪಿಸುವುದು ಕಾಂತಾರಾವು ಅವರಿಗೆ ಕರಗತವಾಗಿದೆ ಎಂಬುದಕ್ಕೆ ಅವರ "ಗೋಡಮೀದಿ ಬೊಮ್ಮ", "ದಗಾಪಡಿನ ತಮ್ಮುಡು", "ಪುಣ್ಯಭೂಮಿ"—ಮುಂತಾದ ಕಾದಂಬರಿಗಳೇ ಸಾಕ್ಷಿಯಾಗಿವೆ. ಕಾಂತಾರಾವು ಒಳ್ಳೆಯ ಕಥೆಗಾರರೂ ಹೌದು. ಮದ್ಯಪಾನದಂತಹ ದುರಾಚಾರಗಳನ್ನು ಶಾಸನಗಳ ಮೂಲಕ ನಿರ್ಮೂಲಗೊಳಿಸುವ ಪ್ರಯತ್ನಗಳ ವೈಫಲ್ಯವನ್ನು ಮನದಟ್ಟು ಮಾಡಿಕೊಡುವ ಅವರ "ದೊಂಗಲು"—ಎಂಬ ಕಥೆ ಪ್ರಸಿದ್ಧಿಯಾಗಿದೆ.

ತೀವ್ರತಮವಾದ ಆರ್ಥಿಕಾಭಿವೃದ್ಧಿ, ರಾಜಕೀಯ ಚೈತನ್ಯಾಭಿವೃದ್ಧಿ, 1945ನೇ ಸಾಲಿನ ಸುಮಾರಿಗೆ ಜಾರಿಗೆ ಬಂದ ಉಳುವವನದೇ ಭೂಮಿ—ಎಂಬ ಶಾಸನ, ಆಂಧ್ರದಲ್ಲಿನ ಗ್ರಾಮಸ್ಥರ ಜನಜೀವನವನ್ನು ಅಲ್ಲೋಲಕಲ್ಲೋಲಗೊಳಿಸಿದುದರ ನೈಜವಾದ ಚಿತ್ರವೇ—"ದಗಾಪಡಿನ ತಮ್ಮುಡು."

ಈ ಕಾದಂಬರಿಯಲ್ಲಿ, ಯಾರ ಹಂಗೂ ಇಲ್ಲದೆ ಸುಖಮಯ ಜೀವನ ನಡೆಸುತ್ತಿದ್ದ ಪುಲ್ಲಯ್ಯ, ಗ್ರಾಮದಲ್ಲಿನ ಸಲ್ಲದ ರಾಜಕೀಯಕ್ಕೆ ಬಲಿಯಾಗಬೇಕಾಗುತ್ತದೆ. ಪುಲ್ಲಯ್ಯ ಶ್ರಮಜೀವಿ, ಕಷ್ಟಪಟ್ಟು ನ್ಯಾಯವಾಗಿ ಬಾಳುವುದು ಅವನ ಆಶಯ. ಆದರೆ ಅವನ ಈ ಆಶಯ ಈಡೇರುವುದಕ್ಕೆ, ನಮ್ಮ ಈ ದೇಶದಲ್ಲಿ ಅವಕಾಶವಿಲ್ಲವೆಂಬುದನ್ನು ಈ

ಕಾದಂಬರಿಯಲ್ಲಿ ನಿರೂಪಿಸಲಾಗಿದೆ. ಪುಲ್ಲಯ್ಯನ ಶೀಲ ಸ್ವಭಾವದ ಪತನ, ಅವನ ಪರಿಶ್ರಮದ ವಿಫಲತೆ ಮತ್ತು ಅವನ ಹತಾಶ ಜೀವನ ಮನಮುಟ್ಟುವಂತೆ ಚಿತ್ರಿತವಾಗಿದೆ. ಒಂದು ರೀತಿಯಲ್ಲಿ, ಪುಲ್ಲಯ್ಯ, ಸಾಮಾಜಿಕ ಮತ್ತು ರಾಜಕೀಯ ಅಸಮಾನತೆಗಳಿಗೆ ಗುರಿಯಾಗಿ, ವೃತ್ತಿಹೀನರಾಗಿ ಭಿಕ್ಷೆ ಬೇಡುವ ಸ್ಥಿತಿಗೆ ಬಂದಿರುವ ಗ್ರಾಮಸ್ಥರ ಪ್ರತೀಕವಾಗಿದ್ದಾನೆ. ಈ ಕಾದಂಬರಿಯು, ಹಳ್ಳಿ ಜೀವನದ ಕ್ಷುದ್ರ ರಾಜಕೀಯವನ್ನು ಕಟುವಾಗಿ ಖಂಡಿಸಿದ್ದು, ಇದೇ ಈ ಕಾದಂಬರಿಯ ವೈಶಿಷ್ಟ್ಯವಾಗಿದೆ.

ಪಂಚಭೂತಗಳಿಂದ ಕೂಡಿದ ಮಾನವನು, ಧರ್ಮಕ್ಕೆ ವಿರುದ್ಧವಾಗಿ ನಡೆದುಕೊಂಡಲ್ಲಿ ಆತನನ್ನು ರಕ್ಷಿಸುವ ಶಕ್ತಿ ಈ ಲೋಕಕ್ಕೇ ಇಲ್ಲ. ಅಧರ್ಮದಲ್ಲಿ ಮುಳುಗಿದ ಮನುಷ್ಯ, ಮಾನ ಮತ್ತು ಪ್ರಾಣಹಾನಿಗೆ ಗುರಿಯಾಗಿ, ಆತ್ಮವಂಚನೆಗೆ ತುತ್ತಾಗುತ್ತಾನೆಯೇ ಹೊರತು, ಜಗತ್ತನ್ನು ವಂಚಿಸುವ ಅವನ ಪ್ರಯತ್ನ ನೆರವೇರುವುದಿಲ್ಲವೆಂಬುದು ಶಾಶ್ವತವಾದ ಸತ್ಯವಾಗಿದೆ. ಈ ಸತ್ಯ–ಸಂಗತಿಯಲ್ಲಿ, ನಮ್ಮ ಈ ಕಾದಂಬರಿಕಾರರಿಗೆ ಪರಮ ವಿಶ್ವಾಸವಿದೆ. ಆದ್ದರಿಂದಲೇ ಅವರು ತಮ್ಮ ಎಲ್ಲಾ ಕಾದಂಬರಿಗಳಲ್ಲೂ ಇದೇ ಅಂಶವನ್ನು ಪ್ರತಿಪಾದಿಸುತ್ತಾ ಬಂದಿದ್ದಾರೆ. ಯಾವ ಅಥವಾ ಎಂತಹುದೇ ಸಾಹಿತ್ಯವಾಗಲೀ, ನೈತಿಕ ಪ್ರಾಧಾನ್ಯತೆ ಇಲ್ಲದೆ ಸಾಹಿತ್ಯವಾಗಿ ಉಳಿಯಲಾರದೆಂಬುದನ್ನು ನಾವು ಮರೆಯಬಾರದು. ಆದುದರಿಂದಲೇ ಶ್ರೀ ಕಾಂತಾರಾವು, ಸರ್ವಶ್ರೇಯಾಭಿಲಾಷಿಯಾದ ಸಂಪೂರ್ಣ ಮಾನವನ ವಿಕಾಸದ ಕಲ್ಪನೆಗೆ ರೂಪು ಕೊಟ್ಟಿದ್ದಾರೆ.

ಮಾನವಸಹಜ ಪ್ರವೃತ್ತಿಗಳನ್ನು, ಸಹಾನುಭೂತಿಗಳನ್ನು ಮನಮುಟ್ಟುವಂತೆ ಚಿತ್ರಿಸಿರುವ ಕಾಂತಾರಾವು, ಪ್ರಕೃತಿಯನ್ನು ವರ್ಣಿಸುವಲ್ಲಿಯೂ ಸಹ ತಮ್ಮ ಕುಶಲತೆಯನ್ನು ಪ್ರದರ್ಶಿಸಿದ್ದಾರೆ. ಪ್ರಕೃತಿಯಿಂದ ದೂರವಾದ ಪುಲ್ಲಯ್ಯ, ಧರ್ಮಕ್ಕೂ ಸಹ ದೂರವಾಗಿ ಸಲ್ಲದ ಕಷ್ಟ–ಕಾರ್ಪಣ್ಯಗಳನ್ನು ಅನುಭವಿಸುವುದು ಅರ್ಥಪೂರ್ಣವಾಗಿದೆ.

ಕಥೆಯ ಆರಂಭದಲ್ಲಿ, ಪುಲ್ಲಯ್ಯ—ಒಂದು ಘೋರ್ಗರೆಯುವ ನದಿಗೂ, ನೀಲಿ—ಆ ನದಿಯ ಎರಡು ದಡಗಳಿಗೂ, ಹೋಲುತ್ತಾರೆ. ಹುಲಿಯ ಮರಿಯಂತಿದ್ದ ಪುಲ್ಲಯ್ಯ, ಕೊನೆಯಲ್ಲಿ ನರಿಯ ಮರಿಯಾಗುತ್ತಾನೆ. ಅಮಾಯಕಳಾದ ನೀಲಿ, ಕೊನೆಯಲ್ಲಿ ದೇವಕನ್ಯೆಯಾಗುತ್ತಾಳೆ. ಆವೇಶಪರನಾದ ಪುಲ್ಲಯ್ಯ, ಕೊನೆಗೆ ಹತಾಶನಾದಲ್ಲಿ, ನೀಲಿ ತುಂಬಿದ ಕೊಡದಂತೆ ಶೋಭಿಸುತ್ತಾಳೆ. ಪರಿಪೂರ್ಣ ವೈವಾಹಿಕ ಜೀವನದಲ್ಲಿ, ಗಂಡ–ಹೆಂಡತಿ, ಪರಸ್ಪರರ ಲೋಪದೋಷಗಳನ್ನು ಮರೆಮಾಚಲು ಪ್ರಯತ್ನಿಸುತ್ತಾರೆ. ಅಕ್ಷರ ಬಾರದ ಹಳ್ಳಿಯ ಹೆಣ್ಣು ನೀಲಿ, ತನ್ನ ಸಂಸ್ಕಾರದಿಂದ ಮೃದುಭಾಷಿಣಿಯಾಗಿ, ಔದಾರ್ಯಮಯಿಯಾಗುತ್ತಾಳೆ. ನೀಲಿ ಈ ಕಾದಂಬರಿಯಲ್ಲಿನ ಪರಿಪೂರ್ಣವಾದ ಮತ್ತು ಸಜೀವ ಪಾತ್ರಗಳಲ್ಲಿ ಉತ್ತಮೋತ್ತಮಳಾಗಿ—ಆದರ್ಶಪ್ರಾಯಳಾಗುತ್ತಾಳೆ.

ರೈತನ ಹೆಂಡತಿಯಾಗಿ, ಗಂಡನಿಗೆ ನೆರವಾಗಿ ನೀಲಿ ತೋರಿಸುವ ಶ್ರದ್ಧಾಭಕ್ತಿ ಸಾಟಿ ಇಲ್ಲದುದಾಗಿದೆ. ಯೌವನದ ಇಳಿಗಾಲದಲ್ಲಿ ನೀಲಿಯ ಕೈಹಿಡಿದ ಪುಲ್ಲಯ್ಯನಿಗೆ,

ಹುಲಿ ವೇಷ ಹಾಕಿ ಲಗಾಟಿ ಹೊಡೆಯುವಲ್ಲಿ ಮತ್ತು ಕುಣಿಯುವಲ್ಲಿ ತನ್ನನ್ನೂ ಮೀರಿಸುವಂತಹ ಮಗ ಹುಟ್ಟಬೇಕೆಂಬ ಆಸೆ. ತನ್ನ ಮಗ ಕಳ್ಳರನ್ನು ಹಿಡಿಯುವ ಅಧಿಕಾರಿಯಾಗಬೇಕೆಂಬುದು ಆತನ ಅಭಿಲಾಷೆ. ಆತನ ಆಸೆ ಈಡೇರಿ, ಅಂತಹ ಮಗನೆ ಹುಟ್ಟಿದ. ಅವನಿಗೆ, ಅವನ ತಾತನ ಹೆಸರನ್ನೆ ಇಡಲಾಯಿತು.

ಜೀವನದಲ್ಲಿನ ಸುಖ–ಸಂತೋಷಗಳು ಶಾಶ್ವತವಲ್ಲ. ಸಲ್ಲದ ವ್ಯಸನಗಳು, ಕಷ್ಟ ಕಾರ್ಪಣ್ಯಗಳು ಬಂದೇ ಬರುತ್ತವೆ. ಪುಲ್ಲಯ್ಯನ ಜೀವನದಲ್ಲೂ ಸಹ ಅಂಧಕಾರ ಏರ್ಪಟ್ಟಿತು. ದೇಶಕ್ಕೆ ಸ್ವಾತಂತ್ರ್ಯ ದೊರೆತ ಸಮಯದಲ್ಲೆ ಅವನ ಬಾಳಿನಲ್ಲಿ ಕತ್ತಲು ಕವಿದದ್ದು ಒಂದು ವಿಪರ್ಯಾಸವೇ ಸರಿ. ದುಷ್ಟ ರಾಜಕೀಯವು, ಆಗ, ಗ್ರಾಮಸ್ಥರ ನಿರ್ಮಲ ಜೀವನವನ್ನು ಕಲುಷಿತಗೊಳಿಸಿತ್ತು. ಎತ್ತ ನೋಡಿದರತ್ತ ದುರ್ಭಿಕ್ಷೆ, ಕ್ಷಾಮ, ಜೀವನದ ಅವಶ್ಯ ವಸ್ತುಗಳ ಕೊರತೆ; ಪ್ರಜಾಪರಿಪಾಲನೆಯ ಹೊಣೆಹೊತ್ತ ಪ್ರಭುತ್ವವೇ ಆಹಾರಧಾನ್ಯಗಳ ವ್ಯಾಪಾರಕ್ಕಿಳಿದುದು; ಹೋಟಲು ಮತ್ತು ಉಪಹಾರ ಗೃಹಗಳ ಪದಾರ್ಪಣೆ; ಕಳ್ಳವ್ಯಾಪಾರ—ಇವು ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರೆತ ನಂತರದ ನಾಗರಿಕ ಲಕ್ಷಣಗಳಾಗಿದ್ದವು. ಈ ನಾಗರಿಕ ಲಕ್ಷಣಗಳು, ಬಹು ಬೇಗನೆ, ಪುಲ್ಲಯ್ಯನ ಗ್ರಾಮ (ಸಿವಿರಿ)ಗೂ ಸಹ ಹರಡಿದ್ದವು. ದುಡಿದು ತಿನ್ನುವುದನ್ನಷ್ಟೇ ಅರಿತಿದ್ದ ಪುಲ್ಲಯ್ಯ ನಿಗೆ, ತನ್ನ ಸುತ್ತುಮುತ್ತಲಿನ ಪರಿಸರದಲ್ಲಿನ ಈ ಬದಲಾವಣೆಗಳಿಂದಾಗಿ, ತಲೆ ತಿರುಗಿತು. "ನ್ಯಾಯಕ್ಕಿಂತ ದುಡ್ಡಿಗೆ ಹೆಚ್ಚಿನ ಗೌರವವಿದೆ. ಇಂದಿನ ಕಾಲದಲ್ಲಿ ದುಡ್ಡಿದ್ದವನೇ ದೊಡ್ಡಪ್ಪ"—ಎಂಬ ಅಭಿಪ್ರಾಯ ಪುಲ್ಲಯ್ಯನಲ್ಲಿ ಬೇರೂರಿತ್ತು.

ಉದರ ನಿಭರಣಾರ್ಥವಾಗಿ ತನ್ನ ಎಲ್ಲಾ ಆಸ್ತಿ–ಪಾಸ್ತಿಗಳನ್ನು ಮಾರಿಕೊಂಡು ಪುಲ್ಲಯ್ಯ ಪಟ್ಟಣ ಸೇರುತ್ತಾನೆ. ಆದರೆ, ಪಟ್ಟಣದ ಜೀವನವು, ಅವನ ಪಾಲಿಗೆ ಮುಳ್ಳಿನ ಹಾಸಿಗೆಯಾಗುತ್ತದೆ. ಕುಟುಂಬ ಪೋಷಣೆಗಾಗಿ, ಪುಲ್ಲಯ್ಯ ಕಳ್ಳನಾಗಬೇಕಾಗುತ್ತದೆ. ತನ್ನನ್ನು ಅಗಲಿರದ ತನ್ನ ಮಗನೇ ತನ್ನ ಬಂಧನಕ್ಕೆ ಕಾರಣನಾಗಿ "ನನ್ನ ಮಗ ಕಳ್ಳರನ್ನು ಹಿಡಿಯುವ ಸರದಾರ"—ನಾಗಬೇಕೆಂಬ ಪುಲ್ಲಯ್ಯನ ಇಚ್ಛಿತಾರ್ಥ, ವಿರೋಧಾಭಾಸ ದಲ್ಲಿ ಈಡೇರುತ್ತದೆ.

ಪಟ್ಟಣದಲ್ಲಿ ಸುಖ ಅರಸಿ ಬಂದುದು ಪುಲ್ಲಯ್ಯನ ಮೊದಲನೆಯ ತಪ್ಪು. ನಗರಕ್ಕೆ ಬಂದದ್ದರಿಂದ ಆತನ ಪತನವೂ ಸಹ ತೀವ್ರಗೊಂಡದ್ದು ಗಮನಾರ್ಹ.

"ನೀಲಮ್ಮ"—ಸಿವಿರಿಯ ಗ್ರಾಮದೇವತೆ. ಗ್ರಾಮದೇವತೆಯ ಹೆಸರನ್ನೇ ಇಟ್ಟು ಕೊಂಡಿದ್ದ ನೀಲಿ, ತನ್ನ ಧರ್ಮ–ಕರ್ಮಗಳಿಂದ ತನ್ನ ಹೆಸರನ್ನು ಸಾರ್ಥಕಗೊಳಿಸಿಕೊಳ್ಳು ತ್ತಾಳೆ. ಎಂತಹ ಪರಿಸ್ಥಿತಿಯೇ ಬರಲಿ, ತನ್ನ ಸಂಯಮವನ್ನು ಕಳೆದುಕೊಳ್ಳದ, ಶಾಂತಿ, ಔದಾರ್ಯಗಳ ಪ್ರತೀಕವಾಗಿರುವ ನೀಲಿ, ಮಹಾಕಾವ್ಯವೊಂದರ ನಾಯಕಿಗೆ ಸಾಟಿಯಾಗಿ ದ್ದಾಳೆ. ದಟ್ಟದಾರಿದ್ರ್ಯದಲ್ಲೂ ಸಹ ಶಿಲಾಪ್ರತಿಮೆಯಂತೆ ಅಚಲಳಾಗಿ, ಜೀವನದ ಆದರ್ಶಗಳನ್ನು ಸಾರ್ಥಕಗೊಳಿಸಲು ನೀಲಿ ಹವಣಿಸುತ್ತಾಳೆ. ತನ್ನ ಗಂಡ ಕಾರಾಗೃಹ

ವಾಸದ ಶಿಕ್ಷೆಗೆ ಗುರಿಯಾದಾಗ್ಯೂ ಕೂಡ, ಪರಿಸ್ಥಿತಿಗಳು ಕಠೋರವಾಗಿದ್ದಾಗ್ಯೂ ಕೂಡ ಆಕೆ ತನ್ನ ಸಹನೆ, ತನ್ನ ಔದಾರ್ಯಗಳಿಂದ ವಿಮುಖಳಾಗುವುದಿಲ್ಲ. ಆಕೆಯ ದೃಷ್ಟಿಯಲ್ಲಿ ಶ್ರೇಯಾಭಿಮಾನಗಳು, ಜೀವನದ ಉದಾತ್ತ ಮೌಲ್ಯಗಳು, ಸೂರ್ಯ-ಚಂದ್ರರಂತೆ ಚಿರಸ್ಥಾಯಿಯಾಗಿವೆ.

ಅತ್ತ ಗಂಡನಿಗೆ ಕಾರಾಗೃಹ ವಾಸ; ಇತ್ತ ಮಕ್ಕಳಿಗೆ ಒಂದು ಗುಟುಕು ಗಂಜಿಯೂ ಇಲ್ಲದ ಪರಿಸ್ಥಿತಿ. ಇಂತಹುದರಲ್ಲಿ ತಾನು ಗರ್ಭಿಣಿ. ನಿಲ್ಲಲು ನೆಲೆ ಇಲ್ಲ; ಅಯ್ಯೋ—ಎಂದು ಮರುಕಪಡುವವರಿಲ್ಲ. ಯಾವುದಕ್ಕೇ ಆಗಲಿ, ಯಾರ ಮುಂದೆಯೇ ಆಗಲಿ ಕೈ ಒಡ್ಡದ ನೀಲಿ, ಭಿಕ್ಷೆ ಬೇಡುವುದು ಅನಿವಾರ್ಯವಾಗುತ್ತದೆ. ಅವಳ ಈ ದಾರುಣ ಪರಿಸ್ಥಿತಿಗೆ ಯಾರು ಕಾರಣ?—ನಾವು, ನಮ್ಮ ನಿರ್ದಯ ಸಮಾಜ. ಹಸಿವಿನಿಂದ ಕಂಗೆಟ್ಟು, ಕಂಗಾಲಾಗಿ, ನಾಚಿಕೆಪಡುತ್ತಲೇ ಒಂದು ತುತ್ತು ಅನ್ನಕ್ಕಾಗಿ ಕಳವು ಮಾಡಿದವನಿಗೆ ಉಗ್ರ ಶಿಕ್ಷೆ. ಪ್ರಜಾಸೇವೆಯ, ಸಮಾಜಸೇವೆಯ ಸೋಗುಹಾಕಿ, ಸಾವಿರ ಜನರ ತುತ್ತನ್ನು ಕಸಿದು ತಿನ್ನುವ ನಾಯಕರನ್ನು ಆರಾಧಿಸುವ ನಾವು, ನಮ್ಮ ನ್ಯಾಯ ಶಾಸ್ತ್ರಗಳು, ನಮ್ಮ ರಾಜ್ಯಾಂಗ ವಿಧಾನಗಳು—ಈ ವಿಪರ್ಯಾಸಕ್ಕೆ ಕಾರಣವೇ ಹೊರತು ಬೇರೇನೂ ಅಲ್ಲ. ಇದಕ್ಕಾಗಿ ಯಾರನ್ನು ದೂಷಿಸಬೇಕೊ—ಏನೋ?

ಆಂಧ್ರಕ್ಕೆ ಸೇರಿದ ಈ ಕಾದಂಬರಿಯಲ್ಲಿನ ಹೆಸರುಗಳನ್ನು ಬದಲಾಯಿಸಿದಲ್ಲಿ, ಈ ಕಾದಂಬರಿಯ ಕಥೆಯನ್ನು ದೇಶದ ಯಾವ ಭಾಗಕ್ಕೇ ಆಗಲಿ ಅನ್ವಯಿಸಬಹುದಾಗಿದೆ. ನಮ್ಮ ಮಾತು ಮತ್ತು ನಮ್ಮ ಕೃತಿಯಲ್ಲಿನ ಅಂತರವನ್ನು ಈ ಕಾದಂಬರಿಯು ಬೊಟ್ಟು ಮಾಡಿ ತೋರಿಸುತ್ತದೆ.

ಈ ಕಾದಂಬರಿಯು ಒಂದು ದ್ವಿದಳ ಬೀಜವಾಗಿದೆ. ಒಂದು ಬೀಜವು, ಮಾನವನು ಪ್ರಕೃತಿಯಿಂದ ದೂರವಾಗುವುದರ ಅಪಾಯದ ಬಗ್ಗೆ ಎಚ್ಚರಿಕೆ ನೀಡಿವಲ್ಲಿ, ಮತ್ತೊಂದು ಸ್ವಾರ್ಥಪರರಿಂದಾಗಿ ದೇಶದಲ್ಲಾಗುತ್ತಿರುವ ಅನರ್ಥಗಳ ಬಗ್ಗೆ ಎಚ್ಚರಿಕೆ ನೀಡುತ್ತದೆ. ಒಂದು ಕಾಲದಲ್ಲಿ, ಪುಲ್ಲಯ್ಯ ಯಾರಿಗೇ ಆಗಲಿ ತಾನು ಭಯಪಡುವುದಿಲ್ಲವೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದ. ಅದು ಒಂದು ರೀತಿಯ ಸತ್ಯಾಗ್ರಹವೇ—ಪಾಶವೀಶಕ್ತಿಯ ಮೇಲೆ ನೈತಿಕಶಕ್ತಿಯ ಆಧಿಕ್ಯ. ಇಂತಹ ಆಂತರಿಕ ಬೋಧನೆಗಳಿಗೆ ಸತ್ವ ನೀಡಿದ ಕಾಂತಾರಾವು ಕೃತಕೃತ್ಯರು.

ಕುಡ್ಡ ವೆಂಕಣ್ಣ, ರಾಜಣ್ಣ, ಮಾರಮ್ಮ, ಆದೆಮ್ಮವ್ವ, ಚಂದ್ರಯ್ಯ, ನರಸಿಂಹ, ಬಂಗಾರಯ್ಯ — ಮುಂತಾದ ಸಜೀವ ಪಾತ್ರಗಳು ಈ ಕಾದಂಬರಿಗೆ ಚೈತನ್ಯವನ್ನು ನೀಡಿವೆ. ಇದರಲ್ಲಿ ವರ್ಣಿಸಲಾಗಿರುವ ಶ್ರೀಕಾಕುಳದಲ್ಲಿನ ಕೊಳಚೆ ಪ್ರದೇಶದ ಜನ ಜೀವನದ ಮತ್ತು ಆಂಧ್ರದ ಗ್ರಾಮೀಣ ಜೀವನದ ವಾಸ್ತವಿಕ ಚಿತ್ರಣಕ್ಕಾಗಿ, ಆಂಧ್ರರು ಕಾಂತಾರಾವು ಅವರಿಗೆ ಆಭಾರಿಯಾಗಿದ್ದಾರೆ.

ಈ ಮೇಲಿನ ಕಾದಂಬರಿಕಾರರೆಲ್ಲ ಹಿಂದಿನ ತಲೆಮಾರಿಗೆ ಸೇರಿದವರು. ಇವರಲ್ಲಿ

ಸುಮಾರು ಅರ್ಧದಷ್ಟು ಜನರು ಈಗಿಲ್ಲ. ಹಿಂದಿನ ತಲೆಮಾರಿನವರಿಗಿಂತ ಈಗಿನ ಲೇಖಕರು ಹೆಚ್ಚು ಸಾಧಕರಾಗಿದ್ದಾರೆಂಬುದೇನೂ ನಿಜ. ಆದರೆ ಈಗಿನ ಲೇಖಕರು ಇನ್ನು ಪರಿಪಕ್ವವಾಗಬೇಕಾಗಿದೆ. ಶ್ರೀ ನಾಗರಾಜು, ಇಂದಿನ ಲೇಖಕರಲ್ಲಿ ಸಾಕಷ್ಟು ಹೆಸರು ಗಳಿಸಿದ್ದಾರೆ. ಇವರ "ತ್ರಾಗಬೋತು" ಚೈತನ್ಯಪೂರ್ಣವಾದ ಸನ್ನಿವೇಶಗಳ ಚಿತ್ರಣದಲ್ಲಿ ಅವರಿಗೆ ಲಭಿಸಿರುವ ಯಶಸ್ಸಿನ ಪ್ರತೀಕವಾಗಿದೆ.

ಚೀಣಾ ಮತ್ತು ಪಾಕಿಸ್ತಾನ ನಮ್ಮ ದೇಶದ ಮೇಲೆ ನಡೆಸಿದ ಇತ್ತೀಚಿನ ದುರಾಕ್ರಮಣ (1969, 72), ಪ್ರತ್ಯೇಕ ತೆಲಂಗಾಣಾ, ಪ್ರತ್ಯೇಕ ಆಂಧ್ರ ಚಳುವಳಿ—ಮುಂತಾದುವುಗಳ ಚಿತ್ರಣವನ್ನು ಒಳಗೊಂಡ, ಚಿರಸ್ಮರಣೀಯವಾದ ಕೃತಿಗಳು ಇದುವರೆಗೆ ಬೆಳಕಿಗೆ ಬಂದಿಲ್ಲ. ಯಾವುದೇ ಚಳುವಳಿ ಅಥವಾ ಉಪದೇಶಕ್ಕೆ ಕಾವ್ಯರೂಪ ನೀಡಲು ಹೆಚ್ಚಿನ ಸಮಯ ಬೇಕಾಗುವುದಿಲ್ಲ. ಆದರೆ, ಇದನ್ನೇ ಒಂದು ವಸ್ತುವನ್ನಾಗಿಟ್ಟುಕೊಂಡು ಕಾದಂಬರಿಯನ್ನು ಬರೆಯುವುದು ಸುಲಭಸಾಧ್ಯವಲ್ಲ. ಒಂದೇ ಮಾತಿನಲ್ಲಿ ಹೇಳ ಬೇಕಾದರೆ, ಕಳೆದ ಎರಡು ದಶಾಬ್ದಿಗಳಿಂದ ನಮ್ಮ ಕಾದಂಬರಿ ಸಾಹಿತ್ಯ ನಡೆದುಬಂದ ದಾರಿ ಏಕಪ್ರಕಾರವಾಗಿಲ್ಲ—ಸಮನಾಗಿಲ್ಲ. ಕಾದಂಬರಿ ಸಾಹಿತ್ಯ ದಿನದಿನಕ್ಕೆ ವಿಸ್ತಾರ ವಾಗಿದೆಯಾದರೂ, ಅದರಲ್ಲಿ ಹೆಚ್ಚಿನ ಸತ್ವ ಅಥವಾ ತಿರುಳು ಇಲ್ಲವಾಗಿದೆ. ಈ ಅವಧಿಯಲ್ಲಿ ಪ್ರಕಟವಾದ ಕಾದಂಬರಿಗಳ ಸಂಖ್ಯೆ ಹೆಚ್ಚಾಗಿದ್ದರೂ, ಗುಣದ ದೃಷ್ಟಿ ಯಿಂದ ಅವು ಗೌಣವಾಗಿವೆ. ಇದಕ್ಕೆ ಮುಖ್ಯ ಕಾರಣ ಧಾರಾವಾಹಿ ಕಾದಂಬರಿಗಳ ಜನನ. ಧಾರಾವಾಹಿಯಲ್ಲಿ ಕಾದಂಬರಿಯ ಪ್ರಕರಣಗಳನ್ನು ಹಂತಾನುಹಂತವಾಗಿ ನೀಡುವುದಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುತ್ತದೆ. ಇದರಲ್ಲಿ, ಕಾದಂಬರಿಯ ಕ್ರಿಯೆ–ಶೈಲಿ, ಪ್ರಯೋಗ–ಸಾಧನಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುತ್ತಿಲ್ಲ. ಇದರಿಂದಾಗಿ ಕಾದಂಬರಿಕಾರರೂ ಸಹ "ಜಡ"ವಾಗಿ ಹೋಗಿದ್ದಾರೆ. ಆದಾಗ್ಯೂ ತಕ್ಕಮಟ್ಟಿನ ಗುಣ–ಮೌಲ್ಯಗಳನ್ನು ಹೊಂದಿದ ಕೆಲವೊಂದು ಧಾರಾವಾಹಿಗಳು ಪ್ರಸಿದ್ಧಿ ಯಾಗಿರುವುದು ಗಮನಾರ್ಹವಾಗಿದೆ. ಧಾರಾವಾಹಿಗಳನ್ನು ಬರೆಯುವಲ್ಲಿ ಸ್ತ್ರೀಯರೂ ಸಹ ಸಾಕಷ್ಟು ಮುಂದುವರಿದಿದ್ದಾರೆ.

ಸ್ತ್ರೀಯರು ತಮ್ಮ ಸಮಸ್ಯೆಗಳ ಪರಿಮಿತಿಗಳನ್ನು ಅತಿಕ್ರಮಿಸಿ, ವೈವಿಧ್ಯಪೂರ್ಣವಾದ, ವಿಷಯವ್ಯಾಪಕವಾದ ಕಾದಂಬರಿಗಳನ್ನು ಬರೆಯಬಲ್ಲರೆಂಬುದಕ್ಕೆ "ಬಲಿಪೀಠಂ", "ಸಮತ", "ಮಟ್ಟಿಮನಿಷಿ"—ಮುಂತಾದ ಕೃತಿಗಳೇ ಸಾಕ್ಷಿಯಾಗಿದ್ದು, ಇದೊಂದು ಹೆಮ್ಮೆಯ ವಿಷಯ. ಹೃದಯಸ್ಪಂದನಾತ್ಮಕವಾದ, ರಸಭಾವಾತ್ಮಕವಾದ, ಊಹಾ ವೈಭವದಿಂದ ಕೂಡಿದ ಸಾಂಸಾರಿಕ ಚಿತ್ರಣವನ್ನು ನೀಡುವಲ್ಲಿ ಮಹಿಳೆಯರು ಸಿದ್ಧ ಹಸ್ತರು. ಪದಿಬದೆಯ ಧರ್ಮ, ಸಂಯಮ ಮುಂತಾದ ನಿಸರ್ಗದತ್ತ ಗುಣಗಳನ್ನು ಹೊಂದಿರುವ ಮಹಿಳೆಯರು ಬರೆದುದೆಲ್ಲವೂ ಸರ್ವಶ್ರೇಷ್ಠವೆಂದು ಹೇಳಲಾಗದು. ರಷಿಯನ್ನರ ಪ್ರಭಾವದಿಂದ ಹುಟ್ಟಿಕೊಂಡಿರುವ "ರಿಲೆ ಕಾದಂಬರಿ"—ಗಳನ್ನೂ ಸಹ

ಮಹಿಳೆಯರು ಬರೆಯಲು ಪ್ರಯತ್ನಿಸಿದ್ದಾರೆ. ಇವರ ಕಾದಂಬರಿಗಳನ್ನು ಆಧರಿಸಿ ಚಲನಚಿತ್ರಗಳನ್ನೂ ಸಹ ತಯಾರಿಸಲಾಗುತ್ತಿದೆ.

ಒಟ್ಟಿನಲ್ಲಿ ತೆಲುಗು ಕಾದಂಬರಿಗಳು ಮತ್ತು ಅವುಗಳ ಸಾರ್ಥತೆ "ಅಕ್ಷುಣ್ಣ"—ವಾಗಿದೆ. ಒಂದೇ ಮಾತಿನಲ್ಲಿ ಹೇಳಬೇಕಾದರೆ, ಶ್ರೀ ಬಲಿವಾಡ ಕಾಂತಾರಾವು ಅವರ ಕಾದಂಬರಿಗಳಂತಹ ಕೃತಿಗಳು ಆಂಧ್ರ ಕಾದಂಬರಿಗಳ ವಿಕಾಸಕ್ಕೆ ನಾಂದಿಯಾಗಬಹುದು.

**—ಬಿ. ವಿ. ಕುಟುಂಬರಾವು.**

[ 1 ]

ಉತ್ತಮ ಸಂಸ್ಕಾರವುಳ್ಳ, ನಾಗರೀಕತೆಯ ನಯ–ವಿನಯಗಳನ್ನು ಮೈಗೂಡಿಸಿಕೊಂಡ ಒಬ್ಬ ಮನುಷ್ಯ, ಒಂದು ದಿನ, ಜಪಾನಿನ ಹೀರೋಷಿಮಾ ನಗರದ ಮೇಲೆ ಅಣು ಬಾಂಬನ್ನು ಹಾಕಿದ. ಅದೇ ದಿನ, ಅದೇ ಸಮಯಕ್ಕೆ ಸರಿಯಾಗಿ, ಆಂಧ್ರದ ಉತ್ತರ ಭಾಗದಲ್ಲಿನ ವಂಶಧಾರಾ ನದಿ ತೀರದ ಮೇಲಿನ ನವಿರಿ ಗ್ರಾಮದಲ್ಲಿ, ಸಂಸ್ಕಾರವಿಲ್ಲದ ನಾಗರೀಕತೆಯ ಗಂಧವೂ ಸಹ ಸೋಂಕದ ಒಬ್ಬ ಮನುಷ್ಯ, ಸುಮಾರು ಸಾವಿರದ ಐನೂರು ಗ್ರಾಮಸ್ಥರನ್ನು ಭಯಭೀತರನ್ನಾಗಿ ಮಾಡಿದ್ದ.

ಆ ವ್ಯಕ್ತಿಯ ಸಂಸ್ಕಾರ, ಅಣು ಬಾಂಬನ್ನು ನಡು ಸಮುದ್ರದಲ್ಲೆಲ್ಲೋ ಹಾಕದಂತೆ ಅವನನ್ನು ಪ್ರೇರೇಪಿಸಿ, ಎರಡು ಲಕ್ಷ ಅರವತ್ತು ಸಾವಿರ ಜನರನ್ನು ಆಹುತಿ ತೆಗೆದುಕೊಂಡು ಒಂದು ಲಕ್ಷ ಅರವತ್ತುಮೂರು ಸಾವಿರ ಜನರನ್ನು ಗಾಯಗೊಳಿಸಿ, ಮೂರು ಸಾವಿರದ ಮುನ್ನೂರು ಎಕರೆ ಜಮೀನನ್ನು ಧ್ವಂಸಗೊಳಿಸಿ, ಅರವತ್ತುನಾಲ್ಕು ಸಾವಿರ ಕಟ್ಟಡಗಳನ್ನು ನೆಲಸಮಮಾಡಿತು.

ಸಂಸ್ಕಾರವಿಲ್ಲದ ಆತ, ನವಿರಿ ಗ್ರಾಮದ ಹದಿನೈದು ನೂರು ಜನರಲ್ಲಿ ಭೀತಿಯ ಬೀಜವನ್ನು ಬಿತ್ತಿ ಗ್ರಾಮದೇವತೆ ನೀಲಮ್ಮಳನ್ನು ಪೂಜಿಸುವಂತೆ, ಆ ದೇವತೆಯ ಉತ್ಸವ ನಡೆಸುವಂತೆ, ಗ್ರಾಮಸ್ಥರನ್ನು ಪ್ರೇರೇಪಿಸಿದ್ದ.

ವಂಶಧಾರಾ ನದಿ ತೀರದ ಮೇಲಿನ ನವಿರಿ ಗ್ರಾಮದ ಮಧ್ಯದಲ್ಲಿದ್ದ ನೀಲಮ್ಮನ ಗುಡಿಯಲ್ಲಿ, ಆ ರಾತ್ರಿ, ಮೈಮೇಲೆ ದೇವಿಯನ್ನು ಆಹ್ವಾನಿಸಿಕೊಂಡಿದ್ದ ರಾಮನ ಹೂಂಕಾರ ಗಗನಕ್ಕೇರಿತ್ತು.

ಚಪ್ಪಟೆಯಾದ ಮೂಗು, ಸಿಕ್ಕುಗಟ್ಟಿದ ಜಟೆ, ನೆರೆತ ಮೀಸೆ, ಬಾಡಿದ ಮುಖ, ಕಪ್ಪಾದ–ತೆಳುವಾದ ದೇಹ; ಟೊಂಕಕ್ಕೆ ಸುತ್ತಿದ್ದ ಪುಟ್ಟದಾದ ಒಂದು ಪಂಚೆಯನ್ನು ಬಿಟ್ಟು ಆತನ ಮೈಮೇಲೆ ಇನ್ನೇನೂ ಇರಲಿಲ್ಲ.

ನೀಲಮ್ಮ ದೇವತೆಗೆ ಹರಕೆ ಹೊತ್ತ ಜನರು, ದೇವಿಯ ದಾಸನಾದ ರಾಮನ ಕಾಲ ಬಳಿ ಕುಳಿತು, ಕೂದಲು ಕೊಡುತ್ತಿದ್ದರು. ಇತರ ಕೆಲವರು ಹುಲುಸಾಗಿ ಬೆಳೆದಿದ್ದ

ಗಡ್ಡ ಗೀರಿಕೊಳ್ಳುತ್ತಿದ್ದರು. ತಮ್ಮ ಅಪರಾಧಗಳನ್ನು ಮನ್ನಿಸುವಂತೆ ಕಳಕಳಿಯಿಂದ ದೇವಿಯನ್ನು ಬೇಡಿಕೊಳ್ಳುತ್ತಿದ್ದ ನೂರಾರು ಜನರು, ರಾಮದಾಸನನ್ನು ಮುತ್ತಿದ್ದರು.

ರಾಮದಾಸನಿಗೂ, ಆತನ ಕಾಲ ಬಳಿ ಗುಡ್ಡೆಯಾಗಿ ಬಿದ್ದಿದ್ದ ಕೂದಲಿಗೂ, ಮೊದಲಿನಿಂದಲೂ ನೆಂಟು. ಏಕೆಂದರೆ, ಈ ರಾಮದಾಸ, ಒಂದು ಕಾಲದಲ್ಲಿ, ಊರಿನ ಕ್ಷೌರಿಕನಾಗಿದ್ದ. ಊರಿನ ಪ್ರತಿಯೊಬ್ಬರ ಮನೆಗೂ ಹಡಪ ಹಿಡಿದುಕೊಂಡು ಹೋಗಿ, ಆವಿಷ್ಕರ್ಮಗಳನ್ನು ಮಾಡಿ ಹೊಟ್ಟೆತುಂಬಿಕೊಳ್ಳುತ್ತಿದ್ದ. ಊರಿನ ಶಾನುಭೋಗರು, ಗೌಡರು ಮುಂತಾದ ಗಣ್ಯರ ಹಿಂದೆ ತಿರುಗಿ, ಅಷ್ಟಿಷ್ಟು ದುಡ್ಡು ಸಂಪಾದಿಸುತ್ತಿದ್ದ. ತನ್ನ ವೃತ್ತಿಯಿಂದ ಏನೂ ಹುಟ್ಟದಿದ್ದಾಗ, ಅವರಿವರನ್ನು ಕಾಡಿ ಬೇಡಿ ಜೀವನ ಸಾಗಿಸುತ್ತಿದ್ದ.

ಒಂದು ದಿನ ಊರಿನ ಶಾನುಭೋಗರ ಮನೆಗೆ, ಒಬ್ಬ ಹೊಸ ರೆವೆನ್ಯೂ ಇನ್‌ಸ್ಪೆಕ್ಟರ್ ಬಂದ. ಶಾನುಭೋಗರ ಮನೆಗೆ ಬರುವ ಅಧಿಕಾರಿಗಳ ಕಾಲು ಒತ್ತುವುದು, ಎಣ್ಣೆ ಹಚ್ಚಿ ಮೈ ತೀಡುವುದು, ಕೇಶಾಲಂಕಾರ—ಮುಖಕ್ಷೌರ ಮಾಡುವುದು—ಇವು, ರಾಮದಾಸನ ಪಾಲಿನ ಕೆಲಸವಾಗಿದ್ದವು. ಅವನು, ಇವೆಲ್ಲವನ್ನೂ ಸಂತೋಷದಿಂದಲೇ ಮಾಡುತ್ತಿದ್ದ. ಆದರೆ, ಈ ಹೊಸ ರೆವೆನ್ಯೂ ಇನ್‌ಸ್ಪೆಕ್ಟರ್ ಬಂದಾಗ, ಏಕೊ—ಏನೊ, ಅವನ ಕೆಲಸದಲ್ಲಿ ಸ್ವಲ್ಪ ಏರುಪೇರಾಯಿತು. ಅಂದು ಅವನಿಗೆ ಹುಷಾರಿರಲಿಲ್ಲ. ಅಂದೇ ಎಣ್ಣೆ ಹಚ್ಚಿ ಮೈ ತೀಡುವಂತೆ, ಹರೆಯದ ಆ ಅಧಿಕಾರಿ ರಾಮದಾಸನಿಗೆ ಆಜ್ಞಾಪಿಸಿದ. ಅಧಿಕಾರಿಯ ಮುಂದೆ ಮೈ ಬಗ್ಗಿಸಿ ಕೈಕಟ್ಟಿಕೊಂಡು ನಿಂತು, ತನಗೆ ಹುಷಾರಿಲ್ಲವೆಂದು ಅವನು ಹೇಳಿದಾಗ, ರೆವೆನ್ಯೂ ಇನ್ಸ್‌ಪೆಕ್ಟರನಿಗೆ ಅದು ಒಂದು ನೆಪದಂತೆ ತೋರಿತು. ಬಿಸಿರಕ್ತದ ಆ ಅಧಿಕಾರಿ ಅವನ ಮೇಲೆ ಉರಿದುಬಿದ್ದ. ರಾಮದಾಸ ತನ್ನ ಕೈಯಿಂದ ಯಾವ ಕೆಲಸ ಮಾಡಲೂ ಆಗುತ್ತಿಲ್ಲವೆಂದು ಅಂಗಲಾಚಿದಾಗ, "ಜೈಲಿನಲ್ಲಿ ಹಾಕಸ್ತೀನಿ—ಬಡ್ಡೀ ಮಗನೆ......" ಎಂದು ಆ ಅಧಿಕಾರಿ ಗದರಿಕೊಂಡ. ಅನ್ಯಮಾರ್ಗವಿಲ್ಲದೆ, ರಾಮದಾಸ, ಅಂದು ಆತನ ಕಾಲು ಹಿಡಿದು ಸೇವೆ ಮಾಡಿದನಾದರೂ, ಅವನ ಹೊಟ್ಟೆ ಉರಿದುಹೋಯಿತು. ಅವಮಾನದಿಂದ ಅವನ ಜೀವ ಹಿಂಡಿತು.

ಅಂದೇ ಕ್ಷೌರಿಕ ರಾಮುವಿನಲ್ಲಿ ವೈರಾಗ್ಯ ಮನೆಮಾಡಿಕೊಂಡಿತು. ಅಪಮಾನವನ್ನು ನುಂಗಿಕೊಂಡು, ಊರಿನ ಮಧ್ಯದಲ್ಲಿದ್ದ ನೀಲಮ್ಮನ ಗುಡಿಯ ಬಳಿ ಬಂದು ಕುಳಿತ ರಾಮು. ಹಾಗೆ ಕುಳಿತಿದ್ದಾಗಲೇ, ಆ ಅಧಿಕಾರಿಯ ಮೇಲಿನ ಹಿರಿಯ ಅಧಿಕಾರಿ ತಾನಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದುಕೊಂಡು ಕಳವಳಪಟ್ಟ. ಕಾಲು ಒತ್ತಿಸಿಕೊಂಡು ಮೈಗೆ ಎಣ್ಣೆ ತೀಡಿಸಿಕೊಂಡವನು, ಒಂದು ಕಾಸನ್ನೂ ಕೊಡಲಿಲ್ಲ. ಹೀಗೆ ಕಂಡವರ ಕಾಲು ಹಿಡಿದು ಕೂಳು ಸಂಪಾದಿಸುವುದು ಅವನಿಗೆ ಹೀನಾಯ ಎನಿಸಿತು. ಜೀವನದಲ್ಲಿ ಏನನ್ನಾದರೂ ಸಾಧಿಸಬೇಕು—ಏನಾದರೂ ಆಗಬೇಕು—ಏನನ್ನಾದರೂ ಮಾಡಿ ತೋರಿಸಬೇಕು—ಎಂಬ ಛಲ ಅವನಲ್ಲಿ ಮೂಡಿತು. ಕುಳಿತಲ್ಲಿಂದಲೇ ತಾಯಿ

ನೀಲಮ್ಮಳಿಗೆ ಕೈಎತ್ತಿ ನಮಸ್ಕರಿಸಿದ. "ಅಮ್ಮಾ, ತಾಯಿ, ನನ್ನ ಹೊಟ್ಟೆ ಉರಿದು ಹೋಗಿದೆಯಮ್ಮಾ. ನನ್ನ ಹೃದಯದ ನೋವನ್ನು ಅರ್ಥಮಾಡಿಕೊಂಡು ಕರುಣೆ ತೋರು ತಾಯಿ. ಈ ಕ್ಷೌರಿಕ ರಾಮುವನ್ನು ಸಲಹು ತಾಯಿ"—ಎಂದು ದೀನನಾಗಿ ಬೇಡಿಕೊಂಡನಾದರೂ, ತನಗೆ ಏನು ಬೇಕೆಂಬುದನ್ನು, ದೇವಿಗೆ ಏನು ಬೇಡಿಕೊಳ್ಳ ಬೇಕೆಂಬುದನ್ನು ಮರೆತೆಹೋದ.

ನೀಲಮ್ಮದೇವಿಯ ಗುಡಿಯಲ್ಲಿ ತಂಪಾಗಿತ್ತು. ಗುಡಿಯ ಸುತ್ತಲೂ ಕಲ್ಲಿನ ಗೋಡೆ ಮತ್ತು ಬಾಗಿಲಿನ ಚೌಕಟ್ಟಿತ್ತಾದರೂ, ಬಾಗಿಲಿರಲಿಲ್ಲ. ಗರ್ಭಗುಡಿಯಲ್ಲಿನ ಒಂದು ದಿಬ್ಬದ ಮೇಲೆ, ನಾಲ್ಕು ವಿಗ್ರಹಗಳಿದ್ದವು. ನಡುವಣ ಎರಡು ವಿಗ್ರಹಗಳಲ್ಲಿ ಒಂದು ನೀಲಮ್ಮಳ ವಿಗ್ರಹವಾಗಿತ್ತು. ಎರಡನೆಯದು. ನೀಲಮ್ಮದೇವಿಯ ತಮ್ಮ ಕೆಂಚಣ್ಣನ ವಿಗ್ರಹವಾಗಿತ್ತು. ಉಳಿದವು, ನೀಲಮ್ಮದೇವಿಯ ತಾಯಿ ಮತ್ತು ತಂಗಿಯ ವಿಗ್ರಹಗಳಾಗಿದ್ದವು. ಆ ದಾರಿಯಲ್ಲಿ ಹೋಗುವ ಪ್ರತಿಯೊಬ್ಬರೂ, ದೇವಿಗೆ, ಹೊರಗಿನಿಂದಲೇ ಕೈಮುಗಿದು ಹೋಗುತ್ತಿದ್ದರಾದರೂ, ಯಾರೇ ಆಗಲಿ ಗುಡಿಯ ಒಳಗೆ ಕಾಲಿಡುತ್ತಿರಲಿಲ್ಲ. ಕ್ಷೌರಿಕ ರಾಮುವಿನ ತಂದೆಗೂ ಸಹ ಈ ಗುಡಿಯ ಮೇಲೆ ಬಹಳ ಭಕ್ತಿಯಿತ್ತಾದರೂ, ಅದನ್ನು ಯಾರು, ಯಾವಾಗ ಕಟ್ಟಿಸಿದರೆಂಬುದು ಯಾರಿಗೂ ತಿಳಿದಿರಲಿಲ್ಲ.

ಗುಡಿಯ ಮುಂದೆ ಕುಳಿತಿದ್ದ ರಾಮುವಿಗೆ, ಸ್ವಲ್ಪ ಹೊತ್ತಿನಲ್ಲೆ ಎಷ್ಟೊ ಸಮಾಧಾನ ವಾಯಿತು. ಕುಳಿತಲ್ಲಿಂದಲೇ ಗುಡಿಯ ಸುತ್ತಲೂ ಒಮ್ಮೆ ದೃಷ್ಟಿ ಬೀರಿದ. ಗುಡಿಯ ತುಂಬ ಕಸ ಬಿದ್ದಿತ್ತು. ಹುಳುಹುಪ್ಪಡಿಗಳ ಆವಾಸವಾಗಿದ್ದ ಆ ಗುಡಿಯನ್ನು ನೋಡಿ ರಾಮುವಿಗೆ ತಳಮಳವಾಯಿತು. ಅವನು ಅಲ್ಲಿಂದೆದ್ದು, ನೇರವಾಗಿ ಮನೆಗೆ ಹೋಗಿ ಒಂದು ಪೊರಕೆ ತಂದ. ಗುಡಿಯನ್ನು ಬಳಿದು ಸ್ವಚ್ಛಗೊಳಿಸಿದ. ನೀರು ತಂದು ತೊಳೆದು, ಹಾಗೆಯೇ ಸ್ವಲ್ಪ ಹೊತ್ತು ಕುಳಿತಾಗ—ವಿಗ್ರಹಗಳಿಗೆ ಬಣ್ಣ ಹಾಕಿಸಿದರೆ ಎಷ್ಟು ಚೆನ್ನಾಗಿರುತ್ತದೆಂಬ ಯೋಚನೆ ಬಂತು. ಅದರೊಡನೆ ಗುಡಿಗೆ ಸುಣ್ಣ ಹಾಕಿಸಿದರೆ ಹೇಗಿರುತ್ತದೆ—ಎಂದೂ ಸಹ ಯೋಚಿಸಿದ. ನೀಲಮ್ಮಳಿಗೆ ಪ್ರತಿ ದಿನ ಪೂಜೆ-ಪುನಸ್ಕಾರಗಳು ನಡೆಯುತ್ತಿದ್ದಲ್ಲಿ ಎಷ್ಟು ಚೆನ್ನಾಗಿರುತ್ತಿತ್ತು. ದೇವರಿಗೆ ಒಂದು ಪಲ್ಲಕ್ಕಿ ಇದ್ದಲ್ಲಿ......... ದೇವಿಯ ಪೂಜೆಯ ಸಮಯದಲ್ಲಿ ಬಾರಿಸಲು ತಮಟೆಗಳಿದ್ದಲ್ಲಿ...... ಊರಿಗೆ ಊರೇ ಅಲ್ಲಿ ಸೇರಬಹುದಾಗಿದ್ದಲ್ಲಿ—ಎಂದೆಲ್ಲಾ ಯೋಚಿಸತೊಡಗಿದ. ಆಗ ಅವನ ಬಳಿ ಅಷ್ಟೊಂದು ದುಡ್ಡಿರಲಿಲ್ಲ. ದುಡ್ಡು ಇದ್ದಲ್ಲಿ, ಬಹುಶಃ ಅವನು ತನ್ನ ಈ ಎಲ್ಲ ಯೋಚನೆಗಳನ್ನೂ ಅನುಷ್ಠಾನಕ್ಕೆ ತರುತ್ತಿದ್ದ. ಆದರೆ ಅವನಿಗೆ ಬರುವ ಆದಾಯ ಅವನ ಹೊಟ್ಟೆಗೇ ಸಾಲದು. ಆದರೂ, ಮನಸ್ಸಿನಲ್ಲಿ ಬಂದುದನ್ನು ನಾಲ್ಕು ಜನರ ಮುಂದೆ ಹೇಳಿಕೊಂಡ. ಆದರೆ, ಯಾರೇ ಆಗಲಿ, ಅವನ ಮಾತನ್ನು ಕಿವಿಗೆ ಹಾಕಿಕೊಳ್ಳ ಲಿಲ್ಲ. ಕೆಲವರಂತೂ ಅವನ ಈ ಮಾತುಗಳನ್ನು ಕೇಳಿ ಪರಿಹಾಸ್ಯಮಾಡಿದರು. ಕೆಲವರು,

ತಾತ–ಮುತ್ತಾತನ ಕಾಲದಿಂದಲೂ ಇಲ್ಲದ್ದನ್ನು ನಾವೇಕೆ ಮಾಡಬೇಕೆಂದು ಕೈಕೊಡಹಿ ಕೊಂಡರು. ಇನ್ನೂ ಕೆಲವರು, ಈ ದೇವತೆಗೆ ಪೂಜೆ–ಪುನಸ್ಕಾರಗಳು ಒಗ್ಗುವು ದಿಲ್ಲವೆಂದು ಹೇಳಿ, ರಾಮುವನ್ನು ಹೆದರಿಸಲು ಪ್ರಯತ್ನಿಸಿದರು.

ರಾಮುವಿಗೆ ಇದಾವುದೂ ಒಪ್ಪಿಗೆಯಾಗಲಿಲ್ಲ. ನೀಲಮ್ಮಳ ಮೇಲಿನ ಅವನ ಭಕ್ತಿ ದಿನದಿನಕ್ಕೆ ಹೆಚ್ಚಿತು. ದಿನಬೆಳಗಾದರೆ, ಅವನು ಗುಡಿಯಲ್ಲಿ ಇರತೊಡಗಿದ. ಆಗಾಗ, ಸಣ್ಣ ಹಣತೆಯೊಂದರಲ್ಲಿ ದೇವಿಗೆ ದೀಪ ಹಚ್ಚಿ ಇಡುತ್ತಿದ್ದ. ಹೊತ್ತುಗೊತ್ತಿನ ಪರಿವೆ ಯಿಲ್ಲದೆ, ದೇವಿಯ ಮುಂದೆ ಕೈಕಟ್ಟಿ ಕುಳಿತುಕೊಳ್ಳುತ್ತಿದ್ದ. ಈ ನಡುವೆ ಆ ರೆವೆನ್ಯೂ ಇನ್‌ಸ್ಪೆಕ್ಟರ್ ಎರಡು ಸಲ ಆ ಹಳ್ಳಿಗೆ ಬಂದನಾದರೂ, ತನ್ನ ಸೇವೆಗಾಗಿ ರಾಮುವನ್ನು ಕರೆಸಲಿಲ್ಲ. ಇದರಿಂದ, ತಾಯಿ ನೀಲಮ್ಮ, ತನ್ನ ಮೊರೆ ಕೇಳಿದಳೆಂದು ರಾಮು ನಂಬಿದ.

ದೇವಿಯಲ್ಲಿನ ಅವನ ನಂಬಿಕೆ ಹೆಚ್ಚಾದಂತೆ, ಅವನ ಭಕ್ತಿಯೂ ಹೆಚ್ಚಿತು. ದೇವಿಯ ಉಪಾಸಕನಾಗಿ ತಲೆಕೂದಲನ್ನೂ, ಗಡ್ಡವನ್ನೂ ಬೆಳೆಸಿದ ರಾಮು, ಪ್ರತಿದಿನ ಬೆಳಿಗ್ಗೆ ನದಿಯಲ್ಲಿ ಒಂದು ಮುಳುಗು ಹಾಕಿ ಬಂದು, ದೇವಿಯ ಗುಡಿಯಲ್ಲಿ ಕೂಡತೊಡಗಿದ. ತನಗೆ ಬಂದಂತೆ, ತನ್ನದೇ ಆದ ಬಾಷೆಯಲ್ಲಿ ದೇವಿಯನ್ನು ಸ್ತುತಿಸಿ ಪ್ರಾರ್ಥಿಸತೊಡಗಿದ. ಯಾರಾದರೂ ಕ್ಷೌರಕ್ಕೆ ಕರೆದಲ್ಲಿ, "ಇಂದು ಉಪವಾಸ ಮಾಡೀನಿ. ಹಡಪ ಮುಟ್ಟಿದರ ದೇವಿಗೆ ಸಿಟ್ಟು ಬರ್‍ತದ"—ಎಂದು ಹೇಳತೊಡಗಿದ್ದ. ಆಗಾಗ, ಭಕ್ತಿ ಹೆಚ್ಚಾದಾಗ ಗಟ್ಟಿಯಾಗಿ ದೇವಿಯ ಸ್ಮರಣೆ ಮಾಡುತ್ತಿದ್ದ. ಕೆಲದಿನಗಳ ನಂತರ, ಪಕ್ಕದ ಹಳ್ಳಿಯಲ್ಲಿ, ದೇವಿಯನ್ನು ಆಹ್ವಾನಿಸುತ್ತಿದ್ದ ಉಪಾಸಕನೊಬ್ಬನ ಬಳಿ ಹೋಗಿ, ಪೂಜೆಮಾಡುವುದನ್ನು ಕಲಿತ. ದೇವಿಯ ನಾಮಸ್ಮರಣೆಯನ್ನು ಅಭ್ಯಾಸ ಮಾಡಿಕೊಂಡ. ಅಂತೂ, ಕ್ಷೌರಿಕ ರಾಮು, ದೇವಿಯ ಪೂಜಾರಿಯಾದ.

ಒಂದು ದಿನ ಬೆಳಗಿನ ಜಾವ, ನೀಲಮ್ಮ ದೇವಿ ಕ್ಷೌರಿಕ ರಾಮುವಿನ ಭಕ್ತಿಗೆ ಒಲಿದ ಳೆಂಬ ಸುದ್ದಿ, ಊರು ತುಂಬ ಹರಡಿತು. "ಹೌದ್ಹಾದು, ಅವನು ಎರಡು–ಮೂರು ತಿಂಗಳುಗಳಿಂದ ಗುಡಿಯನ್ನು ಬಿಟ್ಟು ಕದಲಲಿಲ್ಲ. ಅವನಿಗೆ ದೇವಿ ಒಲಿದದ್ದೇನೂ ಆಶ್ಚರ್ಯವಲ್ಲ"—ಎಂದರು ನೆರೆತ ಕೂದಲಿನ ಮುದುಕರು.

ಕ್ಷೌರಿಕ ರಾಮು, ದೇವಿಯನ್ನು ಆಹ್ವಾನಿಸುವ ಕಲೆಯಲ್ಲಿ ಮತ್ತಷ್ಟು ಪ್ರವೀಣನಾದ. ಅವನ ಭಕ್ತಿಯನ್ನು ಮೆಚ್ಚಿದ ಜನರು ಅವನಿಗೆ ನೆರವಾದಾಗ, ಅವನು ಅಂದುಕೊಂಡದ್ದೆಲ್ಲ ಆದವು.—ದೇವಿಯ ವಿಗ್ರಹಗಳಿಗೆ ಬಣ್ಣ ಹಚ್ಚಲಾಗಿತ್ತು; ಗುಡಿಗೆ ಸುಣ್ಣ ಹಾಕಲಾ ಗಿತ್ತು; ದೇವಿಗೆ ಪುಷ್ಪಕವನ್ನು ಮಾಡಿಸಲಾಗಿತ್ತು. ದೇವಿಯ ಉಪಾಸಕನಾದ ರಾಮು ವನ್ನು, ಜನರು ಭಕ್ತಿ—ಗೌರವದಿಂದ ಕಾಣಲು ಪ್ರಾರಂಭಿಸಿದರು. ಎಲ್ಲರೂ ಈಗ ಕ್ಷೌರಿಕ ರಾಮುವನ್ನು, "ದಾಸು", ಅಥವಾ "ರಾಮದಾಸು"—ಎಂದು ಕರೆಯಹತ್ತಿ ದ್ದರು. ರೆವೆನ್ಯೂ ಇಲಾಖೆಯ ಅಧಿಕಾರಿಗಳು ಹಳ್ಳಿಗೆ ಬಂದಾಗ, ಕ್ಷೌರಕ್ಕೆ ಕರೆಕಳುಹಿಸಿ

ದಾಗ, ರಾಮದಾಸು ಧೈರ್ಯವಾಗಿ ಬರುವುದಿಲ್ಲವೆಂದು ಹೇಳಿಕಳುಹಿಸುತ್ತಿದ್ದ. ಸರ್ಕಾರಿ ಅಧಿಕಾರಿಗಳಿಗೆ ಇದರಿಂದ ಕೋಪ ಬಂದರೂ, ಊರ ಜನರು ರಾಮದಾಸುವಿನ ಪರವಾಗಿದ್ದರಿಂದ ಏನೂ ಮಾಡದೆ ತೆಪ್ಪಗಿರುತ್ತಿದ್ದರು. ಈಗ ರಾಮದಾಸು, ಆ ಊರಿನ ವೇದಾಂತಿಯಾಗಿದ್ದ; ಪೂಜ್ಯವ್ಯಕ್ತಿಯಾಗಿದ್ದ; ಗಣ್ಯನಾಗಿದ್ದ.

ಗ್ರಾಮಸ್ಥರ ಗೌರವ–ಆದರಾಭಿಮಾನಗಳನ್ನು ಸಂಪಾದಿಸಿಕೊಂಡ ರಾಮದಾಸು, ಸುತ್ತಮುತ್ತಲಿನ ಹಳ್ಳಿಗಳಲ್ಲಿ ಕಾಲರಾ ಹರಡಿರುವುದನ್ನು ಕೇಳಿ, ತನ್ನ ಕರ್ತವ್ಯ ಮಾಡಿದ. ಅದಕ್ಕಾಗಿಯೇ, ಅಂದು ಅವನು ದೇವಿಯನ್ನು ಆಹ್ವಾನಿಸಿಕೊಂಡು ಎತ್ತರದ ಧ್ವನಿಯಲ್ಲಿ ಘೂಂಕರಿಸತೊಡಗಿದ್ದ.

ಗುಡಿಯಲ್ಲಿನ ಪ್ರಣತಿಯಲ್ಲಿ ದೀಪ ಹಾಕಲಾಗಿತ್ತು. ದೇವಿಯ ಮುಂದೆ ಇಡಲಾಗಿದ್ದ ಮಣ್ಣಿನ ಕುಡಿಕೆಯೊಂದರಲ್ಲಿ ಕೆಂಡ ಹಾಕಿ ಅದರ ಮೇಲೆ ಧೂಪ ಹಾಕಲಾಗಿತ್ತು. ಊರಿನ ದೇಸಾಯರು, ದೇಸಾಯರ ಹೆಂಡತಿ, ಊರಿನ ಇತರ ಹಿರಿಯರು ಗರ್ಭಗುಡಿಯ ಬಳಿ ಕುಳಿತಿದ್ದರು. ಗುಡಿಯ ಹೊರಗೆ ನೂರಾರು ಜನರು ಮೌನವಾಗಿ ನಿಂತಿದ್ದರು.

ಕಣ್ಣುಮುಚ್ಚಿಕೊಂಡು ಕುಳಿತಿದ್ದ ರಾಮದಾಸು, ಇದ್ದಕ್ಕಿದ್ದಂತೆ, "ಹೂಂ..."—ಎಂದು ಹೂಂಕರಿಸಿದ. ಆತ, ಹಿಂದೆಂದೂ ಅಷ್ಟು ಬೀಭತ್ಸವಾಗಿ ಹೂಂಕರಿಸಿರಲಿಲ್ಲ. ಸ್ವಲ್ಪ ಸಮಯದ ನಂತರ ಆತನ ಬಾಯಿಂದ ಅಸ್ಪಷ್ಟವಾದ ಉದ್ಗಾರ ಹೊರಟಿತು. ಅದರ ಹಿಂದೆಯೇ, "ಎಲಾ, ನರಹುಳುಗಳೆ......" ಎಂದು ಕೂಗಿದ. ಅನಂತರ ಆತನ ಬಾಯಿಯಿಂದ ಪ್ರತಿ ಮಾತೂ ರಾಗವಾಗಿ ಹೊರಡತೊಡಗಿತು. "ಎಲಾ ನರಜಂತುಗಳೇ...ಈ ನಿಮ್ಮ ಗ್ರಾಮದೇವತೆಯಾದ ನಾನು ಇಲ್ಲಿಂದ ಹೋಗುತ್ತಿದ್ದೇನೆ......ದೈತ್ಯರು, ಈ ನಿಮ್ಮ ಊರನ್ನು ಹುರಿದು ಮುಕ್ಕಲು ಧಾವಿಸುತ್ತಿದ್ದಾರೆ......... ಎಲಲಾ...... ನಾನು, ಈ ಊರನ್ನು ಎಲ್ಲಿಯ ವರೆಗೆ ಸಂರಕ್ಷಿಸಲಿ...... ಏತಕ್ಕಾಗಿ ಸಂರಕ್ಷಿಸಲಿ...... ಆ ದೈತ್ಯರು ಈ ಊರಿನ ಮೇಲೆ ಬಿದ್ದು, ಊರಿಗೆ ಊರನ್ನೆ ನುಂಗಲು ಕಾಯುತ್ತಿದ್ದಾರೆ...... ನಾನೊಬ್ಬಳೆ ಎಲ್ಲಿಯವರೆಗೆ ನಿಮ್ಮನ್ನು ಕಾಪಾಡಲಿ...... ಎಲೆ ಮಾನವರೆ, ಈಗಲೇ ಎಚ್ಚತ್ತಿರೊ...... ನಿಮ್ಮ ಊರು ಉಳಿಯುತ್ತದೆ...... ಇಲ್ಲದಿದ್ದರೆ ಸರ್ವನಾಶವಾಗುತ್ತದೆ...... ಈಗಲಾದರೂ ಏಳಿ...... ಎದ್ದೇಳಿ......"

ಆನೆಯುಂತಿದ್ದ ದೊಡ್ಡ ದೇಸಾಯರು, ಎದ್ದು ಮುಂದೆ ಹೋಗಿ ರಾಮದಾಸುವಿನ ಕಾಲುಗಳ ಮೇಲೆ ಬಿದ್ದು, "ಅಮ್ಮಾ–ತಾಯಿ, ಜನ್ಮಜನ್ಮಾಂತರಗಳಿಂದ ನಮ್ಮನ್ನು ಕಾಪಾಡಿಕೊಂಡು ಬಂದಿರುವಿ. ಈಗ ನೀನೆ ನಮ್ಮ ಕೈಬಿಟ್ಟರೆ—ನಮ್ಮ ಗತಿ ಏನು ತಾಯಿ. ಕಾಪಾಡು, ನಮ್ಮನ್ನು—ನಿನ್ನ ಮಕ್ಕಳನ್ನು ಕಾಪಾಡು ಮಹಾತಾಯಿ"—ಎಂದು ಬೇಡಿಕೊಂಡರು.

ರಾಮದಾಸುವಿನ ಕೂಗು, ಮತ್ತೆ ಗಗನಕ್ಕೇರಿತು—"ಲೋ, ಬುದ್ಧಿಗೇಡಿ, ನಾನು ಮನಸ್ಸು ಮಾಡಿದಲ್ಲಿ, ಈ ವಿಶ್ವವನ್ನೆ ಸುಟ್ಟುಹಾಕಬಲ್ಲೆ. ಸಮುದ್ರದ ನೀರು ಇಂಗು

ವಂತೆ ಮಾಡಬಲ್ಲೆ. ಪೂರ್ವದಲ್ಲಾಗುವ ಸೂರ್ಯೋದಯವನ್ನು, ಪಶ್ಚಿಮದಲ್ಲಾಗು ವಂತೆ ಮಾಡಬಲ್ಲೆ."

"ಹೌದು ತಾಯಿ, ಹೌದು. ನಿನ್ನ ಈ ಮಕ್ಕಳ ಮೇಲೆ ಕನಿಕರ ತೋರಿ, ನಮ್ಮನ್ನು ರಕ್ಷಿಸು ತಾಯಿ"—ಊರಿನ ಮುದುಕ ಪೋಲೀಸ ಪಟೇಲ ಅಂಗಲಾಚಿದ.

ರಾಮದಾಸು ಒಮ್ಮೆ ಮುಗುಳ್ನಕ್ಕು, "ಮಕ್ಕಳೆ, ನನ್ನ ಕಂದಮ್ಮಗಳ ಮೇಲೆ ನನಗೆ ಮಮತೆ ಇಲ್ಲವೆಂದುಕೊಂಡಿರಾ. ನಿಮ್ಮಗಳ ಮೇಲೆ ಹದ್ದಿನ ನೆರಳು ಬಿದ್ದಲ್ಲಿ ನನ್ನ ಹೊಟ್ಟೆ ಕರಬುತ್ತದೆ. ನನ್ನ ಮಕ್ಕಳಾದ ನಿಮಗೆ ಒಂದು ಸಣ್ಣ ಇರುವೆ ಕಡಿದರೂ, ನಾನು ನೊಂದುಕೊಳ್ಳುತ್ತೇನೆ.—ಆದರೆ, ಇಲ್ಲಿ ನನ್ನ ಪಕ್ಕದಲ್ಲಿದ್ದಾನಲ್ಲ ನನ್ನ ತಮ್ಮ ಕೆಂಚಣ್ಣ—ಇವನು ಅಕ್ಕ-ತಂಗಿಯರಲ್ಲಿ ಒಬ್ಬನೇ ಗಂಡು ಮಗುವಾಗಿ ಹುಟ್ಟಿದ. ಸಿಕ್ಕಿದ್ದನ್ನು ದೋಚಿಕೊಂಡು ತಿನ್ನುವುದೇ ಇವನ ಕೆಲಸ.—ನನ್ನ ಸಲುವಾಗಿ ಅಲ್ಲ—ಇವನ ಸಲುವಾಗಿಯಾದರೂ......ಇಷ್ಟು ದಿನ ಸುಮ್ಮನಿದ್ದೆ...... ಏನೋ ಕೆಲಸ ಕಾರ್ಯಗಳ ಗಡಿಬಿಡಿಯಲ್ಲಿದ್ದೀರೆಂದು ಇವನನ್ನು ಸಮಾಧಾನಪಡಿಸುತ್ತಾ ಬಂದೆ.—ಆದರೆ...... ಈಗ...... ಈಗಲಾದರೂ ಜಾತ್ರೆ ನಡೆಯಬೇಕು...... ನಮಗಾಗಿ ಉತ್ಸವ ನಡೆಯಬೇಕು. ಹಾಗಾದಲ್ಲಿ ಮಾತ್ರ, ನಿಮ್ಮ ಊರಿನ ಮೇಲೆ ಎರಗಲಿರುವ ಪಿಡುಗನ್ನು ಹೊಡೆದೋಡಿಸುವಲ್ಲಿ ಈ ನನ್ನ ತಮ್ಮ ಕೆಂಚಣ್ಣ ನನಗೆ ನೆರವಾಗುತ್ತಾನೆ. ಈಗಲಾದರೂ ಸಂಭ್ರಮಪಡಿ...... ಜಾತ್ರೆ ನಡೆಸಿರಿ...... ಉತ್ಸವ ಏರ್ಪಡಿಸಿರಿ......"

ರಾಮದಾಸು ರಾಗವಾಗಿ ಮಾತನಾಡುತ್ತಲೇ ತನ್ನ ಮನದ ಇಂಗಿತವನ್ನು ಹೊರ ಹಾಕಿದ. ಅಲ್ಲಿಯ ವರೆಗೆ, ಕೈಯಲ್ಲಿ ಜೀವ ಹಿಡಿದುಕೊಂಡು ಕುಳಿತಿದ್ದ ಜನರಲ್ಲಿ, ಸ್ವಲ್ಪ ಮಟ್ಟಿಗೆ ಉತ್ಸಾಹ ಬಂತು. ನೀಲಮ್ಮದೇವಿ, ತಮ್ಮ ಊರು ಹಾಳಾಗದಂತೆ ಕಾಪಾಡಿ ನಮ್ಮನ್ನು ರಕ್ಷಿಸುತ್ತಾಳೆ. ಆ ತಾಯಿಯ ಜಾತ್ರೆ ನಡೆಸಬೇಕು, ಉತ್ಸವ ಏರ್ಪಡಿಸಬೇಕು—ಎಂದೆಲ್ಲ, ಜನರು ತಮ್ಮತಮ್ಮಲ್ಲೆ ಆಡಿಕೊಂಡರು. ದೇಸಾಯರು ಗುಡಿಯ ಕಲ್ಲುಕಂಬದ ಬಳಿ ನಿಂತು—"ಮುಂದಿನ ಗೌರಿಹುಣ್ಣಿಮೆಯ ದಿನ, ಊರಿಗೆ ಊರೆ ಕಲೆತು, ನೀಲಮ್ಮದೇವಿಯ ಪೂಜೆ ಮಾಡಿ, ಪಲ್ಲಕ್ಕಿ ಉತ್ಸವ ನಡೆಸಬೇಕು"—ಎಂದು ಘೋಷಿಸಿದ.

ಅಲ್ಲಿ ಸೇರಿದ ಜನರು, "ಓ......" ಎಂದು ಕೂಗಿ ತಮ್ಮ ಸಂತೋಷವನ್ನು ವ್ಯಕ್ತ ಪಡಿಸಿದರು.

## [ 2 ]

ಗೌರಿ ಹುಣ್ಣಿಮೆ ಬಂದಿತು. ಗ್ರಾಮಸ್ಥರ ಉತ್ಸಾಹ ಇಮ್ಮಡಿಯಾಯಿತು. ಹುಣ್ಣಿಮೆಗ ಇನ್ನೂ ಐದು ದಿನಗಳಿರುವಾಗಲೇ, ಹಳ್ಳಿಯ ಹೆಣ್ಣುಮಕ್ಕಳು, ಬಿದಿರಿನ ಪುಟ್ಟಿಗಳಲ್ಲಿ

ಮಣ್ಣು ತುಂಬಿ, ನಾಲ್ಕೈದು ರೀತಿಯ ಬೇಳೆಕಾಳುಗಳನ್ನು ಹಾಕಿ, ಸಾಕಷ್ಟು ನೀರು ಸುರಿದು, ಮೊಳಕೆ ಬರಲು ನೆರಳಿನಲ್ಲಿಟ್ಟಿದ್ದರು. ಗೊಂಚಲು ಗೊಂಚಲಾಗಿ ಬೆಳೆದ ಜಾಜಿ ಹೂವುಗಳು ಊರಿನ ಮುತ್ತೈದೆಯರ ಜೆಡೆಗಳನ್ನು ಅಲಂಕರಿಸಿದ್ದವು.

ಅಂದು ಸಂಜೆ, ರಾಮದಾಸು, ನೀಲಮ್ಮನ ಗುಡಿಯ ಕಲ್ಲುಕಂಬದ ಬಳಿ ನಿಂತಿದ್ದ. ಅವನ ನೋಟದಲ್ಲಿ ಸಂತಸವಿತ್ತು; ಅವನು ನಿಂತ ರೀತಿಯಲ್ಲಿ ಠೀವಿಯಿತ್ತು. ಅವನು ಜಟೆಯಂತೆ ಬೆಳೆದಿದ್ದ ಕೂದಲನ್ನು ಕಟ್ಟಿಕೊಳ್ಳದೆ ಹಾಗೆಯೇ ಬಿಟ್ಟಿದ್ದ. ಆತನ ಮೂಗಿನಲ್ಲಿನ ಬಂಗಾರದ ನತ್ತು ಥಳಥಳ ಹೊಳೆಯುತ್ತಿತ್ತು. ಸಂಜೆಯಾಗಿದ್ದರಿಂದ, ಸುತ್ತಲಿನ ವಾತಾವರಣ ಶಾಂತವಾಗಿತ್ತು–ಹಾಯಾಗಿತ್ತು.

ಮುಖದ ತುಂಬ ಅರಶಿಣವನ್ನು ಹಚ್ಚಿಕೊಂಡ ಹೆಣ್ಣುಮಕ್ಕಳು, ತಲೆಯ ಮೇಲೆ ಬಿಂದಿಗೆಗಳನ್ನು ಇಟ್ಟುಕೊಂಡು ವಯ್ಯಾರದಿಂದ ಬಂದು, ರಾಮದಾಸುವಿನ ಕಾಲುಗಳ ಮೇಲೆ ನೀರು ಹಾಕುತ್ತಿದ್ದರು.

ಹೆಣ್ಣು–ಗಂಡು, ಮಕ್ಕಳು–ಮುದುಕರೆಂಬ ಭೇದ–ಭಾವಗಳಿಲ್ಲದೆ, ಎಲ್ಲರೂ ರಾಮ ದಾಸುವಿನ ಕಾಲು ಮುಟ್ಟಿ ನಮಸ್ಕರಿಸುತ್ತಿದ್ದರು. ರಾಮದಾಸು, ಇದೆಲ್ಲವೂ ತನಗೆ ಸಲ್ಲಬೇಕಾದ ಗೌರವವೆಂಬ ಭಾವನೆಯಿಂದ ನಿಂತಿದ್ದ. ಹಾಗೆ ನಿಂತಿರುವಾಗಲೇ, ಅವನು, ಬದಲಾದ ತನ್ನ ಬದುಕಿನ ಬಗ್ಗೆ ಯೋಚಿಸುತ್ತಿದ್ದ. ಕೇವಲ ಕೆಲವೇ ಕೆಲವು ತಿಂಗಳುಗಳ ಹಿಂದೆ ತುತ್ತು ಅನ್ನಕ್ಕಾಗಿ, ಕಂಡವರ ಮನೆಯ ಮುಂದೆ ನಿಂತು, ಕೈಚಾಚಿ ಬೇಡಿಕೊಳ್ಳುತ್ತಿದ್ದ ರಾಮದಾಸು, ಈಗ ಸದ್ಭಕ್ತನಾಗಿದ್ದ—ಊರಿನ ಆದರಣೀಯ ವ್ಯಕ್ತಿಯಾಗಿದ್ದ. ದೇಸಾ ಯರ ಹೆಂಡತಿ, ಗೌಡತಿ ಮತ್ತು ಊರಿನ ಇತರ ಹಿರಿಯರ ಹೆಣ್ಣುಮಕ್ಕಳೂ ಸಹ ಅವನ ಕಾಲಿಗೆರಗಿ, ಅವನ ಪಾದಧೂಳಿಯನ್ನು ತಮ್ಮ ತಲೆಯ ಮೇಲೆ ಹಾಕಿಕೊಳ್ಳು ತ್ತಿದ್ದರು.

ರಂಗು–ರಂಗಿನ ಸೀರೆಗಳನ್ನು ಉಟ್ಟ ಹೆಂಗಳೆಯರು, ನದಿಯಿಂದ ಗುಡಿಗೆ, ಗುಡಿಯಿಂದ ನದಿಗೆ ಹೋಗಿಬರುವುದು ನಡೆದೇ ಇತ್ತು.

ಮಬ್ಬುಗತ್ತಲು ಹರಡುತ್ತಿದ್ದಂತೆ, ಆಗಸದ ಮೇಲೆ ಚಂದ್ರನೇರಿ ಬಂದ. ಹಾಲಿನಂಥ ಬೆಳದಿಂಗಳು; ನದಿಯ ನೀರಿನ ಕಿಲಕಿಲ ನಿನಾದ; ಉತ್ಸಾಹದಿಂದ ಕುಣಿದಾಡುತ್ತಿದ್ದ ಮಕ್ಕಳ ಕೂಗಾಟ; ಸಂತಸದಿಂದ–ಸಂಭ್ರಮದಿಂದ ಓಡಾಡುತ್ತಿದ್ದ ಜನರ ನಗು— ಎಲ್ಲವೂ ಆಹ್ಲಾದಕರವಾಗಿತ್ತು.

ಪಟ್ಟಣದಿಂದ ತರಿಸಲಾಗಿದ್ದ ಪೆಟ್ರೋಮ್ಯಾಕ್ಸ್‌ಗಳನ್ನು ಹಚ್ಚಿಡಲಾಗಿತ್ತು. ತಮಟೆ ಯವರು, ತಮ್ಮ ಕಾಯಕವನ್ನು ಪ್ರಾರಂಭಿಸಿದ್ದರು. ಭುವಿಯನ್ನು ಬೆಳಗಿದ ಚಂದಿರ ನನ್ನು ಬೆನ್ನಟ್ಟಿ ಓಡಿಸಿಕೊಂಡು ಬರುವಂತೆ ತಮಟೆಗಳು ಮೊಳಗಹತ್ತಿದವು.

ಬೆಳಿಗ್ಗೆಯಿಂದ ಉಪವಾಸವಿದ್ದ ರಾಮದಾಸು, ಗರ್ಭಗುಡಿಯಲ್ಲಿನ ಒಂದೊಂದೆ ವಿಗ್ರಹಗಳನ್ನು ತಂದು, ಪಲ್ಲಕ್ಕಿಯಲ್ಲಿಟ್ಟ. ಪಲ್ಲಕ್ಕಿಯನ್ನೇರಿದ ವಿಗ್ರಹಗಳನ್ನು ಕಂಡು

ಜನರಲ್ಲಿ ಹೊಸ ಹುಮ್ಮಸ್ಸು ಮೂಡಿತು. ಭಕ್ತಾದಿಗಳು, ಬಾಳೆಹಣ್ಣು, ಹೂವು–ಕಾಯಿ ಗಳನ್ನು ತಂದು ದೇವಿಗೆ ಅರ್ಪಿಸುತ್ತಿದ್ದರು. ಪಲ್ಲಕ್ಕಿ ಸೇವೆ ಪ್ರಾರಂಭವಾಗುವ ವೇಳೆಗೆ ಪಟಾಕಿಗಳನ್ನು ಹಾರಿಸಲಾಯಿತು. ಈ ಎಲ್ಲ ಸಂಭ್ರಮಗಳ ನಡುವೆ, ಊರಿನ ಅಗಸರು, ಪಲ್ಲಕ್ಕಿಯನ್ನು ಎತ್ತಿ ಭುಜದ ಮೇಲಿಟ್ಟುಕೊಂಡರು.

ಕೆಂಪು ಬಣ್ಣದ ಪಲ್ಲಕ್ಕಿಯನ್ನು ತಳಿರು–ತೋರಣಗಳಿಂದ ಅಲಂಕರಿಸಲಾಗಿತ್ತು. ಪಲ್ಲಕ್ಕಿಯಲ್ಲಿ ಇಡಲಾಗಿದ್ದ ವಿಗ್ರಹಗಳಿಗೂ ಕೂಡ ಬಣ್ಣ ಹಚ್ಚಿ, ಅಲಂಕರಿಸಲಾಗಿತ್ತು. ಊರಿನ ಜನರು ಸೇರಿ ಕೊಟ್ಟಿದ್ದ ನೇರಳೆ ಬಣ್ಣದ ಮಡಿಯುಟ್ಟ ರಾಮದಾಸು, ಪಲ್ಲಕ್ಕಿಯ ಮುಂದೆ ನಿಂತಿದ್ದ.—ಬಿಳಿಯ ಸುಣ್ಣವನ್ನು ಲೇಪಿಸಿಕೊಂಡ ಗುಡಿಯು, ಬೆಳದಿಂಗಳಿನಲ್ಲಿ ಬೆಳ್ಳಿಯಂತೆ ಹೊಳೆಯುತ್ತಿತ್ತು. .........ಎಲ್ಲವೂ ಕಲ್ಪನಾಲೋಕ ದಲ್ಲಿದ್ದಂತಿತ್ತು......... ಕಣ್ಣಿಗೆ ಹಬ್ಬವಾಗಿತ್ತು.

ಹುಣ್ಣಿಮೆಯ ಆ ಬೆಳದಿಂಗಳಿನಲ್ಲಿ, ಅಲ್ಲಿ ಸೇರಿದ್ದ ಜನರ ಮುಖಕ್ಕೆ ಹೊಸ ಕಾಂತಿ ಬಂದಿತ್ತು. ರಾಮದಾಸು ಪೀಠಾಧಿಕಾರಿಯ ಠೀವಿಯಲ್ಲಿ, ಮಂದಹಾಸ ಬೀರುತ್ತಾ, ಸುತ್ತಲೂ ನೋಡುತ್ತಿದ್ದ.

ನೀಲಮ್ಮನ ಗುಡಿಯ ಎದುರಿಗೆ, ಎರಡು ವರ್ಷಗಳ ಹಿಂದೆ, ಒಂದು ತೆಂಗಿನ ತೋಟವಿತ್ತು. 1943ರಲ್ಲಿ ಅಪ್ಪಳಿಸಿದ ಬಿರುಗಾಳಿಯಿಂದಾಗಿ, ಈಗ ಅಲ್ಲಿ ಕೇವಲ ನಾಲ್ಕು ತೆಂಗಿನ ಗಿಡ ಗಳು ಉಳಿದುಕೊಂಡಿದ್ದವು. ತಮಟೆ ಅವರು, ಆ ತೆಂಗಿನ ಗಿಡಗಳ ಬಳಿಯಲ್ಲಿ ನಿಂತಿದ್ದರು. ಅಂದಿನ ಆ ವಾತಾವರಣ, ಮುದುಕರಲ್ಲೂ ಸಹ ಉತ್ಸಾಹವನ್ನು ಮೂಡಿಸಿತ್ತು. ಸುತ್ತಮುತ್ತಲಿನ ಹಳ್ಳಿಗಳಿಂದ ಬಂದ ಜನರಲ್ಲೂ ಸಹ ಉತ್ಸಾಹ ಉಕ್ಕೇರಿತ್ತು. ಎಲ್ಲರೂ ಪಲ್ಲಕ್ಕಿಯ ಉತ್ಸವ ಪ್ರಾರಂಭವಾಗುವುದನ್ನೇ ಕಾಯು ತ್ತಿದ್ದರು.

ತಮಟೆಗಳು, "ಧಿನಕ್‌ಧಿನಕ್......" ಎಂದು ಮಂದಗತಿಯಲ್ಲಿ ಮೊಳಗಲಾರಂಭಿಸಿ ದುವು. ಐದು ವರ್ಷದ ಒಂದು ಮಗು ತಮಟೆ ಅವರ ಮುಂದೆ, ತಾಳಕ್ಕೆ ತಕ್ಕಂತೆ ಕುಣಿಯಲು ಪ್ರಾರಂಭಿಸಿತು. ತಮಟೆ ಅವರು ಸಂತೋಷದಿಂದ ಕೇಕೆ ಹಾಕುತ್ತಾ ಮತ್ತಷ್ಟು ರಭಸದಿಂದ ಬಾರಿಸಿದರು.

ಅಲ್ಲಿಯೇ ನಿಂತಿದ್ದ ಮುದುಕನೊಬ್ಬ, ಬಾಯಲ್ಲಿ ಹಲ್ಲಿಲ್ಲದಿದ್ದರೂ, "ಧಂಜಿನ ಕಡಿ–ಧಂಜಿನ ಕಡಿ......" ಎಂದು ಕೂಗುತ್ತಾ, ತಮಟೆ ಅವರಿಗೆ ಉತ್ತೇಜನ ನೀಡಿದ.

ಅಷ್ಟರಲ್ಲಿ, "ಅದೊ—ಬಂದ, ಬಂದ"—ಎಂದು ಎಲ್ಲರೂ ಒಟ್ಟಿಗೆ ಕೂಗಿದರು. ಉಕ್ಕಿನಂತಹ ಕಟ್ಟುಮಸ್ತಾದ ಶರೀರ; ಉಟ್ಟ ಪಂಚೆಯನ್ನು ಮೇಲಕ್ಕೆತ್ತಿ ಲಂಗೋಟಿ ಯಂತೆ ಕಟ್ಟಿ, ಮೀಸೆಯನ್ನು ತಿರುವುತ್ತಲೇ ರಂಗದೊಳಕ್ಕೆ ಧುಮ್ಮಿಕಿದ ಆ ವ್ಯಕ್ತಿಯ ವಯಸ್ಸು ಸುಮಾರು ನಲವತ್ತು ವರ್ಷಗಳಾಗಿರಬಹುದು.

ನೇರವಾದ ಉದ್ದನೆಯ ಮೂಗಿಗೆ ತಕ್ಕ ದೊಡ್ಡದಾದ, ಅಗಲವಾದ ಮುಖ;

ಕಾಂತಿಯುತವಾದ ಹೊಳೆಯುವ ಕಣ್ಣುಗಳು; ಕುತ್ತಿಗೆಯಲ್ಲಿ ಕರಿಯ ಕಾಶಿದಾರ; ಕೈಯ ಮಣಿಕಟ್ಟಿಗೆ ಇನ್ನೊಂದು ಕಪ್ಪುದಾರ; ಮಾಂಸಖಂಡಗಳಿಂದ ತುಂಬಿದ ಕೈಕಾಲುಗಳು—ಅವನು ಗರಡಿಮನೆಯ ಒಳ್ಳೆಯ ಗಾರುಡಿಗನೆಂಬುದನ್ನು ಸಾರಿಹೇಳುತ್ತಿದ್ದವು. ದೃಢಕಾಯನಾದ ಆ ವ್ಯಕ್ತಿ, ಜಿಗಿದು ಗಾಳಿಯಲ್ಲಿ ತೇಲಿಕೊಂಡು ಹೋಗುತ್ತಿದ್ದಾಗ, ಅವನ ಗಿರಿಜಾ ಮೀಸೆಗಳೂ ಸಹ ಕುಣಿಯುತ್ತಿದ್ದವು...... ಹಾಗೆ ಎಲ್ಲರ ಗಮನ ಸೆಳೆದ ಆ ವ್ಯಕ್ತಿಯೇ—ಪುಲ್ಲಯ್ಯ.

ಪುಲ್ಲಯ್ಯನನ್ನು ನೋಡಿ ಆವೇಶಗೊಂಡ ತಮಟೆ ಅವರು, ಒಂದೆಡೆ ನಿಲ್ಲದಾದರು. ಹಿಂದೆ-ಮುಂದೆ ಸರಿಯುತ್ತಾ, ಪುಲ್ಲಯ್ಯನ ಕುಣಿತಕ್ಕೆ ಸವಾಲು ಹಾಕಿ, ತಮಟೆ ಬಾರಿಸುವ ವೇಗವನ್ನು ಹೆಚ್ಚಿಸಿದರು.

ತಮಟೆ ಅವರು ಪುಲ್ಲಯ್ಯನ ಸಮೀಪಕ್ಕೆ ಬಂದು ನಿಂತರು. ಸುತ್ತಮುತ್ತಲಿನ ಹತ್ತು ಗ್ರಾಮಗಳಲ್ಲಿ ಪ್ರಸಿದ್ಧಿ ಪಡೆದ ಆ ತಮಟೆಯವರು, ಪುಲ್ಲಯ್ಯನ ಹುಲಿ ಕುಣಿತದ ಮುಂದೆ ಸಪ್ಪೆ ಆದರು. ಇದನ್ನು ನೋಡಿದ ಜನ, ಭಲೆ ಪುಲ್ಲಯ್ಯ—ಶಭಾಷ್—ಎಂದು ಉದ್ಗಾರ ತೆಗೆದರು.

ಪುಲ್ಲಯ್ಯ ಆವೇಶದಿಂದ ಕುಣಿಯತೊಡಗಿದ್ದ. ಆತನ ಕುಣಿತಕ್ಕೆ ಸರಿಯಾಗಿ ತಮಟೆ ಬಾರಿಸಲು ಹವಣಿಸುತ್ತಿದ್ದ ತಮಟೆ ಅವರು, ಪದೆ ಪದೆ ತಮಟೆಯನ್ನು ಕಾಸಿಕೊಂಡು ಬರುತ್ತಿದ್ದರು. ಹುಲಿವೇಷದಲ್ಲಿ ಘೀಳಿಡುತ್ತಿದ್ದ ಪುಲ್ಲಯ್ಯ, ಇದ್ದಕ್ಕಿದ್ದಂತೆ ಕುಣಿಯುವುದನ್ನು ನಿಲ್ಲಿಸಿದ. ಪುಲ್ಲಯ್ಯ ತನ್ನ ಕುಣಿತವನ್ನು ನಿಲ್ಲಿಸಿದಾಗ ಅಲ್ಲಿ ಸೇರಿದ್ದ ಜನರಿಗೆ ನಿರಾಶೆಯಾಯಿತು. ತಮಟೆಯವರು ಮಾತ್ರ, ತಮ್ಮ ತಾಳಕ್ಕೆ ತಕ್ಕಂತೆ ಕುಣಿಯಲಾಗದೆ, ಪುಲ್ಲಯ್ಯ ಕುಣಿಯುವುದನ್ನು ನಿಲ್ಲಿಸಿದನೆಂದು ನಂಬಿದರು. ಆಯಾಸಗೊಂಡ ಪುಲ್ಲಯ್ಯ ಇನ್ನು ಕುಣಿಯಲಾರನೆಂದು ತಿಳಿದು, ತಮಗೆ ಜಯ ಲಭಿಸಿತೆಂಬ ಅಹಂಭಾವನೆಯಿಂದ ಕೇಕೆ ಹಾಕತೊಡಗಿದರು.

ದೇವಿಗೆ ನಮಸ್ಕರಿಸದೆ, ತಮಟೆ ಅವರ ಜೊತೆ ಪೈಪೋಟಿಗಿಳಿದಿದ್ದ ಪುಲ್ಲಯ್ಯನಿಗೆ, ತನ್ನ ತಪ್ಪಿನ ಅರಿವಾದಾಗ, ನಾಲಿಗೆ ಕಡಿದುಕೊಂಡು ಕುಣಿಯುವುದನ್ನು ನಿಲ್ಲಿಸಿದ. ಅಲ್ಲಿಂದ ನೇರವಾಗಿ ಹೋಗಿ, ಸೀಲಮ್ಮದೇವಿಗೆ ದೀರ್ಘದಂಡ ನಮಸ್ಕಾರ ಮಾಡಿದ. ರಾಮದಾಸುವಿನ ಕಾಲು ಮುಟ್ಟಿ ನಮಸ್ಕರಿಸಿದ. ದಾಸು, ಮಂದಹಾಸದಿಂದ, "ಭಲಾ—ಪುಲ್ಲಯ್ಯ"—ಎಂದಾಗ, ಪುಲ್ಲಯ್ಯನಿಗೆ ಹೊಸ ಹುಮ್ಮಸ್ಸು ಬಂದಿತು. ಅವನು ನಿಂತಲ್ಲಿಂದಲೇ ಪುಟಿದು, ಒಂದೇ ಜಿಗಿತಕ್ಕೆ ತಮಟೆ ಅವರ ಮುಂದೆ ಬಂದು ಕುಣಿಯತೊಡಗಿದ. ಮದವೇರಿದ ಆನೆಯಂತೆ ಘೀಳಿಡುತ್ತಾ ಕುಣಿಯುತ್ತಿದ್ದ ಪುಲ್ಲಯ್ಯನಿಗೆ ಸರಿಸಾಟಿಯಾಗಿ ತಮಟೆ ಬಾರಿಸಲು ಅವರಿಂದ ಆಗಲಿಲ್ಲ. ಕೈಯಲ್ಲಿ ಶಕ್ತಿಯೇ ಇಲ್ಲದ ರೀತಿಯಲ್ಲಿ ಅವರು ತಮಟೆ ಬಾರಿಸುತ್ತಿದ್ದರು. "ಪುಲ್ಲಯ್ಯ—ಪುಲ್ಲಯ್ಯನೇ. ಅವನೇನೂ ಕಡಿಮೆ ಅಲ್ಲ. ಅವನಿಗೆ ಎದುರಾಗಿ ನಿಲ್ಲುವವರಾರು?" "ಅವನಿಗೆ ಸಾಟಿ

ಯಾದ ಇನ್ನೊಬ್ಬ ಗಂಡಸು ಈ ಊರಿನಲ್ಲೇ ಏಕೆ, ಸುತ್ತಮುತ್ತಲಿನ ಹಳ್ಳಿಗಳಲ್ಲೂ ಸಹ ಇಲ್ಲ"—ಎಂದೆಲ್ಲ ಅಲ್ಲಿ ಸೇರಿದ್ದ ಜನರು ಮಾತನಾಡಿಕೊಂಡರು.

ಜನರ ಈ ಮಾತನ್ನು ಕೇಳಿಸಿಕೊಂಡ ಒಬ್ಬ ಮುದುಕ, ಗರ್ವದಿಂದ ಮೀಸೆಯನ್ನು ಹುರಿಮಾಡಿಕೊಂಡ. ಅಲ್ಲಿಯೇ ನಿಂತಿದ್ದ ಪುಲ್ಲಯ್ಯನ ಶಿಷ್ಯನೊಬ್ಬ ಮುಗುಳ್ನಗುತ್ತಾ ಭುಜ ತಟ್ಟಿಕೊಂಡ.

ಈ ಎಲ್ಲಾ ಸಂಭ್ರಮಗಳ ನಡುವೆ, ಪಲ್ಲಕ್ಕಿ ಉತ್ಸವ ಮುನ್ನಾಗಿತು. ಅಲ್ಲಿ ಸೇರಿದ್ದ ಜನರೂ ಸಹ ಮುಂದೆ ಹೆಜ್ಜೆ ಹಾಕಿದರು. ಉತ್ಸವದ ಮುಂದೆ ಹೊರಟಿದ್ದ ಹಳ್ಳಿಯ ಯುವಕರ ತಂಡ, ಪಟಾಕಿಗಳನ್ನು ಹಾರಿಸಿದರು.

ಊರಿನ ಪ್ರತಿ ಮನೆಯ ಮುಂದೂ ಪಲ್ಲಕ್ಕಿಯನ್ನು ನಿಲ್ಲಿಸಲಾಗುತ್ತಿತ್ತು. ಮನೆಯ ಹೆಣ್ಣುಮಕ್ಕಳು, ನೀರಿನಲ್ಲಿ ನೆನೆ ಇಡಲಾಗಿದ್ದ ಬೇಳೆ, ಬಾಳೆಹಣ್ಣು ಮುಂತಾದುವುಗಳನ್ನು ತಂದುಕೊಡುತ್ತಿದ್ದರು. ರಾಮದಾಸು ಅವುಗಳನ್ನು ಪಡೆದು ದೇವಿಯ ನೈವೇದ್ಯ ಮಾಡಿ, ಪ್ರಸಾದ ಕೊಡುತ್ತಿದ್ದ.

ದೇಸಾಯರ ಮನೆಯ ಮುಂದೆ, ಪಲ್ಲಕ್ಕಿ ಉತ್ಸವವನ್ನು ಬಹಳ ಹೊತ್ತಿನ ವರೆಗೆ ನಿಲ್ಲಿಸಲಾಯಿತು. ಪುಲ್ಲಯ್ಯ, ಇದೇ ಅವಕಾಶವೆಂದು, ಕೈಯಲ್ಲಿ ಒಂದು ಕೋಲು ಹಿಡಿದು, ದೊಣ್ಣೆ ವರಸೆ—ಪ್ರದರ್ಶಿಸಿದ. "ಧಂಜಿನ ಕಡಿ–ಧಂಜಿನ ಕಡಿ......" ಎಂಬ ತಮಟೆಯ ನಾದ ಕಿವಿಗಡಚಿಕ್ಕುತ್ತಿತ್ತು. ಪುಲ್ಲಯ್ಯ, ಕೈಯಲ್ಲಿನ ಕೋಲನ್ನು ರಾಕೆಟ್ಟಿನ ವೇಗದಲ್ಲಿ ತಿರುಗಿಸುತ್ತಿದ್ದ. ತಮಟೆ ಅವರು ಅಷ್ಟೇ ವೇಗದಲ್ಲಿ ತಮಟೆಯನ್ನು ಬಾರಿಸುವ ಪ್ರಯಾಸ ಮಾಡುತ್ತಿದ್ದರಾದರೂ, ಅದು ಅವರ ಕೈಯಿಂದ ಆಗಲಿಲ್ಲ. ತಮಟೆಯವರು ನಿರಾಶರಾಗಿ ತೆಪ್ಪಗಾದಾಗ, ಪುಲ್ಲಯ್ಯ ವಿಜಯೋತ್ಸಾಹದಿಂದ ಕೇಕೆ ಹಾಕಿದ. ಅಲ್ಲಿ ಸೇರಿದ್ದ ಜನರೂ ಸಹ ಕೇಕೆ ಹಾಕಿ ಚಪ್ಪಾಳೆ ತಟ್ಟಿ ತಮ್ಮ ಸಂತೋಷ ವ್ಯಕ್ತಪಡಿಸಿದರು.

ಪುಲ್ಲಯ್ಯ, ದೊಣ್ಣೆ ವರೆಸೆ ಪ್ರದರ್ಶಿಸಿ, ದೇಸಾಯರ ಮನೆಯ ಮುಂದಿನ ಕಟ್ಟೆಯ ಮೇಲೆ ನಿಂತಿದ್ದ. ಊರಿನ ಯುವತಿಯರ ಮನಸ್ಸನ್ನು ಸೂರೆಗೊಂಡಿದ್ದ. ಯೌವನವು ತುಂಬಿತುಳುಕುತ್ತಿದ್ದ ಆ ಹೆಂಗಳೆಯರ ಮನಸ್ಸಿನಲ್ಲಿ, ಪುಲ್ಲಯ್ಯನ ಉಕ್ಕಿನಂತಹ ಶರೀರ, ಆತನ ಪೌರುಷ ಅಚ್ಚಳಿಯದೆ ಮೂಡಿದವು.

ಉತ್ಸವ ಮುಂದುವರಿದಂತೆ, ಜನರೂ ಸಹ ಮುನ್ನಾಗಿದರು. ಊರಿನ ಮುಖ್ಯ ಬೀದಿಯಲ್ಲಿ ಎರಡು ಕಡೆ, ಉತ್ಸವವನ್ನು ನಿಲ್ಲಿಸಿದಾಗ, ಪುಲ್ಲಯ್ಯನ ಶಿಷ್ಯರು ಅಂಗ ಸಾಧನೆಗಳನ್ನು ಪ್ರದರ್ಶಿಸಿದರು. ಉತ್ಸವವು, ಊರಿನ ಅಂಚಿನಲ್ಲಿದ್ದ ಕಲ್ಕತ್ತಾ ಮತ್ತು ಮದ್ರಾಸ್‌ನ ನಡುವೆ ಸಂಪರ್ಕ ಕಲ್ಪಿಸುವ ರಸ್ತೆಯ ಬಳಿ ಬಂದಾಗ, ತಮಟೆ ಅವರು, ತಮ್ಮ ಶಕ್ತಿಯನ್ನು ಪ್ರದರ್ಶಿಸಲು ಮತ್ತೆ ಮುಂದಾದರು.

ಪುಲ್ಲಯ್ಯ ಹುಲಿಯಂತೆ ಹೆಜ್ಜೆ ಹಾಕುತ್ತಾ, ರಸ್ತೆಯ ಪಕ್ಕದಲ್ಲಿ ನಡೆದುಬಂದು,

ಒಮ್ಮೆ ಪುಟಿದೆದ್ದು ಸಾಮು ಹಾಕಿದ. ಪಕ್ಕದ ಹಳ್ಳಿಯಲ್ಲಿ ನಡೆದ ಸಂತೆಯಿಂದ ಹಿಂದಿರುಗಿ ಬರುತ್ತಿದ್ದ ಜನರು, ಉತ್ಸವವನ್ನು ನೋಡುತ್ತಾ ಅಲ್ಲೆ ನಿಂತರು. ಅವರ ಪೈಕಿ ಐದಾರು ವರ್ಷದ ಒಂದು ಮಗು ಮುಂದೆ ಬಂದು, ತೋಳುಗಳನ್ನು ತಟ್ಟಿಕೊಳ್ಳುತ್ತಾ ಕೇಕೆ ಹಾಕತೊಡಗಿತು. ತಮಟೆ ಅವರು, ಮೈಮರೆತು ತಮಟೆ ಬಾರಿಸುತ್ತಿದ್ದಾಗ, ಆ ಮಗು ಕೂಡ, ಅಷ್ಟೆ ಆವೇಶದಿಂದ ಕುಣಿಯಿತು. ಕಟ್ಟಿಕೊಂಡಿದ್ದ ಚಲ್ಲಣ ಬಿಚ್ಚಿ ಹೋದುದರ ಪರಿವೆಯೂ ಇಲ್ಲದೆ ಅವನು ಜಿಗಿಯುತ್ತಿದ್ದ. ಮುದ್ದಾಗಿದ್ದ ಆ ಎಳೆಯ ಮಗುವನ್ನು ನೋಡಿ ಎಲ್ಲರ ಹೃದಯ ತುಂಬಿಬಂತು.

ಆ ಮಗುವಿನ ಕುಣಿತ ನೋಡಿ ಪುಲ್ಲಯ್ಯ ಕೂಡ, ವಾಹವ್ವಾ—ಶಭಾಷ್ ಎಂದು ಉದ್ಗಾರ ತೆಗೆದ. ಅವನು ಮುಂದೆ ಬಂದು, ನಡುವಣ ಮೈದಾನದಲ್ಲಿ ಶಿರಶಾಸನ ಹಾಕಿ ನಿಂತ. ಪುಲ್ಲಯ್ಯ ಹಾಗೆ ನಿಂತ ಕೂಡಲೇ ತಮಟೆ ಬಾರಿಸುವುದು ನಿಂತಿತು. ತಮಟೆ ತಾಳಕ್ಕೆ ಕುಣಿಯುತ್ತಿದ್ದ ಆ ಪುಟ್ಟ ಮಗು, ಸರಸರನೆ ತೆಂಗಿನ ಮರ ಏರುವವರಂತೆ ಪುಲ್ಲಯ್ಯನ ದೇಹದ ಮೇಲೆ ಏರತೊಡಗಿದ. ಪುಲ್ಲಯ್ಯ ಆ ಮಗುವಿನ ಭಾರ ತಾಳಿ ಕೊಳ್ಳಲಾರ......... ಮಗು ಜಾರಿ ಬೀಳಬಹುದು......... ಹೌದ್ಹೌದು, ಅವನು ಬೀಳುವುದು ಖಚಿತ—ಎಂದು ಎಲ್ಲರೂ ಅಂದುಕೊಂಡರು. ಆದರೆ, ಆ ಮಗು ಮಾತ್ರ ಪುಲ್ಲಯ್ಯನ ಸೊಂಟ ಹಿಡಿದುಕೊಂಡು ಮೇಲೇರುವ ಪ್ರಯತ್ನ ಬಿಡಲಿಲ್ಲ.

ಎಲ್ಲೆಲ್ಲೂ ನಿಶ್ಶಬ್ದವಾಗಿತ್ತು...... ಎಲ್ಲರೂ ಬಾಯಿ ತೆರೆದುಕೊಂಡು ನಿಂತಿದ್ದರು—ಎಲ್ಲರೂ, ಆ ಮಗುವನ್ನೆ ನೋಡುತ್ತಿದ್ದರು.

ಒಂದೇ ಒಂದು ಶಿಳ್ಳೆ ಹಾಕಿ—ಆ ಮಗು ಪುಲ್ಲಯ್ಯನ ಪಾದಗಳ ಮೇಲೆ ನಿಂತು ಭುಜ ತಟ್ಟಿಕೊಂಡು ಕೇಕೆ ಹಾಕಿತು.

ಆಹಾ...... ಅದ್ಭುತ, ಎಂತಹ ಧೈರ್ಯ...... ಮಗುವಿನ ಸಾಹಸ ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಹೆಂಗಸರು, ಎದೆಯ ಮೇಲೆ ಕೈಯಿಟ್ಟುಕೊಂಡು—"ಅಬ್ಬಾ, ಎಂತಹ ಹುಡುಗ ಇದು"—ಎಂದು ಉದ್ಗಾರ ತೆಗೆದರು. ಪುಲ್ಲಯ್ಯನಿಗೂ, ಹೆಮ್ಮೆಯಿಂದ ಮೈ ಬಿಗಿದುಕೊಂಡಿತು.

ನಿಂತ ನೀರಿನಲ್ಲಿ ಕಲ್ಲೆಸೆದಾಗ ಹುಟ್ಟುವ ತೆರೆಗಳಂತೆ...... ಅಲ್ಲಿ ನಿಂತಿದ್ದ ಜನರ ಮಾತುಗಳು, ಪುಲ್ಲಯ್ಯನ ಕಿವಿಗೆ ಬಿದ್ದವು. "ಯಾರು ಆ ಹುಡುಗ......? ಯಾರ ಮಗ......? ಅವನಿಗಿರುವ ಧೈರ್ಯ, ಸಾಹಸ ಮತ್ತಾರಿಗಿರಲು ಸಾಧ್ಯ? ಅವನು, ಆ ಕೆಳಗಿನವನ ಮಗನೇ ಆಗಿರಬೇಕು."

ಈ ಮಾತು ಪುಲ್ಲಯ್ಯನ ಕಿವಿಗೂ ಬಿತ್ತು. ಅವನ ಮನಸ್ಸಿನಲ್ಲಿ ಒಟ್ಟಿಗೆ ನೂರು ಭಾವನೆಗಳು ಮೂಡಿದವು. ತನ್ನ ಮೈ ಏರಿ ನಿಂತ ಮಗು, ತನ್ನ ಮಗನೇ ಆಗಿರಬಹುದೆಂದು ಹೇಳಿದ ವ್ಯಕ್ತಿಯನ್ನು ನೋಡಲು ಅವನು ಆಶೆಪಟ್ಟ.—ಅಷ್ಟರಲ್ಲಿ, ಪುಲ್ಲಯ್ಯನ ಪಾದಗಳ ಮೇಲೆ ನಿಂತಿದ್ದ ಮಗುವನ್ನು ಯಾರೊ ಕೆಳಗಿಳಿಸಿಕೊಂಡರು. ಮಗು

ಕೆಳಗಿಳಿದು, ಸಂತೆಯಿಂದ ಹೊರಟಿದ್ದ ಬಂಡಿಗಳತ್ತ ಓಡಿತು. ಮುದುಕನಾಗಿದ್ದರೂ ಹರೆಯದವನಂತೆ ಕಾಣುತ್ತಿದ್ದ ಒಬ್ಬ ಯಜಮಾನ ಆ ಮಗುವನ್ನು ಎತ್ತಿ ಮುದ್ದಾಡಿದಾಗ, ಆ ಮಗು ಅವನ ಮಗನೆಂಬುದು ತಿಳಿದುಹೋಯಿತು. ಹರೆಯದ ಆ ಮುದುಕ, ಮಗುವನ್ನು ಎತ್ತಿ ಬಂಡಿಯಲ್ಲಿ ಕುಳ್ಳಿರಿಸಿ, ಬೊಚ್ಚು ಬಾಯಿಯಿಂದ ನಗುತ್ತ ಕುಳಿತ.

ಸಂತೆಯ ಬಂಡಿಗಳು ಮುಂದೆ ಹೊರಟವು. ಆ ಮುದುಕನೂ ಸಹ ಎತ್ತುಗಳನ್ನು ಹೊಡೆದು ಬಂಡಿಯನ್ನು ಮುಂದೆ ಬಿಟ್ಟ. "ಅದೃಷ್ಟವೆಂದರೆ ಹಾಗಿರಬೇಕು, ತಂದೆಗೆ ತಕ್ಕ ಮಗ"—ಎನ್ನುತ್ತಾ ಜನರು ಮುಂದೆ ಹೆಜ್ಜೆ ಹಾಕಿದರು. ಆದರೆ ಪುಲ್ಲಯ್ಯನಿಗೆ ಮಾತ್ರ ಮುಂದೆ ಹೋಗಲಾಗಲಿಲ್ಲ.

ಹೌದು...... ನನ್ನ ಮಗ...... ನನಗೂ ಒಬ್ಬ ಮಗ...... ಹೌದ್ಹೌದು, ನನಗೂ ಒಬ್ಬ ಮಗ ಬೇಕು. ನನ್ನ ಹೆಸರನ್ನು, ವಂಶದ ಕೀರ್ತಿಯನ್ನು ಉಳಿಸುವಂತಹ ಮಗ ಬೇಕು—ಎಂದು ಪುಲ್ಲಯ್ಯ ಯೋಚಿಸಿದ.

ಮುದ್ದಾದ ಒಂದು ಮಗು ಬೇಕು. ನನ್ನ ಮಗನೂ, ನನ್ನಂತೆ, ನಾಲ್ಕು ಜನರ ಮುಂದೆ ಸಾಮು ಮಾಡಿ ಹೌದೆನ್ನಿಸಿಕೊಳ್ಳಬೇಕು. ಯಾವುದಕ್ಕೂ ಹೆದರದ ಗಂಡುಗಲಿಯಾಗ ಬೇಕು. ಗರಡಿಯಲ್ಲಿ ಪಳಗಬೇಕು. ಆಡಿದ ಮಾತನ್ನು, ಪ್ರಾಣ ಕೊಟ್ಟಾದರೂ ನಡೆಸಿ ಕೊಡುವಂತೆ ಅವನನ್ನು ಬೆಳೆಸಬೇಕು. ಕಳ್ಳರನ್ನು ಹಿಡಿಯುವ ಕಲಿಯನ್ನಾಗಿ ಮಾಡ ಬೇಕು. ಭೂದೇವಿಯನ್ನು ನಂಬಿ, ಬೆವರು ಸುರಿಸಿ, ನನ್ನ ಹೆಸರನ್ನು, ನಮ್ಮ ವಂಶದ ಕೀರ್ತಿಯನ್ನು ನಿಲ್ಲಿಸಬೇಕು—ನನ್ನ ಮಗ...... ನನ್ನ ಮಗ.

## [ 3 ]

ಮದುವೆಗೆ ಮೊದಲೇ, ಮಗನಿಗಾಗಿ ಹಾತೊರೆಯುತ್ತಿದ್ದ, ಪುಲ್ಲಯ್ಯ. ತಂದೆಗೆ ತಕ್ಕ ಮಗ—ಎಂಬ ಆ ಮುದುಕನ ಮಾತು, ಅವನ ಕಿವಿಯಲ್ಲಿ ಈಗಲೂ ಸಹ ಗುಯಿಗುಡುತ್ತಿತ್ತು. ಮಗನನ್ನು ಪಡೆಯಬೇಕೆಂಬ ಗುಂಗಿನಲ್ಲಿ ಮೈಮರೆತಿದ್ದ ಪುಲ್ಲಯ್ಯನಿಗೆ, ಇದ್ದಕ್ಕಿದ್ದಂತೆ ಎತ್ತುಗಳಿಗೆ ಹುಲ್ಲು ಹಾಕಿಲ್ಲವೆಂಬ ನೆನಪು ಬಂತು. ಕೂಡಲೇ ರಸ್ತೆಯನ್ನು ಬಿಟ್ಟು, ಹೊಲಗಳ ಒಡ್ಡುಗಳ ಮೇಲೆ ಹೆಜ್ಜೆ ಹಾಕುತ್ತಾ ಮನೆಯ ಕಡೆ ಹೊರಟ.

ನದಿಯ ದಡದ ಮೇಲಿನ ನೀಲಮ್ಮಳ ಗುಡಿ ಬೆಳದಿಂಗಳಿನಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಹುಣ್ಣಿಮೆಯ ಚಂದಿರ, ಆಗಲೆ ಮೇಲೇರಿ ಬಂದಿದ್ದ. ಆಕಾಶದಲ್ಲಿನ ಬಿಳಿಯ ಮೋಡಗಳು, ಗಾಳಿಯಲ್ಲಿ ತೇಲಿಕೊಂಡು ಹೋಗುತ್ತಿದ್ದವು. ನಡು ರಾತ್ರಿ ಸಮೀಪಿಸಿದ್ದರೂ, ಹಗಲಿನಂತೆ ಎಲ್ಲೆಲ್ಲೂ ಬೆಳಕು ಬಿದ್ದಿತ್ತು. ಹಾಲಿನಂತಹ ಬಿಳಿಯ ಬೆಳದಿಂಗಳಿನಲ್ಲಿ, ಬೆಳೆದು ನಿಂತ ಫಸಲು, ಮನಸ್ಸನ್ನು ಮುದಗೊಳಿಸುತ್ತಿತ್ತು.

ಪುಲ್ಲಯ್ಯ ಸ್ವಲ್ಪ ಹೊತ್ತು ಅಲ್ಲಿಯೇ ನಿಂತ. ನದಿಯ ದಡದ ಮೇಲೆ, ಸುಮಾರು ಮೂರು ಫರ್ಲಾಂಗ್ ದೂರದ ವರೆಗೆ ಹರಡಿಕೊಂಡಿದ್ದ ಹೊಲಗಳಲ್ಲಿನ ತುಂಬಿದ ತೆನೆಗಳು, ಬೆಳದಿಂಗಳಿನಲ್ಲಿ ಮುತ್ತಿನಂತೆ ಫಳಫಳ ಹೊಳೆಯುತ್ತಿದ್ದವು.

ತಂಗಾಳಿಗೆ ತಲೆ ತೂಗುತ್ತಿದ್ದ ಹಾಲಿನಿಂದ ತುಂಬಿದ ತೆನೆಗಳನ್ನು ನೋಡಿ ಪುಲ್ಲಯ್ಯ ನಿಗೆ ಆನಂದವಾಯಿತು. ಅವನು "ತಾಯಿ, ಲಕ್ಷ್ಮೀದೇವಿ—ಎಲ್ಲ ನಿನ್ನ ಕೃಪೆ"—ಎಂದು ಮನಸ್ಸಿನಲ್ಲೆ ಅಂದುಕೊಂಡು, ದೇವರಿಗೆ ನಮಸ್ಕರಿಸಿದ. ಎತ್ತರಕ್ಕೆ ಬೆಳೆದು ಮೈಯೊಡ್ಡಿ ನಿಂತಿದ್ದ ಪೈರಿನ ಮಧ್ಯದಿಂದ ತೂರಿಕೊಂಡು ಬರುತ್ತಿದ್ದ ಗಾಳಿ, ತಂಪಾಗಿ—ಆಹ್ಲಾದ ಕರವಾಗಿತ್ತು. ಗಾಳಿಗೆ ಸಿಕ್ಕ ತೆನೆಗಳು ಓಲಾಡಿದಾಗ ಬರುತ್ತಿದ್ದ ಧ್ವನಿ ಕೇಳಿ, "ನಮ್ಮಮ್ಮ ಲಕ್ಷ್ಮೀದೇವಿಯ ಬಳೆಗಳ ಸಪ್ಪಳ"—ಎಂದು ಪುಲ್ಲಯ್ಯ ನಕ್ಕ.

ಪುಲ್ಲಯ್ಯನ ಮನಸ್ಸು ಸಂತೋಷದಿಂದ ತುಂಬಿತ್ತು. ಅವನ ಮನಸ್ಸಿನಂತೆ, ಆಕಾಶವೂ ಸಹ ಶುಭ್ರವಾಗಿ, ಬೆಳದಿಂಗಳಿನಿಂದ ತುಂಬಿತ್ತು.

ದುಡಿದಷ್ಟೂ ಹೆಚ್ಚು ಫಲ ನೀಡುವ ಚಿನ್ನದಂತಹ ಭೂಮಿ. ಹಾಲು—ಮೊಸರಿಗೆ ಕೊರತೆ ಇಲ್ಲದ ಹಳ್ಳಿ. ಯಾವುದಕ್ಕೂ ಕಡಿಮೆ ಇಲ್ಲದ ಸಹೃದಯ ಜನರು. ರಾಟೆ ತಿರುಗದ ಮನೆ ಇಲ್ಲ—ಕಷ್ಟ ಪಡದ ಜನರಿಲ್ಲ.

"ಇದು ನನ್ನ ಊರು—ನಮ್ಮೂರು"—ಎಂದು ಮನಸ್ಸಿನಲ್ಲೆ ಹತ್ತು ಸಲ ಹೇಳಿ ಕೊಂಡ. ಪುಲ್ಲಯ್ಯ ತನ್ನ ಊರಿನ ಸೌಭಾಗ್ಯವನ್ನು ನೆನೆಯುತ್ತಾ, ಪುಟಿಪುಟಿದು ಹೆಜ್ಜೆ ಹಾಕತೊಡಗಿದ.

ಚಿತ್ತದಲ್ಲಿ ಬಿತ್ತಿ, ಸ್ವಾತಿಯಲ್ಲಿ ನೀರುಣಿಸಿ, ವಿಶಾಖ ಕೈಕೊಡದಿದ್ದಲ್ಲಿ, ಅನುರಾಧದ ವೇಳೆಗೆ ಕೇಳಿದಷ್ಟು ಫಲ ಕೊಡುವ ನಮ್ಮ ಈ ಪುಣ್ಯಭೂಮಿ. ರೋಹಿಣಿಯಲ್ಲಿ ಮಳೆ ಯಾದಲ್ಲಿ, ಮನೆ ತುಂಬುವಷ್ಟು ಫಲಕೊಡುತ್ತದೆ—ಈ ಬಂಗಾರದ ಭೂಮಿ.

ಈ ಊರಿಗೆ ನೀರಿನ ಕೊರತೆ ಇಲ್ಲ. ಸರಿಯಾಗಿ ಮಳೆಯಾದಲ್ಲಿ, ನದಿ—ಕಾಲುವೆಗಳು ತುಂಬಿ ಹರಿಯುತ್ತವೆ. ನೀರಿಲ್ಲದೆ ಬೆಳೆ ಹಾಳಾದುದೇ ಇಲ್ಲ. ಆದರೆ ಎರಡು ವರ್ಷಗಳ ಹಿಂದೆ ಅಪ್ಪಳಿಸಿದ ಬಿರುಗಾಳಿಯಲ್ಲಿ ಮಾತ್ರ, ಬೆಳೆದು ನಿಂತ ಫಸಲು ನೆಲಸಮವಾಗಿತ್ತು. ಆದಾಗ್ಯೂ ಈ ಊರಿನ ಜನರಿಗೆ ಯಾವುದರ ಕೊರತೆಯೂ ಆಗಿರಲಿಲ್ಲ. ಪ್ರತಿಯಾಗಿ, ಸಂತ್ರಸ್ತರಾದ ಜನರಿಗೆ ಕೈ ಎತ್ತಿ ಸಹಾಯ ಮಾಡಿದ್ದರು.

ಪುಲ್ಲಯ್ಯ ಹೆಮ್ಮೆಯಿಂದ ಒಮ್ಮೆ ಸುತ್ತಲೂ ನೋಡಿದ—ಬಿಳಿ ಮೋಡವೊಂದು, ಚಂದ್ರನನ್ನು ಆವರಿಸಿತ್ತು. ತಂಪಾದ ಗಾಳಿ ತೆನೆಗಳ ಮೇಲೆ ಸವಾರಿ ಮಾಡಿತ್ತು, ಈ ಸಲವೂ ಕೂಡ ಫಸಲು ಚೆನ್ನಾಗಿದೆ. ಬೆಳೆಗೆ ಯಾವ ಬಾಧೆಯೂ ಇಲ್ಲ—ಪುಲ್ಲಯ್ಯ ಹೀಗೆ ಯೋಚಿಸುತ್ತಿರುವಾಗಲೇ ಅವನಿಗೆ ತನ್ನ ಮಗನ ನೆನಪಾಯಿತು—ತನಗೊಬ್ಬ ಮಗ ಹುಟ್ಟಿದಲ್ಲಿ, ತನ್ನಂತೆ ಗರಡಿಯಲ್ಲಿ ಸಾಮು ಮಾಡಿ, ಕಳ್ಳರನ್ನು ಹಿಡಿಯುವ ಶೂರನಾಗುತ್ತಾನೆ.—ಸಕಾಲಕ್ಕೆ ಬಿತ್ತಿದ ಬೀಜ, ಸಕಾಲಕ್ಕೆ ಹುಟ್ಟಿದ ಮಗ—ಒಂದೇ.

ಕಾರ್ತಿಕದಲ್ಲಿ ಬಂದ ಮಳೆ, ವಯಸ್ಸು ಮೀರಿದ ನಂತರ ಹುಟ್ಟಿದ ಮಗ—ಸಮಯಕ್ಕೆ ಒದಗಿಬರುವುದಿಲ್ಲ—ಯಾವ ರೀತಿಯಿಂದಲೂ ನೆರವಾಗುವುದಿಲ್ಲ.

ಆದರೆ, ಹೆಂಡತಿ ಇಲ್ಲದೆ ಮಗನೆಲ್ಲಿಂದ ಬರಬೇಕು? ಹೆಂಡತಿಗಿಂತ, ಶರೀರವನ್ನು ಬೆಳೆಸುವುದು, ಅಂಗಸಾಧನೆ ಮಾಡುವುದು—ಇವೇ ಮುಖ್ಯವೆಂಬ ಭಾವನೆಯಿಂದ, ಮದುವೆಯಾಗಲು ಹಿಂಜರಿದಿದ್ದ ಪುಲ್ಲಯ್ಯ.

ಇದ್ದಕ್ಕಿದ್ದಂತೆ, ಎತ್ತನಿಂದಲೋ ಒಂದು ಮಧುರ ಧ್ವನಿ ಕೇಳಿಸಿತು—"ಚಂದಮಾಮ–ಚಂದಮಾಮ". ಅದನ್ನು ಕೇಳಿ, ಪುಲ್ಲಯ್ಯನ ಕಾಲುಗಳು ತಡವರಿಸಿದವು.

"ಚಂದಮಾಮ"—ಎಂಬ ಆ ಮಧುರ ರಾಗ ಮತ್ತೆ ಗಾಳಿಯಲ್ಲಿ ತೇಲಿ ಬಂತು.

ಪುಲ್ಲಯ್ಯ, ಆ ಧ್ವನಿಯ ಮಾಧುರ್ಯದಿಂದ ಪುಲಕಿತಗೊಂಡ.

"ಚಂದಮಾಮಾ...... ಚಂದಮಾಮಾ......"

ಆಹಾ, ಎಂತಹ ಇಂಪಾದ ಧ್ವನಿ—ಎಂದು ಪುಲ್ಲಯ್ಯ, ಕಿವಿಗೊಟ್ಟು ಕೇಳಹತ್ತಿದ.

"ಚೆಲುವ ಬೀರುವ ಚೆನ್ನಿಗರಾಮ
ಚೆಲುವ ಬೀರುವ ಚೆನ್ನಿಗರಾಮ—
ಈ ನನ್ನಯ ಸೋದರಮಾವ........."

ಗಂಧರ್ವಲೋಕದ ಅಪ್ಸರೆಯರು, ಭೂಮಿಗಿಳಿದು ಬಂದು ಬೆಳದಿಂಗಳಲ್ಲಿ ನಿಂತು ಹಾಡುತ್ತಿರುವಂತೆ ಪುಲ್ಲಯ್ಯನಿಗೆ ಭಾಸವಾಯಿತು.

"ಬಾರಯ್ಯ ಬಾರೊ ಚಂದಮಾಮಾ
ಚೆಲುವ ಬೀರುವ ಚೆನ್ನಿಗರಾಮ........." ಎಂದು ಮೊದಲಿನ ಮಧುರ ಕಂಠ ಕೇಳಿಸಿದಾಗ, ಅವಳು ತನ್ನನ್ನೆ ಕರೆಯುತ್ತಿದ್ದಾಳೆಂಬ ಭ್ರಮೆಯಲ್ಲಿ ಮುಳುಗಿದ. ಆ ಭ್ರಮೆಯಲ್ಲೆ ಅಲ್ಲಿಂದ ಓಡಿಹೋಗಿ, ಅವಳಲ್ಲಿ ಲೀನವಾಗಲು, ಅವನ ಮನಸ್ಸು ಹಾತೊರೆಯಿತು.

ಆ ಧ್ವನಿಯ ಮಾಧುರ್ಯಕ್ಕೆ ಮಾರುಹೋದ ಚಂದಿರ ಕೂಡ, ಆಗಸದಿಂದಿಳಿದು, ಆ ಯುವತಿಯರತ್ತ ಓಡಿಬರುತ್ತಿರುವಂತೆ ಭಾಸವಾಗುತ್ತಿತ್ತು.

ಭಾವಪರವಶನಾದ ಪುಲ್ಲಯ್ಯ, ಆ ಧ್ವನಿ ಬರುತ್ತಿದ್ದ ದಿಕ್ಕಿನತ್ತ ಧಾವಿಸಿದ. ಗುಡಿಯನ್ನು ದಾಟಿ ನದಿ ತೀರದತ್ತ ಕಾಲು ಹಾಕಿದ.

ನದಿಯ ದಡದ ಮೇಲಿದ್ದ ಹುಣಸೆ ಮರದ ಎದುರಿನ ಬಯಲಿನಲ್ಲಿ, ಸುಣ್ಣ ಬಳಿದಂತಿದ್ದ ಆ ಬೆಳದಿಂಗಳಿನಲ್ಲಿ, ಶುಭ್ರವಾದ ಬಿಳಿಯ ಸೀರೆಯನ್ನುಟ್ಟು ಹತ್ತು–ಹದಿನೈದು ಮಂದಿ ಯುವತಿಯರು, ಮೈಮರೆತು ಕುಣಿಯುತ್ತಿದ್ದರು—ಹಾಡುತ್ತಿದ್ದರು.

ಪುಲ್ಲಯ್ಯ ಕಳ್ಳಹೆಜ್ಜೆಗಳನ್ನು ಹಾಕುತ್ತಾ, ಹುಣಸೆ ಮರದ ನೆರಳಿನಲ್ಲಿ, ಆ ಹುಡುಗಿಯರ ಕಣ್ಣಿಗೆ ಬೀಳದಂತೆ ನಿಂತು, ಅವರನ್ನು ನುಂಗುವಂತೆ ನೋಡಹತ್ತಿದ. ಹಾಗೆ ನಿಂತಲ್ಲೆ, ಮನಸ್ಸಿನಲ್ಲಿ ಮಂಡಿಗೆ ಕಟ್ಟತೊಡಗಿದ.

ತಮ್ಮದೇ ಆದ ಲೋಕದಲ್ಲಿ ವಿಹರಿಸುತ್ತಿದ್ದ ಆ ಯುವತಿಯರು, ಇದಾವುದರ ಪರಿವೆಯೂ ಇಲ್ಲದೆ, ತಮ್ಮ ಆಟಪಾಠಗಳನ್ನು ಮುಂದುವರಿಸಿದ್ದರು. ಎಂಟು ಮಂದಿ ಯುವತಿಯರು, ಹಾಡಿನ ಮೊದಲ ಚರಣವನ್ನು ಹೇಳುತ್ತಾ, ಮೈಯನ್ನು ಕುಲುಕಿಸುತ್ತಾ ನಿಂತಿದ್ದರು. ಅವರ ಸುತ್ತಲೂ ತಿರುಗುತ್ತಾ, ಮತ್ತೊಬ್ಬ ಯುವತಿ ಇಂಪಾಗಿ ಹಾಡುತ್ತಿದ್ದಳು.

ಹಾಗೆ ಇಂಪಾಗಿ ಹಾಡುತ್ತಿದ್ದವಳೆ ನೀಲಮ್ಮ. ಊರಿನವರೆಲ್ಲ, ಅವಳನ್ನು 'ನೀಲಿ' —ಎಂದೇ ಕರೆಯುತ್ತಿದ್ದರು.

ನೀಲಿ, ಬಾಗುತ್ತಾ, ಬಳುಕುತ್ತಾ, ಹಾಡುತ್ತಾ ಹುಣಸೆಯ ಮರದತ್ತ ಬಂದಾಗ, ಉತ್ತೇಜಿತನಾಗಿದ್ದ ಪುಲ್ಲಯ್ಯನ ನರಗಳು ಉಬ್ಬಿಕೊಂಡವು. ಅವಳು ಸಮೀಪಕ್ಕೆ ಬಂದಲ್ಲಿ, ಅವಳ ಕೈಹಿಡಿದು ಎಳೆಯಬೇಕೆಂದು ಪುಲ್ಲಯ್ಯ ಕಾದಿದ್ದ.

ಬಿಳಿಯ ಸೀರೆಗಳು—ತುಂಬಿದ ಬೆಳದಿಂಗಳು—ಯೌವನದಿಂದ ತುಂಬಿತುಳುಕುತ್ತಿದ್ದ ದೇಹಗಳು—ತಂಗಾಳಿ—ಇಂಪಾದ ಹಾಡು—ಆಹಾ.........

ಮುಖಕ್ಕೆ ಅರಿಶಿಣ, ಜಡೆಗೆ ಜಾಜಿ ಹೂವು, ಕುಪ್ಪುಸವಿಲ್ಲದ ತೆರೆದ ಎದೆಗಳು—ಪುಲ್ಲಯ್ಯನಿಗೆ ಅದೊಂದು ಸ್ವರ್ಗವಾಗಿತ್ತು.

ಹಾಡು ಮುಂದುವರಿಯಿತು. ನೀಲಿ, ಹಾಡುತ್ತಾ-ಬಳುಕುತ್ತಾ, ಮತ್ತೆ ಹುಣಸೆ ಮರದತ್ತ ಬರುತ್ತಿದ್ದಳು.

ಆಹಾ...... ಉಬ್ಬಿದ ಅವಳ ಸ್ತನಗಳಲ್ಲಿ ಏರುಯೌವನ ವಿಜೃಂಭಿಸುತ್ತಿತ್ತು. ಸಾಟಿಯಿಲ್ಲದ ಆ ಚೆಲುವನ್ನು ನೋಡಿ ಪುಲ್ಲಯ್ಯನ ಮನಸ್ಸು ಹುಚ್ಚೆದ್ದು ಕುಣಿಯಿತು.

ಹಾಡಿಗೆ ತಕ್ಕಂತೆ ಚಪ್ಪಾಳೆ, ಚಪ್ಪಾಳೆಗೆ ತಕ್ಕಂತೆ ಹೆಜ್ಜೆ ಹಾಕುತ್ತಾ, ನೀಲಿ, ಹುಣಸೆ ಮರವನ್ನು ಸಮೀಪಿಸಿದಳು. ಸಾದು ಬಣ್ಣದ, ನೀಲಿಯ ಮುಖದ ಮೇಲೆ, ಸೌಮ್ಯತೆ ಮತ್ತು ಮುಗ್ಧತೆ ರಾರಾಜಿಸುತ್ತಿತ್ತು.

ಮೋಹಪರವಶನಾಗಿದ್ದ ಪುಲ್ಲಯ್ಯ, ನೀಲಿಯನ್ನು ಹಿಡಿದುಕೊಳ್ಳಲು ಹಾತೊರೆಯುತ್ತಿದ್ದ. ಒಂದೆರಡು ಸಲ, ಅವಳು ಅತ್ತ ನೋಡುತ್ತಿದ್ದಾಗ, ಅವಳ ಕೈಯನ್ನು ಹಿಡಿಯಲು ಪ್ರಯತ್ನಿಸಿ ವಿಫಲನಾದ.

ಪುಲ್ಲಯ್ಯ ಅಲ್ಲಿದ್ದುದನ್ನು ಅರಿಯದ ನೀಲಿ ಮತ್ತು ಅವಳ ಗೆಳತಿಯರು, ತಮ್ಮದೇ ಆದ ಲೋಕದಲ್ಲಿ ವಿಹರಿಸುತ್ತಿದ್ದರು. ಹಾಡಿನ ಕೊನೆಯ ನುಡಿ, "ಅಮ್ಮಾ, ಅವನಂತಹ ಚೆಲುವ ಗಂಡ ಯಾರಿಗೆ ಬೇಕು—ಯಾರಿಗೆ ಬೇಕು"—ಎಂದು ಮುಗಿದಾಗ, "ನನಗ ಬ್ಯಾಡ, ನನಗ ಬ್ಯಾಡ"—ಎನ್ನುತ್ತಾ, ನೀಲಿಯೊಬ್ಬಳನ್ನು ಬಿಟ್ಟು ಉಳಿದವರೆಲ್ಲರೂ ಅಲ್ಲಿಂದ ಒಟ್ಟಿಗೆ ಓಡಿಹೋದರು. ಅವರೆಲ್ಲರ ಮನೆಗಳು ಪೂರ್ವಕ್ಕಿದ್ದುದರಿಂದ ಅವರು ಅತ್ತ ಓಡಿಹೋದಾಗ, ನೀಲಿ ದಕ್ಷಿಣದತ್ತ ಮುಖ ಮಾಡಿ ಹೊರಟಳು. ಅವಳು, ಊರಿನ ದಕ್ಷಿಣಭಾಗದಲ್ಲಿದ್ದ ತನ್ನ ಮನೆಯತ್ತ ಒಂಟಿಯಾಗಿ ಹೆಜ್ಜೆ ಇಡ

ತೊಡಗಿದುದನ್ನು ಪುಲ್ಲಯ್ಯ ಗಮನಿಸಿದ. ಆ ಮೇಲೆ ತಾನು ಏನು ಮಾಡುತ್ತಿರುವೆನೆಂಬ ಅರಿವೂ ಸಹ ಅವನಿಗಿರಲಿಲ್ಲ.

ಒಂದೆ ನೆಗೆತಕ್ಕೆ ನೀಲಿಯ ಬಳಿ ಹೋಗಿದ್ದ ಪುಲ್ಲಯ್ಯ, ಹಿಂದಿನಿಂದ ಅವಳ ಸೆರಗನ್ನು ಹಿಡಿದೆಳೆದ. ನೀಲಿ, ಹಿಂದಿರುಗಿ ನೋಡಿ, "ಅಯ್ಯೋ—ಕಳ್ಳ......" ಎಂದು ಕೂಗಿ ಕೊಂಡಳು.

ಪುಲ್ಲಯ್ಯ, ಅವಳನ್ನು ತನ್ನ ಬಲಿಷ್ಠವಾದ ಕೈಗಳಲ್ಲಿ ಎತ್ತಿಕೊಂಡು ಅವಳ ಮುಖದ ಬಳಿ ತನ್ನ ಮುಖವಿಟ್ಟು—"ಕಳ್ಳನೋ–ರಾಜಕುಮಾರನೋ ನೋಡು. ಸರಿಯಾಗಿ ನೋಡು"—ಎಂದು ಅಹಂಕಾರದಿಂದ ಹೇಳಿದ.

"ನನ್ನ ಹೀಂಗ ಕಾಡಿಸೋದು ನ್ಯಾಯವಲ್ಲ. ಇದರಿಂದ ನಿನಗೆ ಒಳ್ಳೆಯದಾಗದು. ದೇವರು ನಿನ್ನ ಕ್ಷಮಿಸೋದಿಲ್ಲ...... ಬಿಟ್ಟುಬಿಡು, ನನ್ನ ಬಿಟ್ಟುಬಿಡು......" ನೀಲಿ ಅಂಗಲಾಚಿದಳು.

ಆದರೆ ಪುಲ್ಲಯ್ಯ ಅವಳನ್ನು ಬಿಡಲಿಲ್ಲ. ನೀಲಿ ಗಟ್ಟಿಯಾಗಿ ಕೂಗಿಕೊಳ್ಳಲು ಪ್ರಯತ್ನಿಸಿದಳಾದರೂ, ಬಾಯಿಯಿಂದ ಧ್ವನಿಯೇ ಹೊರಡಲಿಲ್ಲ. ಅವನ ಬಿಗಿಮುಷ್ಠಿಯಿಂದ ಪಾರಾಗಲು ನೀಲಿ ಒದ್ದಾಡಹತ್ತಿದಳು.

ಈ ತಿಕ್ಕಾಟದಲ್ಲಿ, ಅವಳುಟ್ಟಿದ್ದ ದಟ್ಟಿ ಸಡಿಲಾಗಿತ್ತು. ಅವಳ ದೇಹ, ಪುಲ್ಲಯ್ಯನ ಹಿಡಿತದಲ್ಲಿ ನಲುಗಿಹೋಗಿತ್ತು.

ಇದ್ದಕ್ಕಿದ್ದಂತೆ, ಪುಲ್ಲಯ್ಯ ನೋವಿನಿಂದ ಚೀರಿದ. ಅವನ ಕೈಯನ್ನು ಕಡಿದು, ಅವನ ಬಿಗಿಮುಷ್ಠಿಯಿಂದ ಪಾರಾಗಿದ್ದ ನೀಲಿ, ಓಡಿಹೋಗುತ್ತಿದ್ದಳು. ಪುಲ್ಲಯ್ಯ, ಅವಳು ಕಡಿದ ಕೈಯನ್ನು ನೇವರಿಸಿಕೊಳ್ಳುತ್ತಾ, "ನಿನ್ನ ಹಿಡಕೊಳ್ಳದಿದ್ದರ ನಾನು ಗಂಡಸೇ ಅಲ್ಲ"—ಎಂದು ರೋಷದಿಂದ ಕೂಗಿದ. ಓಡಿಹೋಗುತ್ತಿದ್ದ ನೀಲಿ, "ನಾಚಿಕೆ ಇಲ್ಲದವನು"—ಎಂದದ್ದು ಅವನ ಕಿವಿಗೆ ಬಿತ್ತು.

## [ 4 ]

ಬೆಳ್ಳನೆಯ ಬೆಳದಿಂಗಳಿನಲ್ಲಿ ತಲೆ ಆಡಿಸುತ್ತಾ ನಿಂತಿದ್ದ ಪುಲ್ಲಯ್ಯ, ನಿಂತಲ್ಲಿಂದಲೇ ತಲೆ ಎತ್ತಿ ನೋಡಿದ. ನೀಲಿ ಕಣ್ಣಿಗೆ ಬೀಳಲಿಲ್ಲ. ಆದರೆ, ಅವಳು ತನ್ನ ಬಳಿಯೇ ಇದ್ದಂತೆ ಅವನಿಗೆ ಭಾಸವಾಯಿತು. ಅವಳ ಚೆಲುವನ್ನು ನೆನೆದು ಬಾಯಿ ಚಪ್ಪರಿಸಿದ...... ಹಾಗೆಯೆ, ಹಾಳಾದವಳು ತಪ್ಪಿಸಿಕೊಂಡಳು—ಎಂದು ಶಪಿಸಿದ. "ಇರಲಿ, ಎಲ್ಲಿ ಹೊಗ್ತಾಳ ನೋಡ್ತೀನಿ"—ಅಂದುಕೊಳ್ಳುತ್ತಾ ಮನೆಯತ್ತ ಹೆಜ್ಜೆ ಹಾಕಿದ.

ಯಾರೋ ಬರುತ್ತಿರುವುದನ್ನು ಗ್ರಹಿಸಿದ ಎತ್ತುಗಳು, ಗೋಣೆತ್ತಿ ನೋಡಿದವು.

ಬರುತ್ತಿರುವವನು ತಮ್ಮ ಯಜಮಾನನೆಂಬುದನ್ನು ಗುರುತಿಸಿದ ದನಕರುಗಳು, ಕಟ್ಟಿದ ಪಗ್ಗ ಹರಿದುಕೊಂಡು ಅವನತ್ತ ಓಡಲು ಪ್ರಯತ್ನಿಸಿದವು. ಪುಲ್ಲಯ್ಯ ಇದಾವುದನ್ನೂ ಗಮನಿಸದೆ, ದಾಪುಗಾಲು ಹಾಕುತ್ತಾ ಒಳಹೋಗಿ, ಮೇವು ತಂದು ಎತ್ತುಗಳ ಮುಂದೆ ಹಾಕಿದ. ಹಸಿದಿದ್ದ ಎತ್ತುಗಳು, ಮೇವನ್ನು ಗಬಗಬನೆ ತಿನ್ನತೊಡಗಿದವು. ಪುಲ್ಲಯ್ಯ ಸ್ವಲ್ಪ ಹೊತ್ತು ಅಲ್ಲಿಯೇ ನಿಂತು, ಎತ್ತುಗಳ ಮೇಲೆ ಕೈಯಿಟ್ಟು, ಯಾವುದೋ ಯೋಚನೆಯಲ್ಲಿ ಅವುಗಳ ಮೈ ತೀಡತೊಡಗಿದ.

ಎತ್ತುಗಳು ಮೇವು ತಿನ್ನುತ್ತಿದ್ದುವು. ಹೊರಗೆ, ಬೆಣ್ಣೆಯಂತಹ ಬೆಳದಿಂಗಳು ಹರಡಿತ್ತು. ಸಣ್ಣದಾಗಿ ಗಾಳಿ ಬೀಸಿತ್ತು. ಪುಲ್ಲಯ್ಯ, ಸೆಣಬಿನ ಮಂಚವನ್ನು ಎಳೆದು ಬೆಳದಿಂಗಳಿನಲ್ಲಿ ಹಾಕಿಕೊಂಡು, ಹಾಗೆಯೇ ಬಿದ್ದುಕೊಂಡ.

ನೀಲಿ ಮತ್ತು ಅವಳ ಸಂಗಾತಿಗಳು ಹಾಡಿದ "ಚಂದಮಾಮ...... ಚಂದಮಾಮ ......" ಎಂಬ ಹಾಡು, ಈಗಲೂ ಸಹ ಅವನ ಕಿವಿಯಲ್ಲಿ ಮೊಳಗುತ್ತಿತ್ತು. ಅವನ ಮನಸ್ಸಿನಲ್ಲಿನ ಭಾವನೆಗಳು, ಸಮುದ್ರದ ಅಲೆಗಳಂತೆ ಉಬ್ಬಿ ಉಕ್ಕತೊಡಗಿದ್ದವು.— ಕೈಗೆ ಬಂದ ಗಿಳಿ, ತಪ್ಪಿಸಿಕೊಂಡಿತ್ತು.

ಅವಳೊಡನೆ ಸರಸವಾಡದಿದ್ದಲ್ಲಿ, ಅವಳೊಡನೆ ಸುಖಪಡದಿದ್ದಲ್ಲಿ, ನಾನು ಪುಲ್ಲ ಯ್ಯನೇ ಅಲ್ಲ; ಮಲ್ಲಯ್ಯ ನಾಯ್ಡುವಿನ ಮಗನೇ ಅಲ್ಲ—ಎಂದು, ಮನಸ್ಸಿನಲ್ಲಿ ತೀರ್ಮಾನಿಸಿ, ಮೀಸೆಗಳನ್ನು ತಿರುವಿಕೊಂಡ.

ಎತ್ತುಗಳು ಹೊಟ್ಟೆ ತುಂಬ ಮೇವು ತಿಂದು ಮೆಲುಕುಹಾಕುತ್ತಾ ಕುಳಿತುಕೊಂಡವು. ಪುಲ್ಲಯ್ಯ, ಮಂಚವನ್ನು ಬೇರೊಂದೆಡೆಗೆ ಎಳೆದುಹಾಕಿಕೊಂಡ.

ನಿದ್ರೆ ಬರದೆ ಮಂಚದ ಮೇಲೆ ಹೊರಳಾಡುತ್ತಿದ್ದ ಪುಲ್ಲಯ್ಯನಿಗೆ, ತಮಟೆಗಳ ಸದ್ದು ಕೇಳಿಸುತ್ತಲೇ ಇತ್ತು. ಅಂದು, ತನ್ನಲ್ಲಿ ಏನೋ ಪರಿವರ್ತನೆಯಾದಂತೆ ಪುಲ್ಲಯ್ಯನಿಗೆ ಅನ್ನಿಸಿತು. ಹೌದು—ಅಂದು ಅವನು ಎತ್ತುಗಳಿಗೆ ಮೇವು ಹಾಕುವುದನ್ನು ಮರೆತಿದ್ದ; ಪಲ್ಲಕ್ಕಿ ಉತ್ಸವದಲ್ಲಿ ಹುಲಿವೇಷ ಹಾಕಿಕೊಂಡು ಕುಣಿಯುವುದಕ್ಕೂ ಮುಂಚೆ ನೀಲಮ್ಮದೇವಿಗೆ ನಮಸ್ಕರಿಸುವುದನ್ನು ಮರೆತಿದ್ದ—ಎಲ್ಲಾ ಮರೆವು.

ಪುಲ್ಲಯ್ಯನಿಗೆ ಮರವು—ಎಂಬುದಿರಲಿಲ್ಲ. ಎಂದೇ ಆಗಲಿ ಅವನು ಹೆಣ್ಣುಮಕ್ಕಳ ಬಳಿ ಸುಳಿದಿರಲಿಲ್ಲ. ಆದರೆ ಇಂದು, ಒಂದು ಹೆಣ್ಣಿನ ಮುಂದೆ ಸೋತಿದ್ದ.

"ಛೆ...... ಛೆ...... ಇದೆಂತಹ ಬದುಕು. ಚೋಟುದ್ದ ಹೆಣ್ಣಿನಿಂದ ನಾಚಿಕೆ ಇಲ್ಲ ದವನು—ಎಂದು ಅನ್ನಿಸಿಕೊಂಡೆ......"

ಹೀಗೆಯೇ ಆಲೋಚಿಸುತ್ತಾ ಮಲಗಿದ್ದ ಪುಲ್ಲಯ್ಯ, ಬೆಳಕು ಹರಿಯುವುದನ್ನೆ ಎದುರು ನೋಡುತ್ತಿದ್ದ. ಅದು ಯಾವಾಗಲೋ ಕಣ್ಣು ಭಾರವಾಗಿ ಅವನು ನಿದ್ದೆಹೋದ.

ಬೆಳಗಿನ ಜಾವದಲ್ಲಿದ್ದ ಪುಲ್ಲಯ್ಯ, ಭುಜದ ಮೇಲೆ ಒಂದು ಕೋಲನ್ನು ಇಟ್ಟು ಕೊಂಡು, ತನ್ನ ಗದ್ದೆಯ ಒಡ್ಡಿನ ಮೇಲೆ ತಿರುಗುತ್ತಿದ್ದ. ಪೂರ್ವದ ದಿಗಂತವನ್ನು

ಬೆಳಗಿದ ಬಾಲರವಿಯ ಸೌಮ್ಯ ಕಿರಣಗಳು, ಹಸಿರು ಪೈರಿನ ಮೇಲೆ ಬಿದ್ದು, ಎಲ್ಲವೂ ರಮ್ಯವಾಗಿ ಕಾಣುತ್ತಿತ್ತು. ಗದ್ದೆಗಳಿಗೆ ಬಿಡಲಾಗಿದ್ದ ನೀರಿನ ಜುಳುಜುಳು ಶಬ್ದ, ಗಾಳಿಗೆ ವಾಲುತ್ತಿದ್ದ ತುಂಬಿದ ತೆನೆಗಳ ತಿಕ್ಕಾಟ, ಎಲ್ಲವೂ ಆನಂದಮಯ ವಾಗಿತ್ತು.

ಮೊಳದೆತ್ತರಕ್ಕೆ ಬೆಳೆದ ಹೊಲದಲ್ಲಿ, ಗೇಣುದ್ದ ಬೆಳೆದ ತೆನೆಗಳು ತುಂಬಿದ್ದವು. ಧಾನ್ಯದ ಗುಮ್ಮಿಗಳು ತುಂಬುವುದು ಖಚಿತವಾಗಿತ್ತು.

"ಏನಲಾ ಪುಲ್ಲಯ್ಯ, ಈ ಸಲ ಮಿಡತೆಗಳ ಕಾಣೂ ಇಲ್ಲ, ಬದುಕಿಕೊಂಡ್ವಿ"—ಪಕ್ಕದ ಹೊಲದಿಂದ ನರಸಿಂಹ ಕೂಗಿದ.

"ಮಿಡತೆಗಳs? ಶನಿಗಳು ಈ ಸರೆ ಬಂದರs ಬರಲಿ. ಅವನ್ನ ಕೊಂದು ಭಸ್ಮ ಮಾಡ್ತೀನಿ"—ಪುಲ್ಲಯ್ಯ ಪೌರುಷದಿಂದ ಕೂಗಿದಾಗ, ಆತನ ಕೂಗಿಗೆ ತೆನೆಗಳೂ ಸಹ ತಲೆದೂಗಿದವು. ಎಲ್ಲೊ ಒಡ್ಡು ಹರಿದು ನೀರು ಹೋಗುತ್ತಿರುವ ಬುಳುಬುಳು ಸದ್ದು ಕೇಳಿಸಿತು. ಪುಲ್ಲಯ್ಯ ಅಲ್ಲಿಗೆ ಹೋಗಿ ಮಣ್ಣು ಹಾಕಿ ನೀರು ಹರಿದುಹೋಗುವುದನ್ನು ತಡೆಗಟ್ಟಿದ.

ಅಷ್ಟರಲ್ಲಿ, ತನ್ನ ಹೊಲದ ಅಂಚಿಗೆ ಬಂದಿದ್ದ ನರಸಿಂಹ, "ಯಾಕಲಾ ಆಗಲೆ ಒಡ್ಡಿನ ಮೇಲಿನ ಹುಲ್ಲು ಕೊಯ್ದಿ ಅಲ್ಲ"—ಎಂದು ಪುಲ್ಲಯ್ಯನನ್ನು ಕೇಳಿದ.

"ಕೊಯ್ದರ ಏನಾತೇಳು—ಮತ್ತ ಬೆಳೀತದ. ಹುಲ್ಲು ಬೆಳೆದಷ್ಟು ಒಳ್ಳೇದs. ಊರಾಗಿನ ದನ–ಕರುಗಳಿಗೆ ಪಸಿ ಮೇವಾತು. ನಮ್ಮ ಊರು ಅಂದರ ಏನಂತ ತಿಳಿದೀದಿ. ಚಿನ್ನ, ಅಪ್ಪಟ ಬಂಗಾರ......"

ಪುಲ್ಲಯ್ಯನ ಈ ಮಾತು ಕೇಳಿ ನರಸಿಂಹ ನಕ್ಕ. ತನ್ನ ನಂತರ ಹುಟ್ಟಿದ ಪುಲ್ಲಯ್ಯನಿಗೆ ತನ್ನ ಊರಿನ ಬಗ್ಗೆ ಇದ್ದ ಅಭಿಮಾನವನ್ನು ಮೆಚ್ಚಿಕೊಂಡ.

"ರಾಮಚಂದ್ರ ಪಟ್ಟಿಗೆ ಹೋಗಿದ್ದೇನು?"

"ಓ ! ಈ ಸರೆ ಅಲ್ಲಿನ ಬೆಳಿ ಭಾರಿ ಆಗ್ಯದ."

"ನಿಂಗೆನಲಾ ಹಾಯಾಗಿದ್ದಿ. ಆದರs ಒಂದs ಕೊರತೆ."

"ಕೊರತೆ—ನನಗ್ಯಾವುದರ ಕಮ್ಮಿ ಆಗ್ಯದ...... ನನಗ ಸಾಟಿಯಾದ ಗಂಡಸಾದರೂ ಯಾರಿದ್ದಾರ ಈ ಊರಾಗ?"

"ಪಟ್ಟಣ ಸೇರಿಕೊಂಡಿರೊ ವಕೀಲರ ಎರಡು ಎಕರೆ ಜಮೀನು ಗೇಣಿ ಮ್ಯಾಲ ತೊಗೊಂಡಿದಿ—ಮ್ಯಾಲೆ ನಿಮ್ಮಪ್ಪ ಗಳಿಸಿಟ್ಟ ಆಸ್ತಿ, ಐವತ್ತು ಗುಂಟೆ ಭೂಮಿ ಅದ. ನಿನಗೇನೂ ಕಮ್ಮಿ ಆಗಿಲ್ಲ ಒಪ್ಪಿಕೊತೀನಿ. ಆದರೆ, ಲಗ್ನ ಮಾಡಿಕೊಂಡು ಸಂಸಾರ ಹೂಡಲಿಕ್ಕೆ ನಿನಗೇನಾಗ್ಯದ ಧಾಡಿ. ಈ ದೇಹ ಕಬ್ಬಿಣದ ದೇಹ ಅಲ್ಲ. ಕಬ್ಬಿಣಕ್ಕೂ ತುಕ್ಕು ಹಿಡೀತದ ಅಂದಮ್ಯಾಲೆ ನಮ್ಮ ಗತಿ ಏನು? ನಾಳೆ ನಿನಗ ಏನಾದರೂ ಆದರ, ಯಾರು ಬಂದು ಮಾಡ್ತಾರ—ಯಾರು ನಿನಗ ಕೂಳು ಕುಚ್ಚಿ ಹಾಕ್ತಾರ......?"

ನರಸಿಂಹ, ಮದುವೆ ಮಾಡಿಕೊಳ್ಳುವಂತೆ ಪುಲ್ಲಯ್ಯನಿಗೆ ಉಪದೇಶ ಮಾಡುವುದು ಇದು ಎಷ್ಟನೆಯ ಸಲವೊ ಏನೊ. ಇದರಲ್ಲಿ ಹೊಸದೇನೂ ಇರಲಿಲ್ಲ. ಆದರೆ, ಪುಲ್ಲಯ್ಯ ಮಾತ್ರ, ಪ್ರತಿಸಲದಂತೆ ಈ ಸಲ ಅವನನ್ನು ಸಿಟ್ಟಿನಿಂದ ನುಂಗುವಂತೆ ನೋಡುವುದನ್ನು ಬಿಟ್ಟು, ಮುಗುಳ್ನಕ್ಕ. ನರಸಿಂಹ, ದಟ್ಟವಾದ ಮೀಸೆಗಳ ನಡುವೆ ಮಂದಹಾಸ ಬೀರುತ್ತಾ—"ನನಗೆ ಐವರು ಹೆಣ್ಣು ಮಕ್ಕಳು, ಆರು ಮಂದಿ ಗಂಡು ಮಕ್ಕಳು"—ಎಂಬ ಠೀವಿಯಿಂದ ನಿಂತಂತೆ ಪುಲ್ಲಯ್ಯನಿಗೆ ಭಾಸವಾಯಿತು.

ಪಂಚೆಯನ್ನು ಎತ್ತಿ ಕಟ್ಟಿದ್ದ ನರಸಿಂಹನ ಮೈಮೇಲೆ ತುಂಡು ಬಟ್ಟೆಯೂ ಸಹ ಇರಲಿಲ್ಲ. ಅರೆನೆರೆತ ಕೂದಲಿನಿಂದ ತುಂಬಿದ್ದ ತನ್ನ ತಲೆಯನ್ನು ತುರಿಸಿಕೊಳ್ಳುತ್ತಾ ನಿಂತಿದ್ದ ನರಸಿಂಹ, ಮಾಮೂಲಿನಂತೆ ರಾಜಕೀಯದ ಬಗ್ಗೆ ಮಾತನಾಡತೊಡಗಿದ. "ಜಪಾನೀಯರು ಬರ್ತಾರಂತ ತಿಳಿದಿದ್ದೆ. ಅವರು ಬಂದರ, ಕುಟುಂಬಕ್ಕೆ—ಕುಟುಂಬ ದಲ್ಲಿನ ಸದಸ್ಯರಿಗೆ ತಕ್ಕಂತೆ ಭೂಮಿ ಹಂಚಿಕೊಡ್ತಾರ ಅಂದುಕೊಂಡಿದ್ದೆ. ಆದರ, ಮೊನ್ನೆ ಪಟ್ಟಣಕ್ಕೆ ಹೋದಾಗ, ಜಪಾನಿನವರು ಸೋತರು—ಅಂತ ಜನ ಆಡಿಕೊಳ್ಳು ತ್ತಿದ್ದು ಕಿವಿಗೆ ಬಿದ್ದಾಗ, ನಂಬಿಕೀನಃ ಬರಲಿಲ್ಲ. ಕುಳ್ಳನ ಬುದ್ಧಿಗೆ ಕೋಟಿ ಉಪಾಯ ಹೊಳೀತಾವಂತ. ಒಂದಿಲ್ಲ ಒಂದು ಉಪಾಯ ಮಾಡಿ, ಕೊನಿಗೆ ಮೋಸ ಮಾಡಿ ಯಾದರೂ ಈ ಬಿಳಿಯರನ್ನ ಓಡಿಸ್ತಾರಂತ ನಂಬಿದ್ದೆ.—ಹೋಗಲಿ, ಈಗಾರಃ ಏನು ಆಗ್ಯದ? ಈಗ ಕಾಂಗ್ರೆಸ್ಸಿನವರು ಅಧಿಕಾರಕ್ಕ ಬರ್ತಾರ. ಅವರು ಕೂಡ, ಹೆಚ್ಚು ಮಕ್ಕಳಿದ್ದವರಿಗೆ ಹೆಚ್ಚು ಭೂಮಿ ಕೊಡಬೇಕು—ಅಂತಾರಂತ"—ಎಂದು ನರಸಿಂಹ ಹೇಳಿದಾಗ ಪುಲ್ಲಯ್ಯ ಸುಮ್ಮನೆ ನಕ್ಕ.

ನರಸಿಂಹ, ನಾಲ್ಕು ಎಕರೆ ಜಮೀನು ಗೇಣಿ ಮ್ಯಾಲೆ ಪಡೆದು ಹತ್ತು ವರ್ಷಗಳಾಗಿದ್ದವು. ಎರಡು ಸಲ ಜಮೀನುದಾರನಿಗೆ ಗೇಣಿ ನೀಡಲು ಕೈಲಾಗದೆ ಒದ್ದಾಡಿದ್ದ. ನರಸಿಂಹ ಕೊಡಬೇಕಾಗಿದ್ದ ಪಾಲನ್ನು ಕೊಡದಿದ್ದಾಗ, ಆ ಜಮೀನುದಾರ ಕೋರ್ಟಿಗೆ ಹೋದ. ಈ ರೀತಿ ಕೋರ್ಟು-ಕಚೇರಿ ಸುತ್ತಿದ ನರಸಿಂಹ, ತನಗೆಲ್ಲವೂ ತಿಳಿದಿರುವಂತೆ ನಟಿಸು ತ್ತಿದ್ದ. ಅವನ ಮಾತುಗಳನ್ನು ಕೇಳಿದ ಹಳ್ಳಿಯ ಮುಗ್ಧ ಜನರು ಅವನನ್ನು ಬುದ್ಧಿವಂತ ನೆಂದು ಪರಿಗಣಿಸಿದ್ದರು.

"ಬಾ ಹೋಗೋಣ ಇನ್ನ"—ಪುಲ್ಲಯ್ಯ ನರಸಿಂಹನನ್ನು ಕರೆದ.

"ನೀ ಹೋಗು, ನಾ ಒಂದಿಷ್ಟು ಏರಿ ಮ್ಯಾಲಿನ ಹೊಲಕ್ಕ ಹೋಗಿಬರ್ತೀನಿ"—ಎಂದು ಅತ್ತ ತಿರುಗಿದ ನರಸಿಂಹ ಎರಡು ಹೆಜ್ಜೆ ಹಾಕಿ ಮತ್ತೆ ನಿಂತ. "ಆ ಗಾಂಧಿ ಮಹಾತ್ಮ ಇದ್ದಾನಲ್ಲ—ನಮ್ಮಪ್ಪ ದೇವರು—ದೇವರ ಇದ್ದಾಂಗ ಹಾನ ನೋಡು."

"ಹೌದು, ಆತ ದೇವರೆ ಸರಿ"—ಪುಲ್ಲಯ್ಯ ಬಾಯಿ ಹಾಕಿದ.

"ಆ ದೇವರು ನಮ್ಮ ಬೆಂಗಾವಲಿಗಿದ್ದಾನ. ನೋಡ್ತಿರು, ಕಾಂಗ್ರೆಸ್ ಅಧಿಕಾರಕ್ಕ ಬಂದರ ಏನಾಗ್ತದಂತ. ಕಾಂಗ್ರೆಸ್ಸಿನವರು ಸರ್ಕಾರ ರಚಿಸಿದರ, ಉಳುವವನದೇ ಭೂಮಿ

ಆಗ್ತದಂತ...... ನಿಂಗಂತೂ ಗೊತ್ತsa ಅದ. ದೇಸಾಯರಿಗೆ ಮುವತ್ತು ಎಕರಿ ಜಮೀನು ಅದ. ಆದರ ಅದಕ್ಕ ವಾರಸುದಾರ ಒಬ್ಬನೇ ಒಬ್ಬ ಮಗ. ಕಾಂಗ್ರೆಸ್ ಅಧಿಕಾರಕ್ಕ ಬಂದರ ಅದು ಏನೂ ಸುಮ್ಮನಿರೊಲ್ಲ...... ಕಾಂಗ್ರೆಸ್ಸಿನವರು ಸರ್ಕಾರ ರಚಿಸಿದರೆ, ಆ ದೇಸಾಯರಗಿಂತ ನಾನೇ ದೊಡ್ಡ ರೈತನಾಗಬೇಕು...... ನೋಡ್ತಿರು. ಕಾಲ ಹ್ಯಾಂಗ ಬದಲಾಗ್ತದ ಅಂಬೋದನ್ನ."

ಪುಲ್ಲಯ್ಯ ಏನನ್ನೂ ಹೇಳದೆ ಸುಮ್ಮನೆ ನಕ್ಕ. ನರಸಿಂಹ ಅತ್ತ ತಿರುಗಿ ಹೊರಟಾಗ, ಪುಲ್ಲಯ್ಯ ಪುನಃ ತನ್ನದೇ ಆದ ಲೋಕದಲ್ಲಿ ಮುಳುಗಿದ. ತನಗೂ ಒಬ್ಬ ಮಗ ಬೇಕೆಂಬ ಆಶೆ ಪುನಃ ಮೊಳಕೆ ಒಡೆದಾಗ ಅಲ್ಲಿಂದ ಸರಸರ ನಡೆದ. ತನ್ನ ಮಗ, ಕೈಯಲ್ಲಿ ಒಂದು ಪುಟ್ಟ ಕೋಲನ್ನು ಹಿಡಿದು, ಸಿಪಾಯಿಯಂತೆ ಠೀವಿಯಿಂದ ಹೋಗುತ್ತಿರುವಂತೆ ಭ್ರಮೆಪಟ್ಟ. ಮೈಯೆಲ್ಲ ಕಣ್ಣಾಗಿ ಮಗನ ಠೀವಿಯನ್ನು ನೋಡಿ ಸಂಭ್ರಮಪಡುವ ಆಶೆಯಿಂದ ಸರಸರನೆ ನಡೆದ.

ಮಗ...... ನನ್ನ ಮಗ, ನನ್ನ ವಂಶದ ಕುಡಿಯನ್ನು ಎತ್ತಿಕೊಂಡು ಮುದ್ದಾಡ ಬೇಕು. ಜಾತ್ರೆ–ಉತ್ಸವಗಳಲ್ಲಿ, ತನ್ನಂತೆ ಅವನೂ ಸಹ ಸಾಮು ಹಾಕಬೇಕು— ಕುಣಿಯಬೇಕು. ತಾನು ತಲೆಕೆಳಗೆ ಮಾಡಿ, ತಲೆಯ ಮೇಲೆ ದೇಹದ ಭಾರ ನಿಂತಾಗ, ತನ್ನ ಮಗ ಸರಸರನೆ ಏರಿ, ತನ್ನ ಪಾದಗಳ ಮೇಲೆ ನಿಂತು ಭುಜ ತಟ್ಟಿಕೊಳ್ಳಬೇಕು— ಎಂದೆಲ್ಲ ಕನಸುಕಾಣುತ್ತಾ ಹೊರಟಿದ್ದ ಪುಲ್ಲಯ್ಯ.

ಹೊಲಗದ್ದೆಗಳಲ್ಲಿ ನಡೆದು, ರಸ್ತೆಯನ್ನು ದಾಟಿ, ಗುಡಿಯ ಮುಂದಿನಿಂದ ನೇರವಾಗಿ ಗಂಗವ್ವನ ಮನೆಗೆ ಹೊರಟ ಪುಲ್ಲಯ್ಯ.

ಗಂಗವ್ವ ಊರಿಗೆಲ್ಲ ಅವ್ವ—ಆಗಿದ್ದಳು. ಕಿವಿಯಲ್ಲಿ ಚಿನ್ನದ ಓಲೆಗಳು, ಕೈಗಳಿಗೆ ಚಿನ್ನದ ಬಳೆಗಳು ಹಾಕಿಕೊಂಡಿದ್ದ ಗಂಗವ್ವಳಿಗೆ ಆಗಲೇ ಮುವತ್ತೈದು ವರ್ಷಗಳು ಕಳೆದಿದ್ದರೂ, ಇಪ್ಪತ್ತು ವರ್ಷದ ಪರೆಯದ ಹುಡುಗಿಯಂತೆ ಕಾಣುತ್ತಿದ್ದಳು. ಒಬ್ಬಳೇ ಒಬ್ಬ ಮಗಳು. ತುಂಬು ಯೌವನದಲ್ಲಿ ಗಂಡನನ್ನು ಕಳೆದುಕೊಂಡ ಗಂಗವ್ವ, ಇಷ್ಟ ಪಟ್ಟಿದ್ದಲ್ಲಿ, ಮತ್ತೆ ಯಾರನ್ನಾದರೂ ಮದುವೆಯಾಗಬಹುದಾಗಿತ್ತು. ಚಿವುಟಿದರೆ ರಕ್ತ ಚಿಮ್ಮುವಂತಿದ್ದ ಗಂಗವ್ವನನ್ನು ನೋಡಿ ಅವಳ ಕೈ ಹಿಡಿಯಲು ಅದೆಷ್ಟೋ ಜನರು ಸಿದ್ಧ ರಾಗಿದ್ದರು. ಆದರೆ, ಗಂಗವ್ವ ಪುನರ್‌ವಿವಾಹ ಮಾಡಿಕೊಳ್ಳಲು ಒಪ್ಪಲಿಲ್ಲ.—ಇವಳ ದಿಮಾಕು ಎಷ್ಟು ದಿನ ಇರ್ತದೊ ನೋಡೋಣಂತ—ಎಷ್ಟು ದಿನ ಅಂತ ಬ್ಯಾರೆ ಗಂಡಸರ ಮಾರಿ ನೋಡದ ಇರತಾಳೊ ನೋಡೋಣಂತ—ಎಂದೆಲ್ಲ, ಅವಳಿಂದ ತಿರಸ್ಕೃತರಾದ ಗಂಡಸರು ತಮ್ಮ ತಮ್ಮಲ್ಲೆ ಮಾತಾಡಿಕೊಂಡರು. ಗಂಗವ್ವ ಯಾವುದಕ್ಕೂ ಬಗ್ಗಲಿಲ್ಲ. ಇದ್ದ ಒಬ್ಬ ಮಗಳನ್ನು ಸೋದರಳಿಯನಿಗೆ ಕೊಟ್ಟು, ಇಬ್ಬರನ್ನೂ ಮನೆಯಲ್ಲೆ ಇಟ್ಟು ಕೊಂಡಳು. ಇದ್ದ ಆಸ್ತಿಯಿಂದ, ಕಾಪಾಡಿಕೊಂಡು ಬಂದ ಶೀಲದಿಂದ, ಊರಿನವರ ಗೌರವ ಸಂಪಾದಿಸಿ, ಊರಿನವರಿಗೆಲ್ಲ ಅವ್ವ—ಆದಳು. ಊರಿನಲ್ಲಿನ ಯಾರಿಗೆ ಆಗಲಿ,

ಏನಾದರೂ ಸಲಹೆ–ಸಹಾಯ ಬೇಕಾದಲ್ಲಿ, ಅವರು ಗಂಗವ್ವನ ಬಳಿ ಹೋಗುವುದು ಸಹಜವಾಗಿತ್ತು.

ಪುಲ್ಲಯ್ಯ ಕೂಡ, ಅವಳ ಮನೆಯ ಹೊಸ್ತಿಲನ್ನು ತುಳಿದ. ಪುಲ್ಲಯ್ಯ ಗಂಗವ್ವನ ಮನೆ ತಲುಪಿದಾಗ, ಆಕೆ ಮನೆಯ ಮುಂದಿನ ಜಗುಲಿಯ ಮೇಲೆ ಕುಳಿತು ಬೆಂಡೆಕಾಯಿ ಹೆಚ್ಚುತ್ತಿದ್ದಳು. ಪುಲ್ಲಯ್ಯ ಕಣ್ಣಿಗೆ ಬಿದ್ದೊಡನೆ ಮಂದಹಾಸ ಬೀರಿ—"ಅದೊ ಬಂದ ಮದುವೆ–ಮಕ್ಕಳಿಲ್ಲದ ಸುಕುಮಾರ"—ಎಂದು ಸ್ವಾಗತಿಸಿದಳು.

ಪುಲ್ಲಯ್ಯ, ನೇರವಾಗಿ ಹೋಗಿ ಗಂಗವ್ವನ ಸಮೀಪದಲ್ಲಿ ಕುಳಿತ.

ಸ್ವಲ್ಪ ಹೊತ್ತು ಅದು–ಇದು ಮಾತನಾಡುತ್ತಿದ್ದು, "ಅವ್ವಾ, ಜಿದ್ದಿಗೆ ಬಿದ್ದು ಪಂಥ ಕಟ್ಟೀನs"—ಬೆಂಡೆ ಕಾಯಿಗಳನ್ನು ನೋಡುತ್ತಾ ಹೇಳಿದ ಪುಲ್ಲಯ್ಯ.

"ಹೂಂ—ಬೆಂಡಿಕಾಯಿ ಹಾಂಗs ಬಲತೀದಿ ಇನ್ನೇನು ಮಾಡ್ತಿ ಹೇಳು. ಇಷ್ಟು ವಯಸ್ಸಿನ ವರೆಗೆ ನಮ್ಮ ಜಾತಿಯವರು ಯಾರೇ ಆಗಲಿ ನಿನ್ನ ಹಾಂಗ ಒಂಟಿಯಾಗಿ ಇರೋದಿಲ್ಲ. ಮದುವೆ ಇಲ್ಲ–ಮಕ್ಕಳಿಲ್ಲ. ಜಿದ್ದು ಕಟ್ಟದ ಮತ್ತೇನು ಮಾಡ್ತೀದಿ...... ಹುಂ...... ಆಯ್ತು...... ಅದು ಯಾರನ್ನ ಎದುರು ಹಾಕಿಕೊಂಡಿ ಅದನ್ನೊಂದಿಷ್ಟು ಹೇಳು."

ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಲು ಪುಲ್ಲಯನಿಗೆ ನಾಚಿಕೆಯಾಯಿತು. ಆದರೆ, ಗಂಗವ್ವನ ಮುಂದೆ ಹೇಳದೆ ಅನ್ಯಮಾರ್ಗವೇ ಇರಲಿಲ್ಲ. ಅದು ಹೇಗೊ ಧೈರ್ಯ ಮಾಡಿ ಬಾಯಿಬಿಟ್ಟ—

"ಇಷ್ಟು ದಿನ ಶರೀರ ಬೆಳೆಸಬೇಕು—ಅಂಬೊ ಹುಚ್ಚು ವ್ಯಾಮೋಹದಾಗ ಲಗ್ನ ಮಾಡಿಕೊಳ್ಳಲಿಲ್ಲ. ಆದರೆ........."

"ಏನು? ಏನು? ಲಗ್ನನs. ನಮ್ಮಪ್ಪ ಬೆಳಗಾಗೆದ್ದು ಒಳ್ಳೆ ಸುದ್ದಿ ಹೇಳಿದಿ. ನೀನೂ ಒಬ್ಬ ಗ್ರಹಸ್ಥನಾಗಿ—ಸಂಸಾರಿಕನಾಗಿ, ಮಕ್ಕಳು–ಮರಿ ಕಂಡರ......"

ಗಂಗವ್ವ ಇನ್ನೇನೇನನ್ನೋ ಹೇಳುತ್ತಿದ್ದಳು. ಆದರೆ ಪುಲ್ಲಯ್ಯ ನಾಚಿಕೆಯಿಂದ ಅಲ್ಲಿಯೇ ಬಿದ್ದ ಒಂದು ಕೋಲನ್ನು ಎತ್ತಿಕೊಂಡು, ನೆಲ ಕೆದರುತ್ತಾ ಕುಳಿತಿದ್ದ.

"ಆಗಲಿ ಮಹಾರಾಯ. ಹೇಗೂ ಲಗ್ನಕ್ಕ ಲಗ್ನದ ಖರ್ಚಿಗೆ ಬೇಕಾಗುವಷ್ಟು ದುಡ್ಡು ನಿನ ಹತ್ತಿರ ಅದ...... ನಮ್ಮ ಪದ್ಧತಿಗೆ ಅನುಸಾರವಾಗಿ ಮದುವೆ ನಿನ್ನ ಮನಿ ಒಳಗs ಆಗಬೇಕು. ನೀನು ವರ ಅಂತ ಗೊತ್ತಾದರ ಯಾವ ಹೆಣ್ಣು ಲಗ್ನ ಒಲ್ಲೆ ಅಂದಾಳು......" ಗಂಗವ್ವ ಹೇಳುತ್ತಲೇ ಇದ್ದಳು.

ಒಂದು ಕಾಲದಲ್ಲಿ ಸಾಕಷ್ಟು ಚೆಲುವೆಯಾಗಿದ್ದ ಅವಳ ಮುಖದ ಮೇಲೆ, ಈಗಲೂ ಸಹ ಚೆಲುವಿನ ಛಾಯೆ ಇತ್ತು. ಅವಳು, ಬೆಂಡೆಕಾಯಿ ಹೆಚ್ಚುವುದನ್ನು ನಿಲ್ಲಿಸಿ, ಈಳಿಗೆ ಮಣೆಯನ್ನು ಬದಿಗಿಟ್ಟು, ಸರಿಯಾಗಿ ಕುಳಿತುಕೊಳ್ಳುತ್ತಾ ಪುಲ್ಲಯ್ಯನನ್ನೇ ನೋಡಿದಳು. ಆಚೆಯ ಕಟ್ಟೆಯ ಮೇಲೆ ಕುಳಿತಿದ್ದ ಗಂಗವ್ವನ ಮಗಳು, ರಾಟೆಯಿಂದ ನೂಲು

ತೆಗೆಯುತ್ತಿದ್ದಳು. ಮನೆಯ ಎದುರಿನ ಗೋಶಾಲೆಯಿಂದ, ದನಗಾಹಿ ಹುಡುಗ, ಆಕಳು ಮತ್ತು ಎತ್ತುಗಳನ್ನು ಮೇಯಿಸಿಕೊಂಡು ಬರಲು ಹೊರಟಿದ್ದ.

"ಹೇಳು, ಬಂಗಾರ ಎಷ್ಟು ಇಟ್ಟೀದಿ......"—ಗಂಗವ್ವ ಕೇಳಿದಳು.

"ನನ್ನ ಹತ್ತಿರ ಏನದ—ಏನಿಲ್ಲ. ನಿನಗ ಗೊತ್ತದ. ಇದ್ದ ಭೂಮಿ ಅಡುವಾಗಿಟ್ಟು ಸಾಲ ತರಬೇಕು."

"ಅದಕ್ಕೇನು ಬಿಡು, ಏನಾದರೂ ಮಾಡಿದರಾತು."

ಈ ಮಾತನ್ನು ಹೀಗೆಯೇ ಮುಂದುವರಿಸುವುದು ಫುಲ್ಲಯ್ಯನಿಗೆ ಇಷ್ಟವಿರಲಿಲ್ಲ. ಅವನು ಕೈಯಲ್ಲಿನ ಕೋಲನ್ನು ಕೆಳಗೆ ಹಾಕಿ—

"ಅವ್ವ, ನೀನು ಹೋಗಿ ಆ ನೀಲಿ......"

ಫುಲ್ಲಯ್ಯನ ಬಾಯಿಯಿಂದ ನೀಲಿಯ ಹೆಸರು ಬಂದಾಗ, ಗಂಗವ್ವನಿಗೆ ಆಶ್ಚರ್ಯವಾಗಿ —ಕೂಡಲೆ ಅವಳು ಮಾತನಾಡದಾದಳು.

"ಇದೇನೊ ಫುಲ್ಲಯ್ಯ, ಎಂಜಲು–ಎಂಜಲು ಅಂತ ಹಾರಿ, ಎಂಜಲಿನ್ಯಾಗ ಕಾಲಿಟ್ಟ ಹಾಂಗಾತಲ್ಲ—ನಿನ್ನ ಗತಿ. ನೀನು ಹೂಂ—ಅಂದರ ಬೇಕಾದಂತಹ ಹೆಣ್ಣು ಸಿಗ್ತಾವ— ಅದನ್ನು ಬಿಟ್ಟು......"

"ಅವ್ವ, ನನ್ನ ಇಚ್ಛೆಗೆ ಅಡ್ಡಿಯಾಗಬೇಡ. ಆಗಲೇ ಹೇಳಿದನಲ್ಲ—ಆ ಹುಡುಗೀನ್ನ ಲಗ್ನ ಆಗಬೇಕೂಂತ ಆಣೆ ಇಟ್ಟುಕೊಂಡೀನಿ."

"ಅವಸರ ಮಾಡಬ್ಯಾಡೊ. ಊರಿನ ಪಂಚಾಯಿತಿ ಮುಖಂಡನ ಮಗಳು ನಾರಾಯಣಮ್ಮ, ತಾನಾಗಿ ಮ್ಯಾಲೆ ಬಿದ್ದು ಬಂದರೂ ಒಲ್ಲೆ ಅಂದಿ. ಅದು ಹೋಗಲಿ, ನಿನಗ ಹೆಣ್ಣು ಕೊಡಲಿಕ್ಕೆ ಈ ಊರಾಗಿನ ದೊಡ್ಡ ಮನೆತನಸ್ಥರು ನಾ ಮುಂದು—ನೀ ಮುಂದು—ಅಂತ ನಿನ್ನ ಬಾಗಿಲಿಗೆ ಬಂದರೂ, ಕಿವಿಗೆ ಹಾಕಿಕೊಳ್ಳಲಿಲ್ಲ.—ನೋಡು, ನನ್ನ ಮಾತು ಕೇಳು. ಆ ನೀಲಿಗೆ ಏನದ. ಒಂದು ಅಂದs–ಛಂದs. ನೋಡಲಿಕ್ಕೆ ಹ್ಯಾಂಗಾರ ಇರಲಿ, ಒಂದು ಭೂಮಿ–ಕಾಣಿ ಏನೂ ಇಲ್ಲದ ಆ ಹೆಣ್ಣಿನ್ನ ಲಗ್ನ ಮಾಡಿ ಕೊಂಡರ ನಿನಗೇನು ಬರ್‍ತದ."

ಫುಲ್ಲಯ್ಯ ಏನೊ ಹೇಳಬೇಕೆಂದು ಬಾಯ್ತೆರೆದನಾದರೂ ಸುಮ್ಮನಾಗಿ ಬಿಟ್ಟ.

"ಅವಳು ಚಲಾವಣೆಗೆ ಬಾರದ ಖೊಟ್ಟಿ ನಾಣ್ಯ. ಒಂದು ವೇಳೆ ನೀನು ಅವಳ ಕೈ ಹಿಡಿದರೂ, ನಿನಗೇನು ಸಿಗ್ತದ ಮಣ್ಣು. ಅವಸರ ಮಾಡಬ್ಯಾಡ. ಬಂಗಾರದಂತಹ ಹೆಣ್ಣಿಗೆ ಸೇರು ಬಂಗಾರ ಇಡಬೇಕು ಅಂತಾರ. ನನ್ನ ಮಾತು ಕೇಳು. ಯಾವುದಾದರೂ ದೊಡ್ಡ ಮನಿ ಹುಡುಗೀನ್ನ ಮಾಡಿಕೊಂಡರ, ನಾಳೆ ಏನಾದರೂ ಆದರ ನಿನ್ನ ಸಹಾಯಕ್ಕ ಬಂದಾರು. ಕಾಲ ಯಾವಾಗಲೂ ಒಂದೇ ರೀತಿ ಇರೋದಿಲ್ಲ......"

ಫುಲ್ಲಯ್ಯ, ತಲೆ ಕೆಳಗೆ ಹಾಕಿ ಸುಮ್ಮನೆ ಕುಳಿತ. ನೀಲಿ ಚೆಲುವೆ ಅಲ್ಲಂತ...... ಯೌವನದ ಮದದಿಂದ ತುಂಬಿದ ಆ ಎದೆ...... ಕೋಗಿಲೆಯಂತಹ ಆ ಕಂಠ......

ನೀಲಿಯ ನೆನಪು ಬಂದಾಗ, ಮೈಯಲ್ಲಿ ವಿದ್ಯುತ್ ಸಂಚಾರವಾಯಿತು ಪುಲ್ಲಯ್ಯನಿಗೆ. ......ಅವಳನ್ನು ಮದುವೆಯಾಗದಿದ್ದರೆ ನನ್ನ ಜಿದ್ದು...... ನನ್ನ ಶಪಥ...... ನಾಚಿಕೆ ಇಲ್ಲದವನು ಅಂದಳು...... ಛೆ...... ಛೆ...... ಅವಳನ್ನು ಬಿಡಬಾರದು....

ಪುಲ್ಲಯ್ಯ ನಿಧಾನವಾಗಿ ಮುಖ ಮೇಲೆ ಎತ್ತಿ, "ಅವ್ವಾ"—ಎಂದು ಕರೆದ. ಪುಲ್ಲಯ್ಯ ಮನಸ್ಸು ಬದಲಾಯಿಸಿದನೇನೋ ಎಂಬ ಆಶೆಯಿಂದ, ಗಂಗವ್ವ ಅವನತ್ತ ನೋಡಿದಳು.

"ಅವ್ವಾ, ಅವಳ ಬಳಿ ಏನೂ ಇಲ್ಲದಿದ್ದರೂ, ಅವಳಿಗೆರಡು ಕೈಗಳಿವೆ—ಅದೇ ಸಾಕು. ರೈತನಿಗೆ ಕೈ-ಕಾಲು ಗಟ್ಟಿಯಾಗಿದ್ದರಾತು—ಇನ್ನೇನೂ ಬೇಡ".

"ಏ ಪುಟ್ಟಪ್ಪ, ನಾ ಹೇಳೋದು ಒಂದಿಷ್ಟು ಕೇಳು. ಅವಳಿಗೆ, ಆ ಮುದುಕಿನ್ನ ಬಿಟ್ಟು ಇನ್ನು ಯಾರೂ ಇಲ್ಲ. ಆ ಮುದುಕಿ, ತನ್ನ ಮೊಮ್ಮಗಳ ಜೊತೆಗೆ ಇರಬೇಕು. ನಾಳೆ ಅವಳು ಗೊಟಕ್ಕ—ಅಂದರ, ಎಲ್ಲಾನೂ ನೀನs ನಿಂತು ಮಾಡಬೇಕು. ನಿನಗರ ಏನು ಅದೆ? ನಾಳೆ ಮಕ್ಕಳು ಮರಿ ಆದರ, ಎಲ್ಲಿ ಇರ್ತಿದಿ—ಏನು ಮಾಡ್ತೀದಿ. ದೊಡ್ಡವರು, ದುಡ್ಡಿದ್ದವರು ತಾವಾಗಿ ಹೆಣ್ಣು ಕೊಡಲು ಮುಂದ ಬಂದಾರ. ಬಾಗಿಲಿಗೆ ಬಂದ ಭಾಗ್ಯ ವನ್ನು ಕಾಲಿನಿಂದ ಆಚ ತಳ್ಳೋದು ಸರಿಯಲ್ಲ"—ಗಂಗವ್ವ ವಿವರಿಸಿದಳು.

ಪುಲ್ಲಯ್ಯ ತನ್ನ ಪಟ್ಟು ಬಿಡದೆ, ತನಗೆ ತಿಳಿದ ಹರಕು ವೇದಾಂತ ಪ್ರಾರಂಭಿಸಿದ— "ಅವ್ವಾ, ಹುಟ್ಟಿನಿಂದ ಸಾಯೋ ವರೆಗೂ ಮನುಷ್ಯನಿಗೆ ಇರಬೇಕಾದದ್ದು ಎರಡೇ ಎರಡು—ಕೀರ್ತಿ—ಅಪಕೀರ್ತಿ. ನನ್ನ ಕೀರ್ತಿ ಅಪಕೀರ್ತಿ ನನಗಿರಲಿ. ನಾನಂತೂ ಅವಳನ್ನು ಮದುವೆ ಆಗಬೇಕೆಂದು ತೀರ್ಮಾನಿಸಿನಿ. ಈ ಮದುವೆ ನಡೆಸಿಕೊಡೋದು ನಿನ್ನ ಕೈಯಾಗದ."

"ಆಗಲಿ, ಈ ಪ್ರಪಂಚದಾಗ ಬದುಕು ಸಾಗಿಸೋದು ನಿನಗೇನೂ ಕಷ್ಟವಲ್ಲ. ಹುಟ್ಟಿ ಸಿದ ದೇವರು, ಹುಲ್ಲು ಮೇಯಿಸುವುದಿಲ್ಲವೇ? ಏನೋ ದೊಡ್ಡವರ—ಮನೆತನಸ್ಥರ ಅಳಿಯ ಆದೆಂದರ, ಯಾವುದಕ್ಕೂ ಅಡಚಣೆ ಇಲ್ಲದ ಹಾಯಾಗಿರ್ತೀದಿ—ಅಂತ ಹೇಳಿದೆ. ಆ ನೀಲಿ ಅದೃಷ್ಟದಾಗ ನಿನ್ನ ಕೈಹಿಡಿಯೋ ಭಾಗ್ಯ ಇದ್ದರ ನಾನು ಇದೆಲ್ಲ ಹೇಳೋದು ತಪ್ಪು. ಆಯ್ತು—ದೊಡ್ಡವಳು ಅಂತ ನನ್ನ ಮ್ಯಾಲೆ ಈ ಭಾರ ಹಾಕೀದಿ. ನಾನು, ನಿನ್ನ ತಾಯಿ ಇದ್ದ ಹಾಂಗ ಇದ್ದೀನಿ. ಅದಕ್ಕs ಇಷ್ಟೆಲ್ಲ ಮಾತಾಡಿದೆ. ಮನಸ್ಸಿನಲ್ಲೊಂದು, ಹೊರಗೊಂದು ಮಾತನಾಡೋದು ನನ್ನ ಜಾಯಮಾನವೇ ಅಲ್ಲ. ಮನಸ್ಸಿನಲ್ಲಿದ್ದು ದನ್ನು ಹಿಂದೆ ಮುಂದೆ ನೋಡದೆ ಹೇಳಿದೆ. ನೀನು ಬೇಕಾದರೆ, ಅವಳನ್ನೆ ಮದುವೆ ಆಗು—ನನ್ನದೇನೂ ಅಭ್ಯಂತರವಿಲ್ಲ. ಅವಳು ನಿನ್ನ ಮನೆಯಲ್ಲಿ ಕಾಲಿಡುವ ಮೂಹುರ್ತ ಸರಿಯಾಗಿದ್ದಲ್ಲಿ, ನಿನ್ನ ಮನೆ ಧನಕನಕಗಳಿಂದ ತುಂಬತದ. ನಮ್ಮಂತಹ ವರು, ನಿಮ್ಮಂತಹವರ ಒಳ್ಳೆಯದನ್ನೇ ಕೋರ್ತೀವಿ...... ಆಯ್ತು, ನನ್ನ ಮಗಳನ್ನ ಕಳಿಸಿ, ಆ ಮುದುಕಿನ್ನ ಕರೆಸಿ ಮಾತಾಡ್ತೀನಿ. ಅಂದಹಾಂಗ, ಬಂಗಾರ ಎಷ್ಟು ಅದು ಹೇಳಲs."

ಪುಲ್ಲಯ್ಯ ತನ್ನ ಬಳಿ ಏನೂ ಇಲ್ಲವೆಂದು ಕೈಯಾಡಿಸಿದ. ಗಂಗವ್ವ ಮುಗುಳ್ನಕ್ಕು, "ಆ ಮುದುಕಿ ಯಾವುದಕ್ಕೂ ಕಡಿಮೆ ಇಲ್ಲ. ನಿನ್ನಂತಹವನು ತನ್ನ ಮೊಮ್ಮಗಳ ಕೈ ಹಿಡಿತಾನ ಅಂದರ, ಬೆಣ್ಣಿ ಮುದ್ದಿ ಕೂಡ ಕೇಳದ, ಮೊಮ್ಮಗಳನ್ನ ಲಗ್ನ ಮಾಡಿಕೊಡ್ತಾಳು. ಈಗ ನೀನು ಹೋಗು. ಏನು ಮಾಡಬೇಕೊ ನಾನು ಮಾಡತೀನಿ."

ಪುಲ್ಲಯ್ಯನ ಮುಖ ಸಂತೋಷದಿಂದ ಅಗಲವಾಯಿತು. ಕುಳಿತಲ್ಲಿಂದ ಜಿಗಿದು, ಕೆಳಗೆ ಬಿದ್ದಿದ್ದ ಕೋಲನ್ನು ಎತ್ತಿಕೊಂಡು, ಉತ್ಸಾಹದಿಂದ ಕುಣಿಯುತ್ತ ಮನೆಯ ಕಡೆ ಹೆಜ್ಜೆ ಹಾಕಿದ.

## [ 5 ]

ಮಲ್ಲಯ್ಯನ ಮಗ ಪುಲ್ಲಯ್ಯನ ಮದುವೆ ನಿಶ್ಚಯವಾಯಿತು. ಈ ಮದುವೆಯ ಬಗ್ಗೆ ಊರಿನಲ್ಲಿನ ಜನರು ತಲಾ ಒಂದು ಮಾತನಾಡಿದರು. ಹಾಗೆ ನೋಡಿದಲ್ಲಿ, ಆ ಊರಿನ ಇತಿಹಾಸದಲ್ಲಿ, ಪುಲ್ಲಯ್ಯನ ಮದುವೆ ಒಂದು ಸ್ಮರಣೀಯ ಘಟನೆ.

ರೂಪು–ಒನಪುಗಳಿಲ್ಲದ, ಗತಿಯಿಲ್ಲದ ಹುಡುಗಿ ನೀಲಿ. ಸ್ಫುರದ್ರೂಪಿಯಾದ, ನಾಲ್ಕು ಜನರಿಂದ ಹೌದೆನ್ನಿಸಿಕೊಂಡ ಪುಲ್ಲಯ್ಯನನ್ನು ಮದುವೆಯಾಗಲಿದ್ದಳು. ಸುತ್ತ ಮುತ್ತಲಿನ ಹಳ್ಳಿಗಳಿಂದಲೂ ಸಹ, ಪುಲ್ಲಯ್ಯನಿಗೆ ಒಳ್ಳೊಳ್ಳೆ ಸಂಬಂಧಗಳು ಬಂದಿದ್ದವು. ಪುಲ್ಲಯ್ಯ, ಅವರಲ್ಲಿ ಯಾರನ್ನಾದರೂ ಒಪ್ಪಿಕೊಂಡಿದ್ದಲ್ಲಿ ಸಾಕಷ್ಟು ಆಸ್ತಿಯನ್ನೂ ಸಹ ಪಡೆಯಬಹುದಾಗಿತ್ತು. ಆದರೆ, ಈಗ, ಅವನು ತಾನೇ ಸ್ವತಃ ಎರಡೂ ಖರ್ಚು ಗಳನ್ನೂ ಭರಿಸಬೇಕಾಗಿತ್ತು.

ಕೆಲವರು, ಇದನ್ನು, ಪುಲ್ಲಯ್ಯನ ಹಣೆಯಬರಹವೆಂದರು. ಮದುವೆಯ ಸಿದ್ಧತೆಗಳು ನಡೆಯುತ್ತಿರುವಾಗಲೇ ಊರಿನ ಹೆಂಗಳೆಯರು ಗುಸು ಗುಸು ಪ್ರಾರಂಭಿಸಿದ್ದರು.

"ಈ ಊರಿಗೆ ಆ ಪತಿವ್ರತೆಯ ಶಾಪ ತಟ್ಟಿದೆ"—ಎಂದು ಮುದಿ ಹೆಂಗಸೊಬ್ಬಳು ಹೇಳಿದಾಗ, ಅಲ್ಲಿದ್ದವರೆಲ್ಲರೂ "ಹೌದು ಹೌದು"—ಎಂದು ತಲೆದೂಗಿದರು.

ಅನೇಕ ವರ್ಷಗಳ ಹಿಂದೆ, ಯಾರೋ ದಂಪತಿಗಳು, ಆ ಊರಿನ ಮುಖ್ಯ ಬೀದಿಯಲ್ಲಿ ಹೊರಟಿದ್ದರಂತೆ. ಗಂಡ ಕುಳ್ಳನಾಗಿದ್ದ—ವಿಕಾರವಾಗಿದ್ದ. ಹೆಂಡತಿ ಎತ್ತರವಾದ ಚೆಲುವೆಯಾಗಿದ್ದಳು. ಈಡು–ಜೋಡಿಲ್ಲದ ಆ ದಂಪತಿಗಳನ್ನು ನೋಡಿ ಊರಿನ ಹೆಂಗಸರು ನಕ್ಕು ಅಪಹಾಸ್ಯ ಮಾಡಿದಾಗ, ಆ ಸಾಧ್ವಿ, "ಈ ಊರಿನ ಹೆಣ್ಣುಗಳಿಗೆ ಈ ಊರೇ ಗತಿ ಆಗಲಿ. ಬೇರೆ ಊರಿನವರು ಯಾರೇ ಆಗಲಿ ಈ ಊರಿನ ಹೆಣ್ಣು ಮಕ್ಕಳನ್ನು ಮದುವೆಯಾಗದಿರಲಿ"—ಎಂದು ಶಾಪ ಕೊಟ್ಟಳಂತೆ. ಹಳ್ಳಿಯ ಮುಗ್ಧ

ಜನರು ಆವಳ ಶಾಪ ತಟ್ಟಬಹುದೆಂಬ ಭಯದಿಂದ, ತಮ್ಮ ಹೆಣ್ಣುಮಕ್ಕಳನ್ನು ಬೇರೆ ಊರುಗಳಿಗೆ ಕೊಡದೆ, ಊರಿನಲ್ಲೆ ಸಂಬಂಧ ಬೆಳೆಸಿಕೊಂಡರು.

ಆ ಸಾಧ್ವಿಯ ಶಾಪ ನೀಲಿಗೂ ಸಹ ತಟ್ಟಿತ್ತು. ಅಂತಲೇ, ಅವಳಿಗೂ ಸಹ, ಅದೇ ಊರಿನವನೇ ಗಂಡನಾಗಲಿದ್ದ.

ನೀಲಿ, ಈ ಮದುವೆಗೆ ಸುಲಭವಾಗಿ ಒಪ್ಪಿಕೊಂಡಾಗ, ಪುಲ್ಲಯ್ಯನಿಗೆ ಸಹಜವಾಗಿಯೇ ಆಶ್ಚರ್ಯವಾಯಿತು. ನಾಚಿಕೆ ಇಲ್ಲದವನೆಂದು ಬಯ್ದು ಓಡಿಹೋದ...... ಕೈಕಡಿದು ತಪ್ಪಿಸಿಕೊಂಡ ನೀಲಿ, ತನ್ನನ್ನು ಮದುವೆಯಾಗಲು ಒಪ್ಪಿಕೊಂಡದ್ದು, ಅವನಿಗೆ ದೊಡ್ಡ ವಿಷಯವಾಗಿತ್ತು. "ಕೊನೆಗೂ ನಾನೇ ಗೆದ್ದೆ...... ಲಗ್ನ ಆದ ಮ್ಯಾಲೆ, ಆಕೀನ್ನ ಕೇಳದ ಇರ್ತೀನs...... ನಾಚಿಕಿ...... ನನಗ, ಅವಳಿಗ......?" ಪುಲ್ಲಯ್ಯ ಮೀಸೆ ತಿರುವಿಕೊಂಡ.

ಪುಲ್ಲಯ್ಯನಿಗೆ, ದಿನಬೆಳಗಾದರೆ ಅವಳದೇ ಧ್ಯಾನ. ಯಾವ ವಿಷಯವನ್ನೇ ಆಗಲಿ ಮನಸ್ಸಿಗೆ ಹಚ್ಚಿಕೊಂಡವನಲ್ಲ...... ಆದರೆ, ಈಗ ಅವನ ಮನಸ್ಸಿನಲ್ಲಿ ನೀಲಿ ತುಂಬಿದ್ದಳು. "ಅವಳು ಅಂದ ಮಾತು, ಅವಳಿಗೆ ಹೇಳ್ತೀನಿ. ಆಕೀಗೆ ನಾನೇನೂ ಬಗ್ಗೋನಲ್ಲ"—ಎಂದು ತನ್ನಷ್ಟಕ್ಕೆ ತಾನು ಸಾವಿರ ಸಲವಾದರೂ ಹೇಳಿಕೊಂಡ. "ಆಯ್ತು, ಮದುವೆ ಒಂದು ಆಯ್ತುಂದರ...... ನನಗೂ ಒಬ್ಬ ಮಗ ಹುಟ್ಟತಾನ. ಬಂಗಾರದಂತಹ ಮಗ...... ಚಿನ್ನದಂತಹ ಭೂಮಿ...... ನನಗ ಇನ್ನೇನು ಕಡಿಮಿ?"

ಮದುವೆಯ ದಿನವೂ ಬಂತು. ಮದುಮಗನ ಮನೆಯ ಮುಂದೆ ಚಪ್ಪರ ಹಾಕಲಾಯಿತು. ಗಂಗವ್ವ ಮುಂದಾಗಿ ನಿಂತು, ಎಲ್ಲಾ ಏರ್ಪಾಡುಗಳನ್ನೂ ಮಾಡುತ್ತಿದ್ದಳು. ಮದುವೆಯ ಖರ್ಚಿಗಾಗಿ ಬೇಕಾದ ದುಡ್ಡನ್ನು, ಅವಳು ತಾನೇ ಸ್ವತಃ ಅಳಿಯನಿಂದ ಪಡೆದು ಪುಲ್ಲಯ್ಯನಿಗೆ ಕೊಟ್ಟಿದ್ದಳು. ಪುಲ್ಲಯ್ಯನ ಪುಟ್ಟ ಮನೆಯಲ್ಲೇ ಎಲ್ಲವನ್ನೂ ಹೊಂದಿಸಿಕೊಂಡು ಮದುವೆಗೆ ಸಿದ್ಧತೆಗಳನ್ನು ನಡೆಸಿದ್ದಳು. ಪುಲ್ಲಯ್ಯನ ಮದುವೆ ಎಂದು, ಸುತ್ತಮುತ್ತಲಿನ ನಾಲ್ಕು ಹಳ್ಳಿಗಳ ಜನರು ಮುಂದಾಗಿ ಬಂದು, ಎಲ್ಲಾ ಕೆಲಸ ಕಾರ್ಯಗಳಲ್ಲೂ ನೆರವಾದರು.

ನೀಲಿಯ ಮುದಿ ಅಜ್ಜಿ, ಮೊಮ್ಮಗಳ ಮದುವೆಯ ದಿನ ಎಂದು ಬರುವುದೊ ಎಂದು, ಬೆರಳೆಣಿಸುತ್ತಾ ಕುಳಿತಿದ್ದಳು. ಗಂಗವ್ವ ಆ ಮುದುಕಿಯ ಚೋಟು ಜಡೆಗೆ ಎಣ್ಣೆ ಹಾಕಿ, ಹೊಸ ಸೀರೆ ಉಡಿಸಿ, ಮದುವೆಯ ಮಂಟಪದ ಮುಂದೆ ಕೂಡಿಸಿದ್ದಳು. ತನ್ನ ಜೀವನದ ಕೊನೆಯ ದಿನಗಳನ್ನು ಎಣಿಸುತ್ತಿದ್ದ ಆ ಮುದುಕಿ, ಆಶೆ ತುಂಬಿದ ಕಣ್ಣಿನಿಂದ ಎಲ್ಲವನ್ನೂ ನೋಡುತ್ತಿತ್ತು.

ಮುದುಕಿ ಒಂದು ಕಾಲದಲ್ಲಿ, ತನ್ನ ಈ ಮೊಮ್ಮಗಳಂತೆಯೇ ಇದ್ದಳು. ಅವಳ ಗಂಡ—ನೀಲಿಯ ತಾತ—ಮಹಾ ಕುಡುಕ. ಕುಡಿದು ಬಂದು ಹೆಂಡತಿಯನ್ನು ಹೊಡೆದು ಹಣ್ಣುಮಾಡುತ್ತಿದ್ದ. ಆದರೆ, ನೀಲಿಯ ಅಜ್ಜಿ ಎಲ್ಲವನ್ನೂ ಸಹಿಸಿಕೊಳ್ಳು

ತ್ತಿದ್ದಳಾದರೂ, ಒಬ್ಬರ ಮುಂದೆ ಬಾಯಿಬಿಡುತ್ತಿರಲಿಲ್ಲ. ನೀತಿಗೆ, ವಿನಯ ಶೀಲತೆಗೆ ದುಂಬಾಲು ಬಿದ್ದು, ಕುಡುಕ ಗಂಡನ ಕೋಕು ಚಾಷ್ಟಿಗಳನ್ನು ಸಹಿಸಿಕೊಂಡಳು. ಮಕ್ಕಳಾದವು, ಹೊಟ್ಟೆಗಿಲ್ಲದೆ ಸತ್ತುಹೋದವು. ಒಬ್ಬ ಮಗಳು ಮಾತ್ರ ಉಳಿದಳು. ಆ ಮಗಳಿಗಾಗಿ ಜೀವ ಹಿಡಿದುಕೊಂಡು ಕುಳಿತಾಗ, ಮೊಮ್ಮಗಳನ್ನು ಉಡಿಯಲ್ಲಿ ಹಾಕಿ ಅವಳೂ ಸಹ ಕಣ್ಮರೆಯಾದಳು. ಮುದುಕಿಗೆ ತನ್ನ ಗತಜೀವನದ ಈ ಎಲ್ಲ ಸಂಗತಿಗಳ ನೆನಪು ಮರುಕಳಿಸಿದಾಗ, ದುಃಖ ಉಮ್ಮಳಿಸಿ ಬರುತ್ತಿತ್ತು.

ಮೊಮ್ಮಗಳ ಮದುವೆಯ ವಿಜೃಂಭಣೆಯನ್ನು ನೋಡಿ, ಅವಳಲ್ಲಿ ಪುನಃ ಆಶೆಯು ಮೊಳಕೆಯೊಡೆದಿತ್ತು. ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತು ಮದುವೆಯ ವಿಧಿಗಳನ್ನು ನೋಡುತ್ತಿದ್ದ ಮುಖದ ಮೇಲೆ, ಈಗ ಸಂತೃಪ್ತಿಯಿತ್ತು.

ಮದುವೆಯ ಮುಂಚಿನ ಎಲ್ಲಾ ವಿಧಿಗಳು ಮುಗಿದು, ಎಲ್ಲರ ಊಟವಾಯಿತು. ಮದುಮಗ ವಾಡಿಕೆಯಂತೆ ಸಿಟ್ಟುಮಾಡಿಕೊಂಡು ಹೊರಟ. ನೇರವಾಗಿ ನೀಲಿಯನ್ನು ತಾನು ಹಿಡಿದುಕೊಂಡ ಸ್ಥಳಕ್ಕೆ ಹೋಗಿ, ಅಲ್ಲಿದ್ದ ಹುಣಿಸೆ ಮರ ಏರಿ ಕುಳಿತ. ಅಳಿಯನ ಜೊತೆ ಗಿಳಿಯ ಅನ್ನುವ ಹಾಗೆ, ಅವನ ಆಪ್ತ ಮಿತ್ರರೂ ಕೂಡ ಮರ ಏರಿ ಕುಳಿತರು. ಪುಲ್ಲಯ್ಯ, ನೀಲಿಯ ತುಂಬಿದ ಎದೆಯನ್ನು, ರೂಪು–ಲಾವಣ್ಯವನ್ನು ನೋಡಿ ಮಾರು ಹೋದ ಸ್ಥಳ ಅದೇ ಆಗಿತ್ತು; ಅವಳನ್ನು ತನ್ನ ಬಿಗಿ ಮುಷ್ಟಿಯಲ್ಲಿ ಹಿಡಿದು ಮುದ್ದಾಡಿದ ಸ್ಥಳ ಅದೇ ಆಗಿತ್ತು—ಅಂದಿನ ಆ ಘಟನೆ ನೆನಪಿಗೆ ಬಂದಾಗ, ಪುಲ್ಲಯ್ಯ, ತನ್ನ ಕೈಯನ್ನು—ನೀಲಿ ಕಡಿದ ಕೈಯನ್ನು ನೋಡಿಕೊಂಡ.

"ಇನ್ನೇನು, ಇನ್ನೂ ಸ್ವಲ್ಪ ಹೊತ್ತು ಕಾದರಾಯಿತು......"

ಆಗಲೆ ಸಂಜೆಯಾಗಿತ್ತು. ಪಶ್ಚಿಮದ ದಿಗಂತದಲ್ಲಿ ಸೂರ್ಯ ಮುಳುಗಿ ಸಾಕಷ್ಟು ಹೊತ್ತಾಗಿತ್ತು. ದನಕರುಗಳು, ಗೋಶಾಲೆಗೆ ಹಿಂದಿರುಗುತ್ತಿದ್ದವು. ನೀರು ತರಲು ಹೋಗಿದ್ದ ಹೆಣ್ಣುಮಕ್ಕಳು, ಮರ ಏರಿ ಕುಳಿತ ಪುಲ್ಲಯ್ಯನನ್ನು—ಮದುಮಗನನ್ನು—ನೋಡಿ, ತಮ್ಮತಮ್ಮಲ್ಲೆ ಗುಸು–ಗುಸು ಮಾತಾಡಿಕೊಂಡು ನಗುತ್ತಿದ್ದರು. ತಲೆ ಎತ್ತಿ ಅವರನ್ನು ನೋಡಲು ಪುಲ್ಲಯ್ಯನಿಗೆ ನಾಚಿಕೆಯಾಯಿತು. ಈ ಮುಂಚೆ, ಹೆಣ್ಣುಮಕ್ಕಳನ್ನು ಸಾಕಷ್ಟು ಛೇಡಿಸಿದ್ದ; ಅವರನ್ನು ಹೀಯಾಳಿಸಿ ಮಾತನಾಡಿದ್ದ. ಹೆಣ್ಣೆಂದರೆ ವಿಷವೆಂದು ಪರಿಗಣಿಸಿ, ಅವರಿಂದ ದೂರವಾಗಿದ್ದ. ಆದರೆ ಇಂದು, ನಲವತ್ತು ವರ್ಷಗಳ ಬ್ರಹ್ಮಚಾರಿ ಪುಲ್ಲಯ್ಯ, ಒಬ್ಬ ಹೆಣ್ಣಿನ ಮೋಹಪಾಶಕ್ಕೆ ಬಲಿಯಾಗಿದ್ದ.

ತಲೆಯ ಮೇಲೆ ಬಿಂದಿಗೆಗಳನ್ನಿಟ್ಟುಕೊಂಡು ಬರುತ್ತಿದ್ದ ವನಿತೆಯರು ತನ್ನನ್ನು ಕುರಿತೇ ಮಾತನಾಡುತ್ತಿರುವುದು ಪುಲ್ಲಯ್ಯನಿಗೆ ಖಚಿತವಾಯಿತು—"ಆಡಿಕೊಳ್ಳಲಿ... ನನ್ನ ಹಠ ನಾನು ನಡೆಸಿಕೊಂಡೆ. ಎಷ್ಟಾದರೂ ಮೀಸೆ ಹೊತ್ತ ಗಂಡಸು ನಾನು"—ಅಂದುಕೊಂಡ.

ನದಿಯ ನೀರು ಜುಳುಜುಳು ಹರಿದುಹೋಗುತ್ತಿತ್ತು. ಮರ ಏರಿ ಕುಳಿತ ಪುಲ್ಲಯ್ಯ,

ದೂರದ ರಸ್ತೆಯ ಮೇಲೆ ಹೋಗುತ್ತಿದ್ದ ಬಸ್ಸುಗಳು, ಮೋಟೆಗಳು, ಮನುಷ್ಯರನ್ನು ನೋಡುತ್ತಿದ್ದ.

ಇದ್ದಕ್ಕಿದ್ದಂತೆ ದೂರದಿಂದ ಬಾಜಾಬಜಂತ್ರಿಗಳು ಕೇಳಿಸಿದುವು. "ಬಂದರು...... ಬಂದರು"—ಎನ್ನುತ್ತಾ ಪುಲ್ಲಯ್ಯನ ಗೆಳೆಯರು ಮರದಿಂದ ಕೆಳಗಿಳಿದರು.

ಪುಲ್ಲಯ್ಯ, ತೊಟ್ಟಿದ್ದ ಜುಬ್ಬ, ಉಟ್ಟಿದ್ದ ಪಂಚೆ, ಹೊದ್ದಿದ್ದ ಜರಿ ಶಾಲು, ತಲೆಗೆ ಸುತ್ತಿದ್ದ ರುಮಾಲು—ಸರಿಪಡಿಸಿಕೊಂಡು ಕುಳಿತ.

ಕಿಲಕಿಲನೆ ನಗುತ್ತ ಬಂದ ಹೆಂಗಳೆಯರು, ಪುಲ್ಲಯ್ಯನನ್ನು ಸುತ್ತುವರಿದರು. ಈಗ, ಆ ಹೆಂಗಳೆಯರು, ಆತನಿಗೆ ಅತ್ತಿಗೆಯರಾಗಬೇಕು, ನಾದಿನಿಯರಾಗಬೇಕು. ಆ ಹೆಂಗಸರ ಕುಹಕ ನೋಟವನ್ನು ತಾಳಲಾರದೆ, ಪುಲ್ಲಯ್ಯ ಮುಖ ಕೆಳಕ್ಕೆ ಹಾಕಿದ. ಅವನ ಸಮೀಪದಲ್ಲಿ ನಿಂತಿದ್ದ ಅವನ ಆಪ್ತ ಗೆಳೆಯ, "ನಾಚತಿ ಯಾಕೊ? ಮುಖ ಎತ್ತು. ಮುಖ ಎತ್ತಿ ವರದಕ್ಷಿಣೆ ಎಷ್ಟು ಕೊಡ್ತಾರ ಕೇಳು"—ಎಂದು ಹೇಳಿದಾಗ, ಆ ಹೆಂಗಳೆಯರು, "ಕೊಡ್ತೀವಿ. ಆದರ ಈಗ ಅವನ್ನ ಬಚ್ಚಿಟ್ಟೀವಿ"—ಎಂದು ಕೂಗಿದರು.

ಬಜಂತ್ರಿ ಅವರು ತಮ್ಮ ಕೆಲಸ ಮುಂದುವರಿಸಿದ್ದರು. ಪುಲ್ಲಯ್ಯನ ಮದುವೆಯಲ್ಲಿ ಊರಿನವರೆಲ್ಲರೂ ದೊಡ್ಡವರಾಗಿದ್ದರು. ಮದುವೆಯ ನಿಮಿತ್ತ ಮಾತ್ರಕ್ಕೆ ಪುಲ್ಲಯ್ಯನ ಮಾವನಾಗಿದ್ದ ಯಾರೊ ಹಿರಿಯರು ಕರೆದಾಗ, ಪುಲ್ಲಯ್ಯ ಎದ್ದುನಿಂತ. ಆದರೆ, "ಏ ಹುಚ್ಚ ಕೂಡೊ–ಕೂಡು. ಈಗ ಏಳಬ್ಯಾಡ"—ಪುಲ್ಲಯ್ಯನ ಜೊತೆಗಾರರು ಒಟ್ಟಿಗೆ ಹೇಳಿದಾಗ, "ಮತ್ತ ಯಾಕ ಕೂಡಬೇಕು, ಎದ್ದಾಯಿತಲ್ಲ. ಇನ್ನು ಮುಂದ ಹೊರಡಲಿ"—ಎಂದು ಹೆಂಗಸರು ಕೂಗಿಕೊಂಡರು.

ಹುಡುಗರು ತಮ್ಮ ಪಟ್ಟು ಬಿಡಲಿಲ್ಲ. ಪುಲ್ಲಯ್ಯನನ್ನು ಬಲವಂತವಾಗಿ ಮುಖ ವನ್ನು ಪಕ್ಕಕ್ಕೆ ತಿರುಗಿಸಿಕೊಂಡು ಕೂಡುವಂತೆ ಮಾಡಿದರು. ಮುಖ ಗಂಟುಮಾಡಿ ಕೊಂಡು ಕೂಡುವಂತೆ ಪುಲ್ಲಯ್ಯನಿಗೆ ತಿಳಿಸಿ, ತಾವೇ ಗೆದ್ದವರಂತೆ ಹುಡುಗಿಯರತ್ತ ನೋಡಿದರು.

ತುಂಟರಾದ ಹಳ್ಳಿಯ ಹುಡುಗಿಯರು ಸುಮ್ಮನಿದ್ದುದನ್ನು ನೋಡಿ, "ನಾವೆ ಗೆದ್ದವು, ನಾವೆ ಗೆದ್ದವು"—ಎಂದು ಹುಡುಗರು ಕೇಕೆ ಹಾಕತೊಡಗಿದರು.

ಪುಲ್ಲಯ್ಯನ ನಾದಿನಿಯಾಗಿದ್ದ, ಮದುವೆಯಾಗದ ಒಂದು ಹುಡುಗಿ, ಹುಬ್ಬುಗಳನ್ನು ಹಾರಿಸುತ್ತಾ, ಕಣ್ಣುಗಳನ್ನು ಮಿಟುಕಿಸುತ್ತಾ, ಬಿಂಕದಿಂದ ಪುಲ್ಲಯ್ಯನ ಬಳಿ ಬಂದಾಗ, ಅವನ ಪಕ್ಕದಲ್ಲಿ ನಿಂತಿದ್ದ ಯುವಕರು ಬಾಯಲ್ಲಿ ನೀರೂರಿ, ಬಿಟ್ಟ ಕಣ್ಣು ಬಿಟ್ಟುಕೊಂಡು ಅವಳನ್ನೆ ನೋಡಹತ್ತಿದರು.

ಆ ಯುವತಿ ವಯ್ಯಾರದಿಂದ ಮುಂದೆ ಬಂದು, ರಾಗದಿಂದ ಹಾಡಲು ಪ್ರಾರಂಭಿಸಿ ದಾಗ, ಎಲ್ಲರೂ ತುಟಿಪಿಟಕ್ಕೆನ್ನದೆ ಕುಳಿತರು.

"ಭಾವನವರೆ,—ನಿಮಗೆ ಕೋಪವೇಕೆ?
ಕುದುರೆ ತರಲಿಲ್ಲವೆಂಬ ತಾಪವೇಕೆ?
ಇಲ್ಲಿಯೇ ಕುಂಟುನಾಯಿಯುಂಟು, ಏರಬನ್ನಿ—ಹಾರಿಬನ್ನಿ.
ಗಂಧಗಿಂಧ ತರಲಿಲ್ಲವೆಂಬ ಕೋಪವೇಕೆ?
ಇಲ್ಲದ ಈ ಮನಸ್ತಾಪವೇಕೆ?
ಇಲ್ಲಿಯೇ ಆಕಳ ಶೆಗಣೆಯುಂಟು ಹಚ್ಚಿಕೊಳ್ಳಬನ್ನಿ.
ವೀಳ್ಯ ತರಲಿಲ್ಲವೆಂಬ ಕೋಪವೇಕೆ?
ಇಲ್ಲದ ಈ ಬಿಂಕವೇಕೆ?
ಇಲ್ಲಿಯೇ ಅವರೆ ತಪ್ಪಲುಂಟು ತಿನ್ನಬನ್ನಿ—ಹಾರಿಬನ್ನಿ.
ಅಡಿಕೆ ತರಲಿಲ್ಲವೆಂಬ ಕೋಪವೇಕೆ?
ಸಲ್ಲದ ಈ ಜಂಭವೇಕೆ?
ಇಲ್ಲಿಯೇ ಹುಣಿಸೆ ಬೀಜವುಂಟು ತಿನ್ನಬನ್ನಿ—ಎದ್ದುಬನ್ನಿ"

ಎಲ್ಲರೂ ಬಿದ್ದುಬಿದ್ದು ನಗತೊಡಗಿದರು. ಒಬ್ಬರಿಗೊಬ್ಬರು ಅಪಹಾಸ್ಯ ಮಾಡಿ—ವಾದಿಸತೊಡಗಿದರು. ಅಷ್ಟರಲ್ಲಿ, "ಮುಹೂರ್ತದ ವೇಳೆ ಆಯ್ತು. ಲಗೂನ ಬರ್ರಿ—ಅಂತ ಕರೀತಾರ ಪುರೋಹಿತರು"—ಯಾರೊ ಬಂದು ಹೇಳಿದರು. ಪುಲ್ಲಯ್ಯನ ಮಾವನಾಗಿದ್ದ ಹಿರಿಯ, ಅಳಿಯನಿಗೆ ಏನೂ ಕೊಡಲಿಲ್ಲ. ಆದರೂ ಮದುಮಗ ಮಂದಹಾಸದಿಂದ ಮುಂದಡಿ ಇಟ್ಟ.

ಕಟ್ಟೆಯ ಮೇಲೆ ಕುಳಿತಿದ್ದ ನೀಲಿಯ ಅಜ್ಜಿ, ಎಲ್ಲವನ್ನೂ ನೋಡುತ್ತಾ ಕುಳಿತಿದ್ದಳು.

ಗೋಧೂಳಿ ಮುಹೂರ್ತ. ಅಕ್ಷತೆಗಾಗಿ ಬಂದಿದ್ದ ಊರಿನ ಜನರು, ಅಲ್ಲಲ್ಲಿ ಗುಂಪು-ಗುಂಪಾಗಿ ನಿಂತು ಹರಟೆ ಹೊಡೆಯುತ್ತಿದ್ದರು—ನಗುತ್ತಿದ್ದರು. ಮುತ್ತೈದೆಯರ ಸಡಗರವಂತೂ ಹೇಳತೀರದು. ಎಲ್ಲದರಲ್ಲೂ ಅವರದೇ ಸಡಗರ, ಅವರದೇ ಕೂಗಾಟ. ಗಿರಿಜಾ ಮೀಸೆಯುಳ್ಳ, ಮಾಂಸಖಂಡಗಳಿಂದ ತುಂಬಿದ ಜಟ್ಟಿ ಪುಲ್ಲಯ್ಯನ ಮದುವೆ—ಎಲ್ಲರಿಗೂ ಸಂಭ್ರಮದ ಸಂಗತಿಯಾಗಿತ್ತು.

ಲಗ್ನದ ವಿಧಿಗಳು ಮುಗಿದು, ಪುಲ್ಲಯ್ಯ, ನೀಲಿಯ ಕೊರಳಿಗೆ ಮಂಗಳಸೂತ್ರ ಕಟ್ಟಿದ. "ಅಕ್ಕಿಕಾಳು ಹಾಕ್ರಿ"—ಯಾರೊ ಕೂಗಿದರು. ಅಲ್ಲಿ ಸೇರಿದವರೆಲ್ಲ, ನವದಂಪತಿಗಳ ಮೇಲೆ ಅಕ್ಕಿ ಕಾಳು ಹಾಕಿದರು. ಮದುಮಗ, ಮದುಮಗಳನ್ನು ನೋಡಿದ.

ಮುಖಕ್ಕೆ ಅರಶಿಣ, ಅರಶಿಣ ಬಣ್ಣದ ಸೀರೆ, ಕೈತುಂಬ ಬಳೆಗಳು, ಕಿವಿಗೆ ಕೆಂಪು ಓಲೆಗಳು, ಮೂಗಿಗೆ ನತ್ತು, ಕುತ್ತಿಗೆಯಲ್ಲಿ ಕಂಠಿಸರ, ಕಣ್ಣಿಗೆ ಕಾಡಿಗೆ, ಹಣೆಯ ಮಧ್ಯದಲ್ಲಿ ಕುಂಕುಮದ ಬೊಟ್ಟು, ಕಪ್ಪುಕೂದಲು—ಪುಲ್ಲಯ್ಯ, ಠೀವಿಯಿಂದ ಕುಳಿತ. ಮನಸ್ಸಿನಲ್ಲೆ ಸಂತೋಷಪಟ್ಟ.

ಕಟ್ಟೆಯ ಮೇಲೆ ಕುಳಿತ ಮುದುಕಿ, ಸಂತೋಷದಿಂದ ನಗುತ್ತಿದ್ದಳು. ಗಂಗವ್ವ, ತನ್ನ ಹಿರಿಯತನ, ತನ್ನ ಯಜಮಾನಿಕೆ ಅಲ್ಲಿಗೆ ಮುಗಿಯಿತೆಂದು ಹಿಂದೆ ಸರಿದಿದ್ದಳು. ಅಂತೂ ಎಲ್ಲೆಲ್ಲೂ ಸಂತೋಷ–ಸಂಭ್ರಮ ಕಂಡುಬರುತ್ತಿತ್ತು.

ಪುರೋಹಿತರು, ಒಂದು ಬಾಳೆಹಣ್ಣನ್ನು ಸುಲಿದು, ಮದುಮಗನ ಕೈಯಲ್ಲಿ ಕೊಟ್ಟಾಗ, ಬಾಜಾ–ಬಜಂತ್ರಿಯನ್ನು ನಿಲ್ಲಿಸಲಾಯಿತು. ಎಲ್ಲರೂ ಮೌನವಾಗಿ ನಿಂತು ನೋಡತೊಡಗಿದರು.

ಪುಲ್ಲಯ್ಯ, ಪುರೋಹಿತರು ಹೇಳಿದಂತೆ, ತನ್ನ ಕೈಗೆ ಕೊಡಲಾದ ಸುಲಿದ ಬಾಳೆ ಹಣ್ಣಿನಲ್ಲಿ ಅರ್ಧ ಕಚ್ಚಿ ತಿಂದು, ಪುರೋಹಿತರು ಹೇಳಿಕೊಟ್ಟಂತೆ—"ಇಂದಿನಿಂದ ನನಗೆ ಬರುವ ಆದಾಯದಲ್ಲಿ ಅರ್ಧ ನಿನಗೆ ಕೊಡುತ್ತೇನೆ"—ಎಂದು ಹೇಳಿ, ಉಳಿದ ಅರ್ಧ ಹಣ್ಣನ್ನು ಹೆಂಡತಿಯ ಬಾಯಲ್ಲಿಟ್ಟ.

ಆ ಮೇಲೆ ಮದುಮಗಳೂ ಸಹ, ಪುರೋಹಿತರು ಹೇಳಿಕೊಟ್ಟಂತೆ—"ಇಂದಿನಿಂದ. ನಿಮ್ಮ ಕೈಹಿಡಿದ ಈ ಶುಭ ಗಳಿಗೆಯಿಂದ, ನನ್ನವರಿಂದಾಗಲೀ, ನನ್ನ ಇತರ ಬಂಧುಗಳಿಂದಾಗಲೀ ನನಗೆ ದೊರೆಯುವ ಎಲ್ಲವನ್ನೂ ನಿಮಗೆ ಅರ್ಪಿಸುತ್ತೇನೆ"—ಎಂದು ಹೇಳಿ. ತಾನು ಅರ್ಧ ಕಚ್ಚಿ ತಿಂದ ಬಾಳೆಹಣ್ಣನ್ನು, ಪುಲ್ಲಯ್ಯನ ಬಾಯಲ್ಲಿಟ್ಟಳು.

ಪುರೋಹಿತರು, ಮದುಮಕ್ಕಳನ್ನು ಎಬ್ಬಿಸಿದರು. ಆದರೆ, ಪುಲ್ಲಯ್ಯನ ಮನಸ್ಸಿನಲ್ಲಿ. ಅವರು ಹೇಳಿಕೊಟ್ಟ ಮಾತುಗಳು ಪ್ರತಿಧ್ವನಿಸುತ್ತಿದ್ದವು. ಆ ಮಾತಿನಲ್ಲಿರುವ ಸತ್ಯದ ಅರಿವಾಗಿ, ಅವನು ಪದೆ ಪದೆ ಹೆಂಡತಿಯನ್ನು ನೋಡತೊಡಗಿದ. ಇದುವರೆಗೆ ತನಗಿರದಿದ್ದ ಪವಿತ್ರ ಬಂಧನ, ಈಗ ತನ್ನ ಪಾಲಿನದಾಯಿತೆಂಬ ತೃಪ್ತಿ ಅವನಲ್ಲಿತ್ತು. ನೀಲಿ ಈಗ, ಈ ಮುಂಚೆಗಿಂತ ಹೆಚ್ಚು ಚೆಲುವೆಯಾಗಿ ಕಂಡಳು. ಅವನ ಕಣ್ಣಿನಲ್ಲಿ ಇದುವರೆಗಿದ್ದ ಕಾಮ ಮರೆಯಾಗಿ, ಪ್ರೇಮ ಲಾಸ್ಯವಾಡುತ್ತಿತ್ತು. ಆ ನಿಮಿಷದಲ್ಲಿ ಅವನ ಆವೇಶ. ಅವನ ಜಿದ್ದು, ಅವನ ಪಠಮಾರಿತನ—ತಣ್ಣಗಾಗಿಹೋದವು. ಅವನು, ಪೆಚ್ಚಿನ ಅಭಿಮಾನದಿಂದ ತನ್ನ ಹೆಂಡತಿಯ ಮುಖ ನೋಡಿದ.

ಮದುವೆಯ ಎಲ್ಲ ವಿಧಿಗಳು ಮುಗಿದು, ನವದಂಪತಿಗಳು ಮೆರವಣಿಗೆ ಹೊರಟರು.

## [6]

ಮರುದಿನ ಬೆಳಿಗ್ಗೆ, ಬಾಯಲ್ಲಿ ಬೇವಿನ ಕಡ್ಡಿಯನ್ನು ಇಟ್ಟುಕೊಂಡು ಹುಲ್ಲುಜಗ್ಗುತ್ತಾ ನಿಂತಿದ್ದ ಪುಲ್ಲಯ್ಯ. ಎದುರಿಗೆ ವಂಶಧಾರಾನದಿ ಸೌಮ್ಯವಾಗಿ ಹರಿಯುತ್ತಿತ್ತು. ಎಳೆ ಬಿಸಿಲಿಗೆ ಮೈಯೊಡ್ಡಿ ನಿಂತಿದ್ದ ಪೈರು ತಂಗಾಳಿಯಲ್ಲಿ ತೂಗಾಡುತ್ತಿತ್ತು. ದನಕರುಗಳು

ಆಗಲೇ ಮೇಯಲು ಹೊರಟಿದ್ದವು. ನೀರಿಗೆ ಹೊರಟಿದ್ದ ಹೆಂಗಳೆಯರು, ಪುಲ್ಲಯ್ಯ ನನ್ನು ನೋಡಿ, ಮುಗುಳ್ನಗುತ್ತ ಹೋಗುತ್ತಿದ್ದರು.

ಪುಲ್ಲಯ್ಯ, ಇದೆಲ್ಲವನ್ನೂ ನೋಡುತ್ತಿದ್ದನಾದರೂ, ಅವನ ಮನಸ್ಸು ಮಾತ್ರ ನೀಲಿಯ ಬಗ್ಗೆ ಯೋಚಿಸುತ್ತಿತ್ತು. ರಾತ್ರಿ, ಮೆರವಣಿಗೆ ಹೊರಟಿದ್ದಾಗ, ನೀಲಿ ಒಂದು ಸಲವಾದರೂ ಮುಖ ಎತ್ತಿರಲಿಲ್ಲ. ಅವಳ ಕಾಡಿಗೆ ಹಚ್ಚಿದ ಕಣ್ಣು ಗಳಲ್ಲಿ ಕಣ್ಣಿಟ್ಟು ನೋಡಬೇಕೆಂಬ ಆಶೆ ಪುಲ್ಲಯ್ಯನಿಗಿತ್ತಾದರೂ ಅದಕ್ಕೆ ಅವಕಾಶ ಸಿಕ್ಕಿರಲಿಲ್ಲ.

ಅದೇ ಯೋಚನೆಯಲ್ಲಿ, ನದಿಯಲ್ಲಿಳಿದು ಮುಖ ತೊಳೆದುಕೊಂಡು, ದಾಪುಗಾಲು ಹಾಕುತ್ತಾ ಮನೆಗೆ ಬಂದ. ಹಾಗೆ ಬಂದವನೇ ನೀಲಿಯ ಕೈ ಹಿಡಿದುಕೊಳ್ಳಬೇಕೆಂದು ಬಯಸಿದ. ಆದರೆ, ಗಂಗವ್ವ ಅಲ್ಲೆ ಕುಳಿತಿದ್ದರಿಂದ ಅವನ ಬಯಕೆ, ಬಯಕೆಯಾಗಿಯೇ ಉಳಿಯಿತು.

ಅಂದೆಲ್ಲ, ಬರೀ ಆರಾಟಪಡುವುದೇ ಆಯಿತು. ಯಾರು ಬಂದರೂ, ಯಾರು ಕರೆದರೂ, ಪುಲ್ಲಯ್ಯ ಮನೆಯಿಂದ ಹೊರಡಲೇ ಇಲ್ಲ. ಹೇಗಾದರೂ ಮಾಡಿ, ನೀಲಿ ಒಬ್ಬಳೇ ಇದ್ದಾಗ ಅವಳನ್ನು ಹಿಡಿಯಬೇಕೆಂದು ಹೊಂಚುಹಾಕಿ ಕುಳಿತಿದ್ದ. ನೀಲಿ, ಅಂಗಳದಲ್ಲಿ ಒಬ್ಬಳೆ ಇದ್ದುದನ್ನು ನೋಡಿ, ಅವಳನ್ನು ಹಿಡಿಯಬೇಕೆಂದು ಪುಲ್ಲಯ್ಯ ಹೊರಡುವ ವೇಳೆಗೆ ಹಕ್ಕಿ ಹಾರಿಹೋಯಿತು. ಅವಳ ಹಿಂದೆ ಹೋಗಿದ್ದಲ್ಲಿ, ಅವಳು ಕೈಗೆ ಸಿಗಬಹುದಾಗಿತ್ತು. ಆದರೆ, ಅಲ್ಲಿ ಗಂಗವ್ವ ಕುಳಿತಿದ್ದಳು.

ಅಂದು ಮಧ್ಯಾಹ್ನ, ಎಲ್ಲರ ಊಟವಾಗಿ, ಒಬ್ಬೊಬ್ಬರು ಒಂದೊಂದು ಮೂಲೆ ಹಿಡಿದು ಮಲಗಿದ್ದರು. ನೀಲಿ, ಏಕೋ ಏನೋ ಅಂಗಳಕ್ಕೆ ಬಂದಳು. ಗಿಣಿ ಸಿಕ್ಕಿತೆಂದು ಪುಲ್ಲಯ್ಯ ಏಳುವುದರೊಳಗಾಗಿ, ಅವಳು ಆಚೆಯ ಕೋಣೆ ಹೊಕ್ಕು, ತನ್ನ ಅಜ್ಜಿಯ ಬಳಿ ಹೋಗಿ ಕುಳಿತಳು. ನೀಲಿ, ಈ ರೀತಿ ತನ್ನ ಮುಂದೆ ಸುಳಿದುಹೋಗುತ್ತಿರುವುದನ್ನು ನೋಡಿ, ಅವಳು ತನ್ನೊಡನೆ ಸರಸವಾಡುತ್ತಿರುವಂತೆ ಭಾಸವಾಯಿತು ಅವನಿಗೆ.

"ಮೀಸೆ ಹೊತ್ತ ಗಂಡಸು ನಾನು. ನಾನ್ಯಾಕೆ ನಾಚಿಕೊಳ್ಳಬೇಕು...... ಕೈಗೆ ಸಿಗಲಿ, ಅವಳನ್ನು ಆಟಆಡಿಸದಿದ್ದರೆ ನಾನು ಗಂಡಸು ಅಲ್ಲವೇ ಅಲ್ಲ"—ಎಂದುಕೊಂಡ.

ಅವನು ಹಾಗೆ ಅಂದುಕೊಳ್ಳುತ್ತಾ ಕುಳಿತಿರುವಾಗಲೇ ಕತ್ತಲಾಯಿತು. ಮನಸ್ಸಿನಲ್ಲಿ ಆ ಮಾತುಗಳನ್ನು ಮನನಮಾಡುತ್ತಿರುವಾಗಲೇ, ಎಲ್ಲರ ಊಟವಾಯಿತು. ಆದರೂ, ಮನೆಯ ತುಂಬ ತುಂಬಿಕೊಂಡಿದ್ದ ಊರ ಹೆಂಗಸರು ಮಾತ್ರ, ಕದಲಲಿಲ್ಲ.

ಪ್ರಸ್ತದ ಗಡಿಬಿಡಿ ಪ್ರಾರಂಭವಾಯಿತು. ಊರಿನ ಮುತ್ತೈದೆಯರು ವಿವಿಧ ಭಕ್ಷ್ಯ ಗಳನ್ನು ಒಯ್ದು, ಕೊಠಡಿಯಲ್ಲಿ ಇಟ್ಟು ಬಂದರು. ಎಲ್ಲ ಸುಮಂಗಲೆಯರದೆ ಗಡಿಬಿಡಿ—ಎಂದ ಮೇಲೆ, ಸಂಭ್ರಮಕ್ಕೆ, ಸರಸ–ಸಲ್ಲಾಪಗಳಿಗೆ ಮಿತಿ ಎಲ್ಲಿ? ಹೆಚ್ಚು ಗುರುತು–ಪರಿಚಯವಿದ್ದವರು, ಪುಲ್ಲಯ್ಯನನ್ನು ನೋಡಿ ನಕ್ಕರು, ಕೀಟಲೆ ಮಾಡು

ತ್ತಿದ್ದರು. ಆದರೆ ಪುಲ್ಲಯ್ಯ ಮಾತ್ರ ತಾನು ಗಂಡಸೆಂಬ ಪೌರುಷದಿಂದ, ಠೀವಿಯಿಂದ ಕುಳಿತಿದ್ದ.

ಸುಕನ್ಯ, ಪುಲ್ಲಯ್ಯನ ಅತ್ತಿಗೆಯಂತಿದ್ದಳು. ಸ್ವಲ್ಪ ಕಪ್ಪಾದರೂ ಬಿಂಕದ ಹೆಣ್ಣು. ಮೂರು ಮಕ್ಕಳ ತಾಯಿಯಾಗಿದ್ದ ಅವಳಿಗೆ, ಆಗಲೇ ಮುವತ್ತು ದಾಟಿತ್ತು. ಅವಳೇ ಮುಂದೆ ಬಂದು ನೀಲಿಯ ಕೈಯನ್ನು ಪುಲ್ಲಯ್ಯನ ಕೈಯಲ್ಲಿಟ್ಟು, ಅವರಿಬ್ಬರನ್ನೂ ಪ್ರಸ್ತದ ಕೊಠಡಿಗೆ ಕರೆದೊಯ್ದಳು. ಹಿಂದೆಯೇ ಬಂತು ಹೆಣ್ಣುಮಕ್ಕಳ ಗುಂಪು. ನವದಂಪತಿಗಳು, ನವಾರಿನ ಮಂಚದ ಮೇಲೆ ಕುಳಿತಾಗ, ಅವರು ಅದರಲ್ಲಿ ಕುಸಿದು ಬಿದ್ದಂತಾದಾಗ, ಎಲ್ಲರೂ ಖೊಳ್ಳನೆ ನಕ್ಕರು. ಮದುವೆಯಾದ ಹೆಂಗಸರು, ನೀಲಿಗೆ ಉಪದೇಶ ಕೊಟ್ಟರು. ಒಬ್ಬರಾದ ಮೇಲೆ ಒಬ್ಬರು ಬಂದು, ಅವಳ ಕಿವಿಯಲ್ಲಿ ಏನೇನೋ ಹೇಳುತ್ತಿದ್ದರು. ನೀಲಿ ನಾಚಿಕೊಂಡು ಮುದುಡಿ ಕುಳಿತಿದ್ದಳು.

ಪುಲ್ಲಯ್ಯ, ತಲೆ ಕೆಳಗೆ ಹಾಕಿಕೊಂಡು ಸುಮ್ಮನೆ ಕುಳಿತಿದ್ದ. ಸುಕನ್ಯ ಎಲ್ಲರನ್ನೂ ಹೊರಗಟ್ಟಿದಾಗ, ಪುಲ್ಲಯ್ಯ, ತನ್ನ ಕೈಯಲ್ಲಿದ್ದ ದುಡ್ಡನ್ನು ಅವಳಿಗೆ ಕೊಟ್ಟ. ಅವಳು, ನಗುತ್ತಲೇ ಅದನ್ನು ಪಡೆದು, "ಜೋಕೆ...... ಹೆಣ್ಣನ್ನ ನೋಡಿಕೊಳ್ಳುವುದು ಗರಡಿ ಒಳಗ ಲಾಗಾಹಾಕಿದಷ್ಟು ಸುಲಭವಲ್ಲ. ಹೆಣ್ಣನ್ನ ಸಾವಿರ ಕಣ್ಣುಗಳಿಂದ ನೋಡಬೇಕಾಗ್ತದ. ಅದರಲ್ಲೂ, ಇವಳು ತಾಯಿಯಿಲ್ಲದ ಹುಡುಗಿ. ತಾಯಿಯಿಲ್ಲದ ಹುಡುಗರಿಗೆ, ಒರಟುತನ ಹಿಡಿಸುವುದಿಲ್ಲ. ಅವಳಿಗೆ, ಈಗ ನೀನೆ ತಾಯಿ, ನೀನೆ ತಂದೆ, ನೀನೆ ಗಂಡ, ನೀನೆ ಸರ್ವಸ್ವ. ಅವಳು ನಗುತ್ತಾ ಸುಖವಾಗಿದ್ದಲ್ಲಿ, ನಿನಗೂ ಸುಖ......"

ಸುಕನ್ಯ ಹೊರಟುಹೋದಳು. ಪುಲ್ಲಯ್ಯ ಒಂದು ನಿಮಿಷ, ಕೋಣೆಯಿಂದ ದೂರ ಹೋಗುತ್ತಿದ್ದ ಅವಳನ್ನೆ ನೋಡುತ್ತಾ ನಿಂತ. ಸುಕನ್ಯ ಹೇಳಿದ ಮಾತುಗಳನ್ನು ಅರ್ಥಮಾಡಿಕೊಂಡಿದ್ದ ಪುಲ್ಲಯ್ಯನ ಕಣ್ಣುಗಳಲ್ಲಿ ನೀರಾಡಿತು. ಬಾಗಿಲು ಹಾಕಿ ಸ್ವಲ್ಪ ಹೊತ್ತು ಹಾಗೆಯೇ ನಿಂತಿದ್ದ.

"ಹೆಣ್ಣನ್ನು ನೋಡಿಕೊಳ್ಳುವುದು, ಗರಡಿಯೊಳಗ ಲಾಗಾಹಾಕಿದಷ್ಟು ಸುಲಭವಲ್ಲ ......" ಈ ಮಾತನ್ನೆ ಅಂದುಕೊಳ್ಳುತ್ತಾ ಪುಲ್ಲಯ್ಯ ನೀಲಿಯನ್ನು ನೋಡಿದ. ಹಾಗೆಯೇ ಹೋಗಿ, ಅವಳನ್ನು ಎತ್ತಿಕೊಂಡು ಅಪ್ಪಿಕೊಳ್ಳಬೇಕೆಂಬ ಬಯಕೆ ಉತ್ಕಟವಾಗಿತ್ತಾದರೂ, ಸುಮ್ಮನೆ ಹೋಗಿ ಅವಳ ಬಳಿ ಕುಳಿತ.

ಮೂಲೆಯಲ್ಲಿದ್ದ ಕರಿಯ ಪೆಟ್ಟಿಗೆಯ ಮೇಲೆ, ಪ್ರಣತಿಯಲ್ಲಿ ದೀಪ ಹಚ್ಚಿಡಲಾಗಿತ್ತು. ಕೊಠಡಿಯ ಹೊರಗಡೆ, ಇನ್ನೂ ಗಡಿಬಿಡಿ ನಡೆದೇ ಇತ್ತು. ಪುಲ್ಲಯ್ಯ ದೀಪ ಆರಿಸಬೇಕೆಂದುಕೊಂಡನಾದರೂ, ಮನಸ್ಸು ಅದಕ್ಕೊಪ್ಪಲಿಲ್ಲ.

ಪುಲ್ಲಯ್ಯನಿಗೆ ಎಲ್ಲವೂ ಹೊಸದು. ವಯಸ್ಸಾಗಿದ್ದರೂ ವನಿತೆಯರ ವಿಷಯಗಳನ್ನು ಅರಿಯದ ಮುಗ್ಧನಾಗಿದ್ದ. ಹೆಣ್ಣನ್ನು ಒಲಿಸಿಕೊಳ್ಳುವುದು ಸುಲಭವೇನಲ್ಲವೆಂಬ ಅರಿವು ಮಾತ್ರ ಅವನಲ್ಲಿ ಮೂಡಿತ್ತು.

ಮಂಚದಿಂದ ಎದ್ದುಬಂದಿದ್ದ ಪುಲ್ಲಯ್ಯ, ಸರಸರನೆ ಹೋಗಿ, ನೀಲಿಯ ಕೈಹಿಡಿದು ಎಳೆದ. ಆದರೆ, ಅವಳು ಕೊಸರಿಕೊಂಡಳು. ಅವಳ ಗಲ್ಲ ಹಿಡಿದು ಮುಖ ಎತ್ತಲು ಪ್ರಯತ್ನಿಸಿದಾಗ, ನೀಲಿ, ಮೊಳಕಾಲುಗಳನ್ನು ಮೇಲಕ್ಕೆತ್ತಿಕೊಂಡು ಮುಖ ಮುಚ್ಚಿಕೊಂಡಳು.

ಪುಲ್ಲಯ್ಯನಿಗೆ ಇದಾವುದೂ ಸರಿಬರಲಿಲ್ಲ. ತನ್ನಂತಹ ಮೀಸೆ ಹೊತ್ತ ಗಂಡಸು ಕೈಹಿಡಿದಾಗ, ಅವಳು ಕೈಕೊಸರಿಕೊಳ್ಳುವುದು, ಮುಖ ಮುಚ್ಚಿಕೊಳ್ಳುವುದು ಅವನಿಗೆ ಸರಿತೋರಲಿಲ್ಲ. "ಮುಂಜಾವಿನಿಂದ ಇವಳು ಹೀಗೇ ಮುಖ ಮುಚ್ಚಿಕೊಂಡು ಕೂತಿದಾಳೆ. ಇವಳ ಮನಸ್ಸಿನಲ್ಲಿ ಇರೋದಾದರೂ ಏನೊ ತಿಳಕೊಬೇಕು—ಕಡೀಗೆ, ನಾನು ಜಿದ್ದಿನ ಮನುಷ್ಯ. ಜಿದ್ದು–ಜಿದ್ದೆ......" ಎಂದು ತನ್ನಷ್ಟಕ್ಕೆ ಅಂದುಕೊಂಡ ಪುಲ್ಲಯ್ಯ.

ಮೂಲೆಯಲ್ಲಿದ್ದ ಪೆಟ್ಟಿಗೆಯ ಮೇಲೆ ಆತ, ಮಂಚದ ಮೇಲೆ ಅವಳು—ಹಾಗೆಯೇ ಅದೆಷ್ಟು ಹೊತ್ತು ಕುಳಿತಿದ್ದರೋ ಏನೊ?

ಹೊರಗಿನ ಗದ್ದಲ ಕಡಿಮೆಯಾಗಿತ್ತು. ಮದುವೆಯ ಓಡಾಟದಲ್ಲಿ ದಣಿದದ್ದರಿಂದ ಎಲ್ಲರೂ ತಮ್ಮ ತಮ್ಮ ಮನೆಗೆ ಹೋಗಿಬಿಟ್ಟಿದ್ದರು.

ನೀಲಿ, ನಿಧಾನವಾಗಿ ತಲೆ ಎತ್ತಿ, ಒಮ್ಮೆ ಬಾಗಿಲ ಕಡೆ ನೋಡಿದಳು. ಆ ಮೇಲೆ ಪೆಟ್ಟಿಗೆಯ ಮೇಲೆ ಕುಳಿತಿದ್ದ ಗಂಡನತ್ತ ಮಿಂಚಿನ ನೋಟ ಬೀರಿದಳು.

ಪುಲ್ಲಯ್ಯ ಮಾತ್ರ ಅವಳನ್ನು ನಿರ್ಲಕ್ಷಿಸಿದ. ಅವಳು ತಾನಾಗಿ ಬಂದು ಅಂಗಲಾಚಿ ಬೇಡಿಕೊಳ್ಳಬೇಕೆಂಬ ಅಹಂಭಾವದಿಂದ, ಎದುರಿಗಿದ್ದ ದೀಪವನ್ನೇ ನೋಡುತ್ತಾ ಕುಳಿತಿದ್ದ.—ಅವನ ಮನಸ್ಸು, ಆ ಬೆಳದಿಂಗಳು ತುಂಬಿದ ರಾತ್ರಿ ನಡೆದ ಘಟನೆಗಳನ್ನು ಮೆಲುಕುಹಾಕುತ್ತಿತ್ತು. ......ಹಾಲಿನಂತಹ ಬೆಳದಿಂಗಳು...... ಹೂವು ಬಿಟ್ಟ ಹುಣಿಸೆ ಮರ...... ಉತ್ಸಾಹದಿಂದ ಕುಣಿಯುತ್ತಿದ್ದ ಯುವತಿಯರ ತಂಡ...... ನೀಲಿಯ ಕೋಮಲ ಕಂಠ...... ಚಂದಮಾಮಾ...... ಚಂದಮಾಮಾ...... ನೀಲಿ ......ನೀಲಿ...... ಅಯ್ಯೋ ಕಳ್ಳ.... ಕಳ್ಳನೊ–ರಾಜಕುಮಾರನೊ ಸರಿಯಾಗಿ ನೋಡು...... ಹಾ...... ಅಯ್ಯೋ ಕೈ ಕಡಿದಳು...... ನಾಚಿಕೆ ಇಲ್ಲದವನು...... ನಾಚಿಕೆ, ನಾಚಿಕೆ ಇರಬೇಕಾದುದು ಯಾರಿಗೆ—ನನಗೊ—ಅವಳಿಗೊ?

ಧಿಗ್ಗನೆದ್ದ ಪುಲ್ಲಯ್ಯ. ಹಾಗೆಯೇ ಹೋಗಿ ನೀಲಿಯ ಪಕ್ಕದಲ್ಲಿ ಕುಳಿತ. "ಏ ನೀಲಿ, ಇಲ್ನೋಡು" ಎಂದು ಕರೆದ. ನೀಲಿ, ಮುಖ ಎತ್ತಲಿಲ್ಲ, ತಿರುಗಿ ಅವನನ್ನು ನೋಡಲೂ ಇಲ್ಲ. ಪುಲ್ಲಯ್ಯ ಅವಳ ಎದುರು ನಿಂತು ಮೀಸೆ ತಿರುವಿಕೊಳ್ಳಲು ಪ್ರಾರಂಭಿಸಿದಾಗ ಮಾತ್ರ, ನೀಲಿ ಅವನನ್ನು ನೋಡಿದಳು. ಪುಲ್ಲಯ್ಯ ಗರ್ವದಿಂದ ನಕ್ಕ.

"ನಾನೂ ಅಂದರ ಏನಂತ ತಿಳಿದೀದಿ...... ಅಂ?"

ಈ ಸಲ ಮಾತ್ರ, ನೀಲಿ ಮುಖವನ್ನು ಮತ್ತಷ್ಟು ಮೇಲಕ್ಕೆತ್ತಿ ಅವನನ್ನು ನೋಡಿ

ದಳು. ಪುಲ್ಲಯ್ಯ ಸರಕ್ಕನೆ ಅವಳ ಗಲ್ಲ ಹಿಡಿದು, ಮುಖ ಮೇಲೆತ್ತಿ—"ನೋಡು. ಸರಿಯಾಗಿ ನೋಡು...... ನಾನು ಕಳ್ಳನಾಂಗ ಕಾಣ್ತೆನೇನು?"

ನೀಲಿ, ಉತ್ತರ ಕೊಡಲಿಲ್ಲ.

ಪುಲ್ಲಯ್ಯ, ಅಹಂಕಾರದಿಂದ ನಗುತ್ತಾ, ಮೀಸೆ ತೀಡಿಕೊಳ್ಳುತ್ತಾ, "ನನ್ನ ಜಿದ್ದು...... ನಾನು ಸಾಧಿಸಿಕೊಂಡೆ...... ನಿನ್ನ ಹಿಡಕೊಂಡೆ"—ಎಂದ.

ನೀಲಿ, ಒಮ್ಮೆ ತನ್ನ ಗಂಡನ ಮುಖ ನೋಡಿ, ತಲೆ ತಗ್ಗಿಸಿ ಮುಗುಳ್ನಕ್ಕಳು.

ಪುಲ್ಲಯ್ಯ ಎದ್ದು ನಿಂತು, ನೀಲಿಯ ಮುಖ ಎತ್ತಿ, ಅವಳ ಕಣ್ಣುಗಳಲ್ಲಿಯೇ ತನ್ನ ದೃಷ್ಟಿ ನೆಟ್ಟು, "ನಾಚಿಕೆ ಇಲ್ಲದವನು ಅಂದೆಯಲ್ಲ...... ಈಗ ಹೇಳು...... ನಾಚಿಕೆ ನಿನಗೋ...... ನನಗೊ"—ಎಂದು ನಗತೊಡಗಿದ.

ಗಂಡನ ನಗು ನಿಲ್ಲುವ ವರೆಗೂ, ಅವನ ಮುಖವನ್ನೆ ನೋಡುತ್ತಿದ್ದ ನೀಲಿ, ಒಂದು ಮಾತೂ ಆಡಲಿಲ್ಲ. "ಸೋತಾಳಲ್ಲ, ಇನ್ನೇನು ಮಾತಾಡ್ತಾಳ......" ಪುಲ್ಲಯ್ಯ ತನ್ನಷ್ಟಕ್ಕೆ ತಾನು ಸಮಾಧಾನಪಟ್ಟುಕೊಂಡ.

ನೀಲಿ, ತನ್ನಷ್ಟಕ್ಕೆ ತಾನು ನಗು ಸೂಸಿದಾಗ, ಅವಳನ್ನು ನೋಡಿದ ಪುಲ್ಲಯ್ಯ ದಂಗು ಬಡಿದು ನಿಂತ.

ನೀಲಿ, ಈ ಸಲ ಕಣ್ಣಗಲಿಸಿ ತನ್ನ ಗಂಡನನ್ನು ನೋಡಿ ನಗಲಾರಂಭಿಸಿದಳು. ಪುಲ್ಲಯ್ಯ, ಪೆಚ್ಚುಪೆಚ್ಚಾಗಿ, ಅವಳನ್ನೆ ನೋಡುತ್ತಾ ನಿಂತ. ನೀಲಿ ಮುಖ ಕೆಳಗೆ ಹಾಕಿ ಮತ್ತಷ್ಟು ನಕ್ಕಳು.

ಹಾಗೆ ನಗುತ್ತಲೆ, "ಆಯ್ತು, ನಾನು ಸೋತೆ—ನೀನು ಗೆದ್ದಿ"—ಎಂದು ಹೇಳಿದಾಗ, ಪುಲ್ಲಯ್ಯನಿಗೆ ಅದನ್ನು ನಂಬಲಾಗಲಿಲ್ಲ.

ನೀಲಿ, ತಲೆಯ ಮೇಲಿನ ಸೆರಗನ್ನು ತೆಗೆದು ಎದ್ದು ನಿಂತಳು. ಹಾಗೆಯೇ ಎರಡು ಹೆಜ್ಜೆ ಮುಂದಿಟ್ಟು, ಹಣತೆಯಲ್ಲಿನ ಬತ್ತಿಯನ್ನು ಎಳೆದು, ಬೆಳಕನ್ನು ಮಂದ ಮಾಡಿ—ಮತ್ತೆ ಮಂಚದ ಮೇಲೆ ಕುಳಿತಳು.

"ನೀನು ಹೇಳೋದೆಲ್ಲ ಹೇಳಿಯಾಯಿತೆ?"—ಎಂದು ಗಂಡನನ್ನು ಕೇಳಿದಳು ನೀಲಿ.

"ಹುಂ...... ನನಗೇನು...... ಮೀಸೆ ಹೊತ್ತ ಗಂಡಸು...... ಹೌದು, ನನಗ ಅಹಂಕಾರ ಹೆಚ್ಚು, ಅಹಂಭಾವ ಹೆಚ್ಚು...... ನಮ್ಮ ವಂಶಾನಾ ಅಂಥಾದು.—ನಾಚಿಕೆ ಇಲ್ಲದವನು ಅಂದೆಲ್ಲ—ಈಗ ಹೇಳು—ನಾಚಿಕೆ ಯಾರಿಗೆ, ನನಗೊ ನಿನಗೊ?" ಪುಲ್ಲಯ್ಯ, ನೀಲಿಯ ಪಕ್ಕದಲ್ಲಿ ಕುಳಿತುಕೊಳ್ಳುತ್ತಾ ಕೇಳಿದ. ಬೇರೆಡೆ ಮುಖ ಮಾಡಿ ಕುಳಿತಿದ್ದ ಗಂಡನ ಭುಜದ ಮೇಲೆ ನೀಲಿ ಕೈಹಾಕಿದಾಗಲೂ ಕೂಡ, ಅವನು ಮುಖ ತಿರುಗಿಸಲಿಲ್ಲ.

ನೀಲಿ, ಅವನ ಭುಜದ ಮೇಲೆ ತಲೆ ಇಟ್ಟು, "ನೋಡು, ನೀನು ಅಂದು ಮಾಡಿದ್ದು

ಸರಿಯೋ–ತಪ್ಪೋ—ಅಂತ ಎಂದಾದರೂ ಯೋಚಿಸಿದಿಯಾ?"—ಎಂದು ನಿಧಾನವಾಗಿ ಕೇಳಿದಳು.

"ಯಾಕ......? ಅದರೊಳಗ ತಪ್ಪೇನದ."

"ಅದರೊಳಗ ನಿನ್ನದೇನೂ ತಪ್ಪಿಲ್ಲ. ಆದರ, ನೀನು ನನಗ ಮಾಡಿದ್ಹಾಂಗ, ಗುರುತು–ಪರಿಚಯ ಇಲ್ಲದವರು ಯಾರಾದರೂ ನಿನ್ನ ತಂಗಿಗೆ ಮಾಡಿದ್ದರ ನಿನಗೇನು ಅನ್ನಸ್ತಿತ್ತು? ಅದು ಹೋಗಲಿ, ಯಾವನೋ ಬಂದು, ನನ್ನ ಜತಿ ನೀನು ನಡಕೊಂಡ ಹಾಂಗ ನಡಕೊಂಡು, ನಾನು ಅವನಿಗೆ ಬಲಿ ಆಗಿದ್ದರ, ಇವತ್ತು ನನ್ನ ಶೀಲ, ನನ್ನ ಸ್ತ್ರೀತ್ವ ಉಳಿತಿತ್ತೇನು? ಒಂದು ಒಪ್ಪೊತ್ತಿಗೆ ನನಗ ಹಾಗೇನಾದರೂ ಆಗಿದ್ದಲ್ಲಿ, ಅದು ನಿನಗ ತಿಳಿದಿದ್ದಲ್ಲಿ, ನೀನು ಏನು ಮಾಡ್ತಿದ್ದಿ ಹೇಳು"—ಎಂದು ನೀಲಿ ಕೇಳಿದಾಗ, ಪುಲ್ಲಯ್ಯ ಅವಳ ಮುಖ ನೋಡಿದ.

ನೀಲಿ, ಅವನ ದೇಹಕ್ಕೆ ತನ್ನ ದೇಹವನ್ನು ಒರಗಿಸಿ, ಆತನ ಮೀಸೆಗಳಲ್ಲಿ ಕೈಯಾಡಿಸುತ್ತಾ—"ನೋಡು, ನಾನು ನಿನ್ನ ಕಣ್ಣಿಗೆ—ಅಷ್ಟೇ ಯಾಕೆ—ಈ ಲೋಕದ ಕಣ್ಣಿಗೆ ಮಣ್ಣೆರಚಬಹುದು—ಮೋಸ ಮಾಡಬಹುದು. ಆದರ, ದೇವರಿಗೆ ಮೋಸ ಮಾಡಲಾರೆ. ನಮ್ಮ ಒಳ್ಳೆಯತನ, ನಮ್ಮ ಕೆಟ್ಟತನ ನೋಡೊ ದೇವರು ಮ್ಯಾಲಿದ್ದಾನೆಂಬೊದನ್ನ ಅರಿತು ಸನ್ಮಾರ್ಗದಲ್ಲಿ ನಡೆಯಲು ನಮಗಾಗದಿದ್ದರ, ನಾವು ಬದುಕಿದ್ದು, ಮನುಷ್ಯರಾಗಿ ಹುಟ್ಟಿದ್ದು ಏನು ಫಲ?"

ತಂಪಾದ ವಾತಾವರಣ, ನೆಮ್ಮದಿ ನೀಡುವ ಮಾತುಗಳು. ಹುಟ್ಟಿದ ಮನೆಯಲ್ಲಿ ಹಿಡಿ ಹಿಟ್ಟಿಗಾಗಿ ಏನೆಲ್ಲ ಕಷ್ಟಗಳನ್ನು ಅನುಭವಿಸಿದಳು. ಯೌವ್ವನವು ಮೈಏರಿ ಬಂದಾಗ, ಅದರ ಭಾರಕ್ಕೆ ವಾಲುತ್ತಾ, ಉಲಿಯುತ್ತಾ, ಗೆಳತಿಯರ ನಡುವೆ ಹಾಯಾಗಿ ಬೆಳೆದಳು. ಮದುವೆಯ ಮಂಟಪದಲ್ಲಿ, ಏನೂ ತಿಳಿಯದ ಮುಗ್ಧೆಯಂತೆ, ನಾಚಿಕೆಯಿಂದ ಮುದ್ದೆಯಾಗಿದ್ದಳು. ಆದರೆ, ಈಗ, ಹೆಂಡತಿಯಾಗಿ, ಗರತಿಯಾಗಿ, ಗಂಡನ ಕಣ್ಣು ತೆರೆದಳು, ನೀಲಿ.

ಪುಲ್ಲಯ್ಯನ ಹಠ, ಜಿದ್ದು, ಆಗಲೇ ಕರಗಿ, ನೀಲಿಯ ಬಗ್ಗೆ ಅವನಲ್ಲಿ ಹೆಚ್ಚಿನ ಸಹಾನುಭೂತಿ ಮೂಡಿತ್ತು. ನೀಲಿ, ಒಂದು ಪವಿತ್ರ ಮೂರ್ತಿಯಂತೆ ಕಂಡಳು. ಅವಳ ಮಾತಿನಲ್ಲಿನ ಸತ್ಯವನ್ನು ಅರಿತುಕೊಂಡ ಪುಲ್ಲಯ್ಯ, "ಹೌದು...... ನನ್ನದೇ ತಪ್ಪು...... ನಾನು ಮಾಡಿದ್ದು ತಪ್ಪು"—ಎಂದು ಮನಸ್ಸಿನಲ್ಲೆ ಅಂದುಕೊಂಡು, ತನ್ನಷ್ಟಕ್ಕೆ ತಾನು ಬೈದುಕೊಂಡ.

ನೀಲಿ, ಅವನ ಬಳಿ ಸಾರಿ, ಅವನನ್ನು ಬಿಗಿದಪ್ಪಿದಳು. ಈ ಪುಲ್ಲಯ್ಯನಿಗಾಗಿ, ಈ ಪುಲ್ಲಯ್ಯನ ಕೈಹಿಡಿಯುವುದಕ್ಕಾಗಿ, ಊರಿನ ಯುವತಿಯರು ಹಾತೊರೆಯುತ್ತಿದ್ದುದು ಅವಳಿಗೆ ಗೊತ್ತಿತ್ತು. ಅವಳೂ ಕೂಡ ಗಿರಿಜಾ ಮೀಸೆಯ, ಮಾಂಸಖಂಡಗಳಿಂದ ತುಂಬಿದ ಪುಲ್ಲಯ್ಯನಿಗಾಗಿ ಮನಸ್ಸಿನಲ್ಲೆ ಹಾತೊರೆದಿದ್ದಳು. ಆದರೆ, ಆಗ, ಆತನಿಗಾಗಿ

ಹಂಬಲಿಸುವುದು ಹುಚ್ಚುತನವೆಂದುಕೊಂಡು, ಆತನ ಆಶೆಯನ್ನೇ ಬಿಟ್ಟಿದ್ದಳು. ಆದರೆ, ಈಗ, ಅವನು ಅವಳ ಹೃದಯವನ್ನು ತುಂಬಿಕೊಂಡಿದ್ದ. ಪುಲ್ಲಯ್ಯನ ಆ ಗಿರಿಜಾಮೀಸೆ ಗಳ ಮೇಲೆ ಅವಳ ಕೈ ಆಡುತ್ತಿತ್ತು. ಮಾಂಸಖಂಡಗಳಿಂದ ತುಂಬಿದ, ಉಕ್ಕಿನಂತಹ ಅವನ ದೇಹ, ಅವಳ ದೇಹಕ್ಕೆ ಅಂಟಿಕೊಂಡಿತ್ತು....... ಅವಳಿಗೆ, ಅದಕ್ಕೂ ಹೆಚ್ಚಿನದು ಇನ್ನೇನೂ ಬೇಕಿರಲಿಲ್ಲ.

ನೀಲಿಯ ಹೃದಯದಲ್ಲಿ ಸಂತಸದ ಬುಗ್ಗೆ ಒಡೆದು, ಕಣ್ಣಿನಲ್ಲಿ ನೀರೂರಿತ್ತು. ಆನಂದದ ತೆರೆಗಳು ಬಡಿದು, ಮುಖದ ಮೇಲೆ ಮಂದಹಾಸ ಮೂಡಿತ್ತು. ಇದನ್ನು ನೋಡಿದ ಪುಲ್ಲಯ್ಯ, ಅವಳನ್ನು ಬರಸೆಳೆದು ಗಟ್ಟಿಯಾಗಿ ಅಪ್ಪಿಗೊಂಡ...... ನೀಲಿ, ......ನನ್ನ ನೀಲಿ...... ಇವಳು ನನ್ನವಳು...... ನನ್ನವಳೇ...... ನನ್ನ ಸ್ವತ್ತು...... ನನ್ನ ಹೃದಯದೇವತೆ...... ಎಂದೆಲ್ಲ, ಸಾವಿರ ಸಲ ಮನಸ್ಸಿನಲ್ಲೆ ಅಂದುಕೊಂಡ. ಮೈಯೆಲ್ಲಾ ಕಣ್ಣಾಗಿ, ಅವಳನ್ನು ನೋಡಿದ. ಅವಳ ಚೆಲುವನ್ನು ಕಣ್ಣಿನಿಂದಲೇ ಹೀರಿದ...... ಆಹಾ ಎಷ್ಟು ಮಧುರ...... ಎಷ್ಟು ಸುಖಮಯ—ಈ ಜೀವನ. ಇದುವರೆಗೆ ನನ್ನ ಜೀವನ ಬರಡಾಗಿತ್ತು...... ಈಗ ಮರುಭೂಮಿಯಂತಿದ್ದ ನನ್ನ ಜೀವನದಲ್ಲಿ, ಹಸಿರು ಪೈರು ತುಂಬಿ ತುಳುಕುತ್ತಿದೆ.

ಪುಲ್ಲಯ್ಯ ನೀಲಿಯ ಕಣ್ಣುಗಳಿಂದ ಉಕ್ಕಿದ ಸಂತಸದ ಹನಿಗಳನ್ನು ಒರೆಸಿದ. ನಗುವಿನಿಂದ ಅರಳಿದ್ದ ಅವಳ ತುಟಿಗಳ ಮೇಲೆ ತುಟಿಗಳನ್ನಿಟ್ಟು, ಆ ನಗುವನ್ನು, ಆ ನಗುವಿನಲ್ಲಿ ತುಂಬಿಕೊಂಡಿದ್ದ ಜೇನನ್ನೂ ಹೀರಿದ.

## [ 7 ]

ನೀಲಿಯನ್ನು ಆವರಿಸಿದ್ದ ನಾಚಿಕೆ, ನೀಲಾಕಾಶದಲ್ಲಿನ ಬಿಳಿಯ ಮೋಡಗಳಂತೆ ಚದುರಿಹೋದವು. ಅವಳ ಮನಸ್ಸಿನಲ್ಲಿ, ಒಂದು ಹೊಸ ಉತ್ಸಾಹ ಮೂಡಿತ್ತು; ಹೊಸ ಆಶೆ ಹೆಡೆ ಎತ್ತಿತ್ತು; ಹೊಸ ಅನುರಾಗ ಹುಟ್ಟಿತ್ತು. ಪುಲ್ಲಯ್ಯನನ್ನು ನೋಡಿದಾಗಲೆಲ್ಲ ಅವಳು ಪುಲಕಿತಗೊಳ್ಳುತ್ತಿದ್ದಳು.

ಪುಲ್ಲಯ್ಯ, ಮಾತು–ಮಾತಿಗೆ ನಕ್ಕು, ನಗಿಸುತ್ತಿದ್ದ. ಅವನ ಸಂತೋಷಕ್ಕೆ ಮಿತಿಯೇ ಇರಲಿಲ್ಲ.

ಮೆಚ್ಚಿ ಮದುವೆಯಾದ ಗಂಡನ ಮನೆಯನ್ನು, ಮನುಷ್ಯರಿರಲು ಯೋಗ್ಯವಾಗುವಂತೆ ಮಾಡುವುದು, ನೀಲಿಯ ಮೊದಲ ಕೆಲಸವಾಗಿತ್ತು. ಒಂಟಿಯಾಗಿದ್ದ ಪುಲ್ಲಯ್ಯ, ಮನೆಯಲ್ಲಿ ಒಂದು ಬಿಂದಿಗೆಯನ್ನೂ ಸಹ ಕೊಂಡಿಟ್ಟಿರಲಿಲ್ಲ. ಅಸ್ತವ್ಯಸ್ತವಾಗಿದ್ದ ಮನೆಯಲ್ಲಿ ಬರೀ ಧೂಳು ಮುಚ್ಚಿಕೊಂಡಿತ್ತು.

ಮನೆಯ ಕೆಲಸಕಾರ್ಯಗಳಲ್ಲಿ ಹೆಂಡತಿಗೆ ನೆರವಾಗಬೇಕೆಂದು ಪುಲ್ಲಯ್ಯ ಮುಂದಾಗುತ್ತಿದ್ದ. ಆದರೆ, ಕೈಲಾಗದೆ ಪೆಚ್ಚು ಮುಖ ಮಾಡಿಕೊಂಡು ಹಿಂದೆ ಸರಿಯುತ್ತಿದ್ದ. ಗಂಡನ ಪೆಚ್ಚುಮುಖ ನೋಡಿ, ನೀಲಿ ನಗುತ್ತಿದ್ದಳು. ಅವಳು ನಕ್ಕಾಗ, ಅವಳ ಮುಖದ ಮೇಲೆ ಬೆಳದಿಂಗಳು ಮೂಡುತ್ತಿತ್ತು.

ಪುಲ್ಲಯ್ಯ, ತನ್ನ ಕೈಲಾಗದ್ದನ್ನು ಮರೆತು, ಚಿಗುರೊಡೆದ ಬಯಕೆಯಿಂದ, ನಗುತ್ತಿದ್ದ ಹೆಂಡತಿಯನ್ನು ಎತ್ತಿಕೊಂಡು ಕುಣಿದಾಡುತ್ತಿದ್ದ.

ಪುಲ್ಲಯ್ಯನ ದೇಹಾರೋಗ್ಯದ ಬಗ್ಗೆ, ನೀಲಿ ಹೆಚ್ಚಿನ ಆಸ್ಥೆ ವಹಿಸಿದ್ದಳು. ಹದವಾಗಿ ಕಾಸಿದ ನೀರಿನಲ್ಲಿ ಮೈತೊಳೆದು ಬರುತ್ತಿದ್ದ ಗಂಡನ ತಲೆಗೆ ಎಣ್ಣೆ ಹಚ್ಚಿ ತಿಕ್ಕಿ, ಆ ಗಿರಿಜಾಮೀಸೆಗಳನ್ನು ತೀಡುತ್ತಿದ್ದಳು. ವೇಳೆಗೆ ಸರಿಯಾಗಿ ಊಟ–ತಿಂಡಿ, ಕಣ್ತುಂಬ ನಿದ್ದೆ, ಮನಸ್ಸಿಗೆ ದೊರೆತ ನೆಮ್ಮದಿಯಿಂದ ಪುಲ್ಲಯ್ಯ ಹಾಯಾಗಿದ್ದ.

ಇತ್ತೀಚೆಗೆ, ಅವನು ಮನೆಬಿಟ್ಟು ಹೊರಗೆ ಕಾಲಿಡುತ್ತಿರಲಿಲ್ಲ. ದಿನಕ್ಕೊಂದು ಸಲ ಹೊಲಕ್ಕೆ ಹೋಗಿ ಬಂದರಾಯಿತು. ಉಳಿದ ಸಮಯವೆಲ್ಲ ಮನೆಯಲ್ಲಿಯೆ ಇರುತ್ತಿದ್ದ. ಇದನ್ನು ನೋಡಿ, ಊರಿನ ಜನರು ತಮ್ಮತಮ್ಮಲ್ಲೆ ಮಾತನಾಡಿಕೊಂಡು ನಗುತ್ತಿದ್ದರು—ಕುಚೇಷ್ಟೆ ಮಾಡುತ್ತಿದ್ದರು. ಅವನ ಗರಡಿಯ ಗೆಳೆಯರು, ಗರಡಿಮನೆಗೆ ಬರುವುದನ್ನೆ ಬಿಟ್ಟನೆಂದು, ಆಗಾಗ ಆಕ್ಷೇಪಿಸುತ್ತಿದ್ದರು. ಎಂದಾದರೂ ಗರಡಿಗೆ ಹೋದರೂ, ಪುಲ್ಲಯ್ಯ, ಅಲ್ಲಿ ಬಹಳ ಹೊತ್ತು ಇರುತ್ತಿರಲಿಲ್ಲ. "ಹೊಸ ಹುಮ್ಮಸ್ಸು—ಅದರಾಗ ವಯಸ್ಸಾದ ಮ್ಯಾಲೆ ಮದ್ವಿ ಆಗ್ಯಾನ, ಇನ್ನ ಕೇಳೋದೇನು?"—ಎಂದೆಲ್ಲ ಜನರು ಆಡಿಕೊಳ್ಳುತ್ತಿದ್ದರು.

ಪುಲ್ಲಯ್ಯನ ಕಿವಿಗೆ ಈ ಮಾತು ಬಿದ್ದಾಗ, ಅವನು ರೇಗಿದ. ನೇರವಾಗಿ ಮನೆಗೆ ಬಂದವನೆ ಒಂದು ಮೂಲೆ ಹಿಡಿದು ಕುಳಿತ. ನೀಲಿ ಬಂದು ಮಾತನಾಡಿಸಿದಾಗ, ಮುಖ ಗಂಟುಮಾಡಿಕೊಂಡು, ಬೇರೆಡೆ ಹೋಗಿ ಕುಳಿತ.

ನೀಲಿ, ಏನಾಯಿತೆಂದು ತಿಳಿದುಕೊಳ್ಳಲು ಪೀಡಿಸಿದಾಗ, "ನಾನು ಮದುವಿ ಒಲ್ಲೆ ಅಂದಾಗ, ಮಾಡಿಕೊ–ಮಾಡಿಕೊ ಅಂತ ನನ್ನ ಗೋಳುಹೊಯ್ದುಕೊಂಡರು.ಈಗ, ಲಗ್ನಾದ ಮ್ಯಾಲೆ, ಬ್ಯಾರೆ ರೀತಿ ಕಾಡಸ್ತಾರ ಆತು"—ಎಂದು ಕೈ ತಿರುವುತ್ತಾ ಹೇಳಿದ ಪುಲ್ಲಯ್ಯ.

ಗಂಡನ ಈ ಭೋಳೆತನ ನೋಡಿ, ಫಕ್ಕನೆ ನಕ್ಕಳು ನೀಲಿ. "ಓಹೊ ಅದಕ್ಕ ಏನು ರಾಯರು ಗಂಟು ಮುಖ ಮಾಡಿಕೊಂಡಿದ್ದು...... ಅಲ್ಲ, ಊರಿನ ಜನರು ಹಾಂಗ ಅಂದರೂ ಅಂತ ನೀನು ಸಿಟ್ಟುಮಾಡಿಕೊಂಡರ ಏನು ಬಂತು. ನಗೊ ವಿಷಯಕ್ಕ ಹೊಗಿ ರೂಪ ಕೊಟ್ಟು ಕಣ್ಣಾಗ ನೀರು ತಂದರ, ಅದು ಶಾಣೆತನ ಅಲ್ಲ. ನಗುವನ್ನ, ನಗೋದರಿಂದಲೇ ಎದುರಿಸಬೇಕು. ಅದನ್ನ ಬಿಟ್ಟು ಇಲ್ಲದ್ದು ಮನಸ್ಸಿಗೆ ಹಚ್ಚಿಕೊಂಡು ಕೊರಗಿದರ, ಯಾರಿಗೇನು ಲಾಭ...... ನೋಡು, ಈ ಹಠ, ಜಿದ್ದು, ಸಿಟ್ಟು—ಇವೆಲ್ಲ ಕೆಟ್ಟ ಚಾಳಿಗಳು. ಈ ಕೆಟ್ಟ ಚಟ ಬಿಟ್ಟುಕೊಡಬಾರದ?"

ಪುಲ್ಲಯ್ಯ ತಲೆ ಎತ್ತಿ ನೋಡಿದ. ಫಳಫಳನೆ ಹೊಳೆಯುತ್ತಿದ್ದ ನೀಲಿಯ ಆ ಕಣ್ಣುಗಳು, ಅವನ ತಪ್ಪನ್ನು ಬೆಳಕಿಗೆ ಹಿಡಿಯುವಂತಿದ್ದವು. ತನ್ನ ಜಿದ್ದು, ತನ್ನ ಹಠಮಾರಿತನ ಎಂತಹುದೆಂಬುದನ್ನು, ಅವಳು, ಆ ಮೊದಲ ರಾತ್ರಿಯೇ ತಿಳಿದುಕೊಂಡಿದ್ದಳು. ಆದರೆ, ಅವಳಿಗಿಂತ ತಾನು ಮೇಲು—ಎಂದು ಹೇಳಿಕೊಳ್ಳಲು ಆತನಿಗೆ ಸಾಧ್ಯವಾಗಿರಲಿಲ್ಲ. ಈಗ ಅವನಲ್ಲಿ ನೀಲಿಯ ಬಗ್ಗೆ, ಒಂದು ತೆರನಾದ ಗೌರವ, ಅಭಿಮಾನ, ಭಯ, ಭಕ್ತಿ, ಅನುರಾಗ...... ಅದೇಕೆ, ಒಂದು ತರಹದ ಗರ್ವವೂ ಸಹ ಮನೆಮಾಡಿತ್ತು.

ನಾಗರ ಚೌತಿ ಬಂತು. ಊರಲ್ಲೆಲ್ಲಾ ಹಬ್ಬದ ವಾತಾವರಣ ಏರ್ಪಟ್ಟಿತ್ತು. ಊರಿನ ರಸ್ತೆಯ ಅಂಚಿನಲ್ಲಿದ್ದ ಹುತ್ತದ ಮೇಲೆ ಅರಿಶಿಣ–ಕುಂಕುಮ ಹಾಕಿ, ಹಾಲು ಹಾಕಲಾಯಿತು. ಹಾವಿನ ಬಾಯಿಗೆ ತತ್ತಿ ಕೊಟ್ಟು, ಪಟಾಕಿಗಳನ್ನು ಹಾರಿಸಿ ಸಂಭ್ರಮಪಡಲಾಯಿತು.

ನೀಲಿಯ ಅಜ್ಜಿ, ಮೊಮ್ಮಗಳಿಗೆ ಗಂಡು ಮಗು ಹುಟ್ಟಿದಲ್ಲಿ, ನಾಗರಾಜನೆಂದು ಹೆಸರಿಡುವುದಾಗಿ ಬೇಡಿಕೊಂಡಳು. ಇದನ್ನು ಕೇಳಿಸಿಕೊಂಡ ಪುಲ್ಲಯ್ಯ, "ನನ್ನ ಮಗನಿಗೆ ನಾನು ನಮ್ಮಪ್ಪನ ಹೆಸರು ಇಡ್ತೀನಿ. ನಮ್ಮಪ್ಪ ಮೀಸೆ ಹೊತ್ತ ಭಾರಿ ಕುಳ ಆಗಿದ್ದ. ನನ್ನ ಮಗನೂ ಹಾಗೇ ಆಗಬೇಕು. ಅವನು ಬುಸಗುಟ್ಟೋ ನಾಗರಹಾವು ಆಗಬಾರದು"—ಎಂದು ಖಡಾಖಂಡಿತವಾಗಿ ಹೇಳಿದ.

"ಛೆ, ತಪ್ಪು, ತಪ್ಪು, ಹಾಗೆಲ್ಲ ಅನ್ನಬಾರದು"—ಮುದುಕಿ ಬುದ್ಧಿ ಹೇಳಿದಳು.

"ತಪ್ಪಿಲ್ಲ–ಒಪ್ಪಿಲ್ಲ. ನಾನು ನನ್ನ ಮಗನ ಮಲ್ಲೇಶಿ ಅಂತಲೇ ಹೆಸರಿಡೋದು."

ಮುದುಕಿ, ಪುಲ್ಲಯ್ಯನ ಜೊತೆ ವಾದಿಸಿದಳು. ಎಲ್ಲಿಯೋ ಇದ್ದ ನೀಲಿ, ಅದನ್ನು ಕೇಳಿ ನಗುತ್ತ ಓಡಿಬಂದಳು.

"ಅಯ್ಯ, ಗಿಡದಾಗ ಇನ್ನೂ ಹೂವು ಕೂಡ ಬಿಟ್ಟಿಲ್ಲ, ಆಗಲೇ ಹಣ್ಣಿಗಾಗಿ ಜಗಳಾಡ್ತೀರಲ್ಲ—ನಿಮಗೇನು ಹೇಳಬೇಕು...... ಹೆಸರಿನ್ಯಾಗ ಏನದ. ಬೇಕಾದರ ಎರಡೂ ಹೆಸರಿಡೋಣ"—ನೀಲಿ ಸಮಜಾಯಿಸಿದಳು.

"ಇಲ್ಲ, ಅದೆಲ್ಲ ನಡೆಯಾಣಿಲ್ಲ. ನನ್ನ ಮಗನಿಗೆ ನಾನು ನಮ್ಮಪ್ಪನ ಹೆಸರು ಇಡದಿದ್ದರ, ಸ್ವರ್ಗದಾಗ ಇರೊ ನಮ್ಮಪ್ಪಗ ಸಿಟ್ಟು ಬರದ ಇರ್ತದೇನು?"

"ಹೌದು ಹೌದು. ಸಿಟ್ಟು ಬಂದೇ ಬರ್ತದ"—ಯಾರೋ ಹೊರಗಿನಿಂದ ಧ್ವನಿ ಸೇರಿಸಿದರು.

"ಹೂಂ, ನೀನಾರ ಹೇಳೊ ಕುಡ್ಡ. ಈ ಮಂದಿಗೆ ಸ್ವಲ್ಪ ತಿಳಿಹೇಳು"—ಎನ್ನುತ್ತಾ ಪುಲ್ಲಯ್ಯ ಅಂಗಳಕ್ಕಿಳಿದ.

ಮನೆಯ ಜಗುಲಿಯ ಮುಂದೆ, ಕೋಲು ಹಿಡಿದು ನಿಂತಿದ್ದ ಕುಡ್ಡ ವೆಂಕಣ್ಣ, ಎತ್ತರದ ಮನುಷ್ಯ. ಮೈಯಲ್ಲಿನ ಎಲುಬುಗಳು ಕಾಣುತ್ತಿದ್ದವಾದರೂ, ಒಂದು ಕಾಲದಲ್ಲಿ ಸಾಕಷ್ಟು ಬಲಿಷ್ಠನಾಗಿದ್ದನೆಂದು ಹೇಳಬಹುದಾಗಿತ್ತು. ಪುಲ್ಲಯ್ಯ ಅಂಗಳದಲ್ಲಿ

ನಿಂತು ಆತನೊಡನೆ ಮಾತನಾಡುತ್ತಿರುವಾಗಲೇ ನೀಲಿ, ಆತನಿಗಾಗಿ ಒಂದು ಎಲೆಯಲ್ಲಿ ಊಟ ಬಡಿಸಿ ತಂದಿಟ್ಟಳು. "ಹುಟ್ಟಿದ ಮನ್ಯಾಗ ಇರೋ ವರೆಗೂ ಗಂಜಿ ಹಾಕಿದಿ. ಈಗ ನಿನ್ನ ಮನೀಗೆ ಬಂದರ ಅನ್ನ ಹಾಕಿ ಕಾಪಾಡ್ತಿದಿ.—ದೇವರು ನಿನಗ ಒಳ್ಳೇದು ಮಾಡಲವ್ವಾ."

ಕುಡ್ಡ ವೆಂಕಣ್ಣ ಊಟ ಮಾಡುತ್ತಿದ್ದಾಗ,—"ಎಂಕ್ಯಾನ ಕೆಲಸಂತೂ ಆತು. ಅವನ ಅದೃಷ್ಟ......" ಅಲ್ಲಿಗೆ ಬಂದ ಮುದುಕಿಯೊಬ್ಬಳು ದೊಡ್ಡದಾಗಿ ಹೇಳಿದಳು.

"ಯಾಕ ರಾಕ್ಷಸಿ, ನಿನ್ನ ಆಸೆಬುರುಕತನ ಇನ್ನೂ ಹೋಗಿಲ್ಲೇನು? ಮುದುಕಿ ಆಗೀದಿ, ಆದರೂ ಹೊಟ್ಟೆಕಿಚ್ಚು, ಇನ್ನೂ ತಣ್ಣಗಾಗಿಲ್ಲೇನು?"

"ವೆಂಕಣ್ಣ, ನೀನು ಸುಮ್ಮನೆ ಊಟಮಾಡು. ......ಬಾ ಗೌರಮ್ಮ...... ಇತ್ಲಾಗ ಕೂತಕೊ ಬಾ......" ಎನ್ನುತ್ತಾ, ನೀಲಿ, ಅವಳಿಗೂ ಸಹ ಊಟ ಹಾಕಿದಳು.

"ಏನು ಹಾಕೋದದ, ಅದನ್ನ ಕೈಯಾಗ ಕೊಟ್ಟುಬಿಡು ತಾಯಿ. ಒಂದೇ ಒಪ್ಪತ್ತು ಎಲ್ಲಾನೂ ನೆಕ್ಕಿ ಕೂಡೊ ಬದಲು, ಎರಡೊಪ್ಪತ್ತು ಉಣತೀನಿ."

"ಏ ಸುಮ್ಮಾಕ ಹಾಕಿದ್ದು ಉಣಬಾರದ...... ಪೆಟ್ಟಿಗೆ ತುಂಬ ದುಡ್ಡು ಇಟ್ಟು ಕೊಂಡು, ಊರ ತುಂಬ ಭೂಮಿ ಇಟ್ಟುಕೊಂಡು, ಒಬ್ಬರಿಗೆ ಕೈ ಎತ್ತಿ ಒಂದು ಕಾಸೂ ಕೊಡಲಿಲ್ಲ.—ನೀನೂ ಸುಖಪಡಲಿಲ್ಲ. ಈಗ ನೋಡು ನಿನ್ನ ಗತಿ—" ಕುಡ್ಡ ವೆಂಕಣ್ಣ ಮತ್ತೆ ಬಾಯಿಬಿಟ್ಟ.

ಗೌರಮ್ಮ ಯಾವ ಮಾತೂ ಆಡದೆ, ನೀಲಿ ಕೊಟ್ಟ ಅನ್ನ ಗಂಟುಕಟ್ಟಿಕೊಂಡು ಅಲ್ಲಿಂದೆದ್ದಳು.

ಊಟ ಮಾಡುತ್ತಿದ್ದ ವೆಂಕಣ್ಣ, ತನ್ನ ಕಷ್ಟಸುಖಗಳನ್ನು ಹೇಳತೊಡಗಿದ—

"ಮನುಷ್ಯಗ ಇಷ್ಟು ಗರ್ವ ಯಾಕಿರ್ತದೊ ಏನೊ? ಅವನಿದ್ದಾನಲ್ಲ—ಆ ರಾಜು, ನನ್ನ ಮ್ಯಾಲ ಇನ್ನೂ ಕೆಂಡ ಕಾರ್ತಾನ. ನಾನೂ ನೋಡ್ತೀನಿ...... ಎಲ್ಲಿವರೆಗಾತೊ, ಅಲ್ಲಿಯ ವರೆಗೆ ಸಹಿಸಿಕೋತೀನಿ...... ಸಿಂಹ, ಮುದಿಯಾಗಲಿ, ರೋಗದಿಂದ ನರಳಲಿ, ಏನೇ ಆಗಲಿ, ಹುಲ್ಲು ತಿನಾಣಲ್ಲ. ನಾನೂ ಏನು ಕಡಿಮಿ ಅಲ್ಲ."

"ಹೋಗ ಹೋಗಲೆ ಕಳ್ಳ ನನ್ನ ಮಗನ. ನಿನ್ನ ಕಣ್ಣು ಹೋಗದಿದ್ದರ...... ಈ ಸುತ್ತಮುತ್ತಲಿನ ಎಲ್ಲಾ ಊರಿಗೂ ಬೆಂಕಿ ಇಡ್ತಿದ್ದಿ—ಅಂಬೋದು ನನಗೇನು ಗೊತ್ತಿಲ್ಲೇನು?"—ಪುಲ್ಲಯ್ಯ ಒಳಬರುತ್ತ ವೆಂಕಣ್ಣನನ್ನು ತಿವಿದ.

"ನೋಡು ಪುಲ್ಲಯ್ಯ...... ಮನುಷಾ ಯಾವಾಗ್ಲೂ ಒಂದೇ ತರಹ ಇರಾಣಲ್ಲ. ಒಮ್ಮೊಮ್ಮೆ ತಪ್ಪು ಮಾಡ್ತಾನ—ತಪ್ಪು ಮಾಡೋದು ಸಹಜ. ಯಾರಾದರೂ ಕಾಲು ಜಾರಿ ಬಿದ್ದರ ತಲಾಗ ಒಂದು ಮಾತು ಆಡೋದೂ ಸಹಜಃ ಬಿಡು. ಆದರ......"

"ನೀನಃ...... ಕಣ್ಣು ಕಳಕೊಂಡ ಸಿಂಹ...... ವಿಷದ ಹಲ್ಲು ಕೀಳಿಸಿಕೊಂಡ ಹಾವು...... ನಿನ್ನ ಪೌರುಷಕ್ಕ, ನಿನ್ನ ಆರಾಟಕ್ಕ, ಅದೆಷ್ಟೋ ಕುಟುಂಬಗಳು ಹಾಳಾ

ದವು...... ನಿನ್ನಂತಹವರಿಗೆ, ನಿನಗ ಈಗ ಬಂದ ಗತೀನ ಬರ್‍ತದ." ಪುಲ್ಲಯ್ಯ ಸಿಟ್ಟಿನಿಂದಲೇ ಹೇಳಿದ.

"ಊಟಕ್ಕ ಹಾಕಿ ಸಿಟ್ಟು ಮಾಡೋದು ಸರಿಯಲ್ಲ......" ಎಂದು ಗಂಡನಿಗೆ ಹೇಳಿದ ನೀಲಿ, ವೆಂಕಣ್ಣನ ಬಳಿ ಬಂದು, "ವೆಂಕಣ್ಣ, ಅವರು ನಿನ್ನ ಜತಿ ಚಾಷ್ಟಿ ಮಾಡ್ತಾರ. ನೀನು ಏನೂ ಮನಸ್ಸಿಗೆ ಹಚ್ಚಿಕೊಬ್ಯಾಡಾ......" ಎಂದು ಸಮಾಧಾನ ಮಾಡಿದಳು.

ಮುದುಕ ವೆಂಕಣ್ಣ, ತನ್ನಷ್ಟಕ್ಕೆ ತಾನು ನಕ್ಕು, "ತಾಯಿ, ಆ ಕಾಲದಾಗ, ನಾನೊಬ್ಬ ಹಸಿದ ಹುಲೀನೇ ಆಗಿದ್ದೆ....... ಪುಲ್ಲಯ್ಯ ಗರಡಿ ಮನಿ ಒಳಗ ಕಾಲಿಡುವ ವರೆಗೂ, ಅಲ್ಲಿ ನನ್ನ ಮಾತs ನಡೀತಿತ್ತು. ಆದರ, ನಾನು ಕೆಟ್ಟ ಹಾದಿ ಹಿಡಿದು, ಎಲ್ಲರ ಕಣ್ಣಾಗೂ ಕೆಟ್ಟವನಾದೆ. ಪುಲ್ಲಯ್ಯ ಒಳ್ಳೆಯವನಾಗಿ, ಎಲ್ಲರಿಗೂ ಬೇಕಾದವನಾದ...... ನನ್ನ ಹಣೆಬರಹ, ಅದಕ್ಕೂ ಯಾರೇನು ಮಾಡ್ತಾರ...... ನಿನ್ನ ಧರ್ಮ ನಿನ್ನನ್ನು ಕಾಪಾಡ್ತದ—ತಾಯಿ. ನೀನು ಸುಮಂಗಲಿಯಾಗಿ ಚಿರಕಾಲ ಸುಖವಾಗಿ ಬಾಳು. ನೀವಿಬ್ಬರೂ ಹಾಯಾಗಿ, ನಗನಗತಾ ಬಾಳ್ರಿ......"

"ಹೋಗಹೋಗೊ, ಯಾರಿಗೆ ಬೇಕು ಈ ನಿನ್ನ ಒಣ ಆಶೀರ್ವಾದ"—ಪುಲ್ಲಯ್ಯ ಚುಚ್ಚಿ ಹೇಳಿದ.

"ಇಲ್ನೋಡು ಪುಲ್ಲಯ್ಯ, ನಾನು ಗೊಲ್ಲರವನು...... ನೀನು ಒಕ್ಕಲಿಗ......"

"ಜಾತಿ ಮಾತು ಯಾಕ ಈಗ? ಈ ಭೂಮಿ ಮ್ಯಾಲೆ ಇರೋರೆಲ್ಲರೂ ಒಂದೇ ಜಾತಿಗೆ ಸೇರಿದವರು—ಮಾನವ ಜಾತಿಗೆ ಸೇರಿದವರು"—ನೀಲಿ ನಡುವೆಯೆ ಮಾತು ಸೇರಿಸಿದಳು.

"ಹೌದಮ್ಮಾ—ಖರೇನ ಹೇಳ್ದಿ, ನಿನ್ನ ಈ ಗುಣ, ಈ ಶಾಂತ ಪ್ರವೃತ್ತಿ, ನಿನ್ನ ಗಂಡನ ಕೋಪಾಗ್ನಿಯನ್ನ ಶಮನಗೊಳಿಸ್ತದ......" ಎಂದು ಹೇಳುತ್ತ ಮೇಲೆದ್ದ ಕುಡ್ಡ ವೆಂಕಣ್ಣ, ನಾಲ್ಕು ಹೆಜ್ಜೆ ಮುಂದೆ ಹೋದವನು, ಮತ್ತೆ, "ಅಮ್ಮಾ......" ಎಂದು ನೀಲಿಯನ್ನು ಕೂಗಿದ. ಅವನ ಗಂಟಲು ಕಟ್ಟಿ, ಅವನ ಧ್ವನಿ ಆದಾಗಲೇ ಭಾರವಾಗಿತ್ತು. ಅವನ ಕಣ್ಣಿನಿಂದ ನೀರು ಉಕ್ಕಿತ್ತು.—ಅವನ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ ನೀಲಿ, ಅವನ ಸಮೀಪಕ್ಕೆ ಹೋದಳು. ವೆಂಕಣ್ಣ, ಮುಂದೆ ಮುಂದೆ ಕೋಲೂರುತ್ತಾ ನಡೆದವನು, "ನಿಜವಾದ ಸಂಗತಿ ಯಾರಿಗೂ ತಿಳೀದು ತಾಯಿ......" ಎಂದು ಏನೊ ಹೇಳಲು ಹೊರಟ. ಆದರೆ, ದುಃಖ ಉಮ್ಮಳಿಸಿ ಬಂದು ಅತ್ತುಬಿಟ್ಟ. "ಅಳಬೇಡ ವೆಂಕಣ್ಣ. ನಮ್ಮ ಕೈಯಾಗ ಏನದ ಹೇಳು. ನಮ್ಮಲ್ಲಿನ ಕೆಟ್ಟತನ, ಒಳ್ಳೆಯತನ, ಎಲ್ಲಾ ಆ ದೇವರಿಗೆ ಮಾತ್ರ ಗೊತ್ತು......"

"ಹೌದವ್ವಾ,...... ಚಿಕ್ಕವಳಾದರೂ, ಚೊಕ್ಕಟವಾದ ಮಾತು ಹೇಳಿದಿ"—ಎನ್ನುತ್ತಾ ವೆಂಕಣ್ಣ ಹೊರಟುಹೋದ.

ಮುಖಕ್ಕೆಲ್ಲ ಅರಶಿಣ ಹಚ್ಚಿಕೊಂಡು, ಅರಶಿಣ ಬಣ್ಣದ ಸೀರೆಯುಟ್ಟ ಹೆಂಗಸರು,

ಗುಂಪು-ಗುಂಪಾಗಿ, ಹೊಲಗದ್ದೆಗಳಿಗೆ ಹೊರಟಿದ್ದರು. ಹಳದಿ ಬಣ್ಣಕ್ಕೆ ತಿರುಗಿದ್ದ ತೆನೆಗಳು. ನಗುಮೊಗದಿಂದ ಅವರನ್ನು ಸ್ವಾಗತಿಸುತ್ತಿದ್ದವು. ಕುಯ್ಲಿಗೆ ಬಂದ ಪೈರು, ಗಾಳಿಯಲ್ಲಿ ತಲೆದೂಗಿ ಅವರನ್ನು ಕರೆಯುತ್ತಿದ್ದವು. ಕುಯ್ಲಿಗೆ ಹೆಚ್ಚು ದಿನ ಉಳಿದಿರಲಿಲ್ಲ. ವಿರಾಮವಿಲ್ಲದ ಕೆಲಸದ ದಿನಗಳು, ಸನ್ನಿಹಿತವಾಗಿದ್ದವು. ಹೆಚ್ಚು ವಯಸ್ಸಾದ ಮುತ್ತೈದೆಯರು, ಬೆಳೆಯನ್ನು ಕುರಿತು, ತಮ್ಮ ಪಾಲಿಗೆ ಬರಬಹುದಾದ ಧಾನ್ಯವನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದರು. ವಯಸ್ಸಾಗದ ಯುವತಿಯರು, ನೂರೆಂಟು ವಿಷಯಗಳನ್ನು ಕುರಿತು ತಮ್ಮ ತಮ್ಮಲ್ಲಿ ಏನೇನೋ ಗುಸುಗುಸು ನಡೆಸುತ್ತಿದ್ದರು. ಈ ಸಲ ಎಷ್ಟು ಭತ್ತ ಬರ್ತದೊ? ನೆಲ್ಲು ಕುಟ್ಟಿದರ ಬರುವ ಹೊಟ್ಟು ದನಕರುಗಳಿಗೆ ಸಾಲ್ತದೊ-ಇಲ್ಲೊ? ಗೇಣಿ ಕೊಡಲಿಕ್ಕೆ ಆಗ್ತದೊ ಇಲ್ಲೊ? ಊರಾಗಿನ ಕುಂಬಾರಗ, ಅಗಸಗ, ಮಾಸ್ತರಗ—ಎಲ್ಲಾರಿಗೂ ಧಾನ್ಯ ಕೊಟ್ಟ ಮ್ಯಾಲೆ ಎಷ್ಟು ಉಳೀತದೊ? ಆ ಉಳಿದ ಧಾನ್ಯ ವರ್ಷಕ್ಕ ಆಗ್ತದೊ ಇಲ್ಲೊ?—ಇವೇ ನೂರಾರು ಪ್ರಶ್ನೆಗಳ ಬಗ್ಗೆ ಅವರು ಚಿಂತಿಸುತ್ತಿದ್ದರು.

ನೀಲಿ ಕೂಡ, ಅವರೊಡನೆ ಹೊಲಕ್ಕೆ ಹೋಗಿ ಬಂದಳು. ಆದರೆ, ಅವಳು ಇಂತಹ ಯಾವ ಲೆಕ್ಕಾಚಾರಕ್ಕೂ ಬೀಳಲಿಲ್ಲ. ಕೈಕಾಲು ಗಟ್ಟಿಯಾಗಿದ್ದರ, ಹೇಗಾದರೂ ಮಾಡಿ ಹೊಟ್ಟೆ ತುಂಬಿಕೊಳ್ಳಬಹುದೆಂಬುದು ಅವಳ ದೃಢ ವಿಶ್ವಾಸವಾಗಿತ್ತು.

ಎಲ್ಲಿಗೊ ಹೋಗಿದ್ದ ಪುಲ್ಲಯ್ಯ, ದುಮುದುಮು ಮಾಡುತ್ತಾ ಬಂದು, ರೇಗಿಕೊಂಡು ಕೂತಾಗ, ನೀಲಿಗೆ ನಗು ಬಂತು. ಅವನ ಮನಸ್ಸಿನಲ್ಲಿ ದ್ವೇಷ ಹೊಗೆಯಾಡುತ್ತಿದೆ—ಎಂಬುದನ್ನು ಅರಿತ ನೀಲಿ, ಅವನ ಬಳಿಸಾರಿ, "ಹೇಳಿ ಏನಾಯಿತು? ಯಾಕ ಇಷ್ಟು ಸಿಟ್ಟು......" ಎಂದು ಕೇಳಿದಳು.

"ಆ ಪಾಪಿಷ್ಟನಿಗೆ, ಆ ಪಾಪಿಷ್ಟ ಮುಂಡೆಗೆ ಕೂಳುಹಾಕಿ, ಉಪವಾಸ ಬೀಳೂ ಅಂತ ನಿನಗ ಯಾರು ಹೇಳಿದರು"—ಪುಲ್ಲಯ್ಯ ಸಿಟ್ಟಿನಿಂದ ರೇಗಾಡಿದ.

"ಯಾರು? ಯಾರು ಪಾಪಿಷ್ಟರು?"

"ಪಾಪಿಷ್ಟರಲ್ಲದ ಏನು? ಅವಳು ದುಡ್ಡಿಗಾಗಿ ಗಂಡನ್ನ ಕೊಂದಳು. ಅವನು ಕಳ್ಳ ಸೂ........."

"ಅಯ್ಯ, ಅದs......" ಎನ್ನುತ್ತಾ, ನೀಲಿ ಗಂಡನ ಸೊಂಟಕ್ಕೆ ಕೈಹಾಕಿ, "ನೋಡು, ಒಂದು ಸರೆ ನನ್ನ ಕಡೆ ನೋಡು"—ಎಂದು ಲಲ್ಲೆಗರೆದಳು.

"ಏನು ನೋಡಲಿ? ಅವನಿಗೆ ಕಣ್ಣು ಹೋದರೂ ಇನ್ನೂ ಪೌರುಷ ಹೋಗಿಲ್ಲ. ಅವಳಿಗೆ ಸೊಂಟ ಬಗ್ಗಿದರೂ ಸೊಕ್ಕು ಮುರಿದಿಲ್ಲ."

"ಎಲ್ಲಾರೂ ಒಂದs ರೀತಿ ಇರಲಿಕ್ಕೆ ಸಾಧ್ಯ ಇಲ್ಲ. ನಿನ್ನ ಕಾಲು ಇದ್ಹಾಂಗ, ಕೈಗಳಿಲ್ಲ. ಕೈ ಇಲ್ಲದ, ಅಥವಾ ಕೈಗಳು ಕೂಡ ಕಾಲುಗಳ ಹಾಗೆ ಇದ್ದಿದ್ದರ, ಬದುಕಲಿಕ್ಕೆ ಆಗ್ತಿತ್ತೇನು? ನೀನು ಒಬ್ಬರನ್ನ ನೋಡಿ ಅಸಹ್ಯಪಡೋದು ಸರಿಯಲ್ಲ.

ಒಬ್ಬರನ್ನ ನೋಡಿ ಅಸಹ್ಯಪಟ್ಟರ, ಒಬ್ಬರ ಮ್ಯಾಲ ಸಿಟ್ಟು ಮಾಡಿಕೊಂಡರ ಆಯುಷ್ಯ ಕಡಿಮಿ ಆಗ್ತದಂತ......"

ಪುಲ್ಲಯ್ಯ ಹೆಂಡತಿಯನ್ನು ನೋಡಿದ. ಪ್ರಶಾಂತವಾದ ಅವಳ ಮುಖದಿಂದ, ಹೃದಯವನ್ನು ತಂಪುಗೊಳಿಸುವ ಮಾತಿನ ಧಾರೆ ಹರಿದಿತ್ತು—"ವೆಂಕಣ್ಣ, ತನ್ನ ಹೃದಯದ ನೋವನ್ನು, ಆ ಸೂರಮ್ಮನ ಮುಂದೆ ಹೇಳಿಕೊಳ್ಳುತ್ತಿದ್ದ. ಅವಳು ಸತ್ತ ಮೇಲೆ...... ಪಾಪ...... ಆನೆಯಂತಹ ಮನುಷ್ಯ ಸೊರಗಿ ಸೌತೆಕಾಯಿಯಾದ. ಗೌರಮ್ಮ ಕೂಡ, ಒಂದು ಕಾಲದಾಗ ಸುಖವಾಗಿ—ರೋಪಾಗಿದ್ದಳು—ಆದರೆ, ಈಗ ಕಂಡವರ ಮುಂದೆ ಕೈಚಾಚಿ ಬೇಡ್ತಾಳ...... ಹೊಟ್ಟೆ ಎಲ್ಲಾನೂ ಮಾಡಸ್ತದ. ಬೆಳಗಾದರಾತು, ಮಣ್ಣಿನ ಗಡಿಗಿ ಒಳಗ ಕುಚ್ಚಿಕೊಂಡು ಚರ್ಮದ ಗಡಿಗಿ ಒಳಗ ಹಾಕಿಕೊಳ್ಳೋದು ಮನುಷ್ಯನ ಹಣೆಬರಹ....... ಗೇಣು ಹೊಟ್ಟೆಗಾಗಿ ಅವರಿವರ ಮುಂದೆ ಕೈಚಾಚೋದಕ್ಕಿಂತ, ಕೈ ಎತ್ತಿ ಕೊಡೋದು ಮೇಲು...... ಕೈ ಎತ್ತಿ ಇನ್ನೊಬ್ಬರಿಗೆ ಅನ್ನ ಇಕ್ಕೋದು ಒಂದು ಭಾಗ್ಯ...... ನೀನು ಹೀಂಗ ಸಂಕಟಪಡೋದು ಒಳ್ಳೆದಲ್ಲ."

ಪುಲ್ಲಯ್ಯ, ಕೂಡಲೇ ಏನನ್ನೂ ಹೇಳದಾದ. ನೀಲಿ, ಅವನ ಮೇಲಿನ ತನ್ನ ಪ್ರಭಾವವನ್ನು ಮತ್ತಷ್ಟು ಗಾಢಗೊಳಿಸಿದ್ದಳು. ನೀಲಿಯ ಮಾತು ಅವನ ಹೃದಯದ ಬಾಗಿಲನ್ನು ತೆರೆದಿದ್ದುವು. ಅವನು, ಅವಳನ್ನು ತನ್ನ ಬಿಗಿ ಅಪ್ಪುಗೆಯಲ್ಲಿ ಸೆರೆಹಿಡಿದ. ನೀಲಿ, ಅವನ ತೋಳತೆಕ್ಕೆಯಲ್ಲಿ ಲಲ್ಲೆಗರೆಯುತ್ತಾ, "ಗಾಳಿಗೆ ಹಾರಿದ ಹತ್ತಿ ಬಹಳ ಹೊತ್ತು ಗಾಳಿಯಾಗ ಇರಾಣಲ್ಲ. ನೀನು, ಮಾತುಮಾತಿಗೆ ರೇಗೋದು ಬ್ಯಾಡ. ನಿನ್ನ ಕಾಲಿಗೆ ಪೆಟ್ಟು ಬಿದ್ದರ, ನಿನ್ನ ಕೈ ಸುಮ್ಮನಿರ್ತದೇನು? ನಮ್ಮ ನೆರಿಹೊರಿಯವರು ಹಸಿವಿನಿಂದ ನರಳುತ್ತಿರುವಾಗ, ಅವರಿಗೆ ನೆರವಾಗದ ಮುಖ ತಿರುಗಿಸೋದು ಮನುಷ್ಯತ್ವ ಆಗಾಣಲ್ಲ......"

ನೀಲಿಯ ಈ ಮಾತಿಗೆ, ಪುಲ್ಲಯ್ಯ ಪ್ರತ್ಯುತ್ತರ ಹೇಳದಾದ. ಅವನು, ಅವಳ ತಲೆಯನ್ನು ತನ್ನ ಎದೆಯ ಮೇಲಿಟ್ಟುಕೊಂಡು, ಹೆಮ್ಮೆಯಿಂದ ಅವಳ ಮುಖ ನೋಡಿದ. ಇಬ್ಬರ ಕಣ್ಣಲ್ಲೂ ನೀರೂರಿತ್ತು. ಅವರ ಹೃದಯದಲ್ಲಿ ಕರುಣೆ ತುಂಬಿತ್ತು.

## [ 8 ]

ಕುಡ್ಡ ವೆಂಕಣ್ಣ, ಹುಟ್ಟುಕುರುಡನಲ್ಲ. ಅವನು ಚಿಕ್ಕವನಾಗಿದ್ದಾಗಲೇ, ಅವನ ತಂದೆ ತೀರಿಕೊಂಡ. ಅವನ ತಾಯಿ, ಮಗನನ್ನು ತೌರುಮನೆಯಲ್ಲಿ ಬಿಟ್ಟು, ಇನ್ನೊಬ್ಬನನ್ನು ಮದುವೆಯಾಗಿದ್ದಳು. ಆದರೆ, ಆ ಪುನರ್‌ವಿವಾಹದಿಂದ ಅವಳಿಗೆ ಯಾವ ಸುಖವೂ ದಕ್ಕಲಿಲ್ಲ. ಕುಡುಕ ಗಂಡನಿಂದ ಒದೆ ತಿಂದು, ಕಂಗಾಲಾಗಿ, ಹಣ್ಣಾಗಿ ಒಂದು ದಿನ ಅಸು ನೀಗಿದಳು. ವೆಂಕಣ್ಣ ತಾತನ ಮನೆಯಲ್ಲೆ ಉಳಿದ. ಅವನು, ಚಿಕ್ಕವನಾಗಿದ್ದಾಗಲೇ

ತಾತನನ್ನು ಗೋಳುಹುಯ್ದುಕೊಳ್ಳುತ್ತಿದ್ದ. ತಾತನ ಬಳಿಯಿದ್ದ ಕುರಿ–ಮೇಕೆಗಳ ಹಿಂಡಿನಲ್ಲಿ, ಮರಿಗಳನ್ನು ಎತ್ತಿಕೊಂಡು ಹೋಗಿ ಅರ್ಧ ದರದಲ್ಲಿ ಮಾರಿ ದುಡ್ಡು ಪಡೆಯುತ್ತಿದ್ದ. ಆದರೆ, ವೆಂಕಣ್ಣನಿಂದ ಆ ರೀತಿ ಕುರಿಗಳನ್ನು ಕೊಂಡವರ ಬಳಿಯಿಂದ, ಆ ಮರಿಗಳು ಅಂದೇ ರಾತ್ರಿ ಮಾಯವಾಗಿಬಿಡುತ್ತಿದ್ದವು. ಈ ರೀತಿ ಕುರಿಮರಿಗಳನ್ನು ಮಾರುವುದು ಮತ್ತೆ ಕಳವು ಮಾಡುವುದರಲ್ಲಿ, ವೆಂಕಣ್ಣ ನಿಸ್ಸೀಮನಾದ. ಕೈಗೆ ಬಂದ ದುಡ್ಡಿನಲ್ಲಿ ಮೋಜಾಗಿ, ರೋಪಾಗಿ ಇರುತ್ತಿದ್ದ. "ಸರಿಯಾಗಿ ಮೀಸೆ ಕೂಡ ಮೂಡ ದಿದ್ದರೂ, ಇಷ್ಟು ಉಡಾಳ ಆಗ್ಯಾನ. ಒಳ್ಳೆಯವನಾಗಲಿ–ಕೆಟ್ಟವನಾಗಲಿ, ಮಗಳ ಹೊಟ್ಟೀಲೆ ಹುಟ್ಟಿದ ಮಗ—ಬಿಡಲಿಕ್ಕೆ ಬರಾಣಲ್ಲ. ಹೆಣ್ಣಾಗಿದ್ದರ—ಲಗ್ನಮಾಡಿಬಿಟ್ಟ ರಾತು—ಗಂಡ ಬಂದು ಎಲ್ಲಾ ಸೊಕ್ಕು ಮುರೀತಿದ್ದ—ಏಷ್ಟಾದರೂ ಗಂಡು–ಗಂಡಸು. ಮೈಮುಚ್ಚಿಕೊಳ್ಳಲಿಕ್ಕೆ ಮೂರು ಗೇಣು ಬಟ್ಟೆ, ಗೇಣು ಹೊಟ್ಟೆಗೆ ಹಿಡಿ ಹಿಟ್ಟು ಸಂಪಾದಿಸಿಕೊಂಡು ಹ್ಯಾಂಗಾದರೂ ಬಾಳ್ತಾನ......" ಎಂದು ವೆಂಕಣ್ಣನ ತಾತ ಸುಮ್ಮ ನಿರುತ್ತಿದ್ದ.

ವೆಂಕಣ್ಣನಲ್ಲಿ ಇದ್ದಕ್ಕಿದ್ದಂತೆ ಯೌವನ ಉಕ್ಕಿಬಂತು. ಮಾಂಸಖಂಡಗಳಿಂದ ತುಂಬಿದ ದೇಹ. ಕಲ್ಲಿನೊಡನೆ ಕುಸ್ತಿ ಮಾಡುವ—ಮರಗಳನ್ನು ಕಿತ್ತು ಬಿಸಾಡುವ ಶಕ್ತಿ; ಅಂದವಾದ ಮುಖ. ಕಳ್ಳಕೊರಮನಾದರೂ, ಅವನ ಸ್ಫುರದ್ರೂಪ ನೋಡಿ, ತಾತ ಸಂತಸಪಟ್ಟ. ವೆಂಕಣ್ಣ ಗರಡಿಮನೆಯಲ್ಲಿ ಕಸರತ್ತು ಮಾಡಿ ಧಾಂಡಿಗನಾದ. ಅದ ರೊಡನೆ, ಮೀಸೆ ಹುರಿಮಾಡಿ, ತಾನು ಯಾರಿಗೂ ಕಡಿಮೆಯಲ್ಲ—ಎಂಬ ಅಹಂಭಾವ ದಿಂದ ಮೆರೆಯಹತ್ತಿದ. ವೆಂಕಣ್ಣನ ಸೋದರಮಾವ, ಇವನ ಕಾಟ ತಾಳಲಾರದೆ, ಆಸ್ತಿ ಹಂಚಿಕೊಂಡು ಬೇರೆಯಾದ. ಆಸ್ತಿ ಪಾಲಾದ ಮೇಲೆ ಉಳಿದ ಕುರಿ–ಮೇಕೆಗಳಿಂದ ವೆಂಕಣ್ಣನ ಆಟ ಸಾಗಲಿಲ್ಲ. ಮುದುಕ ತಾತ, ಮೊಮ್ಮಗನನ್ನು ಶಪಿಸುತ್ತಿದ್ದನಾದರೂ ಗಂಜಿ ಹಾಕುತ್ತಿದ್ದ. ಒಮ್ಮೊಮ್ಮೆ ತಾಯಿ–ತಂದೆ ಇಲ್ಲದ ತಬ್ಬಲಿ—ಎಂದು, ಮಮಕಾರ ತೋರುತ್ತಿದ್ದ. ವೆಂಕಣ್ಣನಿಗೆ ಮಾತ್ರ ಇದಾವುದರ ಪರಿವೆಯೂ ಇರಲಿಲ್ಲ. ಅವನಿಗೆ ಚಿಂತೆ ಎಂಬುದೇ ಇರಲಿಲ್ಲ.

ತಾತ ಸತ್ತು ಸ್ವರ್ಗ ಸೇರಿದಾಗ ಮಾತ್ರ, ವೆಂಕಣ್ಣ ಕಣ್ಣೀರಿಟ್ಟ. ಅದುವರೆವಿಗೂ, ಅವನಿಗೆ ಹಸಿವು ಎಂದರೇನು ಎಂಬುದರ ಅರಿವಿರಲಿಲ್ಲ. ಹಸಿವಾದಾಗ, "ತಾತ, ಗಂಜಿ ಹಾಕು"—ಎಂದರಾಯಿತು, ತಾತ ಹೊಟ್ಟೆಗೆ ಹಾಕುತ್ತಿದ್ದ. ಆದರೆ ತಾತ ಹೋದ ಮೇಲೆ, ಅವನಿಗಾಗಿ ಗಂಜಿ ಮಾಡಿ ಇಡುವವರು ಯಾರೂ ಇರಲಿಲ್ಲ. ಕರುಣೆ ತೋರಿ ಮಮಕಾರ ವ್ಯಕ್ತಪಡಿಸುವವರು ಯಾರೂ ಇರಲಿಲ್ಲ. ಅವನನ್ನು ಹದ್ದು–ಬಸ್ತಿನಲ್ಲಿಡು ವವರು ಯಾರೂ ಉಳಿಯಲಿಲ್ಲ. ಒಂಟಿಯಾದ ವೆಂಕಣ್ಣ, ಮನೆ ಬಿಟ್ಟು ಬೀದಿಗೆ ಬಿದ್ದ. ಊರಿನವರು ಯಾರೇ ಆಗಲಿ, ಅವನನ್ನು ಸಮೀಪಕ್ಕೆ ಬರಗೊಡುತ್ತಿರಲಿಲ್ಲ. ಎಲ್ಲರೂ, ಆತನನ್ನು ನೋಡಿ ಹೆದರಿ ದೂರ ಹೋಗುತ್ತಿದ್ದರು. ಮಕ್ಕಳು ಕೂಡ ಅವನನ್ನು

ನೋಡಿ ಭಯಪಡುತ್ತಿದ್ದವು. ಕೊನೆಗೆ ಬೀದಿನಾಯಿಗಳು ಕೂಡ ಅವನನ್ನು ನೋಡಿ ಬಾಲ ಮುದುರಿಕೊಂಡು ಓಡಿಹೋಗುತ್ತಿದ್ದವು.

ತಾನಿಷ್ಟು ಕೆಟ್ಟವನೇ—ಎಂಬ ವಿಚಾರ, ಆಗಾಗ ವೆಂಕಣ್ಣನನ್ನು ಕಾಡುತ್ತಿತ್ತು. ಎಲ್ಲರಿಗೂ ಬೇಡವಾದವನು, ತನ್ನದೇ ರಾಜ್ಯ, ತನ್ನದೇ ನಿಯಮ ರೂಪಿಸಿಕೊಂಡ. ಹಸಿದಾಗ ಕಳವು ಮಾಡಿದ; ನಾಲ್ಕು ಜನರನ್ನು ಬೆದರಿಸಿದ; ಬೈದ, ಹೊಡೆದ. ಕೈಯಲ್ಲಿ ದುಡ್ಡಿರದಿದ್ದಾಗ ದಾರಿಯಲ್ಲಿ ಹೋಗುವವರನ್ನು ತಡೆದು, ಮರ್ಯಾದೆಯಿಂದ ಬೇಡಿ ದುಡ್ಡು ಪಡೆದ. ಅವರು ಕೊಡದಿದ್ದಾಗ, ಅವರ ಬೆನ್ನು ಮುರಿದು ಕಳಿಸಿದ.—ಆದರೆ ಆಗಾಗ, ತನ್ನ ಈ ಕೃತ್ಯಗಳ ಬಗ್ಗೆ, ಅವನಿಗೇ ಕಳವಳವಾಗುತ್ತಿತ್ತು. ನಾನು ಹೀಗೇಕೆ ಮಾಡಿದೆ; ಹೀಗೇಕೆ ಆದೆ—ಎಂದು ಯೋಚಿಸುತ್ತಿದ್ದ. ಅಂತಹ ಸಮಯದಲ್ಲಿ, ತನಗೂ ಒಬ್ಬ ಬಂಗಾರದಂತಹ ಹೆಂಡತಿ ಇದ್ದರೆ, ತನಗೂ ಚೊಕ್ಕವಾದ ಒಂದು ಸಂಸಾರ ಇದ್ದಿದ್ದರೆ...... ಆದರೆ ಅವನ ಭಾಗ್ಯಕ್ಕೆ ಅದಾವುದೂ ಇರಲಿಲ್ಲ.

"ನಾನು ಕೆಟ್ಟವನಾಗಬೇಕು. ನಾನು ಕೆಟ್ಟವನಾಗದೇ ವಿಧಿಯಿಲ್ಲ. ಕೆಟ್ಟವನಾಗದೆ ನನ್ನ ಹೊಟ್ಟೆ ತುಂಬುವುದಿಲ್ಲ. ಈ ಪ್ರಪಂಚದಲ್ಲಿ ನನಗಾರೂ ಇಲ್ಲ. ನನಗೆ ನಾನೇ ಗತಿ. ಅತ್ತರೆ ನಾನೇ ಅಳಬೇಕು. ನಕ್ಕರೆ ನಾನೇ ನಗಬೇಕು. ನನ್ನ ಸುಖ—ದುಃಖಗಳನ್ನು ಹಂಚಿಕೊಳ್ಳುವವರು ಯಾರೂ ಇಲ್ಲ. ಹುಟ್ಟಿದಾಗಿನಿಂದ, ತುತ್ತು ಅನ್ನಕ್ಕಾಗಿ ಮೈಬಗ್ಗಿಸಿ ದುಡಿಯುವುದನ್ನು ಕಲಿಯಲಿಲ್ಲ—ಸರಿ, ಆದದ್ದಾಯಿತು. ನಾನಂತೂ ಎಲ್ಲರ ಕಣ್ಣಿನಲ್ಲೂ ಕೆಟ್ಟವನಾದೆ. ಮನುಷ್ಯ ಸತ್ತರ, ಆತನ ನೀತಿ, ಆತನ ಮಾತು ಉಳಿತದಂತ—ಆತನ ಶೀಲ ಸದ್ಗುಣ ಉಳಿತದಂತ...... ಎತ್ತು ಸತ್ತರ ಅದರ ಎಲುಬು ಉಳಿತಾವಂತ...... ನಾನು ಸತ್ತರೂ, ಈ ಸುತ್ತಮುತ್ತಲಿನ ಹಳ್ಳಿಗಳಲ್ಲಿ, ರಾವಣಾಸೂರನ ಹಾಗೆ, ನನ್ನ ಹೆಸರಾದರೂ ಉಳೀಲಿ......" ವೆಂಕಣ್ಣ ಆಗಿಂದಾಗ್ಗೆ ಹೇಳಿಕೊಳ್ಳುತ್ತಿದ್ದ ಮಾತಿದು.

ತನ್ನ ತಾತ ಒಳ್ಳೆಯವನೆಂಬ ವಿಚಾರ ಬಂದಾಗ, ಅವನ ಕಣ್ಣುಗಳಲ್ಲಿ ನೀರಾಡುತ್ತಿತ್ತು. ಈ ಪರಿಸ್ಥಿತಿಯಲ್ಲಿ, ಒಂದು ದಿನ ಅವನು ಸೂರಯ್ಯನ ಮನೆಯ ಜಗುಲಿಯ ಮೇಲೆ, ನೆಲ ನೋಡುತ್ತಾ ಕುಳಿತ. ಕಣ್ಣೆದುರಿಗೆ, ಗತಿಸಿದ ತನ್ನ ತಾತನ ಆಕೃತಿ ಬಂದಂತಾಯಿತು. ತನ್ನನ್ನು ನೋಡಿ ಆ ಮುದಿ ಜೀವ ಕಣ್ಣೀರು ಸುರಿಸುತ್ತಿರುವಂತೆ, ವೆಂಕಣ್ಣನಿಗೆ ಭಾಸವಾಯಿತು.

ಸೂರಯ್ಯನ ಮನೆ ಸಾಕಷ್ಟು ದೊಡ್ಡದಾಗಿತ್ತು. ಹತ್ತು ಎಕರೆ ಫಲವತ್ತಾದ ಭೂಮಿಯನ್ನು ಹೊಂದಿದ್ದ ಸೂರಯ್ಯನಿಗೆ, ಒಬ್ಬಳೇ ಒಬ್ಬಳು ಮಗಳು ಸೂರಮ್ಮ. ಸೂರಮ್ಮಳಿಗೆ ವಯಸ್ಸಾಗಿದ್ದರೂ, ಮಗಳ ಮೇಲಿನ ತಂದೆಯ ವ್ಯಾಮೋಹದಿಂದಾಗಿ ಮದುವೆಯಾಗದೆ ಮನೆಯಲ್ಲೆ ಉಳಿದಿದ್ದಳು. ಒಳ್ಳೆಯ ಹುಡುಗನನ್ನು ನೋಡಿ, ಮನೆ ಅಳಿಯನನ್ನಾಗಿ ಮಾಡಿಕೊಳ್ಳಲು ಸೂರಯ್ಯ ಹವಣಿಸುತ್ತಿದ್ದು ಅದಕ್ಕಾಗಿ ಪರದಾಡುತ್ತಿದ್ದ.

ವೆಂಕಣ್ಣ, ತನ್ನ ಮನೆಯ ಜಗುಲಿಯ ಮೇಲೆ ಕುಳಿತದ್ದನ್ನು ನೋಡಿ ಹೊರಬಂದ ಸೂರಮ್ಮ, "ಅಯ್ಯೋ ಪಾಪ"—ಎಂದು ಕನಿಕರಿಸಿದಳು. ಆದರೆ, ಅದು ವೆಂಕಣ್ಣನಿಗೆ ತಿಳಿಯಲೇ ಇಲ್ಲ—ಆ ಮಾತು, ಆತನ ಕಿವಿಗೆ ಬೀಳಲೇ ಇಲ್ಲ. "ಹೊಟ್ಟಿ ಬೆನ್ನಿಗೆ ಹತ್ತಿ ಕೊಂಡುಹೋಗ್ಯದ.—ಊಟಕ್ಕ ಹಾಕಲೇನು?"—ವೆಂಕಣ್ಣನ ಕಿವಿಯಲ್ಲಿ ಕೋಗಿಲೆ ಕೂಗಿದಂತಾಯಿತು. ಹಿಂದಿರುಗಿ ನೋಡಿದ, ಮಂದಹಾಸ ಬೀರುತ್ತ ನಿಂತಿದ್ದ ಯೌವನದ ಆ ಚೆಲುವೆಯನ್ನು ನೋಡಿ, ಅವನಿಗೆ ಹಿಡಿಸಲಾಗದಷ್ಟು ಸಂತೋಷವಾಯಿತು. ಅವನು, ಅವಳನ್ನು ನೋಡುತ್ತಾ ಕುಳಿತಿದ್ದಾಗಲೇ—"ಏ ಸೂರಿ, ನಾಯಿ ಬಾಯಲ್ಲಿ ಕೋಲು ಇಡಾಕ ಹೋದರ, ಭೌ-ಭೌ—ಅಂತ ಬೆನ್ನಟ್ಟತದ......" ಸೂರಮ್ಮನ ತಾಯಿ ಒಳಗಿನಿಂದಲೇ ಕೂಗಿದಳು.

ನಾನು ನಾಯಿಯೆ? ನಾಯಿಗಿರುವ ಸ್ವಾಮಿನಿಷ್ಠೆ, ವಿಶ್ವಾಸ ನನ್ನಲ್ಲಿಲ್ಲವಲ್ಲ—ಅದು ಹೋಗಲಿ, ಈ ರೈತನ ಹೆಂಡತಿ, ನನ್ನ ಹಿಂಗ ಅವಮಾನ ಮಾಡಬಹುದೇ? ನನ್ನ ಹೀಯಾಳಿಸಿ ಮಾತನಾಡೊ ಅಧಿಕಾರ ನಮ್ಮಪ್ಪಗೂ ಇರಲಿಲ್ಲ ಅಂದಮ್ಯಾಲೆ, ಈ ಹೆಣ್ಣುಮಗಳು ಹೀಂಗ ಅನ್ನಬಹುದೇ?—

"ಏನಮ್ಮಾ, ಏನಂದಿ......" ವೆಂಕಣ್ಣ ಕುಳಿತ ಸ್ಥಳದಿಂದ ಮೇಲೆದ್ದ.

ವೆಂಕಣ್ಣನ ಮುಖದ ಮೇಲೆ ಮೂಡಿದ್ದ ಭಾವನೆಯನ್ನು, ಅವನು ಎದ್ದುನಿಂತ ವೈಖರಿಯನ್ನು ನೋಡಿ, ಸೂರಮ್ಮನ ತಾಯಿ, ಮುಖದ ಮೇಲೆ ಎಲ್ಲಿಲ್ಲದ ನಗುವನ್ನು ತಂದುಕೊಂಡು, "ಏನಿಲ್ಲ ವೆಂಕಣ್ಣ...... ನಿನ್ನ ತಾತ ಎಷ್ಟು ಒಳ್ಳೆಯವನು......" ಎಂದು ಮಾತು ಮರೆಸಿದಳು.

ವೆಂಕಣ್ಣನ ಮನಸ್ಸು, ಮತ್ತೆ ತಾತನತ್ತ ತಿರುಗಿತು. "ಹೌದಮ್ಮ, ಆತ ಬದುಕಿರೋ ವರೆಗೂ, ಆತನನ್ನು ಗೋಳುಹುಯ್ದುಕೊಂಡೆ. ನನ್ನಿಂದಾಗಿ, ಆತ ಕೂಡ, ಊರವರ ಮುಂದೆ ಕೆಟ್ಟವನಾದ."

ಉಮ್ಮಳಿಸಿ ಬಂದ ದುಃಖದಿಂದ ವೆಂಕಣ್ಣ ಮುಂದೆ ಮಾತನಾಡಲಿಲ್ಲ. ಇಷ್ಟರಲ್ಲಿ. ಬಾಳೆ ಎಲೆಯಲ್ಲಿ ಊಟ ಬಡಿಸಿಕೊಂಡು ಬಂದ ಸೂರಮ್ಮ, ವೆಂಕಣ್ಣನನ್ನು ಊಟ ಕ್ಕೆಬ್ಬಿಸಿದಳು. ಸೂರಮ್ಮನ ತಾಯಿ ಮಾತ್ರ, ಏನೂ ಹೇಳದೆ ಸುಮ್ಮನೆ ನಿಂತಿದ್ದಳು. ವೆಂಕಣ್ಣ, ಊಟ ಬೇಡವೆಂದು ಹೇಳಿ ಅಲ್ಲಿಂದ ಕಾಲ್ತೆಗೆಯಬೇಕೆಂದುಕೊಂಡು, ಒಂದು ಹೆಜ್ಜೆ ಮುಂದಿಟ್ಟು, ಸೂರಮ್ಮಳತ್ತ ನೋಡಿದ. ಅವಳ ಆ ನೋಟದಿಂದ. ಅವಳ ನೋಟದಲ್ಲಿದ್ದ ಕೋರಿಕೆಯಿಂದ, ಅವನ ಹೃದಯದಲ್ಲಿ, ಅದೇ ಮೊದಲಸಲವಾಗಿ ವೀಣೆ ಮಿಡಿಯಿತು.

ಅವನ ಕಾಲುಗಳು ಏಳಲಿಲ್ಲ. ಅವಳಲ್ಲಿನ ಯಾವುದೋ ಶಕ್ತಿ ತನ್ನನ್ನು ಬಂಧಿಸಿ, ಅವಳತ್ತ ಎಳೆದೊಯ್ಯುತ್ತಿರುವಂತೆ ಅವನಿಗೆ ಭಾಸವಾಯಿತು. ಅವನು ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕಿಟ್ಟಾಗ, ಅವಳು ಅಹಂಭಾವದಿಂದ, ವಿಜಯೋತ್ಸಾಹದಿಂದ ನಕ್ಕಳು.

ಯಾವ ಮಾತೂ ಆಡದೆ ನಗುತ್ತ ನಿಂತಿದ್ದ ಸೂರಮ್ಮಳನ್ನು ನೋಡಿ, ವೆಂಕಣ್ಣ ಮತ್ತಷ್ಟು ಗಲಿಬಿಲಿಗೊಂಡ. ನೇರವಾಗಿ ಹೋಗಿ ಎಲೆಯ ಮುಂದೆ ಕುಳಿತ. ಸೂರಮ್ಮನ ತಾಯಿ, ಕೆಲಸದ ನೆಪ ಹೇಳಿ, ಅಲ್ಲಿ ನಿಲ್ಲದೆ ಒಳಗೆ ಹೋದಳು. ಒಂಟಿಯಾಗಿ ಎದುರಿಗೆ ನಿಂತಿದ್ದ ಸೂರಮ್ಮಳನ್ನು ತಲೆ ಎತ್ತಿ ನೋಡಲು ವೆಂಕಣ್ಣನಿಗೆ ನಾಚಿಕೆಯಾಯಿತು. ಹಾಗೆ ನೋಡಿದರೆ ಅವನಿಗೆ ಊಟ ಮಾಡಲೂ ಸಹ ಮುಜಗರವಾಯಿತು. ಒಂದು ಸಲವಾದರೂ ತಲೆ ಎತ್ತಿ ನೇರವಾಗಿ ಅವಳನ್ನು ನೋಡದಾದ. ತನ್ನ ಅಂಗಸೌಷ್ಠವವನ್ನು, ತನ್ನ ರೂಪವನ್ನು ನೋಡಿ ಈ ಹುಡುಗಿ ಮಾರುಹೋಗಿದ್ದಾಳೆಂದು, ಮನಸ್ಸಿನಲ್ಲೆ ಅಂದುಕೊಂಡ.

ಭೀಮಕಾಯದ—ಸ್ಫುರದ್ರೂಪಿಯಾದ ವೆಂಕಣ್ಣನನ್ನು ನೋಡಿ ಅವಳು ಮೋಹ ಪರವಶಳಾಗಿದ್ದಳು—ಅಷ್ಟೆ. ಅವನು ಊಟಕ್ಕೆ ಕುಳಿತಿದ್ದಾಗ ಅವಳು ಒಂದೇ ಒಂದು ಮಾತು—"ನೀನೆಷ್ಟು ಒಳ್ಳೆಯವನು"—ಎಂದು ಮಾತ್ರ ಹೇಳಿದಳು.

ವೆಂಕಣ್ಣ ಆ ಮಾತು ಕೇಳಿ, ಮನಸ್ಸಿನಲ್ಲೆ ನಡುಗಿಹೋದ. ಅವನನ್ನು ಯಾರೇ ಆಗಲಿ ಒಳ್ಳೆಯವನೆಂದು ಕರೆದಿರಲಿಲ್ಲ. ಆದರೆ, ಇವಳು, ಸಿರಿವಂತರ ಮನೆಯ ಈ ಹೆಣ್ಣು, ಹೊಟ್ಟೆಗಿಲ್ಲದ ತನ್ನಂತಹ ತಿರುಕನನ್ನು, ಊರ ಜನರ ದ್ವೇಷ ಕಟ್ಟಿಕೊಂಡವನನ್ನು ಒಳ್ಳೆಯವನೆಂದು ಹೇಳಬೇಕಾದರೆ...... ತಾನೆಲ್ಲಿ—ಅವಳೆಲ್ಲಿ?

ಬಾಯಲ್ಲಿನ ತುತ್ತು ಗಂಟಲಿನಿಂದ ಇಳಿಯಲಿಲ್ಲ. ಹಾಗೆಯೆ ಮುಖ ಎತ್ತಿ ಅವಳನ್ನು ನೋಡಿದ. ಮೈಯಲ್ಲಿ ಜುಂ—ಎಂದಿತು. ಎತ್ತ ನೋಡಿದರೂ ಅಂದ–ಆನಂದ. ಅವಳ ಚೆಲುವನ್ನು ನೋಡಿ...... ಏನೋ ಮಾಡಿಬಿಡಬೇಕೆಂದು ಮೇಲೆದ್ದ...... ಮೇಲೆದ್ದವನು, "ಸೂರಿ, ನನ್ನಷ್ಟು ಕೆಟ್ಟವರು ಮತ್ತೊಬ್ಬರಿಲ್ಲ"—ಎಂದು ಹೇಳಿ, ಅಲ್ಲಿಂದ ಹೊರಟುಬಿಟ್ಟ...... ಒಮ್ಮೆಯೂ ಹಿಂದಿರುಗಿ ನೋಡಲಿಲ್ಲ...... ಅವನ ಹೃದಯದಲ್ಲಿ ಆಗಲೇ ಬಿರುಗಾಳಿ ಎದ್ದಿತ್ತು. ಪ್ರೀತಿಯ ಸೆಲೆ ಒಡೆದಿತ್ತು...... ಅದು ಎಂದೇ ಆಗಲಿ ಇಂಗಲಿಲ್ಲ......

ಗೊತ್ತುಗುರಿ ಇಲ್ಲದೆ, ಒಂದು ನೆಲೆ ಇಲ್ಲದೆ, ಊರೂರು ತಿರುಗಿದ ವೆಂಕಣ್ಣ. ಈ ನಡುವೆ ಸೂರಮ್ಮ ಹೇಳಿಕಳಿಸಿದಳು. ಆದರೆ, ಅವರ ಮನೆಗೆ ಹೋಗಲು, ಅವನಿಗೆ ಭಯವಾಯಿತು. ಅವಳು ದುಡ್ಡು ಕಳುಹಿಸಿದಾಗ ಪಡೆದ. ಆದರೆ, ಮರುಘಳಿಗೆಯಲ್ಲೆ, "ಹೆಣ್ಣುಮಗಳ ದುಡ್ಡು ನನಗೆ ಬೇಡ"—ಎಂದು ಹಿಂದಿರುಗಿಸಿದ. ಅನಂತರ ಸುಮಾರು ಎರಡು ತಿಂಗಳು ಎಲ್ಲಿಗೋ ಹೊರಟುಹೋದ.

ಅವನು ಮತ್ತೆ ಊರಿಗೆ ಬಂದದ್ದು, ಗೌರಿ ಹುಣ್ಣಿಮೆಯ ದಿನವೇ. ಅಂದು ಊರು, ಬೆಳದಿಂಗಳಿನಲ್ಲಿ ಮುಳುಗಿತ್ತು. ಎಲ್ಲೆಲ್ಲೂ ಉತ್ಸಾಹ ಕಂಡುಬರುತ್ತಿತ್ತು. ಗ್ರಾಮ ದೇವತೆ ನೀಲಮ್ಮಳ ಮೆರವಣಿಗೆ ವಿಜೃಂಭಣೆಯಿಂದ ನಡೆದಿತ್ತು. ಊರಿನ ಯುವಕರು, ಯುವತಿಯರು ದೇವಿಯ ಮುಂದೆ, ಮೆರವಣಿಗೆಯಲ್ಲಿ ಹೊರಟಿದ್ದರು. ಅವರಲ್ಲಿ

ಸೂರಮ್ಮಳಿಗೆ ಬೇಕಾಗಿದ್ದ ವ್ಯಕ್ತಿ ಮಾತ್ರ ಬಹಳ ಹೊತ್ತಿನ ವರೆಗೆ, ಅವಳ ಕಣ್ಣಿಗೆ ಬೀಳಲಿಲ್ಲ. ಆಗ, ಊರಿಗೆ ಹಿಂದಿರುಗಿದ್ದ ವೆಂಕಣ್ಣ, ತಮಟೆ ಅವರ ಬಳಿ ನಿಂತದ್ದು ಅವಳಿಗೆ ಕಾಣಿಸಿತು. ಅವನು, ತಮಟೆ ಬಾರಿಸುವವರಿಗೆ ಉತ್ತೇಜನ ನೀಡುತ್ತಾ, ಕೇಕೆ ಹಾಕುತ್ತಿದ್ದನಾದರೂ, ಅವನ ಮನಸ್ಸು ಮಾತ್ರ ಅಲ್ಲಿರಲಿಲ್ಲ. ಯಾವುದೋ ಕೊರತೆ ಅವನನ್ನು ಪೀಡಿಸುತ್ತಿತ್ತು....... ಮೆರವಣಿಗೆ ಮುಂದೆ ಹೊರಟಿತು. ಜನರೂ ಸಹ ಮುಂದೆ ನಡೆದರು. ಕೆಲವರು ಹಾಡುತ್ತಿದ್ದರು, ಕೆಲವರು ಸಂತೋಷದಿಂದ ಕುಣಿಯುತ್ತಿದ್ದರು. ವೆಂಕಣ್ಣ ನಿಂತಲ್ಲಿಂದ ಕದಲದೆ, ಹಿಂದುಳಿದ. ಅವನು ಹಿಂದುಳಿದದ್ದನ್ನು ಗಮನಿಸಿದ ಸೂರಮ್ಮ, ತನ್ನ ಜೊತೆಯವರಿಂದ ಬೇರೆಯಾದಳು.

ಸೂರಮ್ಮ, ಮನೆಗೆ ಹೋಗುವ ನೆಪದಲ್ಲಿ ಬೇರೆ ದಾರಿ ಹಿಡಿದಳು. ದಾರಿಯಲ್ಲಿ, ಗಿಡಗಂಟಿಗಳಿಂದ ತುಂಬಿದ ಒಂದು ತೋಟವಿತ್ತು. ಅಲ್ಲಿಯೇ ಮೋಟಿನ ಒಂದು ಬಣವಿ ಇತ್ತು. ಸೂರಮ್ಮ, ಆ ಬಣವಿಯ ಬಳಿ, ಗಿಡಗಳ ಮರೆಯಲ್ಲಿ ನಿಂತಳು. ಅವಳು ಅಂದುಕೊಂಡ ಹಾಗೆ, ವೆಂಕಣ್ಣ ಅದೇ ದಾರಿಯಲ್ಲಿ ಬಂದ. ಅವನು ತನ್ನನ್ನು ನೋಡದೆ ಮುಂದಕ್ಕೆ ಹೊರಟಾಗ, ಸೂರಮ್ಮ ಅವನನ್ನು ಕೂಗಿದಳು. ವೆಂಕಣ್ಣ ಅವಳ ಕೂಗನ್ನು ಕೇಳಿ ಥಕ್ಕನೆ ನಿಂತನಾದರೂ, ಹಿಂದಕ್ಕೆ ಬರಲಿಲ್ಲ. ಸೂರಮ್ಮ, ತಡೆಯಲಾಗದೆ ಮುಂದಕ್ಕೆ ಹೋಗಿ ಅವನ ಕೈ ಹಿಡಿದಳು. ಆಗಲೂ ಸಹ ಅವನು ಕಲ್ಲಿನ ಮೂರ್ತಿಯಂತೆ ನಿಂತೇ ಇದ್ದ. ಸೂರಮ್ಮ, "ಇಲ್ಲಿ ಯಾರೂ ಇಲ್ಲ......" ಎಂದು ಮೃದುವಾಗಿ ಹೇಳಿದಳು.

"ನಾನು ಯಾರಿಗೂ ಹೆದರುವುದಿಲ್ಲ, ಹತ್ತು ಮಂದಿ ಬಂದರೂ ಎದುರಿಸುವ ಗಂಡಸುತನ ನನಗದ."

"ನನ್ನ ಮಾತು ಕೇಳ್ತೀಯಾ?"

ಅವಳ ಈ ಪ್ರಾರ್ಥನೆಯನ್ನು ತಿರಸ್ಕರಿಸಲಾಗದೆ, ಅವಳ ಹಿಂದೆ ಹೊರಟ ವೆಂಕಣ್ಣ. ಆಕಾಶ ನಿರ್ಮಲವಾಗಿತ್ತು. ಬೆಳ್ಳಿಯಂತಹ ಬೆಳದಿಂಗಳು, ನಡುಹಗಲಿನಲ್ಲಿರುವಂತೆ, ಎಲ್ಲವನ್ನೂ ಬೆಳಗಿತ್ತು.

"ಈ ದಿನಕ್ಕಾಗಿ ಅದೆಷ್ಟು ದಿನಗಳಿಂದ ಕಾದಿದ್ದೆ. ನಿನ್ನ ಸಂಗತಿ, ನಿನ್ನ ಸಾಮಿಪ್ಯಕ್ಕಾಗಿ ಹಾತೊರೆದು...... ಹಾಳಾದ್ದು, ಈ ಜಾತಿಯೊಂದು ಅಡ್ಡ ಬರದಿದ್ದರ......"

"ಸೂರಿ, ಅಂದಚೆಂದದ ಹೆಣ್ಣು ನೀನು. ಸಿರಿ-ಸಂಪತ್ತಿನಲ್ಲಿ ರಾರಾಜಿಸುವ ಸೌಭಾಗ್ಯ ಪಡೆದವಳು. ನನ್ನಂತಹ ಪಾಪಿಷ್ಟನನ್ನು ಕಟ್ಟಿಕೊಂಡೇನು ಸುಖಪಡುತ್ತಿ?" ವೆಂಕಣ್ಣ ಅವಳಿಂದ ದೂರ ನಿಂತು ಹೇಳಿದ.

"ನನ್ನ ಮದುವೆ ಆಗಲೇ ನಿಶ್ಚಯ ಆಗ್ಯದ. ಆದರೂ ಹಗಲು ರಾತ್ರಿ ನಾನು ನಿನಗಾಗಿಯೇ ಪರಿತಪಿಸುತ್ತಿದ್ದೇನೆ. ಎಲ್ಲಿಗಾದರೂ ಓಡಿಹೋಗೋಣ ಬಾ"—ಎನ್ನುತ್ತಾ, ಸೂರಮ್ಮ ವೆಂಕಣ್ಣನನ್ನು ಗಟ್ಟಿಯಾಗಿ ಹಿಡಿದುಕೊಂಡಳು.

ಅವಳ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು. ದುಗುಡ ತುಂಬಿದ

ಅವಳ ಮುಖ ನೋಡಿ ವೆಂಕಣ್ಣನ ಮನಸ್ಸು ಕರಗಿತಾದರೂ, ಅದನ್ನು ಅವನು ತೋರ ಗೊಡಲಿಲ್ಲ.

"ಬೇಡ. ಇಷ್ಟು ಬಲಿಷ್ಟನಾಗಿರುವ ನಾನು ನಾಲ್ಕು ಜನರ ಎದುರು ಬಲಹೀನನಾಗಿ ಬದುಕಬೇಕೆಂಬುದು ನಿನ್ನ ಇಚ್ಛೆಯೇ?"—ಶಿಲೆಯಂತೆ ನಿಂತಿದ್ದ ವೆಂಕಣ್ಣ ಕೇಳಿಧಾಗ, ಸೂರಮ್ಮ ಮಾತನಾಡದಾದಳು. ಆದರೆ, ಅವಳು ವೆಂಕಣ್ಣನನ್ನು ಬಿಡಲಿಲ್ಲ. "ಬೇಡ ಸೂರಿ, ನನ್ನಷ್ಟಕ್ಕ ನನ್ನ ಬಿಟ್ಟುಬಿಡು......" ಅಂಗಲಾಚಿದ ವೆಂಕಣ್ಣ.

ಸೂರಮ್ಮಳ ಕಣ್ಣಿನಿಂದ ನೀರು ಹರಿಯುತ್ತಲೇ ಇತ್ತು. ಅವಳ ದೈನ್ಯವಾದ ಮುಖ ವನ್ನು ನೋಡಿ ವೆಂಕಣ್ಣ ಕಸಿವಿಸಿಗೊಂಡ. "ಸೂರಿ, ನನ್ನನ್ನು ಒಬ್ಬ ಮನುಷ್ಯನನ್ನಾಗಿ ಪರಿಗಣಿಸಿದವಳು ನೀನೊಬ್ಬಳೆ. ಇಡೀ ಲೋಕಕ್ಕ ನಾನು ಕೆಡಕು ಮಾಡಬಹುದಾದರೂ, ನಿನಗ ನಾನು ಅನ್ಯಾಯ ಮಾಡಲಾರೆ—ನನ್ನದೇನು, ಇವತ್ತು ಇಲ್ಲಿದ್ದರ, ನಾಳೆ ಎಲ್ಲೊ–ಏನೊ......? ಸುಖವಾಗಿರುವ ನೀನು ದುಃಖಕ್ಕ ಈಡಾಗೋದನ್ನ ನಾನು ಸಹಿಸಲಾರೆ. ಇದ್ದ ಸುಖ ಕಳಕೊಂಡು ದುಃಖದ ದವಡಿಗೆ ಬೀಳಬ್ಯಾಡ"—ಎಂದು ಹೇಳಿದ ವೆಂಕಣ್ಣ, ತಾನೇ ಮುಂದಾಗಿ ಹೋಗಿ, ಅವಳ ಕಣ್ಣೀರನ್ನು ಒರೆಸಿದ. ಆಗಲೇ, ಗಾಳಿಗೆ ತೇಲಿಬಂದ ಮೋಡ ಒಂದು, ಚಂದಿರನನ್ನು ಮರೆಮಾಡಿತು. ಅವಳ ಹೃದಯ ದಲ್ಲಿನ ಒಂದು ಬಯಕೆ, ಅವಳ ದುಃಖವನ್ನು ಮರೆಮಾಡಿತು.

"ನೋಡು, ನಾನು ಒಂದು ಕೇಳ್ತೀನಿ. ಇಲ್ಲ ಅನ್ನಬೇಡ......"

ಅಲ್ಲಿಂದ ಹೊರಡಲು ಒಂದು ಹೆಜ್ಜೆ ಮುಂದಿಟ್ಟದ್ದ ವೆಂಕಣ್ಣ, ಅಲ್ಲಿಯೇ ನಿಂತು, "ಏನು?"—ಎಂದು ಕೇಳಿದ.

"ಇದೊ......" ಸೂರಮ್ಮ ಕೈಚಾಚಿ ಅವನನ್ನು ಬಿಗಿದಪ್ಪಿದಳು.

ಚಂದಿರನನ್ನು ಕವಿದಿದ್ದ ಮೋಡ ಸರಿಯಿತು. ಮೋಡದ ಮರೆಯಿಂದ ಮೇಲೆದ್ದು ಬಂದ ಚಂದಿರ, ಆಗಸದಲ್ಲಿನ ತನ್ನ ಪಯಣ ಮುಂದುವರಿಸಿದ.

ಮರುದಿನ ಬೆಳಗಾಗುವುದರೊಳಗಾಗಿ, ವೆಂಕಣ್ಣ ಊರಲ್ಲಿರಲಿಲ್ಲ. ಅದಾದ ವಾರದ ಒಳಗಾಗಿ, ಊರಲ್ಲಿ ಬಾಜಾ–ಬಜಂತ್ರಿ ಮೊಳಗಿದವು. ಆನೆಯಂತಹ ಮನುಷ್ಯ ಕೆಂಪಯ್ಯ, ಬಳ್ಳಿಯಂತೆ ಬಳಕುತ್ತಿದ್ದ ಸೂರಮ್ಮಳನ್ನು ಮದುವೆಯಾದ. ಕೆಂಪಯ್ಯನಿಗೆ ಇದು ಎರಡನೆಯ ಮದುವೆಯಾಗಿತ್ತು. ಮೊದಲನೆಯ ಹೆಂಡತಿ ಮಕ್ಕಳಿಲ್ಲದೆ ಕೊರಗಿ ತೀರಿಕೊಂಡದ್ದರಿಂದ, ಸೂರಮ್ಮಳನ್ನು ಉದ್ಧಾರಮಾಡಲು ಮುಂದೆ ಬಂದಿದ್ದ— ಕೆಂಪಯ್ಯ. ಸೂರಮ್ಮಳಿಗೆ ಈ ಸಂಬಂಧ ಇಷ್ಟವಿರದಿದ್ದರೂ ಕೂಡ, ಬಲವಂತಕ್ಕೆ ಒಪ್ಪಿದ್ದಳು. ದುಡ್ಡಿಗಾಗಿ ಏನು ಬೇಕಾದರೂ ಮಾಡಲು ಸಿದ್ಧವಾಗುತ್ತಿದ್ದ ಜಿಪುಣಾ ಗ್ರೇಸರ ಕೆಂಪಯ್ಯ, ಚೆಲುವಿನ ಗಣಿಯಾಗಿದ್ದ ಸೂರಮ್ಮಳನ್ನು ಮದುವೆಯಾದ.

ಸೂರಮ್ಮ, ಕೆಂಪಯ್ಯನ ಜೊತೆ ಸಂಸಾರ ಹೂಡಿದಳು. ಗಂಡನ ಮನೆಗೆ ಬಂದ ನಾಲ್ಕು ದಿನಗಳಲ್ಲೆ, "ಯೌವನ ಕಳೆದುಹೋದವನಿಗೆ ಮದುವೆಯಾದರೂ ಏಕೊ?"—

ಎಂದುಕೊಂಡಳು ಸೂರಮ್ಮ. ಮನೆಯಲ್ಲಿ, ಅವಳಿಗೆ ಯಾವುದಕ್ಕೂ ಕೊರತೆಯಿರಲಿಲ್ಲವಾದರೂ, ಸುಖ ಮಾತ್ರ ಅವಳ ಪಾಲಿಗಿರಲಿಲ್ಲ. ಅವಳು ಕಂಡ ಕನಸುಗಳಲ್ಲಿ ಒಂದಾದರೂ ನೆನಸಾಗಿರಲಿಲ್ಲ. ಸೂರಮ್ಮಳ ಮದುವೆಯಾಗಿ ಎರಡು ತಿಂಗಳು ಕಳೆದಿದ್ದುವು. ಒಂದು ರಾತ್ರಿ ವೆಂಕಣ್ಣ, ಪಕ್ಕದ ಗ್ರಾಮದಲ್ಲಿ, ಯಾರದೊ ಮನೆಗೆ ಕನ್ನ ಹಾಕಿ ಓಡಿಬರುತ್ತಿದ್ದ. ಕತ್ತಲಿನಲ್ಲಿ ಸರಸರನೆ ಹೊರಟಿದ್ದ ವೆಂಕಣ್ಣನಿಗೆ ಮೂವರು, ಎರಡು ಸೀಮೆ ಎತ್ತುಗಳನ್ನು ಹೊಡೆದುಕೊಂಡು ಬರುತ್ತಿರುವುದು ಕಾಣಿಸಿತು. ಆ ಊರಿನಲ್ಲಿ, ಕೆಂಪಯ್ಯನ ಬಳಿ ಮಾತ್ರ ಅಂತಹ ಸೀಮೆ ಎತ್ತುಗಳಿವೆ—ಎಂಬುದನ್ನು ವೆಂಕಣ್ಣ ಅರಿತಿದ್ದನಾದ್ದರಿಂದ, ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಿದ್ದವರು ಕಳ್ಳರೆಂಬುದನ್ನು ತಿಳಿದುಕೊಂಡ. ಕೂಡಲೇ ಅವರನ್ನು ತಡೆಗಟ್ಟಿ, ಅವರ ಕೈಯಲ್ಲಿದ್ದ ಕೋಲುಗಳನ್ನು ಕಸಿದು, ಅವರೊಡನೆ ಕಾದಾಡಿದ. ಕಳ್ಳರ ಪೈಕಿ ಒಬ್ಬನ ಕಾಲು ಮುರಿದು ಕೆಳಗೆ ಬಿದ್ದಾಗ ಉಳಿದ ಇಬ್ಬರು ಕಳ್ಳರು ಓಡಿಹೋದರು. ವೆಂಕಣ್ಣನಿಗೆ ಸಣ್ಣಪುಟ್ಟ ಗಾಯಗಳಾಗಿದ್ದವು.

ಕಾಲು ಮುರಿದುಕೊಂಡು ಒದ್ದಾಡುತ್ತಿದ್ದ ಕಳ್ಳನನ್ನು ಹೊತ್ತುಕೊಂಡು, ಕೆಂಪಯ್ಯನ ಎತ್ತುಗಳನ್ನು ಹೊಡೆದುಕೊಂಡು, ವೆಂಕಣ್ಣ ಊರಿಗೆ ಬಂದಾಗ, ಜನರೆಲ್ಲ ಅವನ ಸಾಹಸವನ್ನು ಮೆಚ್ಚಿದರು. ಕೆಂಪಯ್ಯ ತನ್ನ ಕೃತಜ್ಞತೆಗಳನ್ನು ಅರ್ಪಿಸಿ, ಮನೆಯಲ್ಲಿ ಊಟಮಾಡುವಂತೆ ವೆಂಕಣ್ಣನನ್ನು ಆಹ್ವಾನಿಸಿದ.

ವೆಂಕಣ್ಣನ ಜೀವನದಲ್ಲಿ, ಇದೊಂದು ಮಹಾನ್ ಘಟನೆಯಾಗಿ ಪರಿಣಮಿಸಿತು. ಅವನ ಮತ್ತು ಸೂರಮ್ಮಳ ಭೇಟಿ, ಅವನ ಜೀವನಪಥವನ್ನೆ ಬದಲಾಯಿಸಿತು. ನೀರಿಲ್ಲದ ಫಲವತ್ತಾದ ಭೂಮಿಗೆ, ಕಾಲುವೆಯ ಮೂಲಕ ನೀರು ಒದಗಿಸಿದಂತಾಯಿತು. ವೆಂಕಣ್ಣ ತನ್ನ ಮನೆಯಲ್ಲೆ ಇರಬೇಕೆಂದೂ, ಇರದಿದ್ದಲ್ಲಿ ನೇಣು ಹಾಕಿಕೊಂಡು ಸಾಯುವುದಾಗಿಯೂ ಸೂರಮ್ಮ ಪಠಹಿಡಿದಳು. ವೆಂಕಣ್ಣ, ಅಲ್ಲಿಯೇ, ಅವಳ ಮನೆಯಲ್ಲೆ ಉಳಿದುಕೊಂಡ.

ವೆಂಕಣ್ಣ, ಕೆಂಪಯ್ಯನ ಮನೆಯಲ್ಲಿ ಬಿಡಾರ ಬಿಟ್ಟಿದ್ದಕ್ಕೆ, ಊರಲ್ಲಿ ಗುಸು–ಗುಸು ಪ್ರಾರಂಭವಾಯಿತು. ಕೆಂಪಯ್ಯನಿಗೆ ಮಾತ್ರ, ಪ್ರತಿಫಲಾಪೇಕ್ಷೆ ಇಲ್ಲದೆ, ಎಲ್ಲಾ ಕೆಲಸ ಕಾರ್ಯಗಳಲ್ಲೂ ನೆರವಾಗುವ ಒಬ್ಬ ವ್ಯಕ್ತಿ ಸಿಕ್ಕಿದ್ದಕ್ಕಾಗಿ ಸಂತೋಷವೇ ಆಗಿತ್ತು. ಸೂರಮ್ಮ, ವೆಂಕಣ್ಣ ಒಂದು ನಿಮಿಷವಾದರೂ ತನ್ನಿಂದ ದೂರವಿರುವುದನ್ನು ಸಹಿಸದಾದಳು. ನೆಲೆನಿಂತ, ನಿಶ್ಚಿಂತವಾದ ಜೀವನದಿಂದ ವೆಂಕಣ್ಣನ ಆರೋಗ್ಯ ಮತ್ತಷ್ಟು ಕುದುರಿತು. ಇದನ್ನು ನೋಡಿ ಜನರು, ತುಂಬಿದ ಮನೆ ತೊಳೆದುಕೊಂಡು ಹೋಗುವದೆಂದು ಮಾತನಾಡಿಕೊಂಡರು. ಈ ಮಾತುಗಳು ಕೆಂಪಯ್ಯನ ಕಿವಿಗೆ ಬಿದ್ದಾಗ, ಅವನೂ ಹಾರಾಡಿದ. ಆದರೆ ಹೆಂಡತಿ ಕಣ್ಣಲ್ಲಿ ನೀರು ತಂದುಕೊಂಡಾಗ ತೆಪ್ಪಗಾದ.

ವರ್ಷ ಕಳೆಯುವುದರೊಳಗಾಗಿ ಸೂರಮ್ಮಳಿಗೆ ಗಂಡು ಮಗು ಹುಟ್ಟಿತು. ಮಗು

ವನ್ನು ನೋಡಿದವರು, ಅದಕ್ಕೆ ವೆಂಕಣ್ಣನ ಹೋಲಿಕೆ ಇದೆ ಎಂದು ಆಡಿಕೊಂಡರು. ಸೂರಮ್ಮಳ ಮಗ ರಾಜಣ್ಣ, ಮೀಸೆ ಚಿಗಿತ ಕೂಡಲೇ, ಮನೆಬಿಟ್ಟು ಹೋಗುವಂತೆ ವೆಂಕಣ್ಣನನ್ನು ಪೀಡಿಸಿದ. ಮನೆಯಲ್ಲಿ ರಾದ್ಧಾಂತ ನಡೆದು ವೆಂಕಣ್ಣ ಎರಡು ದಿನ ಕೆಂಪಯ್ಯನ ಮನೆಯ ಹೊಸ್ತಿಲು ದಾಟದಿದ್ದಾಗ, ಸೂರಮ್ಮ ಜ್ವರದಿಂದ ಹಾಸಿಗೆ ಹಿಡಿದಳು. "ರಾಜಣ್ಣ, ನೀನು ನಿನ್ನ ತಾಯಿಯ ಮನಸ್ಸಿನ ವಿರುದ್ಧ ಹೋಗಬೇಡ. ಅವಳು ಈ ಮನೆಗೆ ಬಂದಾಗಿನಿಂದ ಈ ಮನೆಯ ಭಾಗ್ಯ ತೆರೆದು, ಲಕ್ಷ್ಮೀದೇವಿ ಬಂದಂತಾಗ್ಯದ. ಅವಳು ಬದುಕಿರುವ ವರೆಗೂ ಈ ಮನಿ ಒಳಗ ಲಕ್ಷ್ಮಿ ತಾಂಡವ ವಾಡ್ತಾಳ"—ಕೆಂಪಯ್ಯ ಮಗನಿಗೆ ತಿಳಿಹೇಳಿದ. ರಾಜಣ್ಣ ಮೆತ್ತಗಾದ. ಕೆಂಪಯ್ಯ, ವೆಂಕಣ್ಣನ ಬಳಿ ಹೋಗಿ, ಅವನನ್ನು ಮನೆಗೆ ಕರೆತಂದ. ಹೀಗೆಯೇ ದಿನಗಳುರುಳಿದವು. ರಾಜಣ್ಣನಿಗೆ ಮದುವೆಯಾಯಿತು. ರಾಜಣ್ಣನ ಹೆಂಡತಿ, ಅತ್ತೆಯಂತೆ ಚೆಲುವೆಯಾಗಿರ ದಿದ್ದರೂ, ಬಿಂಕದ ಚೂಟಿ ಹೆಣ್ಣಾಗಿದ್ದಳು. ಮನೆಗೆ ಬಂದ ವಾರದ ಒಳಗಾಗಿ, ಗಂಡನ ಕಿವಿ ಊದಿ, ಮನೆಯಲ್ಲಿ ಕಿಚ್ಚು ಹಚ್ಚಿದಳು.

"ಇದೊಳ್ಳೆ ಕುಟುಂಬ ನಿಮ್ಮದು. ಮರದ ಎತ್ತರಕ್ಕೆ ಬೆಳೆದ ಮಗನನ್ನು ಇಟ್ಟು ಕೊಂಡು...... ನಮ್ಮಮ್ಮ...... ಮಹಾತಾಯಿ ನಮ್ಮ ಅತ್ತೆಗೆ ನಾಚಿಕೇನೆ ಇಲ್ಲ...... ಹೋಗಲಿ, ಅವರಿಗಿರದಿದ್ದರ ನಿಮಗೂ ಇಲ್ಲೇನು?"

ಹೆಂಡತಿಯ ಈ ಮಾತು, ರಾಜಣ್ಣನನ್ನು ಹಗಲಿರುಳು ಕೊರೆಯಹತ್ತಿತು. ಅವನ ಹೆಂಡತಿ ಅಷ್ಟಕ್ಕೆ ಸುಮ್ಮನಿರದೆ—"ನನಗ ಮೊದಲ ಈ ರಾದ್ಧಾಂತ ಗೊತ್ತಿದ್ದರ, ಈ ಮನೀಗೆ ಸೊಸೆಯಾಗಿ ಬರ್‍ತಿರಲಿಲ್ಲ"—ಎಂದಳು. ತಂದೆಗೆ ಹೆದರಿಕೊಂಡು ಸುಮ್ಮನಿದ್ದ ರಾಜಣ್ಣನಿಗೆ ಆಗಲೇ ಕಸಿವಿಸಿ ಆಗತೊಡಗಿತು. ಒಂದು ರಾತ್ರಿ "ಅಷ್ಟು ದೊಡ್ಡ ಮೀಸೆಯಾದರೂ ಯಾಕೊ ನಿನಗs"—ಎಂದು ಹೆಂಡತಿ ಮೂದಲಿಸಿದಾಗ, ರಾಜಣ್ಣನಿಗೆ ಬ್ರಹ್ಮಾಂಡವಾದ ಪೌರುಷ ಬಂತು. ಮರುದಿನವೆ, ವೆಂಕಣ್ಣ ಆ ಮನೆಯಲ್ಲಿ ಕಾಲಿಡ ಕೂಡದೆಂದು ಕಡ್ಡಿ ಮುರಿದು ಖಂಡಿತವಾಗಿ ಹೇಳಿದ. ಮಾತಿಗೆ ಮಾತು ಬೆಳೆದು, ಕೆಂಪಯ್ಯನ ಮನೆಯ ಮಹಾಭಾರತ ಇಡೀ ಊರಿಗೆ ತಿಳಿದುಹೋಯಿತು. ತಾಯಿ—ಎಂಬ ಮಮತೆ, ಮಗನಿಗಿರಬಹುದಾದರೂ ಸೊಸೆಗೆ ಇರಲು ಸಾಧ್ಯವೇ?—ಎಂದು ಊರಿನ ಜನರು ತಮ್ಮತಮ್ಮಲ್ಲೆ ಅಂದುಕೊಂಡರು. ಈ ಜಂಜಾಟದಲ್ಲಿ ಸೂರಮ್ಮಳ ಆಯುಷ್ಯ ಅರ್ಧವಾಗಿ ಹೋಯಿತು. "ನೀನು ಯಾರಿಗೆ ಹುಟ್ಟಿದಲೆ ಮಗನೆ?"—ಎಂದು ಕೇಳುವಷ್ಟು ಆಕ್ರೋಶ ಬಂತಾದರೂ, ಅವಳು ಅದನ್ನು ನುಂಗಿಕೊಂಡಳು. ಅಲ್ಲದೆ, ಮಗನ ಮೇಲಿನ ವ್ಯಾಮೋಹ ಅವಳ ಬಾಯಿಯನ್ನು ಕಟ್ಟಿಹಾಕಿತ್ತು. ಒಂದು ಕಡೆ ವೆಂಕಣ್ಣನ ಮೇಲಿನ ವ್ಯಾಮೋಹ—ಇನ್ನೊಂದು ಕಡೆ ಮಗನ ಮೇಲಿನ ವಾತ್ಸಲ್ಯ—ಅವಳು ಇಬ್ಬರನ್ನೂ ಬಿಡದಾದಳು. ಕೊನೆಗೆ "ನಾನು ಬೇರೆ ಇರ್‍ತೀನಿ"—ಎಂದು ಸಾರಿದ ರಾಜಣ್ಣ.

ವೆಂಕಣ್ಣನ ಆತ್ಮಾಭಿಮಾನಕ್ಕೆ ಇದು ಚುಚ್ಚಿತಾದರೂ, ಸೂರಮ್ಮಳಿಂದ ದೂರವಾಗಿ ತಾನು ಬದುಕಲಾರೆನೆಂಬ ಕೊರಗು ಅವನನ್ನು ಕಾಡಿತು. ಈ ಮಧ್ಯೆ ವೆಂಕಣ್ಣ ಮತ್ತು ರಾಜಣ್ಣನ ನಡುವಣ ವಿವಾದ ಮಾತಿನ ಗಡುವು ದಾಟಿ, ಕೈಗೆ ಕೈ ಹತ್ತಿತು. ರಾಜಣ್ಣನನ್ನು ಒಂದೇ ಏಟಿಗೆ ಹೊಡೆದು ಉರುಳಿಸುವ ಸಾಮರ್ಥ್ಯ ವೆಂಕಣ್ಣನಿಗಿತ್ತಾದರೂ, ಅವನ ಕೈ ಎಂದೇ ಆಗಲಿ ಮೇಲೇಳಲಿಲ್ಲ...... ಅಲ್ಲಿಂದ ಹೊರಟುಹೋಗಬೇಕೆಂದುಕೊಂಡನಾದರೂ, ಸೂರಮ್ಮಳನ್ನು ಬಿಟ್ಟು ಹೋಗದಾದ.

ಒಂದು ದಿನ—ಅರ್ಧರಾತ್ರಿಯಾಗಿತ್ತು—ಕಣ್ಣು ಕುಕ್ಕುವ ಕತ್ತಲು. ಪ್ರಕೃತಿ, ಕಪ್ಪು ಬಟ್ಟೆಯನ್ನು ಹೊದ್ದು ನಿದ್ರೆಹೋದಂತಿತ್ತು. ಎಲ್ಲೆಲ್ಲೂ ನಿಶ್ಶಬ್ದ. ದೂರದಲ್ಲಿ ಮಾತ್ರ, ಹೊಟ್ಟೆಗಿಲ್ಲದ ಮುದಿ ನಾಯೊಂದು ಕೂಗಿಕೊಳ್ಳುತ್ತಿತ್ತು. ಊರಿನ ತಿಪ್ಪೆಯ ಮೇಲಿನಿಂದ ಬೀಸುತ್ತಿದ್ದ ಗಾಳಿಯೊಡನೆ, ಎಲ್ಲೆಡೆಯೂ ದುರ್ಗಂಧ ತುಂಬಿಕೊಂಡಿತ್ತು. ವೆಂಕಣ್ಣ, ಕೆಂಪಯ್ಯನ ಮನೆಯ ಮುಂದಿನ ಜಗಲಿಯ ಮೇಲೆ ಹಾಯಾಗಿ ಮಲಗಿದ್ದ. ಅಂದೇಕೊ ಅವನಿಗೆ ನಿದ್ದೆ ಬಂದಿರಲಿಲ್ಲ. ತನ್ನ ಗತಜೀವನ ಘಟನೆಗಳನ್ನು ಮೆಲುಕುಹಾಕುತ್ತಿದ್ದ. ತನ್ನ ದೇಹದಲ್ಲಿನ ರಕ್ತದ ಪ್ರತಿ ಬಿಂದುವೂ ಪಾಪಪೂರ್ಣವಾಗಿದೆ ಎಂದುಕೊಂಡು, ಅವನು ಕೊರಗುತ್ತಿದ್ದ. ಒಂದು ವೇಳೆ, ತಾನೇ ಕೆಂಪಯ್ಯನಾಗಿದ್ದಲ್ಲಿ ರಾಜಣ್ಣನಾಗಿದ್ದಲ್ಲಿ ಸೂರಮ್ಮನ ನಡತೆಯನ್ನು ತಾನು ಸಹಿಸಿಕೊಂಡಿರಬಹುದಾಗಿತ್ತೆ?—ಆಯ್ತು, ಆದದ್ದಾಯಿತು—ಈ ಯೋಚನೆಯಲ್ಲಿ ಮಲಗಿರುವಾಗಲೇ, ಯಾರೊ ತನ್ನ ಪಕ್ಕದಲ್ಲಿ ಬಂದು ನಿಂತಿರುವಂತೆ ಭಾಸವಾಯಿತು ವೆಂಕಣ್ಣನಿಗೆ. ಆದರೆ, ಅದನ್ನು ಅವನು ಗಮನಿಸಲಿಲ್ಲ. ಏನೋ ಪಕ್ಕದಲ್ಲೆ ಸರಿದಂತಾಯಿತು. ದೊಡ್ಡಿಯಲ್ಲಿನ ಎತ್ತುಗಳು ಇನ್ನೂ ಮೆಲುಕುಹಾಕುತ್ತಲೇ ಇದ್ದವು. ಜಗಲಿಯ ಸಮೀಪದಲ್ಲಿ ಕಟ್ಟಲಾಗಿದ್ದ ಆಕಳು, ಗೋಣು ಹಾಕುತ್ತಾ ಇನ್ನೂ ನಿಂತೆ ಇತ್ತು. ವೆಂಕಣ್ಣ, ಆಕಾಶದಲ್ಲಿನ ಚುಕ್ಕೆಗಳನ್ನು ನೋಡುತ್ತಾ, ನನ್ನಂತಹವನನ್ನು, ಕೆಂಪಯ್ಯನಂತಹವನನ್ನು ಹುಟ್ಟಿಸಿದ ದೇವರು, ನಿಜವಾಗಿಯೂ ಗಟ್ಟಿಗನೇ—ಎಂದುಕೊಳ್ಳುತ್ತಾ ಮಲಗಿದ್ದ. ಹಾಗೆಯೆ ನಿದ್ರೆಯ ಮಂಪರು ಬಂತು.

ವೆಂಕಣ್ಣ ಕಣ್ಣು ಮುಚ್ಚಿದ ಕೂಡಲೇ, ನಾಲ್ವರು ಧಾಂಡಿಗರು ಬಂದು ಅವನನ್ನು ಸುತ್ತುಗಟ್ಟಿದರು. ವೆಂಕಣ್ಣ ನಿದ್ರೆಯ ಮಂಪರಿನಿಂದ ಎಚ್ಚೆತ್ತುಕೊಳ್ಳುವುದರೊಳಗಾಗಿ, ಆತನ ಬಾಯಿಗೆ ಬಟ್ಟೆ ತುರುಕಿ ಕೈಕಾಲುಗಳನ್ನು ಕಟ್ಟಲಾಯಿತು. ಯಾರೊ, ಆತನ ಕಣ್ಣುಗಳಿಗೆ ಚೂರಿಯಿಂದ ಇರಿದರು. ಅವನ ಕಣ್ಣುಗಳಿಂದ ರಕ್ತ ಚಿಮ್ಮಿತು. ವೆಂಕಣ್ಣ ನೋವಿನಿಂದ, ರೋಷದಿಂದ ಚೀರಿಕೊಂಡನಾದರೂ, ಬಾಯಲ್ಲಿ ಬಟ್ಟೆ ತುರುಕಿದ್ದರಿಂದ, ಅವನ ಕೂಗು ಗಂಟಲಲ್ಲೆ ಉಳಿಯಿತು. ಅವನ ಕೂಗು, ಅವನ ದುಃಖ ಅವನ ಹೃದಯದಲ್ಲೆ ಪ್ರತಿಧ್ವನಿಗೊಂಡಿತು. ಕೀಳಲಾದ ಕಣ್ಣುಗಳಿಂದ ರಕ್ತ ಸುರಿಯುತ್ತಿತ್ತು. ಆದರೆ ವೆಂಕಣ್ಣನಿಗೆ ಅದರ ಪರಿವೆಯೆ ಇರಲಿಲ್ಲ. ಅವನ ಪಾಲಿಗೆ ಎಲ್ಲವೂ ಕತ್ತಲಾಗಿತ್ತು.

ಅವನ ವಿಶ್ವವೂ ಸಹ ಅಂಧಕಾರಮಯವಾಗಿತ್ತು. ಸೂರಮ್ಮ ತನ್ನನ್ನು ನೋಡಿ ಏನೆಂದುಕೊಳ್ಳುವಳೋ—ಎಂದು ಮನಸ್ಸಿನಲ್ಲೆ ಅಂದುಕೊಂಡ. ನೋವನ್ನು, ಹೃದಯ ದಲ್ಲಿ ತುಂಬಿಕೊಂಡಿದ್ದ ದುಃಖವನ್ನು ಹೊರಗೆಡಹಲು ಗಟ್ಟಿಯಾಗಿ ಅಳಬೇಕೆಂದು ಕೊಂಡ. ಆದರೆ ಧ್ವನಿ ಮಾತ್ರ ಹೊರಡಲಿಲ್ಲ. ......ಉಂಡಾಡಿ ವೆಂಕಣ್ಣ, ಕುಡ್ಡ ವೆಂಕಣ್ಣನಾಗಿದ್ದ.—ಅಂಗಳದಲ್ಲಿ ಕಟ್ಟಲಾಗಿದ್ದ ದನಕರುಗಳು ತಮ್ಮ ಕಣ್ಣು ಮುಂದೆ ನಡೆದ ರೌದ್ರನಾಟಕವನ್ನು ನೋಡಿ ಗಾಬರಿಯಾಗಿ ಚಡಪಡಿಸಹತ್ತಿದವು.

ಹೊರಗಡೆ ಸದ್ದಾದುದನ್ನು ಕೇಳಿಸಿಕೊಂಡ ಸೂರಮ್ಮ, ಕೈಯಲ್ಲಿ ಪುಟ್ಟ ಕಂದೀಲು ಹಿಡಿದು ಹೊರ ಬಂದಳು. ಎದುರುಗಡೆ, ತನ್ನ ಮಗ ಮತ್ತು ಇತರ ಮೂವರು, ಬುಸುಗುಡುತ್ತಾ ನಿಂತದ್ದನ್ನು ನೋಡಿದಳು. ಹಾಗೆಯೇ ಎರಡು ಹೆಜ್ಜೆ ಮುಂದೆ ಬಂದಳು...... ತನ್ನ ಪ್ರಿಯತಮ ಕಣ್ಣು ಕೀಳಿಸಿಕೊಂಡು ರಕ್ತದ ಮಡುವಿನಲ್ಲಿ ಮುಖವಿಟ್ಟುಕೊಂಡು ಬಿದ್ದದ್ದನ್ನು ನೋಡಿ, ಗಾಬರಿಯಿಂದ ಹಾಂ—ಎಂದಳು. ಆ ಮೇಲೆ ಅವಳ ಬಾಯಿಯಿಂದ ಮಾತೆ ಹೊರಡಲಿಲ್ಲ. ಕೈಯಲ್ಲಿನ ಕಂದೀಲು ಜಾರಿ ಬಿದ್ದಿತ್ತು. ಅವಳು, ತನ್ನ ಪ್ರಿಯಕರನ ಮೇಲೆ ಬಿದ್ದು ರೋದಿಸಿದಳು. ಅವಳ ಕಣ್ಣು ಗಳಿಂದ ಧಾರಾಕಾರವಾಗಿ ಹರಿಯುತ್ತಿದ್ದ ಕಣ್ಣೀರು, ವೆಂಕಣ್ಣನ ಮೇಲೆ ತೊಟ್ಟು ತೊಟ್ಟಾಗಿ ಬಿದ್ದಿತು...... ರಾಜಣ್ಣ, ಅಸಡ್ಡೆಯಿಂದ ತಾಯಿಯನ್ನು ಒದ್ದು, ಉಗುಳಿ ಹೊರಟುಹೋದ.

ವೆಂಕಣ್ಣನ ಬಾಯಿಯಲ್ಲಿ ತುರುಕಲಾಗಿದ್ದ ಬಟ್ಟೆಯನ್ನು ತೆಗೆದು, ಅವನ ಕೈಕಾಲು ಗಳಿಗೆ ಕಟ್ಟಲಾಗಿದ್ದ ಹಗ್ಗ ಬಿಚ್ಚಿದಳು, ಸೂರಮ್ಮ. ಅದು ವರೆಗೆ ಧ್ವನಿಯಿಲ್ಲದೆ ಬಿದ್ದಿದ್ದ ವೆಂಕಣ್ಣ, ಉಪವಾಸ ಬಿದ್ದ ಹುಲಿಯಂತೆ ಘರ್ಜಿಸತೊಡಗಿದ. ಚುಚ್ಚುತ್ತಿದ್ದ ಕಣ್ಣುಗಳನ್ನು ಒತ್ತಿಕೊಳ್ಳುತ್ತಾ, "ರಾಜ್ಯಾ—ಬೋಳ್ಯಾನ್ನ ರಕ್ತ ಕುಡೀದಿದ್ದರ......" ಎಂದು ಕೂಗುತ್ತಾ, ಸೂರಮ್ಮಳನ್ನು ಹಿಡಿದುಕೊಂಡ.

ವೆಂಕಣ್ಣನ ಬಿಗಿಹಿಡಿತಕ್ಕೆ ಸಿಕ್ಕ ಸೂರಮ್ಮಳ ಕೀಲುಗಳು ಮುರಿದಂತಾದವು. ಅವಳು ಹಾಗೆಯೇ ವೆಂಕಣ್ಣನ ಕಾಲುಗಳ ಮೇಲೆ ಬಿದ್ದು, ಕಣ್ಣೀರಿನಿಂದ ಅವುಗಳನ್ನು ತೊಳೆದಳು.

ಸೂರಮ್ಮ, ಹೆಂಡತಿಗಿಂತ ಹೆಚ್ಚಾಗಿ ತಾಯಿಯಾಗಿ ಪರಿಪಕ್ವಗೊಂಡದ್ದು ಅಂದೇ. ತನಗಿದ್ದ ಒಬ್ಬನೇ ಒಬ್ಬ ಮಗ, ತನ್ನ ಕರುಳಿನ ಕುಡಿ...... ಹುಲಿಯಂತಹ ವೆಂಕಣ್ಣ ಮನಸ್ಸು ಮಾಡಿದಲ್ಲಿ, ತನ್ನ ಮಗನಿಗೆ ಅಪಾಯ ತಪ್ಪದೆಂಬುದು ಅವಳಿಗೆ ತಿಳಿದಿತ್ತು. ಮೂಕವೇದನೆಯಿಂದ ಅಲ್ಲಿಯೇ ಕುಳಿತಿದ್ದಳು...... ಸ್ವಲ್ಪ ಸಮಯದ ನಂತರ ವೆಂಕಣ್ಣನೆ ಮಾತನಾಡಿದ. ಅದುವರೆಗೆ ಅವನ ಧ್ವನಿಯಲ್ಲಿದ್ದ ರೋಷ—ಕೋಪ ಈಗಿರಲಿಲ್ಲ.—"ಸೂರಿ, ನನ್ನ ಅಂಗಳಕ್ಕೆಳಿಸು"—ಬೇಡಿಕೊಂಡ ವೆಂಕಣ್ಣ. ಹಾಗೆಯೇ ಕೈಚಾಚಿ ಸೂರಮ್ಮಳ ಭುಜದ ಮೇಲೆ ಕೈಯಿಟ್ಟ.

"ಸೂರಿ, ನನ್ನ ಕರೆದುಕೊಂಡು ಹೋಗು...... ಒಂದು, ಎರಡು ಹೆಜ್ಜೆ......

ಸೂರಿ, ನಿಲ್ಲಬೇಡ, ನಾಲ್ಕು ಹೆಜ್ಜೆಗೆ ನರಕವಂತೆ......ನಡಿ ಸೂರಿ......ಮುಂದಡಿ ಇಡು."

ವೆಂಕಣ್ಣನ ಕಣ್ಣುಗಳಿಂದ ನೀರು ಹರಿಯುತ್ತಲೇ ಇತ್ತು. ತಡವರಿಸುತ್ತಾ ಹೆಜ್ಜೆ ಇಡುತ್ತಿದ್ದ ವೆಂಕಣ್ಣ, ಸೂರಮ್ಮಳ ಅಂಗಾಂಗಗಳ ಮೇಲೆ ಕೈಆಡಿಸಿದ...... ಅವಳ ತಲೆಯನ್ನು ನೇವರಿಸಿದ.

ಅಂಗಳಕ್ಕಿಳಿದ ವೆಂಕಣ್ಣ ಐದು ಹೆಜ್ಜೆ ನಡೆದು ಮತ್ತೆ ಕುಳಿತ. ಕತ್ತಲಿನಲ್ಲಿ ಕೈ ತಡವರಿಸುತ್ತಾ ಕುಳಿತಿದ್ದ ವೆಂಕಣ್ಣನ ಕೈ, ಸೂರಮ್ಮಳ ಎದೆಯನ್ನು ತಟ್ಟಿದಾಗ, ಅವಳಲ್ಲಿ ಮತ್ತೆ ಯೌವನ ಮರುಕಳಿಸಿತು. "ನೋಡು, ನಾನೊಂದು ಬೇಡಿಕೊಳ್ತೀನಿ...... ಇಲ್ಲ ಅನ್ನಬ್ಯಾಡ"—ಎಂದು ಸೂರಮ್ಮ ಅಂಗಲಾಚಿದಾಗ, ವೆಂಕಣ್ಣನಿಗೆ ಫಕ್ಕನೆ ಆ ಬೆಳದಿಂಗಳ ರಾತ್ರಿಯ ನೆನಪಾಯಿತು.

"ಕೇಳು"—ಎಂದ.

"ಇದೊ......" ಎಂದು ಸೂರಮ್ಮ ಕೈ ಮುಂದೆ ಚಾಚಿದಾಗ ವೆಂಕಣ್ಣ, ಆ ನೋವಿನಲ್ಲೂ ಕೂಡ ಯೌವನವನ್ನು ಅಂಕುರಿಸಿಕೊಂಡ. ಕಣ್ಣಿನಲ್ಲಿ ಉಕ್ಕಿಬಂದ ನೀರನ್ನು ಒರೆಸಿಕೊಳ್ಳುತ್ತಾ, "ಅವನು ಪಶುವಾದ. ಅವನು ನನ್ನ ಮಗನಲ್ಲ—ನಿನ್ನ ಮಗ...... ಅವನಿಗೆ ಏನೂ ಮಾಡಬ್ಯಾಡ. ಯಾವ ಕೆಡಕೂ ಬಯಸಬ್ಯಾಡ"—ಎಂದು ಬೇಡಿಕೊಂಡಳು ಸೂರಮ್ಮ. ಅಷ್ಟು ಹೇಳುವುದರಲ್ಲಿ ಅವಳ ಗಂಟಲು ಉಬ್ಬಿಕೊಂಡು, ಅವಳು ವೆಂಕಣ್ಣನ ಎದೆಯ ಮೇಲೆ ತಲೆ ಇಟ್ಟು ಬಿಕ್ಕಳಿಸಹತ್ತಿದಳು. ವೆಂಕಣ್ಣ ಉರ್ಫ್ ಕುಡ್ಡ ವೆಂಕಣ್ಣ, ಅವಳ ತಲೆಯನ್ನು ನೇವರಿಸುತ್ತಾ. "ಸೂರಿ, ಇದೆಲ್ಲಾ ಋಣಾನುಬಂಧ. ನಾನು ಮಾಡಿದ ಪಾಪಕ್ಕ ಇದು ಪ್ರಾಯಶ್ಚಿತ್ತ...... ನನಗ ಈಗ ಆಗಿರೋ ಶಿಕ್ಷೆಗೆ ನಿನ್ನ ಮಗ ಕಾರಣನಲ್ಲ...... ದೇವರೆ ನನಗ ಶಿಕ್ಷಿಸಿದರು....... ನನಗ ಈಗ ಸಾವು ಕೂಡ ಬರಾಣೆಲ್ಲ....... ನಾನು ಮಾಡಿದ ಕರ್ಮ ನನ್ನ ಬೆನ್ನು ಬಿಡಾಣೆಲ್ಲ......" ಇಷ್ಟು ಹೇಳುವುದರಲ್ಲಿ ವೆಂಕಣ್ಣನ ಧ್ವನಿ ಗದ್ಗದಿತವಾಯಿತು. ಸ್ವಲ್ಪ ಹೊತ್ತು ಸುಮ್ಮನಿದ್ದ ವೆಂಕಣ್ಣ, "ಗತಿ ಇಲ್ಲದ, ಬೀದಿ ಒಳಗ ಬಿದ್ದು ಸಾಯೋದು ನನ್ನ ಹಣೆಯ ಬರಹ. ಇದಕ್ಕ ಯಾರೇನು ಮಾಡ್ಯಾರು...... ನೀನು ಈಗ ಹೋಗು. ನನ್ನ ದಾರಿ ನಾನು ನೋಡಕೋತೀನಿ"—ಎಂದು ಹೇಳಿ ಮೌನವಹಿಸಿದ.

ಅದೆಷ್ಟೋ ಹೊತ್ತಿನ ನಂತರ, ಸೂರಮ್ಮ ಅವನ ಕಾಲಿಗೆರಗಿ, ಮೌನವಾಗಿಯೇ ಅಲ್ಲಿಂದೆದ್ದು ಹೋದಳು. ಹೋಗುವಾಗ ವೆಂಕಣ್ಣನನ್ನು ಒಮ್ಮೆ ನೋಡಿ, ಮನಸ್ಸಿನಲ್ಲೆ, "ನನ್ನ ದೇವರೆ"—ಎಂದು ನಮಸ್ಕರಿಸಿ ಮುಂದಡಿ ಇಟ್ಟಳು. ಇಷ್ಟೆಲ್ಲ ಕೋಲಾಹಲ ನಡೆದು ಅವಳು ಮನೆ ತಲುಪಿದಾಗಲೂ, ಅವಳ ಗಂಡ ಕುಂಭಕರಣನಂತೆ ನಿದ್ರೆಮಾಡುತ್ತಿದ್ದ. ಬೆಳಗಾದಾಗ, ಆ ಊರಿನಲ್ಲಿ ಒಂದೇ ಅಲ್ಲದೆ, ಸುತ್ತಮುತ್ತಲಿನ ಹಳ್ಳಿಗಳಲ್ಲೂ ಸಹ, ವೆಂಕಣ್ಣನಿಗಾದ ಗತಿ ಮನೆಮಾತಾಗಿ ಹೋಗಿತ್ತು. ಕೆಂಪಯ್ಯ ಕೂಡ, ವೆಂಕಣ್ಣನಿದ್ದಲ್ಲಿಗೆ ಹೋಗಿ, ಆತನನ್ನು ಮಾತನಾಡಿಸಿಕೊಂಡು ಬಂದ.

"ನಡು ರಾತ್ರಿಯಲ್ಲಿ, ಮುಳ್ಳಿನ ಕಂಟಿ ಮ್ಯಾಲೆ ಬಿದ್ದೆ. ಮುಳ್ಳು ಕಣ್ಣಾಗ ನಟ್ಟು, ಕಣ್ಣು ಕೀಳಿಕೊಂಡು ಬಂದವು"—ಎಂದು ವೆಂಕಣ್ಣ ಹೇಳಿದಾಗ, ಅನೇಕರು ಅದನ್ನು ನಂಬಿದರು. ಉಳಿದವರು, "ಹುಟ್ಟಾ ಕಳ್ಳ. ಯಾರ ಮನಿಗೆ ಕನ್ನ ಹಾಕಲು ಹೋಗಿದ್ದನೊ—ಏನೊ? ಕಣ್ಣು ಕಿತ್ತಿ ಇಲ್ಲಿ ಬಿಟ್ಟುಹೋಗಿರಬಹುದು"—ಎಂದು ಮಾತನಾಡಿಕೊಂಡರು. ಇದ್ದದ್ದು ಕಳಕೊಂಡ ಹೊರತು, ವೇದಾಂತ ಬರುವುದಿಲ್ಲವೆಂದು ನೆರೆತ ಕೂದಲಿನವರು ಮಾತನಾಡಿಕೊಂಡರು.

ಸೂರಮ್ಮ, ಅದಾದ ಮೇಲೆ, ಮತ್ತೆ ವೆಂಕಣ್ಣನ ಮುಖ ನೋಡಲಿಲ್ಲ. ದಿನದಿನಕ್ಕೆ ಸೊರಗಿ ಅವಳು ಕಡ್ಡಿಯಾದಳು. ವೆಂಕಣ್ಣ ಕುರ್ಡನಾದ ಕೇವಲ ಆರು ತಿಂಗಳ ಒಳಗಾಗಿ, ಸೂರಮ್ಮ—ಯಮನ ಊರಿಗೆ—ಹೊರಟುಹೋದಳು.

ಸೂರಮ್ಮ ಸತ್ತು ಆಗಲೇ ಐದು ವರ್ಷಗಳಾಗಿದ್ದವು. ಸೂರಮ್ಮ ಸತ್ತ ಮರುದಿನದಿಂದಲೇ ವೆಂಕಣ್ಣ, ಕುರ್ಡ ವೆಂಕಣ್ಣನಾಗಿ, ಕೈಯಲ್ಲಿ ಪರಟೆ ಹಿಡಿದು ಭಿಕ್ಷೆ ಬೇಡತೊಡಗಿದ.

## [ 9 ]

ಬಡವರ ಮನೆಯಲ್ಲಿ ಹುಟ್ಟಿ, ಬಲಹೀನಳಾದ ಅಜ್ಜಿಯ ಮನೆಯಲ್ಲಿ ಬೆಳೆದ ನೀಲಿ, ಮದುವೆಗೆ ಮುಂಚೆ ಸಣಕಲಾಗಿದ್ದಳು. ಪುಲ್ಲಯ್ಯನ ಕೈಹಿಡಿದು, ಆತನ ಸುಖ–ಸಂಪತ್ತಿನಲ್ಲಿ ಪಾಲುದಾರಳಾದ ಮೇಲೆ ಅವಳ ಆರೋಗ್ಯ ಕುದುರಿತ್ತು. ಮೊದಲು ಬರೀ ಗಂಜಿ ಕುಡಿದು ಹೊಟ್ಟೆಯ ಹಸಿವನ್ನು ಇಂಗಿಸಿಕೊಳ್ಳುತ್ತಿದ್ದ ನೀಲಿ, ಈಗ ತಿಂದುಂಡು ಹಾಯಾಗಿದ್ದಳು. ಗಂಡನ ಒಲವು ಮತ್ತು ಆರೈಕೆಯಿಂದ, ಅವಳ ದೇಹದಲ್ಲಿ ಹೊಸ ಚೈತನ್ಯ ಮೂಡಿತ್ತು. ಅಂಗಾಂಗಗಳಲ್ಲಿ ಹೊಸ ಶಕ್ತಿ ಪ್ರವಹಿಸಿ, ಅವಳ ಚೆಲುವಿಗೆ ಮೆರುಗು ಬಂದಿತ್ತು. ಅವಳ ಅಂದ–ಚೆಂದಗಳೆಲ್ಲ, ಅವಳ ವಕ್ಷಸ್ಥಳದಲ್ಲೆ ಕೇಂದ್ರೀಕೃತವಾಗಿದ್ದವು. ಈಗ ಅವಳು ಅರಳಿದ ಗುಲಾಬಿಯಾಗಿದ್ದಳು.

ತನ್ನ ಹೆಂಡತಿ ತನ್ನಂತೆ ಮೈತುಂಬಿಕೊಂಡು, ತನಗೆ ಸರಿಜೋಡಿಯಾಗಬೇಕೆಂಬ ಪುಲ್ಲಯ್ಯನ ಆಶೆ ಈಡೇರಿತ್ತು. ಈಗ ಅವನ ಹೆಂಡತಿ, ಅವನಿಗೆ ಎಲ್ಲಾ ದೃಷ್ಟಿಯಿಂದಲೂ ಸರಿಜೋಡಿಯಾಗಿದ್ದಳು. ಈಡು–ಜೋಡಾದ ದಾಂಪತ್ಯ. ಹೆಂಡತಿಯನ್ನು ಜಮೀನುದಾರರ ಮನೆಗೆ ಕರೆದೊಯ್ಯಲು ನಿರ್ಧರಿಸಿದ ಪುಲ್ಲಯ್ಯ.

ಹೀರೆಕಾಯಿ, ಹಾಲುಕುಂಬಳಕಾಯಿ ಮತ್ತು ಕಬ್ಬಿನ ಗಣಿಕೆಗಳಿಂದ ಚೀಲ ತುಂಬಿದ್ದಾಯಿತು. ಗಂಡ–ಹೆಂಡತಿ, ಪಯಣ ಹೊರಡಲು ಸಿದ್ಧರಾದರು. ನೀಲಿ, ಕೆಂಪು ಅಂಚಿನ ಬಿಳಿಯ ಸೀರೆಯುಟ್ಟಳು. ಜಡೆ ಹಾಕಿಕೊಂಡಳು. ಕಣ್ಣಿಗೆ ಹಚ್ಚಿಕೊಂಡ ಕಾಡಿಗೆಯಿಂದ ಅವಳ ಚೆಲುವು ಇನ್ನೂ ಹೆಚ್ಚಿತ್ತು.

ಪುಲ್ಲಯ್ಯ, ಕೈಗೆ ಕಾಶಿದಾರ ಕಟ್ಟಿಕೊಂಡ. ಕಪ್ಪು ಬಣ್ಣದ ಬನಿಯನ್ ತೊಟ್ಟು, ಅದರ ಮೇಲೆ ಬಿಳಿಯ ಜುಬ್ಬ ಹಾಕಿಕೊಂಡ. ತಲೆಗೆ ರುಮಾಲು ಸುತ್ತಿದ. ಗಿರಿಜಾ ಮೀಸೆಗಳಿಗೆ, ತೊಟ್ಟಿಕ್ಕುವಂತೆ ಎಣ್ಣೆ ಹಚ್ಚಿಕೊಂಡ. ಮುಂಗಾಲಿನ ವರೆಗೂ ಪಂಚೆ ಉಟ್ಟು, ಕೈಯಲ್ಲಿ ಒಂದು ಕೋಲು ಹಿಡಿದು, ಕನ್ನಡಿಯಲ್ಲಿ ಮುಖ ನೋಡಿಕೊಂಡ. ತನ್ನ ಶೃಂಗಾರವನ್ನು ತಾನೇ ಮೆಚ್ಚಿಕೊಂಡು ಹೆಂಡತಿಯನ್ನು ಕೂಗಿದ.

ಗಂಡ–ಹೆಂಡತಿ, ಅದು–ಇದೂ ಮಾತನಾಡುತ್ತಾ, ರಸ್ತೆಯ ಮೇಲೆ ಹೆಜ್ಜೆ ಹಾಕ ತೊಡಗಿದರು. ಬೆಳಗಿನ ಬಿಸಿಲು ಸಾಕಷ್ಟು ಚುರುಕಾಗಿತ್ತು. ಗಾಳಿ ಕೂಡ ಸಾಕಷ್ಟು ಬಿಸಿಯಾಗಿತ್ತು.

ನಾಲ್ಕು ಫರದಾರಿ ನಡೆಯುವುದು ಅವರಿಗೇನೂ ದೂರವಾಗಿರಲಿಲ್ಲ.

ಇನ್ನು ಪುಲ್ಲಯ್ಯನ ಧಣಿಯ ಸಂಗತಿ. ಆತನ ಹೆಸರು ಸೀತಾರಾಮಸ್ವಾಮಿ, ಬಿ.ಎ., ಬಿ.ಎಲ್.—ಪ್ಲೀಡರ್. ಈತನ ತಂದೆ, ಒಂದು ಕಾಲದಲ್ಲಿ, ನವಿರಿ ಗ್ರಾಮದ ಶಾನು ಭೋಗನಾಗಿದ್ದ. ಆ ದಿನಗಳಲ್ಲಿ, ಆ ಗ್ರಾಮಕ್ಕೆ ಸೇರಿದ ಸುಮಾರು ಅರ್ಧದಷ್ಟು ಜಮೀನುಗಳು, ಪಟ್ಟಣ ಸೇರಿಕೊಂಡಿದ್ದ ಒಬ್ಬ ಗಣ್ಯ ವ್ಯಕ್ತಿಗೆ ಸೇರಿದ್ದವು. ಆತ, ತನ್ನ ಎಲ್ಲಾ ಜಮೀನುಗಳ ವಹಿವಾಟನ್ನು, ಶಾನುಭೋಗರಿಗೆ—ಸೀತಾರಾಮಸ್ವಾಮಿಯ ತಂದೆಗೆ ಒಪ್ಪಿಸಿದ್ದ. ಕೆಲವು ವರ್ಷಗಳ ಕಾಲ ಎಲ್ಲವೂ ಸುಗಮವಾಗಿತ್ತು. ಶಾನುಭೋಗರು ಕೂಡ, ಈ ವ್ಯವಹಾರದಲ್ಲಿ ಅಷ್ಟಿಷ್ಟು ಸಂಪಾದಿಸಿಕೊಂಡರು. ಆದರೆ ಒಂದು ವರ್ಷ ಮಾತ್ರ, ಶಾನುಭೋಗರು ತಮ್ಮ ಕೈಚಳಕ ತೋರಿಸಿ ಮೋಸಮಾಡಿದರು.

ಆ ವರ್ಷ, ರಾಜ್ಯದ ದಕ್ಷಿಣಭಾಗದಲ್ಲಿ ಅಭಾವ ತಲೆದೋರಿತ್ತು. ಇದ್ದಕ್ಕಿದ್ದಂತೆ ಧಾನ್ಯಗಳ ಬೆಲೆಗಳು ಏರಿದವು. ಶಾನುಭೋಗರು, ಏರಿದ ಬೆಲೆಗೆ ಧಾನ್ಯಗಳನ್ನು ಮಾರಿ, ಬೆಲೆ ಏರುವುದಕ್ಕೆ ಮುಂಚೆಯೇ ಅವುಗಳನ್ನು ಮಾರಿದ್ದಾಗಿ ಸುಳ್ಳು ಹೇಳಿದರು. ಈ ರೀತಿ ಗಳಿಸಿದ ದುಡ್ಡಿನಿಂದ ಭೂಮಿ ಕೊಂಡರು. ಮಗನನ್ನು ದೊಡ್ಡೂರಿಗೆ ಕಳುಹಿಸಿ, ಅವನು ಓದಿ ದೊಡ್ಡವನಾಗಿ, ಜಿಲ್ಲಾಧಿಕಾರಿಯಾಗುವನೆಂಬ ಕನಸು ಕಾಣಹತ್ತಿದ್ದರು. ಲಂಗು–ಲಗಾಮಿಲ್ಲದ ಮಗನ ವಾಕ್‌ಪ್ರವಾಹವನ್ನು ಕಂಡು, ಅವನು ಜಿಲ್ಲಾಧಿಕಾರಿ ಯಾಗುವುದು ದಿಟವೆಂದು, ರೊಕ್ಕ ಸುರಿದರು, ಶಾನುಭೋಗರು. ಆದರೆ, ಮಗನ ವಾಕ್‌ಪ್ರವಾಹಕ್ಕೂ, ಬುದ್ಧಿಗೂ ತಾಳಮೇಳವಿಲ್ಲದಾಯಿತು. ಅದೆಷ್ಟೋ ದಂಡಯಾತ್ರೆ ಮಾಡಿ, ಕೊನೆಗೆ ಮದ್ರಾಸ್‌ಗೆ ಪ್ರಯಾಣ ಬೆಳೆಸಿ, ಬಿ.ಎಲ್. ಪದವಿ ಗಿಟ್ಟಿಸಿಕೊಂಡು ಬಂದ ಶಾನುಭೋಗರ ಮಗ ಸೀತಾರಾಮಸ್ವಾಮಿ.

ಸೀತಾರಾಮಸ್ವಾಮಿ, ಪಟ್ಟಣದಲ್ಲಿ ಮನೆಮಾಡಿ, ಬೋರ್ಡ್ ಹಾಕಿಕೊಂಡು ಕುಳಿತ. ಸಂಪಾದನೆ ಮಾತ್ರ ಶೂನ್ಯವಾಗಿತ್ತು. ಮುದಿ ಶಾನುಭೋಗರು, ಮಗನ ಸಂಸಾರಕ್ಕೆ ದುಡ್ಡು ಒದಗಿಸುವುದು ಅನಿವಾರ್ಯವಾಯಿತು. ಎರಡು ಕುಟುಂಬಗಳ ಖರ್ಚು, ಬಂದುದರಲ್ಲಿ ಆಸ್ತಿ ಮಾಡಿಕೊಳ್ಳುವ ಹುಚ್ಚು ಹವ್ಯಾಸ—ಇವುಗಳಿಂದಾಗಿ, ಮುದಿ

ಶಾನುಭೋಗರು, ಊರಿನ ರೈತರನ್ನು ನಾನಾ ಬಗೆಯಲ್ಲಿ ಪೀಡಿಸತೊಡಗಿದರು. ಅನೇಕ ಕುಟುಂಬಗಳನ್ನು ಬೀದಿಗೆ ತಳ್ಳಿದರು. ಮುದುಕ ಶಾನುಭೋಗನಿಗೆ ಎದುರಾಗಿ ನಿಲ್ಲುವ ಧೈರ್ಯ, ಆ ಊರಿನಲ್ಲಿ ಯಾರಿಗೂ ಇರಲಿಲ್ಲ. ಆತನ ದೈವ ಚೆನ್ನಾಗಿದ್ದು, ಸುಖಪಡುವ ಭಾಗ್ಯ ಅವನ ಪಾಲಿಗಿದೆ—ನಮ್ಮ ಪಾಲಿಗಿಲ್ಲ. ಒಬ್ಬನಿಗೆ ಇದೆ ಎಂದು ಅತ್ತಲ್ಲಿ, ನಮ್ಮಲ್ಲಿದ್ದುದೂ ಹೋಗುತ್ತದೆಂದುಕೊಂಡು, ಊರಿನ ಜನರು ಸುಮ್ಮ ನಿದ್ದರು. ಒಬ್ಬರನ್ನು ಕಂಡು ಕರುಬುವ, ಅಸೂಯೆಪಡುವ ಗುಣ, ಆಗ, ಆ ಜನ ರಲ್ಲಿರಲಿಲ್ಲ. ಆದರೆ, ಬರುಬರುತ್ತಾ ಕಾಲ ಬದಲಾಯಿತು. ಆ ಕಾಲ ಹೋಯಿತು.

ಸೀತಾರಾಮಸ್ವಾಮಿ ದೊಡ್ಡೂರಿನಲ್ಲಿ ಮನೆಮಾಡಿದಾಗಿನಿಂದ, ಹಳ್ಳಿಯಲ್ಲಿನ ಅವರ ಮನೆ ನೆಲಸಮವಾಯಿತು. ಸೀತಾರಾಮಸ್ವಾಮಿ, ತಂದೆ ಬದುಕಿರುವಾಗಲೇ ಪಟ್ಟಣದಲ್ಲಿ ಒಂದು ಮನೆ ಕಟ್ಟಿಸಿದ. ಆ ಮನೆಗೆ ಬೇಕಾದ ಕಲ್ಲು, ಇಟ್ಟಿಗೆ, ಸುಣ್ಣ—ಎಲ್ಲವೂ, ಯಾವ ಖರ್ಚೂ ಇಲ್ಲದೆ, ನವಿರಿ ಗ್ರಾಮದಿಂದಲೇ ಹೋದವು. ಒಂದು ಪುಡಿಕಾಸೂ ಕೂಡ ಖರ್ಚುಮಾಡದೆ ಮನೆ ಕಟ್ಟಿಸಿದ್ದಾಯಿತು. ಮುದಿ ಶಾನುಭೋಗನಿಗೆ, ಹೊರಗಿನ ಚಟವೂ ಇತ್ತು. ಮಗ ಸೀತಾರಾಮಸ್ವಾಮಿಗೆ ಆ ಚಟವಿರದಿದ್ದರೂ, ಹೆಣ್ಣೆಂದರೆ ಜೊಲ್ಲು ಸುರಿಸುತ್ತಿದ್ದ. ಮುದಿ ಶಾನುಭೋಗ, ಆಸ್ತಿ ಕೂಡಿಬರುವದೆಂಬ ಆಶೆಯಿಂದ ಒಂದೇ ಸಂತಾನವಿದ್ದ ಮನೆಯ ಹೆಣ್ಣನ್ನು ಹುಡುಕಿ, ಮಗನ ಮದುವೆ ಮಾಡಿದ. ಸೀತಾರಾಮಸ್ವಾಮಿಯ ಹೆಂಡತಿ, ಹಳ್ಳಿಯ ಹುಡುಗಿಯಾಗಿದ್ದರೂ, ಆಗಿನ ಕಾಲದ "ಫ್ಯಾಷನ್" ಕಲಿತವಳಾಗಿದ್ದಳು. ಮಣಿಕಟ್ಟಿನ ವರೆಗೆ ತೋಳುಗಳಿದ್ದ ಜಾಕೆಟ್‌ಗಳನ್ನು ತೊಡುತ್ತಿದ್ದಳು. ಪಟ್ಟಣದವರೊಡನೆ ಸಂಪರ್ಕ ಇಟ್ಟುಕೊಂಡದ್ದರಿಂದ ನಾಲ್ಕು ಮಾತು ಗಳನ್ನು ಆಡುವುದನ್ನೂ ಸಹ ಕಲಿತಿದ್ದಳು. ಒಂದು ರೀತಿಯಲ್ಲಿ, ಅವಳು ಗಂಡನನ್ನು ಮೀರಿಸಿದ್ದಳೆಂದೇ ಹೇಳಬಹುದು. ಅವಳು ಮನೆಗೆ ಬರುತ್ತಿದ್ದ ಹಳ್ಳಿಗರ ಮುಂದೆ ತನಗೂ ಸಹ ಕಾಯ್ದೆ-ಕಾನೂನುಗಳು ತಿಳಿದಿರುವಂತೆ ದೊಡ್ಡದಾಗಿ ಮಾತನಾಡು ತ್ತಿದ್ದಳು. ತನ್ನ ಗಂಡ ಒಬ್ಬ ದೊಡ್ಡ ವಕೀಲನೆಂದೂ, ಆತ ಬಾಯಿ ತೆರೆದರೆ ಸಾಕು, ನ್ಯಾಯಮೂರ್ತಿಗಳು ಕೂಡ ದಂಗಾಗುತ್ತಾರೆಂದೂ, ಬಡಾಯಿ ಕೊಚ್ಚುತ್ತಿದ್ದಳು. ಸೀತಾರಾಮಸ್ವಾಮಿ ಮೊದಲು ತುಂಬ ಬಡಕಲಾಗಿದ್ದನಂತೆ. ಅಳಿಯ ನರಪೇತಲು ನಾರಾಯಣನಂತಿರುವುದು, ಆತನ ಅತ್ತೆಗೆ ಸರಿಬರಲಿಲ್ಲ. ಆಕೆ, ಪಾಪ, ಅಳಿಯನಿಗಾಗಿ ನಾಟಿ ಔಷಧಿಗಳನ್ನು ತರಿಸಿ ಕೊಟ್ಟು, ಆತ ಮೈತುಂಬಿಕೊಳ್ಳುವನೆಂದು ಕಾದಿದ್ದಳು. ಆದರೆ, ಅಳಿಯ ಸೀತಾರಾಮಸ್ವಾಮಿ ಮಾತ್ರ ಹಾಗೆಯೇ ಇದ್ದ.

ಸೀತಾರಾಮಸ್ವಾಮಿ ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟದಲ್ಲಿ ತಾನೂ ಸಹ ಭಾಗವಹಿಸಿದ್ದಾಗಿ ಹೇಳಿಕೊಳ್ಳುತ್ತಿದ್ದ. ಸ್ವಾತಂತ್ರ್ಯ ಚಳುವಳಿಯಲ್ಲಿ ತನ್ನ ಹೆಂಡತಿಯೂ ಸಹ ಪಾಲ್ಗೊಂಡಿದ್ದಳೆಂದು ಅವನು ಹೇಳಲಿಲ್ಲವಾದರೂ, ಅವಳು ಹೇಳಿಕೊಳ್ಳುತ್ತಿದ್ದಳು. ಅವಳು ಹಾಗೆ ಹೇಳಿಕೊಳ್ಳುವುದು ಸೀತಾರಾಮಸ್ವಾಮಿಗೆ ಸರಿಬರುತ್ತಿರಲಿಲ್ಲ. ತನ್ನ

ಮದುವೆಗೆ ಮುಂಚೆ, ಸ್ತ್ರೀಗೆ ಸಂಪೂರ್ಣ ಸ್ವಾತಂತ್ರ್ಯವಿರಬೇಕೆಂದು ಸೀತಾರಾಮಸ್ವಾಮಿ ವಾದಿಸುತ್ತಿದ್ದ. ಆದರೆ, ಈಗ, ಹೆಂಡತಿ ಎದುರಿಗಿರದಿದ್ದಾಗ, ಹೆಣ್ಣುಮಕ್ಕಳಿಗೆ ಸ್ವಾತಂತ್ರ್ಯ ಕೊಡಬಾರದೆಂದು ವಾದಿಸುತ್ತಿದ್ದ. ಅಂತೂ ಸೀತಾರಾಮಸ್ವಾಮಿಯ ಜೀವನದಲ್ಲೂ ಸಹ ವಿರೋಧಾಭಾಸಗಳಿದ್ದವು. ಜೀವನದಲ್ಲಿ ಜಿಗುಪ್ಸೆಗೊಂಡಿದ್ದ ಸೀತಾರಾಮಸ್ವಾಮಿ ಒಂದೆರಡು ಸಲ ಆತ್ಮಹತ್ಯೆ ಮಾಡಿಕೊಳ್ಳುವ ಯೋಚನೆಯನ್ನೂ ಮಾಡಿದ್ದ. ಆದರೆ, ಗಂಡಸಾದ ತಾನು, ಜೀವನವನ್ನು ಎದುರಿಸಬೇಕು; ತನ್ನ ತಲೆ ಏರಿ ಕುಳಿತಿದ್ದ ಹೆಂಡತಿಯನ್ನು ಹದ್ದು–ಬಸ್ತಿನಲ್ಲಿಡಬೇಕು—ಎಂಬ ಜ್ಞಾನೋದಯವಾಗಿ, ಅದಕ್ಕಾಗಿ ಪ್ರಯತ್ನಿಸಿದ್ದ...... ಆತನ ಪ್ರಯತ್ನ ಆಗಿನ ಮಟ್ಟಿಗೆ ಫಲ ನೀಡಿತಾದರೂ, ಈಚೆಗೆ, ಪುನಃ ಅವಳ ಕೈ ಮೇಲಾಗಿತ್ತು. ಅವಳ ಮಾತು, ಅವಳ ಆ ಧ್ವನಿಯಲ್ಲಿ ಸೀತಾರಾಮಸ್ವಾಮಿಯ ಧ್ವನಿಯೇ ಕೇಳಿಸುತ್ತಿರಲಿಲ್ಲ. ಆಕೆ ಹಾಕಿದ ಗೆರೆ ದಾಟುವ ಸಾಹಸ ಸೀತಾರಾಮಸ್ವಾಮಿಗಿರಲಿಲ್ಲ. ಆದರೂ ಮನಸ್ಸಿನಲ್ಲಿ ಅವಳನ್ನು ದೂಷಿಸತೊಡಗಿದ; ಅವಳನ್ನು ಕಡೆಗಣಿಸಿ ಜೀವಿಸತೊಡಗಿದ. ಒಮ್ಮೊಮ್ಮೆ ಹೆಂಡತಿ ತನ್ನ ಮಾತನ್ನು ಅನುಮೋದಿಸಿದಾಗ ಅವನಿಗೂ ಆಶ್ಚರ್ಯವಾಗುತ್ತಿತ್ತು.

ಸೀತಾರಾಮಸ್ವಾಮಿಯ ಬಳಿ ಬರುತ್ತಿದ್ದ ಕಕ್ಷಿಗಾರರ ಸಂಖ್ಯೆ ಕಡಿಮೆ—ಎಂದೆ ಹೇಳಬೇಕು. ಅಪ್ಪ ಗಳಿಸಿಟ್ಟ ಆಸ್ತಿ ಇರದಿದ್ದಲ್ಲಿ, ಬಹುಶಃ ಸೀತಾರಾಮಸ್ವಾಮಿ ಬೋರ್ಡನ್ನು ಕಿತ್ತು ಯಾವುದಾದರೂ ಕಚೇರಿಯಲ್ಲಿ ಗುಮಾಸ್ತನಾಗಿ ಸೇರಬೇಕಾಗುತ್ತಿತ್ತು. ಆದರೂ, ಕಕ್ಷಿಗಾರರ ಸಂಖ್ಯೆ ಹೆಚ್ಚಾಗಿದೆ ಎಂದೂ, ಕೆಲಸಕಾರ್ಯಗಳ ಹೊರೆಯಿಂದಾಗಿ ಊರು ಬಿಟ್ಟು ಎಲ್ಲಿಯೇ ಆಗಲಿ ಹೋಗಲು ತನಗೆ ಸಾಧ್ಯವಿಲ್ಲ—ಎಂದು ಎಲ್ಲರ ಮುಂದೂ ಹೇಳಿಕೊಳ್ಳುತ್ತಿದ್ದ. ಮುಂದಾಗುವ ಘಟನೆಗಳನ್ನು ಈಗಲೇ ಹೇಳುವ ದೂರದೃಷ್ಟಿ ತನಗಿದೆ ಎಂದು ಸೀತಾರಾಮಸ್ವಾಮಿ ಹೇಳಿಕೊಳ್ಳುತ್ತಿದ್ದ.—ಅದಕ್ಕೆ, ಅವನು ಉದಾಹರಣೆಗಳನ್ನು ಕೊಡುತ್ತಿದ್ದ. ಹಾಗೆ ನೋಡಿದಲ್ಲಿ, ಆತನ ಮಗನೆ, ಆತನ ದೂರದೃಷ್ಟಿಗೆ ಉದಾಹರಣೆಯಾಗಿದ್ದ. ಸೀತಾರಾಮಸ್ವಾಮಿಯ ಮಗನ ಹೆಸರು—ವೆಂಕಟ ಅಪ್ಪಲ ರಾಮನರಸಿಂಹ ರಾವು—ಈ ಒಂದು ಹೆಸರಿನಲ್ಲಿ, ದೇವರು, ತಾಯಿ ಮತ್ತು ತಂದೆಯ ಹೆಸರುಗಳು ಸೇರಿದ್ದವು. ಈ ಅಪ್ಪಲ ರಾಮ ನರಸಿಂಹ ರಾವು ಕೂಡ ವಕೀಲನೇ ಆಗಿದ್ದ. ತಂದೆ–ಮಗ, ಮನೆಯ ಎದುರುಗಡೆ, ಬಾಗಿಲ ಎರಡೂ ಪಕ್ಕಗಳಲ್ಲಿ ತಮ್ಮ ಬೋರ್ಡುಗಳನ್ನು ತೂಗುಹಾಕಿದ್ದರು. ಆ ಬೋರ್ಡುಗಳು ಅಳತೆಯಲ್ಲಿ ಸಮಾನವಾಗಿದ್ದವಾದರೂ, ಆ ಇಬ್ಬರು ವ್ಯಕ್ತಿಗಳಲ್ಲಿ ಅಜಗಜಾಂತರವಿತ್ತು. ತಂದೆ ಪೊರಕೆಯಂತಿದ್ದಲ್ಲಿ, ಮಗ ಆ ಪೊರಕೆಯಲ್ಲಿನ ಒಂದು ಕಡ್ಡಿಯಂತಿದ್ದ. ತಂದೆಗೆ ಬಾಯಿ ಇತ್ತಾದರೂ, ತಲೆ ಇರಲಿಲ್ಲ. ಮಗನಿಗೆ ತಲೆಇತ್ತಾದರೂ ಬಾಯಿ ಇರಲಿಲ್ಲ. ಆದ್ದರಿಂದಲೇ, ಅವನು ಅಪ್ಪ ನೆಟ್ಟ ಗಿಡಕ್ಕೆ ಜೋತುಬಿದ್ದಿದ್ದ. ಅವನ ಸಂಸಾರವೂ ಕೂಡ, ತಂದೆಯು ಅಳಿದುಳಿದ ಆಸ್ತಿಯ ಮೇಲೆ ಬದುಕಬೇಕಾಗಿತ್ತು.

ವೆಂಕಟ ಅಪ್ಪಲ ರಾಮ ನರಸಿಂಹ ರಾವುಗೆ—ಎಲ್ಲವನ್ನೂ ಮನಸ್ಸಿನಲ್ಲಿಟ್ಟುಕೊಂಡು, ಬಾಯಿ ಮುಚ್ಚಿಕೊಂಡು ಬಿದ್ದಿರುವುದು ಅಭ್ಯಾಸವಾಗಿ ಹೋಗಿತ್ತು. ತಂದೆ ಯಾವುದೊ ಸಂಬಂಧ ನೋಡಿದ. ಹುಡುಗಿ ಸ್ಕೂಲ ಫೈನಲ್‌ನ ವರೆಗೆ ಓದಿದ್ದಳು. ನೋಡಲು ಸಣ್ಣಗಾಗಿದ್ದಳಾದರೂ, ಕುರೂಪಿಯಾಗಿರಲಿಲ್ಲ. ಆದರೆ, ಈ ರಾಮ ನರಸಿಂಹ ರಾವು, ತುಂಬಿದೆದೆಯ ಅಂದಚೆಂದದ ಹೆಣ್ಣಿಗಾಗಿ ಬಾಯಿಬಿಡುತ್ತಿದ್ದ. ಆದರೆ ತಂದೆಯ ಮಾತಿಗೆ ಇಲ್ಲವೆನ್ನಲಾಗದೆ, ಮನದ ಇಂಗಿತವನ್ನು ತೋಡಿಕೊಳ್ಳಲು ಆಗದೆ ತೆಪ್ಪಗಿದ್ದ. ಆ ಹುಡುಗಿಗೆ ಒಬ್ಬನೇ ತಮ್ಮನಿದ್ದ. ಅವನೂ ಬಡಕಲು ಆಸಾಮಿ. ಅಕ್ಕನ ಮದುವೆಯಾದ ಕೇವಲ ಹತ್ತು ತಿಂಗಳ ಒಳಗಾಗಿ ಅವನೂ ಸತ್ತ. ಇನ್ನು ಆ ಮನೆಯ ಆಸ್ತಿಗೆ ರಾಮ ನರಸಿಂಹ ರಾವುನ ಹೆಂಡತಿಯೇ ವಾರಸುದಾರಳು. ಇದು ತನ್ನ ದೂರದೃಷ್ಟಿಯ ಒಂದು ಉದಾಹರಣೆ—ಎಂದು ಸೀತಾರಾಮಸ್ವಾಮಿ ಮನಸ್ಸಿನಲ್ಲೆ ಅಂದುಕೊಳ್ಳುತ್ತಿದ್ದನಾದರೂ ಯಾರ ಎದುರಿಗೇ ಆಗಲಿ ಬಾಯಿಬಿಟ್ಟು ಹೇಳಿರಲಿಲ್ಲ. ಅಪ್ಪಲ ರಾಮನರಸಿಂಹ ರಾವುಗೆ ಮದುವೆಯಾಗಿ ನಾಲ್ಕು ವರ್ಷದೊಳಗಾಗಿ ಮೂರು ಹೆಣ್ಣು ಹುಟ್ಟಿದವು. ಎಲ್ಲ ಮಕ್ಕಳೂ ತಾಯಿಯ ರೂಪವನ್ನೇ ಹೊತ್ತಿದ್ದುದಲ್ಲದೆ, ಒಂದು ಹುಡುಗಿಗೆ ಮೆಳ್ಳಗಣ್ಣು, ಇನ್ನೊಬ್ಬಳು ಕಪ್ಪು. ಈ ಹುಡುಗಿಯರ ಮದುವೆ ಮಾಡಿ ಮನೆದಾಟಿಸಲು, ಸೀತಾರಾಮ ಸ್ವಾಮಿಯ ಆಸ್ತಿ ಸಾಲುತ್ತಿರಲಿಲ್ಲವೆಂದು ಹೇಳಬಹುದು.

ಸೀತಾರಾಮಸ್ವಾಮಿಯ ಕುಟುಂಬಕ್ಕೂ, ಪುಲ್ಲಯ್ಯನ ಕುಟುಂಬಕ್ಕೂ ತಲತಲಾಂತರ ಗಳಿಂದಲೂ ಸಂಬಂಧವಿತ್ತು. ಪುಲ್ಲಯ್ಯನ ತಾತ ಅಪ್ಪಲರಾಮ ನರಸಿಂಹರಾವ್‌ನ ತಾತನಿಂದ ಎರಡು ಎಕರೆ ಜಮೀನನ್ನು ಗೇಣಿಯ ಮೇಲೆ ಪಡೆದಿದ್ದ. ಪುಲ್ಲಯ್ಯನ ತಂದೆ ಮಲ್ಲಯ್ಯ, ಮಹಾ ಪೌರುಷವುಳ್ಳ ವ್ಯಕ್ತಿಯಾಗಿದ್ದ. ಒಂದು ಸಲ ಗೇಣಿ ಕೊಡು ವುದು ತಡವಾದಾಗ, ಸೀತಾರಾಮಸ್ವಾಮಿ ಆತನ ಮನಸ್ಸು ನೋಯಿಸಿದ. ಅಹಂಭಾವ ವುಳ್ಳ ಮಲ್ಲಯ್ಯ ತನ್ನ ಸ್ವಂತ ಭೂಮಿಯನ್ನು ಮಾರಿ, ಆ ಸಲ ಫಸಲು ಸರಿಯಾಗಿ ಬರದಿದ್ದರೂ ಗೇಣಿ ಕೊಟ್ಟು ಕಳುಹಿಸಿದ್ದ. ಅಂದಿನಿಂದ, ಎಲ್ಲ ವ್ಯವಹಾರಗಳು, ಹಾಗೂ ಹೀಗೂ ನಡೆದುಕೊಂಡು ಬಂದಿದ್ದವು.

ನವಿರಿ ಗ್ರಾಮದಿಂದ ಬೆಳಗಿನ ಜಾವದಲ್ಲೆ ಹೊರಟಿದ್ದ ಪುಲ್ಲಯ್ಯ ಮತ್ತು ನೀಲಿ, ಪಟ್ಟಣ ಸೇರುವ ವೇಳೆಗೆ ಬಿಸಿಲು ಮೇಲೇರಿ ಸಾಕಷ್ಟು ಚುರುಕಾಗಿತ್ತು. ಅವರು ಸೀತಾ ರಾಮಸ್ವಾಮಿಯ ಮನೆ ತಲುಪಿದಾಗ, ತಂದೆ ಮತ್ತು ಮಗ ಮನೆಯಲ್ಲೆ ಇದ್ದರು. ಮನೆಯಲ್ಲೆ ಕುಳಿತು ಕೋರ್ಟು ನಡೆಸಿದ್ದರು. ಹೆಂಡತಿ ಯಾವುದೊ ವಿಷಯದ ಬಗ್ಗೆ ವಾದಿಸುತ್ತಿದ್ದಳು. ಮಗ ಯಾವ ಮಾತೂ ಆಡದೆ ಮೌನವಾಗಿ ಕುಳಿತಿದ್ದ. ಪುಲ್ಲಯ್ಯ ಬಂದದ್ದನ್ನು ನೋಡಿ ಸೀತಾರಾಮಸ್ವಾಮಿ, "ಓ ಪುಲ್ಲಯ್ಯ...... ಬಾ...... ಬಾ"—ಎಂದು ನಗುತ್ತಲೇ ಸ್ವಾಗತಿಸಿದ. "ನೋಡದೇನs, ಪುಳಿಅಯ್ಯ ಯಾರನ್ನೊ ಕರಕೊಂಡು ಬಂದಾನ"—ಎಂದು ಹೆಂಡತಿಗೆ ಕೂಗಿ ಹೇಳಿದ.

"ಅವನ್ಯಾಕ ಪುಳಿ (ಹುಳಿ) ಆದಾನು. ಅವನು ಸಿಹಿ ಮನುಷ್ಯನಾದ್ದರಿಂದಲೇ, ಮಲ್ಲಿಗೆ ಯಂತಹ ಹುಡುಗೀನ್ನ ಮನಿ ತುಂಬಿಕೊಂಡಾನ"—ಸೀತಾರಾಮಸ್ವಾಮಿಯ ಹೆಂಡತಿ, ಕುಳಿತಲ್ಲಿಂದಲೇ ಹೇಳಿದಳು. ಪುಲ್ಲಯ್ಯ ಮತ್ತು ನೀಲಿ ಮುಂದೆ ಹೋಗಿ, ತಮ್ಮ ಧಣೇರಿಗೆ ನಮಸ್ಕರಿಸಿದರು. ಕಿರಿಯ ವಕೀಲ ವೆಂಕಟ ಅಪ್ಪಲ ರಾಮನರಸಿಂಹ ರಾವು, ತಲೆ ಎತ್ತಿ ನೀಲಿಯನ್ನು ನೋಡಿದ. ಅವಳನ್ನು ನೋಡಿದಾಕ್ಷಣ, ಅವನ ಮನಸ್ಸಿನಲ್ಲಿ ಸಾವಿರ ಬಯಕೆಗಳು ತಲೆ ಎತ್ತಿದವು. ಅದರೊಡನೆ ಅವನ ಕುಹಕಬುದ್ಧಿ ಜಾಗೃತ ಗೊಂಡಿತು—"ಅವರು ಈ ರಾತ್ರಿ ಇಲ್ಲೆ ಇದ್ದಲ್ಲಿ...... ಪುಲ್ಲಯ್ಯನಿಗೆ ಮತ್ತು ಬರುವ ಯಾವುದಾದರೂ ಔಷಧಿ ಕುಡಿಸಬಹುದು...... ರಾತ್ರಿ ಹನ್ನೆರಡು ಗಂಟೆಯ ವರೆಗೆ ಯಾವುದಾದರೂ ಪುಸ್ತಕ ಹಿಡಿದು ಹೊರಗಿನ ಕೋಣೆಯಲ್ಲಿ ಕುಳಿತರಾಯಿತು...... ನೀಲಿ, ನಿದ್ರೆ ಬಾರದ ಹೊರಳಾಡಬಹುದು...... ಗಂಡನನ್ನು ಎಬ್ಬಿಸಬಹುದು...... ಆದರೆ ಅವನೆಲ್ಲಿ ಏಳುತ್ತಾನೆ...... ಆಹಾ, ಅವಳು ಎಷ್ಟು ಚೆಲುವೆ...... ಅವಳ ಸ್ತನದ್ವಯಗಳು...... ಆ ಮುಗ್ಧತೆ...... ಆಕೆಗಿರುವ ಆ ಚೆಲುವು—ಆ ಒಲವು, ಪಟ್ಟಣದ ಹುಡುಗಿಯರಿಗೆ ಇರಲು ಸಾಧ್ಯವೇ?"—ಕುಳಿತಲ್ಲೆ ಚಡಪಡಿಸಿದ ಕಿರಿಯ ವಕೀಲ.

ಸೀತಾರಾಮಸ್ವಾಮಿಯ ಸೊಸೆ ಎದ್ದು ಅಡುಗೆಮನೆಗೆ ಹೋದಳು. ಪುಲ್ಲಯ್ಯ, ನಾಚಿಕೊಳ್ಳುತ್ತಾ, "ಧಣೇರ ಹೆಣ್ಣಿಲ್ಲದ ಮನೆ ಬೆಕೂ ಅಂತಿತ್ತು...... ಏನಾದರೂ ......ಕೇಳುವವರು ಇರಲಿಲ್ಲ...... ಅದಕ್ಕ...... ಈಕೀನ್ನ......"

"ಸರಿ...... ಸರಿ...... ಒಳ್ಳೇದಾತು ಬಿಡು......" ಎನ್ನುತ್ತಾ, ಒಮ್ಮೆ ನೀಲಿಯತ್ತ ದೃಷ್ಟಿ ಬೀರಿ ತಲೆ ಕೆಳಗೆ ಹಾಕಿದ ಸೀತಾರಾಮಸ್ವಾಮಿ,

"ನಿನ್ನ ಹೆಸರೇನಽ ಹುಡುಗಿ"—ಯಜಮಾನಿ ಕೇಳಿದಳು.

"ನೀಲಮ್ಮ. ಆದರ, ಊರಾಗ ನೀಲಿ—ಅಂತ ಕರೀತಾರ"—ಪುಲ್ಲಯ್ಯ ತಾನೇ ಮುಂದಾಗಿ ಹೇಳಿದ.

"ಮನಿ ಕೆಲಸ ಸರಿಯಾಗಿ ಮಾಡ್ತಾಳೇನೊ ನಿನ್ನ ಹೆಣ್ತಿ?"

"ಓ, ಅದಕ್ಕೇನು? ಕೆಲಸ ಮಾಡದ, ದುಡುದು ತಿನ್ನದ ಇವಳ ಹೀಂಗಿರ್ತಾಳೆ?"—ಪುಲ್ಲಯ್ಯನ ಈ ಮಾತು ಕೇಳಿ ಥಕ್ಕನೆ ನಕ್ಕ ಸೀತಾರಾಮಸ್ವಾಮಿ, ಏನೋ ಹೇಳಲು ಬಾಯಿ ತೆರೆದ. ಆದರೆ, ಹೆಂಡತಿಯ ತೀಕ್ಷ್ಣದೃಷ್ಟಿ ನೋಡಿ, ತೆರೆದ ಬಾಯಿ ತೆರೆದು ಕೊಂಡೆ ಕುಳಿತ. ಆದರೆ, ಆತನ ಹೆಂಡತಿ ಸುಮ್ಮನಿರಲಿಲ್ಲ. ಅವಳು ಠೀವಿಯಿಂದ ತನ್ನದೇ ಪುರಾಣ ಬಿಚ್ಚಿದಳು—"ನೋಡು ಪುಲ್ಲಯ್ಯ, ಇವರಿಗೆ ಜಡ್ಜಿ ಕೆಲಸ ಕೊಡ್ತೀವಿ ಅಂದ್ರು. ಆದರ ಇವರು ಬೇಡ—ಅಂತ ಹೇಳಿದರು. ಯಾಕ ಗೊತ್ತೇನು?"

"ಯಾಕಮ್ಮಾ, ಯಾಕ ಬ್ಯಾಡಂದರು?"

"ಜಡ್ಜಿ ಆದರ ಸ್ವಾತಂತ್ರ್ಯ ಇರೋದಿಲ್ಲ. ಅದೂ ಅಲ್ಲದ ನಾಳೆ ಚುನಾವಣೆಯೊಳಗ

ಇವರು ಗೆದ್ದು ಬಂದರೂ ಅಂದರ, ಮಂತ್ರಿ ಆಗಬಹುದು. ಅದನ್ನು ಬಿಟ್ಟು ಸೊಟ್ಟ ಸರ್ಕಾರಿ ನೌಕರಿ ತೊಗೊಂಡು ಏನು ಮಾಡಬೇಕು......"

"ಹೌದು, ಹೌದು"—ಪುಲ್ಲಯ್ಯ ತಲೆಹಾಕಿದ.

ನೀಲಿಗೆ ಕುಳಿತುಕೊಳ್ಳಲು ಹೇಳಿದ ಸೀತಾರಾಮಸ್ವಾಮಿ, ಏನೊ ಕೆಲಸವಿದ್ದವರಂತೆ, ಅಂಗಳಕ್ಕಿಳಿದುಹೋದ. ನೀಲಿ ಸೀರೆಯನ್ನು ಮುದುಡಿಕೊಂಡು, ಗಚ್ಚಿನ ನೆಲದ ಮೇಲೆ ಕುಳಿತಳು. ವರಾಂಡಕ್ಕೆ ಎದುರಾಗಿದ್ದ ಕೋಣೆಯಲ್ಲಿ ಕುಳಿತಿದ್ದ ಅಪ್ಪಲ ರಾಮನರಸಿಂಹ ರಾವು, ಮೈ ಎಲ್ಲ ಕಣ್ಣುಮಾಡಿಕೊಂಡು, ನೀಲಿಯನ್ನು ನುಂಗುವಂತೆ ನೋಡುತ್ತಿದ್ದ. ತೀಕ್ಷ್ಣವಾದ ಅವನ ನೋಟ, ಅಶ್ಲೀಲವಾದ ಅವನ ವಿಚಾರಗಳು, ಅವಳ ದೇಹವನ್ನು ಮುಚ್ಚಿದ ಸೀರೆಯನ್ನು ತೂರಿಕೊಂಡು ಹೋಗುತ್ತಿದ್ದವು.

ಇವರು ರಾತ್ರಿ ಇಲ್ಲೆ ಉಳಿದರೆ, ಸೇರು ಅಕ್ಕಿಗೆ ಸಂಚಕಾರ ಬರಬಹುದೆಂಬ ಆತಂಕ ಸೀತಾರಾಮಸ್ವಾಮಿಯ ಹೆಂಡತಿಗೆ ಇದ್ದೇ ಇತ್ತು. ಹೇಗಾದರೂ ಮಾಡಿ ಇವರನ್ನು ಆದಷ್ಟು ಬೇಗನೆ ಸಾಗಹಾಕಬೇಕೆಂದು ಅವಳು ಆಗಲೇ ಸನ್ನಾಹ ನಡೆಸಿದ್ದಳು. ಅವಳು ಎದ್ದು ಒಳನಡೆದಳು.

ಸೀತಾರಾಮಸ್ವಾಮಿ ಹಿಂದಿರುಗಿ ಬಂದು ವರಾಂಡದಲ್ಲಿ ಶತಪಥ ತಿರುಗುತ್ತಿದ್ದ. ಇದ್ದಕ್ಕಿದ್ದಂತೆ ಆತ ಮಾತು ಪ್ರಾರಂಭಿಸಿ—"ಚೆನ್ನಾಯ್ತು. ಭೇಷಾದ ಹುಡುಗೀನ್ನ ಪಡದಿ. ಸಂತೋಷ...... ಆದರ......" ಅಲ್ಲಿಗೆ ಮಾತು ನಿಲ್ಲಿಸಿದ.

"ಆದರ...... ಆದರೇನ್ರಿ ಧಣೇರ"—ಪುಲ್ಲಯ್ಯ ಕೇಳಿದ.

"ಹುಂ...... ನನ್ನ ಮಾತು ಕೇಳ್ತೀಯಾ?"

"ನಿಮ್ಮ ಮಾತು ನಿರ್ಲಕ್ಷಿಸುವ ಸಾಮರ್ಥ್ಯ ನನಗಿಲ್ರಿ."

"ಹಾಂಗಾದರ ಕೇಳು...... ಹೆಣ್ಣನ್ನು ಹದ್ದುಬಸ್ತಿನಲ್ಲಿ ಇಟ್ಟುಕೊಬೇಕು...... ಹೆಚ್ಚು ಸಲಿಗಿ ಕೊಡಬಾರದು...... ಹೆಣ್ಣಿನ್ನ ನಂಬಬಾರದು ಪುಲ್ಲಯ್ಯ."

ಪುಲ್ಲಯ್ಯನಿಗೆ ಈ ಮಾತಿನ ಅಂತರಾರ್ಥ ತಿಳಿಯಿತಾದ್ದರಿಂದ, ಅವನು ಸುಮ್ಮನೆ ನಕ್ಕು, "ನೀವು ಹೇಳೋದು ಖರೇರಿ. ಗಂಡಿಗೆ ಹೆಣ್ಣಿನಿಂದಲೇ ಆಪತ್ತು"—ಎಂದ.

"ಸರಿಯಾಗಿ ಅರ್ಥಮಾಡಿಕೊಂಡಿ. ಅವರನ್ನ ಒಲೆಯ ಮುಂದ ಕೂಡಿಸಬೇಕು; ಮಕ್ಕಳ ಜೊತೆ ಬಿಡಬೇಕು ಹೊರತಾಗಿ, ಮನೆಯಿಂದ ಹೊರಗ ಕಳಿಸಬಾರದು......" ಪ್ಲೀಡರ್ ಸೀತಾರಾಮಸ್ವಾಮಿ ಅಡಿಗೆ ಮನೆಯತ್ತ ನೋಡುತ್ತಲೇ ಹೇಳಿದ.

"ಹೆಂಡ್ತೀನ್ನ ಗಂಡ, ಗಂಡನ್ನ ಹೆಂಡ್ತಿ ನಂಬದಿದ್ದರ, ಈ ಪ್ರಪಂಚ ನಡೆಯೋದಾದರೂ ಹ್ಯಾಂಗರಿ ಧಣೇರ. ಅವರೂ ನಮ್ಮ ಹಾಂಗ ನೂರು ಆಶೆ–ಆಕಾಂಕ್ಷೆಗಳನ್ನು ಹೊಂದಿದವರು. ಯಾತ್ರೆಗೆ, ಜಾತ್ರೆಗೆ...... ಅವರನ್ನ ಕರೆದುಕೊಂಡು ಹೋಗದಿದ್ದರ......" ಪುಲ್ಲಯ್ಯ ಇನ್ನೂ ಏನೇನೊ ಹೇಳುವುದರಲ್ಲಿದ್ದ.

ಸೀತಾರಾಮಸ್ವಾಮಿ ಅವನನ್ನು ಅಲ್ಲಿಗೆ ತಡೆದು, "ಲೇ ಹುಚ್ಚ, ನಾಲ್ಕು ದಿನ ಕಳದರ,

ನಿನಗs ತಿಳೀತದ....... ನನ್ನ ಮಾತು ಕೇಳು...... ಮಕ್ಕಳು—ಮರಿ ಆಗುವ ವರೆಗಾದರೂ ಹೆಂಣ್ತಿ ಕೈಯಾಗ ಕೀಲಿಕೈ ಕೊಡಬ್ಯಾಡ" ಎಂದು ಬುದ್ಧಿ ಹೇಳಿದ.

ಪುಲ್ಲಯ್ಯ ಸುಮ್ಮನೆ ನಕ್ಕ. ಇದನ್ನು ಗಮನಿಸಿದ ಸೀತಾರಾಮಸ್ವಾಮಿ—"ನನ್ನ ಮಾತು ನಿನಗ ಹಿಡಿಸಲಿಲ್ಲಂತ ಕಾಣ್ತದ. ಮುಂದಾಗುವುದನ್ನು ಹೇಳುವ ದೂರದೃಷ್ಟಿ—ದಿವ್ಯದೃಷ್ಟಿ ನನಗದ ಅಂತ ಎಷ್ಟೋ ಜನರು ಒಪ್ಪಿಕೊಂಡಾರ....... ನಾನೇನೂ ಕೋರ್ಟು—ಕಚೇರಿಗೆ ಹೋಗುವ ಅಗತ್ಯವಿಲ್ಲ....... ನಾನಂದರ ಏನಂತ ತಿಳಿದೀದಿ ......ಜನರs ನನ್ನ ಹತ್ತಿರ ಓಡಿ ಬರ್‍ತಾರ" ಎಂದು ಜಂಬ ಕೊಚ್ಚಿಕೊಂಡ.

"ಹೌದ್ಹೌದು"—ಪುಲ್ಲಯ್ಯ ತಲೆ ಆಡಿಸಿದ.

"ನಾನು ಹೇಳೋದಿಷ್ಟ. ಹೆಣ್ಣು, ಇಂದಿಲ್ಲ ನಾಳೆ, ಒಂದಲ್ಲ ಒಂದು ದಿನ ಗಂಡಿಗೆ ಮೋಸ ಮಾಡ್ತಾಳ. ಹುಷಾರಾಗಿರು."

ಪುಲ್ಲಯ್ಯ ಮಾತನಾಡಲಿಲ್ಲ. ಒಳಗೆ ಅಡಿಗೆಮನೆಯಲ್ಲಿ ಅತ್ತೆ—ಸೊಸೆಯರ ನಡುವೆ ಏನೊ ಗುಸು—ಗುಸು ನಡೆದಿತ್ತು. ಅತ್ತೆಗೆ ತಿಳಿಸದೆ, ಮನೆಗೆ ಬಂದ ರೈತರಿಗಾಗಿ ಹೆಚ್ಚಿಗೆ ಅನ್ನಕ್ಕಿಟ್ಟಿದ್ದಳು ಸೊಸೆ. ಅತ್ತೆಗೆ ಅಸಮಾಧಾನ.

ಹೊತ್ತು ಮುಳುಗುತ್ತಿರಲು, ಪುಲ್ಲಯ್ಯ ಹೆಂಡತಿಯನ್ನು ಕರೆದುಕೊಂಡು ಊರಿಗೆ ಹೊರಟ. ಅಪ್ಪಲ ರಾಮನರಸಿಂಹರಾವು ಅದುವರೆಗೆ ಕಟ್ಟಿಕೊಂಡಿದ್ದ ಆಶಾಗೋಪುರ ಕಳಚಿ ಬಿದ್ದಿತು. ದಾರಿಯಲ್ಲಿ ನೀಲಿ ಏನೇನೊ ಕೇಳಿದಳು. ಆದರೆ, ಅನ್ಯಮನಸ್ಕನಾಗಿದ್ದ ಪುಲ್ಲಯ್ಯ ಏನೇನೊ ಉತ್ತರ ಕೊಡುತ್ತಿದ್ದ. ಗಂಡನ ವರ್ತನೆಯನ್ನು ಕಂಡು, ನೀಲಿಗೆ ಅಸಮಾಧಾನವಾಯಿತು. ಆದರೂ, ಧಣಿಯ ಮನೆಯವರೆಲ್ಲ ಒಳ್ಳೆಯವರು, ಹಾಗೆ—ಹೀಗೆ—ಎಂದು ಹೊಗಳಹತ್ತಿದಳು. ಆಗ ಮಾತ್ರ ಪುಲ್ಲಯ್ಯ, "ಬಂಡವಾಳವಿಲ್ಲದ ಬಡಾಯಿ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು ಬೇಕು ಈ ಜನರಿಗೆ" ಎಂದ.

"ಯಾಕ, ಹಂಗ್ಯಾಕ ಅಂತೀದಿ."

"ಅವರ ಸಂಸಾರ ಗಟ್ಟಿಯಾಗಿದ್ದರೂ, ಸಂಸಾರದ ಹೊರೆಯನ್ನು ಹೊರುವ ಗಟ್ಟಿಗತನ ಮಾತ್ರ ಅವರಲ್ಲಿಲ್ಲ".

ಚಳಿಗಾಲವಾಗಿದ್ದರಿಂದ, ಹೊತ್ತು ವೇಗದಿಂದ ಮುಳುಗಹತ್ತಿತ್ತು. ರಸ್ತೆಯಲ್ಲಿ ಅಲ್ಲಲ್ಲಿ ಸಂತೆಯಿಂದ ಹಿಂದಿರುಗುತ್ತಿದ್ದ ಬಂಡಿಗಳು ಎದುರಾದವು. ಹೊಗೆ ಕಾರುತ್ತಾ ಬಂದ ಬಸ್ಸು, ಧೂಳು ಎರಚಿ ಹೊರಟುಹೋಯಿತು. ಗಿಡದ ನೆರಳಿನಲ್ಲಿ ಬರುತ್ತಿದ್ದ ಪುಲ್ಲಯ್ಯನಿಗೆ ಕೆರೆ ಕಾಣಿಸಿತು. ಕೆರೆಗೆ ಅಂಟಿಕೊಂಡಂತೆ ಫಲವತ್ತಾದ ಭೂಮಿ ಇತ್ತು. ಅದಕ್ಕೆ ಅಂಟಿಕೊಂಡಂತೆ ಬರಡುಭೂಮಿ. ಬರಡುಭೂಮಿಯ ಅಂಚಿನಲ್ಲಿ ಒಂದು ಬೆಟ್ಟವಿತ್ತು.

ಪುಲ್ಲಯ್ಯ ಮೌನವಾಗಿ ಹೆಜ್ಜೆ ಹಾಕುತ್ತಿದ್ದ. ನೀಲಿಯೆ ಮಾತು ಪ್ರಾರಂಭಿಸಿದಳು.

"ಒಬ್ಬರ ಒಳ್ಳೆಯತನ ಒಬ್ಬರ ನೀತಿ ನಡವಳಿಕೆ ಕಟ್ಟಿಕೊಂಡು ನಮಗೇನು ಮಾಡಬೇಕಾಗ್ಯದ. ಒಳ್ಳೆಯತನ ಗುರುತಿಸಿ, ಅವರೊಡನೆ ಒಳ್ಳೆ ಸಂಬಂಧ ಬೆಳೆಸಿಕೊಳ್ಳಬೇಕು. ಅದನ್ನು ಬಿಟ್ಟು, ಒಬ್ಬರಲ್ಲಿನ ಕೆಡುಕನ್ನು ಎತ್ತಿ ಆಡುವುದು ಸರಿಯಲ್ಲ. ಅವರು, ನಮಗ ಬದುಕಿನ ಮಾರ್ಗ ತೋರಿಸಿ ಕೊಟ್ಟಾರ. ಅವರ ಮ್ಯಾಲೆ ನಿನಗ ಅಸಮಾಧಾನ ಯಾಕೊ?"

"ಅಲ್ಲಾ, ಅತ್ತೆ-ಸೊಸೆ ಒಳಗ ಹೋಗಿ ಹಾಂಗ ಕಬ್ಬಾಡಿಕೊಂಡರಲ್ಲಾ? ನಾವೇನು ಅವರ ಮನೀಗೆ ಅನ್ನಕ್ಕ ಗತಿಯಿಲ್ಲದ ಹೋಗಿದ್ದೇನು? ಮತ್ತ ಮ್ಯಾಲೆ, ಆ ಹಿರೆ ಮನುಷ್ಯ, ನಿನ್ನ ನಾನು ನಂಬಬಾರದೂ ಅಂತ ಉಪದೇಶ ಮಾಡಿದ......" ಪುಲ್ಲಯ್ಯ ಅಸಮಾಧಾನದಿಂದ ಹೇಳಿದ. ಸಿಟ್ಟು ಮಿತಿಮೀರಿದ್ದರಿಂದ ಅವನು ಮುಂದೆ ಮಾತನಾಡದಾದ.

ಇಬ್ಬರೂ ಕೆರೆಗೆ ಇಳಿದು ಮುಖ ತೊಳೆದು, ಬೊಗಸೆ ನೀರು ಕುಡಿದರು. ನೀಲಿ, ನೀರು ಕುಡಿದು ಒಂದು ನಿಮಿಷ ಕಣ್ಣು ಮುಚ್ಚಿಕೊಂಡು ನಿಂತವಳು, ಕಣ್ಣು ತೆರೆದು ಗಂಡನನ್ನು ನೋಡಿ, "ಆ ಧಣೇರು, ಆ ಮಾತು ಏತಕ್ಕಾದರೂ ಹೇಳಿದರೊ ಏನೊ...... ಇಷ್ಟಕ್ಕೂ ನಮ್ಮ ಕೈಯಾಗ ಏನದ? ಎಲ್ಲಾನೂ ಮಾಡಿಸುವವನು-ಆಡಿಸುವವನು ಆ ದೇವರಿದ್ದಾನ"—ಎಂದು ಅಲ್ಲಿಂದ ಮುಂದೆ ಹೊರಟಳು.

ಪುಲ್ಲಯ್ಯ ಯಾವ ಮಾತೂ ಆಡಲಿಲ್ಲ.

## [ 10 ]

ಚಳಿಗಾಲ ಪ್ರಾರಂಭವಾಗಿತ್ತು. ಗಂಡಸರು, ಹೆಂಗಸರು ಮಕ್ಕಳು-ಮರಿಗಳು ಕಂಬಳಿ ಹೊದ್ದು ಕುಳಿತುಕೊಳ್ಳುವುದನ್ನು ಪ್ರಾರಂಭಿಸಿದ್ದರು. ಮುದುಕಿಯರು ಕೆಂಡದಿಂದ ತುಂಬಿದ ಇದ್ದಲು ಒಲೆಯನ್ನು ಮುಂದಿಟ್ಟುಕೊಂಡು ಕಾಸಿಕೊಳ್ಳುತ್ತ ಬೆಳಗ್ಗೆಯಿಂದ ಸಂಜೆಯ ವರೆಗೂ ಮೂಲೆಯಲ್ಲಿ ಕುಳಿತಿರುತ್ತಿದ್ದರು. ಆಗಾಗ ತಮ್ಮ ಸುತ್ತಲು ಮಕ್ಕಳನ್ನು ಕೂಡಿಸಿಕೊಂಡು ಪುರಾಣಕಥೆಗಳನ್ನು ಇಲ್ಲವೆ ಸಾಹಸದ ಕಥೆಗಳನ್ನು ಹೇಳುತ್ತಿದ್ದರು. ಬಿಸಿಲು ಬಿದ್ದಲ್ಲಿ ಅವರೂ ಕೂಡಾ ಕೈಯಲ್ಲಿ ಕುಡುಗೋಲು ಹಿಡಿದು ಹೊಲಗಳಿಗೆ ಹೋಗುತ್ತಿದ್ದರು.

ಆಗಲೇ ಕುಯ್ಲಿನ ಕೆಲಸ ಪ್ರಾರಂಭವಾಗಿತ್ತು. ಎಲ್ಲರಿಗೂ ಬಿಡುವಿಲ್ಲದ ಕೆಲಸ. ಕೆಲಸವಿಲ್ಲದ ಹುಡುಗರು ಮತ್ತು ಇತರರು, ಹೊಲದ ರಸ್ತೆಯಲ್ಲಿ, ಹೊಲದ ಆಚೆ-ಈಚೆ ಬಿದ್ದಿದ್ದ ಧಾನ್ಯಗಳನ್ನು ಆರಿಸಿಕೊಂಡು ಬುಟ್ಟಿ ತುಂಬಿಕೊಳ್ಳುತ್ತಿದ್ದರು. ಕಾಳುಗಳಿಂದ ತುಂಬಿದ ಹೊಲಗದ್ದೆಗಳು ನೋಡಲು ಮನೋಹರವಾಗಿದ್ದವು. ಗಂಡು

ಹೆಣ್ಣಿನ ಭೇದಭಾವಗಳಿಲ್ಲದೆ ಎಲ್ಲರೂ ಕೆಲಸ ಮಾಡುತ್ತಿದ್ದರು. ಕೆಲಸದ ಹೊರೆಯನ್ನು, ಬೇಸರವನ್ನು ದೂರಮಾಡುವ ದೃಷ್ಟಿಯಿಂದ ಆಗಾಗ ಎಲ್ಲರೂ ಹಾಡುತ್ತಿದ್ದರು, ಕೇಕೆ ಹಾಕುತ್ತಿದ್ದರು. ಹೊಲದ ಒಂದು ಮೂಲೆಯಲ್ಲಿ ಧಾನ್ಯದ ರಾಶಿ ಹಾಕಲಾಗಿತ್ತು.

ಎಲ್ಲೆಲ್ಲೂ ಉತ್ಸಾಹ ಮತ್ತು ಸಂಭ್ರಮದ ವಾತಾವರಣ ಏರ್ಪಟ್ಟಿತ್ತು. ನೀಲಿ ಕೂಡ ಹೊಲದಲ್ಲಿ ಕೆಲಸ ಮಾಡಿದಳು, ಉತ್ಸಾಹದಿಂದ ಕುಣಿದಾಡಿದಳು. ಆಗಾಗ ಪುಲ್ಲಯ್ಯನು ಹೆಂಡತಿಗೆ ಎದುರಾಗಿ ಪೈಪೋಟಿಯ ಮೇಲೆ ಹಾಡುತ್ತಿದ್ದ ಸರಸಸಲ್ಲಾಪಗಳಲ್ಲಿ ಕುಯ್ಲಿನ ಕೆಲಸ ಮುಗಿದಿತ್ತು.

ಕುಯ್ಲು ಆದ ಹೊಸ ಭತ್ತ ಕುದಿಸಿ ಅದನ್ನು ಬಿಸಿಲಿನಲ್ಲಿ ಒಣಗಿಸಿ, ಮತ್ತೆ ಅದನ್ನು ಕುಟ್ಟಿ, ಆ ಅಕ್ಕಿಯ ಅನ್ನ ಊಟ ಮಾಡುವುದೆಂದರೆ ಕೆಲವರಿಗೆ ತುಂಬಾ ಇಷ್ಟ. ಪುಲ್ಲಯ್ಯನ ಮನೆಯಲ್ಲಿ ಈಗ ನೀಲಿಯದೇ ಹಿರಿತನ, ಅವಳದೇ ಆಡಳಿತ. ಗಂಡನಿಗೆ ಇಷ್ಟವಿಲ್ಲದಿದ್ದರೂ ವಾಡಿಕೆಯಂತೆ ಅಗಸನಿಗೆ, ಕ್ಷೌರಿಕನಿಗೆ ಮತ್ತು ಇತರರಿಗೆ ಧಾನ್ಯ ನೀಡಿದಳು ನೀಲಿ. ಅವಳು, ಊರಿನ ಉಪಾಧ್ಯಾಯರಿಗೆ ಧಾನ್ಯ ಕೊಡಲು ಮುಂದಾದಾಗ ಮಾತ್ರ ಪುಲ್ಲಯ್ಯ,

"ನಮಗೇನು ಶಾಲೆಗೆ ಹೋಗುವ ಮಕ್ಕಳಿಲ್ಲ–ಏನಿಲ್ಲ. ಉಪಾಧ್ಯಾಯರಿಗೆ ನಾವು ಯಾಕ ಧಾನ್ಯ ಕೊಡಬೇಕು? ಭತ್ತ ಏನು ಬಿಟ್ಟೀಗೆ ಬಂದಾವೇನು?"—ಎಂದು ಆಕ್ಷೇಪಿಸಿದ.

"ಪಾಪ ಮಕ್ಕಳೊಂದಿಗ. ನಮ್ಮಂತಹವರು ನಾಲ್ಕು ಜನರು ಧಾನ್ಯ ಕೊಟ್ಟರ ಬದುಕಿಕೊಳ್ತಾನ, ಬ್ಯಾಡ ಅನ್ನಬ್ಯಾಡ." ನೀಲಿ ಕನಿಕರದಿಂದ ಹೇಳಿದಳು.

ಪುಲ್ಲಯ್ಯ ಏನೂ ಮಾತನಾಡದೆ ಮುಖ ಗಂಟುಹಾಕಿಕೊಂಡು ಕುಳಿತ. ಒಣಗಿದ ಭತ್ತವನ್ನು ಎತ್ತುಗಳಿಂದ ತುಳಿಸಲಾಯಿತು. ನಂತರ ಅದನ್ನು ತೂರಿ, ಅಕ್ಕಿಯನ್ನು ಹೊಟ್ಟನ್ನು ಬೇರೆ ಮಾಡಲಾಯಿತು. ಪುಲ್ಲಯ್ಯ ಒಂದು ಮರದ ತುಂಬ ಅಕ್ಕಿಯನ್ನು ತೆಗೆದುಕೊಂಡು ಹೆಂಡತಿಯೊಡನೆ ಗದ್ದೆಗೆ ಬಂದ. ಗದ್ದೆಯನ್ನು ಒಂದು ಸುತ್ತು ಹಾಕಿ ದೃಷ್ಟಿ ತೆಗೆದ. ಅಲ್ಲಲ್ಲಿ ಧಾನ್ಯವನ್ನು ಪಂಚಭೂತಗಳಿಗೆ ಆಹುತಿ ನೀಡಿದ. ನಂತರ ವಿನಾಯಕನ ಪೂಜೆ ಮಾಡಿ, ಕಾಯಿ ಒಡೆದು ಅಭಿಷೇಕ ಮಾಡಿ ನೈವೇದ್ಯ ಮಾಡಿದ. ಅಲ್ಲಿಂದ ವಿನಾಯಕನನ್ನು ತಂದು ಧಾನ್ಯವಿಡುವ ಕೊಠಡಿಯಲ್ಲಿ ಇಟ್ಟ. ಇದೆಲ್ಲ ಆದ ಮೇಲೆ ಧಾನ್ಯ ಮನೆಗೆ ಬಂದು ಬಿದ್ದಿತು. ಅಲ್ಲಿಂದ ಅದನ್ನು ಪಟ್ಟಣಕ್ಕೆ ಕಳುಹಿಸುವ ಏರ್ಪಾಟು ಮಾಡಲಾಯಿತು.

ಬುಡುಬುಡುಕರು, ಭವಿಷ್ಯ ಹೇಳುವವರು ಮತ್ತು ತಲೆಯ ಮೇಲೆ ದೇವರನ್ನು ಹೊತ್ತು ಭಿಕ್ಷೆ ಬೇಡುವವರಿಗೆ ಇದೇ ಸುಸಮಯವಾಯಿತು. ಕೊಟ್ಟ ಸಾಲವನ್ನು ಒಂದಿರುಗಿ ಪಡೆಯಲು ಊರಿನ ಬಂಗಾರ ಶೆಟ್ಟಿಗೆ ಇದೇ ಸಮಯವಾಗಿತ್ತು. ಕೊರವಂಜಿಯರಿಗೂ ಮದ್ದು ಮಾಟಮಾಡುವವರಿಗೂ ಇದೇ ಸಮಯವಾಗಿತ್ತು.

"ನಮ್ಮಮ್ಮ ಮಾತಾಯಿ...... ವಾತಕ್ಕೂ ಪಿತ್ತಕ್ಕೂ ಮದ್ದುಂಟು ನಮ್ಮಲ್ಲಿ ಮದ್ದುಂಟು ಎಲ್ಲಕ್ಕು ಎಲ್ಲ ಸಮಯಕ್ಕೂ."

ಮೈತುಂಬಾ ಹಿತ್ತಾಳೆಯ ಆಭರಣಗಳು, ಕೊರಳಲ್ಲಿ ಕವಡೆಯ ಮತ್ತು ಮುತ್ತುಗಳ ಸರಗಳು, ಬಗಲಲ್ಲಿ ಕೂಸು, ಕೈಯಲ್ಲಿ ತಂಬೂರಿ, ತಲೆಯಮೇಲೊಂದು ಬುಟ್ಟಿ, ಬಾಯಿ ತುಂಬಾ ಮಾತು—ಮದ್ದುಮಾಟ ಮಾಡುವ ಸೋದಮ್ಮಳ ಮಾತಿಗೆ ಹಿಡಿ–ತಡಿ ಇಲ್ಲ.

"ಸಂತಾನವಿಲ್ಲವೆ?—ಇರದೆ ಏನು ತಾಯಿ—ಹದಿನೆಂಟು ಕುದುರೆಗಳ ಹೊತ್ತು ತಂದ ನಮ್ಮ ಪುರಾಣ ಸುಳ್ಳಾಗದು ತಾಯಿ—ಕಣ್ಣು ಹೋದರೂ, ಕಾಲು ಹೋದರೂ, ಮಕ್ಕಳಿಲ್ಲದಿದ್ದರೂ, ಎಲ್ಲಕ್ಕೂ ಯಾವುದಕ್ಕೂ ಮದ್ದುಂಟು ತಾಯಿ—ಅಳೆದರೂ ಒಂದೇ ತೂಕ ಮಾಡಿದರೂ ಒಂದೇ ಕೊಡು ತಾಯಿ ದಾನಮಾಡು. ಇದು ಗುರುವಾಗ್ಯ, ಗುರವಾಜ್ಞೆ ನಿರ್ಲಕ್ಷಿಸಿದರೆ ಕುದುರೆ ಜನ್ಮ ತಾಯಿ—ದಾನಧರ್ಮ ಅರಿಯದೆ ಬದುಕುವವನು ಕತ್ತೆಯಾಗಿ ಹುಟ್ಟುವನು......"

ಒಳಗೆ ಮೂಲೆಯಲ್ಲಿ ಕುಳಿತಿದ್ದ ಮುದುಕಿಯ ಕಿವಿಗೆ ಈ ಮಾತುಗಳು ಬಿದ್ದಾಗ, "ನೀಲಿ, ನೀನೇನು ಮುದುಕಿಯಾದಿ ಏನು? ಮಕ್ಕಳ ಚಿಂತಿ ನಿನಗ್ಯಾಕ? ಇಂದಿಲ್ಲ ನಾಳೆ ಆಗ್ತವ. ಈ ಮದ್ದು ಮಾಟಗಳಿಗೆ ಮರುಳಾಗಬೇಡ"—ಎಂದು ಕೂಗಿದಳು.

ಇದನ್ನು ಕೇಳಿಸಿಕೊಂಡ ಮದ್ದು–ಮಾಟ ಮಾಡುವ ಸೋದಮ್ಮ ರೇಗಿದಳು. ಮುಖ ಸೊಟ್ಟು ಮಾಡಿಕೊಂಡು ನಾಟಕೀಯವಾಗಿ—

> "ಏ ಹದ್ದಿನ ಜಾತಿಯವಳೆ,
> ಇಟ್ಟ ಕೂಳಿಗೆ ಮಣ್ಣುಹಾಕುತ್ತೀಯಾ?
> ನಮ್ಮ ದೇವರಿಗೆ ಕೋಪ ಬಂದರೆ
> ಸಮಯಕ್ಕೆ ಮಳೆಯಿಲ್ಲದಂತಾಗಿ
> ಹೊಲಗದ್ದೆಗಳಿಗೆ ನೀರಿಲ್ಲದಂತಾಗಿ,
> ನರ ಜಾತಿ ನೆಲ ನೆಕ್ಕಬೇಕಾದೀತು......"

ಎಂದು ಶಪಿಸತೊಡಗಿದಳು ಸೋದಮ್ಮ.

ಶಾಪ ಕೊಟ್ಟು, ಮದ್ದು ಕೊಡದೆ ಹೊರಟ ಸೋದಮ್ಮಳನ್ನು ನೀಲಿ ಕೂಗಿದಳು.

"ನಾಡಿ ತಿಳಿದವನಿಗೆ ಜಡ್ಡಿನ ಜಾಡೂ ತಿಳೀತೈತಿ......" ಎನ್ನುತ್ತ ಮತ್ತೆ ಬಂದಳು ಸೋದಮ್ಮ.

"ಸೋದಮ್ಮ, ನನಗ್ಯಾಕ ಈ ಮದ್ದು–ಮಾಟ. ಇಕ ತೊಗೊ, ತೆಗೊಂಡುಹೋಗು......" ಎಂದು ನೀಲಿ ಅರ್ಧ ಸೇರು ಧಾನ್ಯ ಹಾಕಿದಾಗ, "ಮತ್ತೆ ಮುಂದಿನ ವರ್ಷ ಇದೇ ದಿನ ಬರ್ತೀನಿ...... ಆಗ ಚಿನ್ನದಂತಹ ಮಗ ನಿನ್ನ ಬಗಲಿನಲ್ಲಿ......" ಎಂದು ಹರಸಿ ಹೋದಳು ಸೋದಮ್ಮ.

ಪುಲ್ಲಯ್ಯ ಧಣಿಯ ಪಾಲು ತೆಗೆದಿಟ್ಟು, ಉಳಿದ ಧಾನ್ಯದಲ್ಲಿ ತನ್ನ ಮದುವೆಗಾಗಿ ಆದೆಮ್ಮವ್ವನ ಬಳಿ ಪಡೆದ ಸಾಲಕ್ಕೆ ಬಡ್ಡಿಯಾಗಿ ಆಲೂರಿನ ನಡವಳಿಕೆಯಂತೆ ಧಾನ್ಯ ಅಳೆದು ಕೊಟ್ಟ. ಆದೆಮ್ಮವ್ವನ ಆ ಸಾಲವನ್ನು ಹೇಗೆ ತೀರಿಸಬೇಕೆಂಬುದೇ ಪುಲ್ಲಯ್ಯನ ಸಮಸ್ಯೆಯಾಗಿತ್ತು. ಇದುವರೆಗೆ ಒಂಟಿಯಾಗಿದ್ದ...... ಆದರೆ ಈಗ ಮೂರು ಹೊಟ್ಟೆಗಳನ್ನು ತುಂಬಬೇಕಾಗಿತ್ತು. ಆದರಲ್ಲಿ ನೀಲಿಯ ಕೈ ಕೊಡುಗೈಯಾಗಿತ್ತು. ಕಷ್ಟಕಾಲ ಬಂದರ ದುಡಿದು ತಿನ್ನಲು ಕೈ–ಕಾಲುಗಳವ ಎಂದಿದ್ದಳು—ನೀಲಿ.

ಪುಷ್ಯಮಾಸ ಬಂತು. ಸೇವಂತಿಗೆ ವಾಸನೆಯಿಂದ ವಾತಾವರಣ ತುಂಬಿಹೋಗಿತ್ತು. ಊರ ಹೆಂಗಸರಂತೂ ಮುಡಿದುಕೊಂಡು ಊರೆಲ್ಲ ಸುತ್ತಾಡುವುದರೊಳಗಾಗಿ ಪುಷ್ಯ ಮಾಸ ಕಳೆದು ಮಾಘ ಮಾಸ ಕಾಲಿಟ್ಟಿತು. ಮಾಘಮಾಸದ ಶುದ್ಧ ಏಕಾದಶಿಯ ದಿನದಂದು ಒಂದುವರೆ ಹರದಾರಿ ದೂರವಿದ್ದ ಬೆಟ್ಟದ ಮೇಲಿನ ವಿಷ್ಣು ದೇವಾಲಯದ ಜಾತ್ರೆ ನಡೆಯುತ್ತಿತ್ತು. ಸುತ್ತುಮುತ್ತಲಿನ ನೂರಾರು ಹಳ್ಳಿಗಳ ಜನರು ಆ ಜಾತ್ರೆಗೆ ಹೋಗುವುದು ವಾಡಿಕೆಯಾಗಿತ್ತು. ಚರಿತ್ರಾರ್ಹವಾದ ಈ ಜಾತ್ರೆಯಲ್ಲಿ ಪಾಲ್ಗೊಳ್ಳಲು ಅಧಿಕ ಸಂಖ್ಯಾತ ಜನರು ಬೆಟ್ಟದ ಸಮೀಪದಲ್ಲಿ ಸೇರಿದ್ದರು. ಶುದ್ಧ ಏಕಾದಶಿಯ ದಿನ, ಬೆಳಗಿನ ಜಾವ ಸ್ವಲ್ಪ ಚಳಿಯಾಗಿಯೇ ಇತ್ತು. ಆದಾಗ್ಯೂ ಜಾತ್ರೆಗೆ ಬಂದ ಸಾವಿರಾರು ಮಂದಿ ಭಕ್ತಾದಿಗಳು, ಬೆಟ್ಟದ ಸಮೀಪದಲ್ಲಿ ಹರಿಯುತ್ತಿದ್ದ ವಂಶಧಾರ ನದಿಯಲ್ಲಿ ಸ್ನಾನ ಮಾಡುತ್ತಿದ್ದರು. ಸ್ನಾನಘಟ್ಟದಿಂದ ಬೆಟ್ಟದ ವರೆಗಿನ ರಸ್ತೆಯಲ್ಲಿ ಉದ್ದಕ್ಕೂ ಭಿಕ್ಷುಕರು ತಮ್ಮ ಮುಂದೆ ಬಟ್ಟೆ ಹಾಕಿಕೊಂಡು ಕುಳಿತಿದ್ದರು. ಅಲ್ಲಲ್ಲಿ, ಹಣ್ಣು–ಹೂವಿನ ಅಂಗಡಿಗಳು, ಚಹಾ ಅಂಗಡಿಗಳು ಇದ್ದವು. ಸ್ನಾನಘಟ್ಟದಲ್ಲಿ ಭಜನೆಮಾಡುತ್ತ ಕುಳಿತಿದ್ದ ಭಕ್ತಾದಿಗಳ ಕೂಗು ತಮಟೆಗಳ ಸದ್ದು ಎಲ್ಲೆಡೆಯಲ್ಲೂ ಕೇಳಿಸು ತ್ತಿತ್ತು. ಭಾವಪರವಶರಾದ ಅನೇಕರು, ನದಿಯ ಉಸುಕಿನಲ್ಲೆ ಭಜನೆ ಮಾಡುತ್ತ ಕುಣಿದಾಡುತ್ತಿದ್ದರು. ದೂರದಲ್ಲಿ ನಿಂತು ನೋಡಿದಲ್ಲಿ ಬೆಲ್ಲಕ್ಕೆ ಮುತ್ತಿದ ಇರುವೆ ಗಳಂತೆ ಜನರು ಬೆಟ್ಟಕ್ಕೆ ಮುತ್ತುತ್ತಿದ್ದರು. ಆ ಗದ್ದಲದಲ್ಲೂ ಸಾಧು–ಸಂತರು ತಮ್ಮ ಬಳಿ ಬರುವ ಜನರ ಹಣೆಗಳಿಗೆ ವಿಭೂತಿ ಹಚ್ಚಿ ದಕ್ಷಿಣೆ ಪಡೆದು ಹರಸು ತ್ತಿದ್ದರು.

ಪುಲ್ಲಯ್ಯ ಕೂಡಾ ನೀಲಿಯನ್ನು ಕರೆದುಕೊಂಡು ಜಾತ್ರೆಗೆ ಬಂದಿದ್ದ. ನದಿಯಲ್ಲಿ ಸ್ನಾನ ಮಾಡಿ, ಸೂರ್ಯನಿಗೆ ನಮಸ್ಕಾರ ಹಾಕಿ, ಬೆಟ್ಟವನ್ನು ಏರತೊಡಗಿದರು. ನೀಲಿ ತನ್ನ ಸೀರೆಯ ಚುಂಗಿನಲ್ಲಿ ಕಟ್ಟಿಕೊಂಡು ಬಂದಿದ್ದ ಅಕ್ಕಿಯನ್ನು ದಾರಿಯ ಉದ್ದಕ್ಕೂ ಕುಳಿತಿದ್ದ ಭಿಕ್ಷುಕರ ಜೋಳಿಗೆಗೆ ಹಾಕುತ್ತಾ ಮುಂದೆ–ಮುಂದೆ ಹೊರಟಿದ್ದಳು. ಪುಲ್ಲಯ್ಯ ಅವಳ ಹಿಂದೆ ಹಿಂದೆ ಹೆಜ್ಜೆ ಇಡುತ್ತಿದ್ದ. ಪಟ್ಟಣದಿಂದ ಒಳ್ಳೊಳ್ಳೆ ಕಲಾವಿದರು ಬಂದಿದ್ದರು. ನಾನಾ ತರದ ಸರಕುಗಳು ಬಂದಿದ್ದವು. ಪಟ್ಟಣದಲ್ಲಿ ಕಾಣಲಾಗದ ಸೌಂದರ್ಯವನ್ನು, ಸರಳತನವನ್ನು ನೋಡಲು, ನೋಡಿ ಆನಂದಿಸಲು ಅದೆಷ್ಟೊ

ಯುವಕರು ಬಂದಿದ್ದರು. ಪಟ್ಟಣದಿಂದ ಬಂದ ಯುವಕರು ಸಹಜವಾದ ಸೌಂದರ್ಯ ದಿಂದ ಸ್ವಾಭಾವಿಕವಾದ ಮುಗ್ಧತನದಿಂದ ಕೂಡಿದ ಹಳ್ಳಿಯ ಯುವತಿಯರನ್ನು, ಅವರ ತುಂಬಿದ ಎದೆಯನ್ನು ಎವೆ ಇಕ್ಕದೆ ನೋಡುತ್ತಿದ್ದರು. ಯೌವನದಿಂದ ತುಳುಕಾಡುತ್ತಿದ್ದ ಕಾಳಿಂಗ ವನಿತೆಯರು, ಇದಾವುದರ ಪರಿವೆ ಇಲ್ಲದೆ ನೋಡುವವರ ಕಣ್ಣಿಗೆ ಹಬ್ಬವಾಗಿ ಮುಂದುಮುಂದಕ್ಕೆ ಹೋಗುತ್ತಿದ್ದರು.

ಮುಖಕ್ಕೆಲ್ಲ ಅರಶಿಣ ಹಚ್ಚಿಕೊಂಡು, ಹಣೆಗೆ ದೊಡ್ಡದಾದ ಕುಂಕುಮವಿಟ್ಟುಕೊಂಡು, ಕೈಯಲ್ಲಿ ಹಣ್ಣುಕಾಯಿಗಳನ್ನು ಹಿಡಿದು, ಬೆಟ್ಟ ಏರುತ್ತಿದ್ದಳು ನೀಲಿ. ಬೆಟ್ಟದ ರಸ್ತೆಯಲ್ಲಿ ಅಲ್ಲಲ್ಲಿ ಹಾಕಲಾದ ಹಂದರಗಳಲ್ಲಿ ಇಡಲಾಗಿದ್ದ ದೇವರುಗಳನ್ನು ನೋಡಿ ಹಣ್ಣು ಅರ್ಪಿಸಿ ಭಕ್ತಿಯಿಂದ ಮುಂದಡಿ ಇಡುತ್ತಿದ್ದಳು. ಬೆಟ್ಟದ ರಸ್ತೆಯ ಉದ್ದಕ್ಕೂ ಅಲ್ಲಲ್ಲಿ ನಿಂತಿದ್ದ ಭಿಕ್ಷುಕರು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಹಾಡುತ್ತಿದ್ದರು. ಹೆಣ್ಣು ಮಕ್ಕಳ ಹಿಂದೆ ಹಿಂದೆ ಗುಂಪಾಗಿ ಹೊರಟಿದ್ದ ಪಟ್ಟಣದ ಯುವಕರು ಪಕಪಕನೆ ನಗುತ್ತ ತಮ್ಮದೇ ಆದ ಲೋಕದಲ್ಲಿ ವಿಹರಿಸುತ್ತಿದ್ದರು. ಆದರೆ ಹಳ್ಳಿಯ ಜನರಿಗೆ ಪಟ್ಟಣದಿಂದ ಬಂದ ಈ ಜನರ ಪರಿವೆಯೇ ಇರಲಿಲ್ಲ. ಅವರ ದೃಷ್ಟಿ, ಅವರ ಮನಸ್ಸು, ಬೆಟ್ಟದ ಮೇಲಿನ ದೇವರಲ್ಲಿ ನಟ್ಟಿತ್ತು. ಆ ತಂದೆಯ ದರ್ಶನ ಪಡೆದು, ಜೀವನವನ್ನು ಪುನೀತ ಗೊಳಿಸಿಕೊಳ್ಳಬೇಕು ಎಂಬ ಏಕಾಗ್ರತೆಯಿಂದ ಆ ಕಲ್ಲಿನ ವಿಗ್ರಹದಲ್ಲಿ ಅಚಲ ವಿಶ್ವಾಸ ವನ್ನಿಟ್ಟುಕೊಂಡು ಅವರು ಮುನ್ನಡೆಯುತ್ತಿದ್ದರು. ತಮ್ಮ ಪ್ರಾರ್ಥನೆಯನ್ನು ಕೇಳುವ, ತಮ್ಮ ಆಶೆ ಆಕಾಂಕ್ಷೆಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ ಆ ವಿಗ್ರಹಕ್ಕಿದೆ ಎಂಬುದು ಅವರ ನಂಬಿಕೆಯಾಗಿತ್ತು.

ಆ ನಂಬಿಕೆ ತಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುವ ತನಕ ಅವರಲ್ಲಿ ಮನೆಮಾಡಿತ್ತು. ಆ ನಂಬಿಕೆ, ಆ ವಿಶ್ವಾಸ—ಅಚಲವಾಗಿತ್ತು. ಅದೇ ಅವರಿಗೆ ಆನಂದ ವನ್ನೀಯುತ್ತಿತ್ತು.

ಪುಲ್ಲಯ್ಯ ಮತ್ತು ನೀಲಿ, ಇತರರಂತೆ ಭಕ್ತಿಪರವಶರಾಗಿ ಮುನ್ನಡೆದಿದ್ದರು. ಅಲ್ಲಿ ಒಬ್ಬ ಸಾಧು ಕುಳಿತಿದ್ದ. ಅವನ ಬಳಿ ಶಿವ–ಪಾರ್ವತಿ ನಂದಿಯ ಮೇಲೆ ಕುಳಿತ ಒಂದು ವಿಗ್ರಹವಿತ್ತು. ಹಾಲಾಹಲವನ್ನು ನುಂಗಿದ ನೀಲಕಂಠನ ಮುಖದ ಮೇಲೆ ಮಂದಹಾಸ ವಿತ್ತು. ಪುಲ್ಲಯ್ಯ ಮತ್ತು ನೀಲಿ ಭಕ್ತಿಯಿಂದ ಬಾಗಿ ನಮಸ್ಕರಿಸಿ, ಸಾಧುವಿಗೆ ಹಣ್ಣು ಗಳನ್ನು ಅರ್ಪಿಸಿದರು. ಆ ಸಾಧು ಅವರ ತಲೆಯ ಮೇಲೆ ಕೈ ಇಟ್ಟು, "ಹಣ್ಣುದಾನ ಮಾಡೀರಿ, ಹಣ್ಣಿನಂತಹ ಗಂಡು ಮಗ ಹುಟ್ಟಲಿ"—ಎಂದು ಆಶಿರ್ವದಿಸಿದ. ಅದನ್ನು ಕೇಳಿ ಪುಲ್ಲಯ್ಯ ಪುಲಕಿತಗೊಂಡ. ಮಗ, ತನಗೊಬ್ಬ ಮಗ...... ಹೆಂಡತಿಯ ವ್ಯಾಮೋಹದಲ್ಲಿ ಸಿಲುಕಿ ಮಗನ ವಿಷಯವನ್ನೇ ಮರೆತಿದ್ದ ಪುಲ್ಲಯ್ಯ. "ಮಗನಿ ಗಾಗಿಯೇ ಅಲ್ಲವೆ ತಾನು ಮದುವೆಯಾದದ್ದು? ನನ್ನಂತೆ ನೀತಿ ನಡವಳಿಕೆಗೆ ಕಟ್ಟುಬೀಳು ವವ—ಕಳ್ಳರನ್ನು ಹಿಡಿಯುವ ಗಂಡುಗಲಿ, ಗರಡಿಯಲ್ಲಿ ನನ್ನನ್ನು ಮೀರಿಸುವವ

—ನನ್ನ ಮಗ ನನಗಿಂತ ಬೆಳ್ಳಗಿರಬೇಕು—ನನಗಿಂತ ಸ್ಫುರದ್ರೂಪಿಯಾಗಿರಬೇಕು"—ಪುಲ್ಲಯ್ಯ ಆಗಲೇ ತನ್ನ ಕಲ್ಪನಾಲೋಕವನ್ನು ಪ್ರವೇಶಿಸಿದ್ದ.

ಇನ್ನೂ ಹುಟ್ಟದ ಮಗನ ಬಗ್ಗೆ ಯೋಚಿಸುತ್ತಲೇ ಪುಲ್ಲಯ್ಯ ಬೆಟ್ಟ ಏರಿದ. ಬೆಟ್ಟದ ಮೇಲಿನ ಗುಡಿಯ ಬಳಿ ಜನಸಂದಣಿ ಹೆಚ್ಚಾಗಿತ್ತು. ತಾನೊಬ್ಬನೆ ಇದ್ದಿದ್ದರೆ ಆ ಗದ್ದಲದಲ್ಲಿ ಮುನ್ನುಗ್ಗಿ ಹೋಗಬಹುದಾಗಿತ್ತು. ಆದರೆ ಜೊತೆಗೆ ನೀಲಿ ಇದ್ದಳು. ಅವಳ ಜೊತೆಗೆ ದೇವರ ದರ್ಶನ ಪಡೆದು, ತೃಪ್ತಿಯಾಗುವ ವರೆಗೂ ನಮಸ್ಕಾರ ಹಾಕಿ ಬರಬೇಕೆಂದು ಪುಲ್ಲಯ್ಯ ಮೊದಲೇ ಅಂದುಕೊಂಡಿದ್ದ. ಆದರೆ ಈಗ ಇತರರಂತೆ, ಇವರೂ ಸಹ ದೂರದಿಂದಲೇ ದೇವರಿಗೆ ಅರ್ಪಿಸಬೇಕಾಗಿದ್ದ ಹಣ್ಣುಕಾಯಿಗಳನ್ನು ಗುಡಿಯ ಒಳಗೆ ತೂರಿದರು. ಆದರೆ ದೇವರ ದರ್ಶನ ಪಡೆಯದೆ ಹಿಂದಿರುಗುವಂತಿರಲಿಲ್ಲ. ಅದಕ್ಕಾಗಿ ಅವರು ಅಲ್ಲಿಯೇ ಕುಳಿತರು. ದೇವರ ದರ್ಶನಕ್ಕಾಗಿ ಅವರು ಕಾದು ಕುಳಿತಿದ್ದಾಗಲೇ ಹೊತ್ತು ಮುಳುಗಿತು. ಬೆಳಗ್ಗಿನಿಂದ ಭೂಮಿಯನ್ನು ಬೆಳಗಿದ್ದ ಸೂರ್ಯ, ಆಯಾಸಗೊಂಡು ದೂರದಲ್ಲಿನ ದಿಗಂತದಲ್ಲಿ ವಿಶ್ರಾಂತಿ ಪಡೆಯಲು ಹೊರಟಿದ್ದ. ಚಳಿಗಾಲವಾದ್ದರಿಂದ, ಬಹು ಬೇಗನೆ ಹೊತ್ತು ಮುಳುಗಿತು. ದೇವರ ದರ್ಶನ ಪಡೆದವರೆಲ್ಲರೂ, ಬೆಟ್ಟದ ಎರಡು ಕಡೆಗಳಿಂದ ಬೆಟ್ಟ ಇಳಿಯಹತ್ತಿದರು. ಪುಲ್ಲಯ್ಯ ಮತ್ತು ನೀಲಿ ಕೂಡಾ ದೇವರ ದರ್ಶನ ಪಡೆದು ಕೆಳಗಿಳಿಯಹತ್ತಿದರು. ಬೆಟ್ಟದ ಕೆಳಗೆ ಪಟ್ಟಣದಿಂದ ತರಲಾಗಿದ್ದ ಬಣ್ಣಬಣ್ಣದ ವಸ್ತುಗಳನ್ನು ಮಾರಲಾಗುತ್ತಿತ್ತು. ಒಂದು ಕಡೆ ಕಾಫಿ ಹೋಟಲುಗಳಿದ್ದರೆ, ಮತ್ತೊಂದು ಕಡೆ ಹಳ್ಳಿಯಿಂದ ಬಂದ ಕಬ್ಬು, ಕಬ್ಬಿನ ಹಾಲಿನ ಅಂಗಡಿಗಳಿದ್ದವು. ಒಂದೆಡೆ ಭಜನೆ ಮಂಡಳಿಗಳು ಭಜನೆ ಮಾಡುತ್ತಿದ್ದರೆ, ಮತ್ತೊಂದೆಡೆ ಗರಡಿ ಸಾಮು ನಡೆಯುತ್ತಿತ್ತು. ಪುಲ್ಲಯ್ಯ ಮತ್ತು ನೀಲಿ, ಇತರರಂತೆ ಎಲ್ಲವನ್ನು ನೋಡುತ್ತಾ ಆನಂದಿಸುತ್ತಾ ಬರುತ್ತಿದ್ದರು. ಪುಲ್ಲಯ್ಯ, ಖರ್ಜೂರ, ನೆಲಗಡಲೆ ಬಾಳೆಹಣ್ಣು—ಏನೆಲ್ಲ ಕೊಂಡನಾದರೂ, ನೀಲಿ ಯಾವುದನ್ನೂ ತಿನ್ನಲಿಲ್ಲ. ಅವಳಿಗೆ ಹೊಟ್ಟೆ ತೊಳೆಸಿದಂತಾಗಿ, ಯಾವುದೂ ಬೇಡವಾಗಿತ್ತು. ಆದರೆ, ಗಂಡನಿಗೆ ಏನನ್ನೂ ಹೇಳದೆ ಆತನ ಹಿಂದೆ ನೀಲಿ ನಡೆದಿದ್ದಳು. ಜಾತ್ರೆಯಿಂದ ದೂರವಾಗಿ ಹೊಲಗದ್ದೆಗಳಲ್ಲಿ ಕಾಲುಹಾಕುತ್ತ ಊರಿಗೆ ಹಿಂದಿರುಗುತ್ತಿದ್ದಾಗ, ನೀಲಿಯ ನಡಿಗೆ ನಿಧಾನವಾಯಿತು. ಎಷ್ಟೋ ಜನರು ಅವರನ್ನು ಹಿಂದೆ ಹಾಕಿ ಮುಂದೆ ಹೋಗಿಬಿಟ್ಟರು.

ಆಗಲೇ ಸೂರ್ಯ ಮುಳುಗಿ, ಆಕಾಶವೆಲ್ಲ ಓಕಳಿಯಾಡಿದ ನೆಲದಂತೆ ಕಾಣುತ್ತಿತ್ತು. ಅಲ್ಲಲ್ಲಿ ಬಿಳಿಯ ಮೋಡಗಳು ಕುಂಕುಮದ ನೀರಿನಲ್ಲಿ ಅದ್ದಿದ ಹತ್ತಿಯಂತೆ ಕಾಣುತ್ತಿದ್ದವು. ಹಕ್ಕಿ-ಪಕ್ಷಿಗಳು, ಆಗಲೇ ತಮ್ಮ ಗೂಡನ್ನು ಸೇರಿದ್ದವು. ಹೊಲಗದ್ದೆಗಳಲ್ಲಿ ಬೆಳೆದು ನಿಂತ ಪೈರು ಹಸಿರು—ಹಸಿರಾಗಿ, ನೋಡಲು ಆಹ್ಲಾದಕರವಾಗಿತ್ತು. ಪುಲ್ಲಯ್ಯ ಮತ್ತು ನೀಲಿ, ಆಗಲೇ ನದಿಯ ದಿಬ್ಬದ ಮೇಲೆ ಬಂದಿದ್ದರು. ಸುತ್ತಲೂ ಮನೋಹರವಾಗಿ, ಮೇಲೆ ತಂಗಾಳಿ ಕೂಡಾ ಬೀಸುತ್ತಿತ್ತು.

ಪುಲ್ಲಯ್ಯ ಬೇಗಬೇಗನೆ ಹೆಜ್ಜೆಹಾಕುತ್ತಿದ್ದ. ಆದರೆ, ನೀಲಿಗೆ ಅವನ ಜೊತೆಗೆ ನಡೆಯಲಾಗಲಿಲ್ಲ. ಹೊಟ್ಟೆ ತೊಳೆಸುವುದು ಹೆಚ್ಚಾದಾಗ ಅವಳು ಕುಳಿತುಬಿಟ್ಟಳು. ಅವಳು ಕುಳಿತ ಸ್ಥಳದಿಂದ ಸ್ವಲ್ಪ ದೂರದಲ್ಲೆ ಒಂದು ಹುತ್ತವಿತ್ತು.

"ಸುಧಾರಿಸಿಕೊ, ಇನ್ನೇನು ಊರು ಬಂತು. ನಿಧಾನವಾಗಿ ಹೋಗಬಹುದು"— ಪುಲ್ಲಯ್ಯ ಹೆಂಡತಿಗೆ ಹೇಳಿದ.

ನೀಲಿ ಮಾತನಾಡಲಿಲ್ಲ. ಆದರೆ ಹಿಂದೆ ಹಿಂದೆ ಬರುತ್ತಿದ್ದ ಜನರು ಅವರನ್ನು ಹಿಂದೆ ಹಾಕಿ ಹೋಗಿಬಿಟ್ಟರು. ಚಳಿಗಾಲವಾದ್ದರಿಂದ ತಂಪಾದ ಗಾಳಿ ಬೀಸುತ್ತಿತ್ತು. ಮಬ್ಬು ಕತ್ತಲಿನಲ್ಲೇ, ಚಂದ್ರ ತನ್ನ ಮೆರಗನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಿರುವಂತೆ ಕಂಡುಬರುತ್ತಿತ್ತು.

ನೀಲಿಗೆ ಮತ್ತೆ ಹೊಟ್ಟೆ ತೊಳೆಸಿ ವಾಂತಿಯಾಯಿತು. ಅದನ್ನು ನೋಡಿದ ಪುಲ್ಲಯ್ಯ, ಗಾಬರಿಗೊಂಡ. ನೀಲಿ, ಭಯಪಡುವ ಅಗತ್ಯವಿಲ್ಲವೆಂದು ಎಷ್ಟು ಹೇಳಿದರೂ ಕೇಳದೆ, ಅವಳ ಭುಜ ಹಿಡಿದು ನಿಂತ. ಅಷ್ಟರಲ್ಲೆ ಹುತ್ತದಲ್ಲಿನ ಹಾವು ಸರಸರನೆ ಹೋಗುತ್ತಿರು ವುದನ್ನು ನೋಡಿದ ನೀಲಿ ಥಟ್ಟನೆ ಎದ್ದು ನಿಂತಳು. ಗಂಡಹೆಂಡತಿ ಇಬ್ಬರೂ ಸರ್ಪರಾಜ ನಿಗೆ ನಮಸ್ಕರಿಸಿ ಅಲ್ಲಿಂದ ಹೊರಟರು. ಹಾವು ಅವರತ್ತ ನೋಡದೆ ತನ್ನ ಪಾಡಿಗೆ ತಾನು ಹೊರಟುಹೋಯಿತು.

ಗಂಡ ಹೆಂಡತಿ ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ನೀಲಿ, ಗಂಡನ ಭುಜದ ಮೇಲೆ ಕೈಯಿಟ್ಟು ತನ್ನ ಎಲ್ಲಾ ಭಾರವನ್ನು ಅವನ ಮೇಲೆಯೇ ಹಾಕಿ ನಡೆಯುತ್ತಿದ್ದಳು. ನೀಲಿಗೆ ಪುನಃ ತಳಮಳವಾಗಿ ವಾಂತಿ ಮಾಡಿಕೊಂಡಳು. ಅದೇ ವೇಳೆಗೆ ಒಬ್ಬ ಮುದುಕಿ ಮತ್ತು ಅವಳ ಮೊಮ್ಮಗ ಜಾತ್ರೆಯಿಂದ ಹಿಂದಿರುಗುತ್ತಿದ್ದರು. ಮುದುಕಿ ಒಮ್ಮೆ ನೀಲಿಯ ಮುಖ ನೋಡಿ, ಒಮ್ಮೆ ಪುಲ್ಲಯ್ಯನನ್ನು ನೋಡಿ, ನಗುತ್ತ,

"ಮದುವೆ ಆಗಿ ಎಷ್ಟು ತಿಂಗಳಾಯಿತವ್ವಾ?" ಎಂದು ಕೇಳಿದಳು. ಆದರೆ ಕಂಗಾಲಾ ಗಿದ್ದ ಪುಲ್ಲಯ್ಯನ ಕಿವಿಗೆ ಆ ಪ್ರಶ್ನೆ ಬಿದ್ದಿರಲಿಲ್ಲ. ಅವನು ಹಾಗೆಯೇ ಮುಂದಕ್ಕೆ ಹೊರಟಿದ್ದ. ಮುದುಕಿ ಅವರ ಜೊತೆಗೆ ಹೆಜ್ಜೆಹಾಕುತ್ತಾ, "ಚಿನ್ನದಂತಹ ಗಂಡುಮಗು ವನ್ನು ಎತ್ತಿಕೋತಿ ಏಳು" ಎಂದು ನಗುತ್ತ ಹೇಳಿದಳು.

ಇದನ್ನು ಕೇಳಿಸಿಕೊಂಡ ಪುಲ್ಲಯ್ಯ ಪುಟಿದೆದ್ದ. ನೀಲಿ ಗಂಡನತ್ತ ನೋಡಿ ಮಂದಹಾಸ ಬೀರಿದಾಗ ಅವನು ಕೇಕೆ ಹಾಕಿ ಕುಣಿದಾಡಿದ.

# [ 11 ]

ಆ ವರ್ಷ, ಚಳಿ ಸ್ವಲ್ಪ ಹೆಚ್ಚಾಗಿಯೇ ಇತ್ತು. ಎಲ್ಲದಕ್ಕೂ ಒಂದು ಕಾರಣವನ್ನು ಹೇಳು ತ್ತಿದ್ದ ನರಸಿಂಹ, ಪಟ್ಟಣದಿಂದ ತಿರುಗಿ ಬಂದ ಮೇಲೆ ಚಳಿ ಹೆಚ್ಚಾದ್ದಕ್ಕೂ ಒಂದು ಕಾರಣ ಹೇಳಿದ. "ಜಪಾನಿಯರು ಸೋತು ಓಡಿಹೋಗುವಾಗ ಅದ್ಯಾವುದೋ ವಿಚಿತ್ರವಾದ ಬಾಂಬ್ ಹಾಕಿ ಹೋಗ್ಯಾರ. ಅದು ಗಾಳಿಯಲ್ಲಿ ಸೇರಿ ವಿಶ್ವವನ್ನು ಸುತ್ತುವರದದ. ಅದಕ್ಕs ಈ ಚಳಿ ಹೆಚ್ಚಾಗ್ಯದ"—ಎಂದ ನರಸಿಂಹ. ಹಳ್ಳಿಯ ಮುಗ್ಧ ಜನರು ಅವನ ಮಾತು ನಿಜವಿರಬಹುದೆಂದು ತಲೆಹಾಕಿದರು.

ಅದು ಏನೇ ಇರಲಿ, ಚಳಿ ಹೆಚ್ಚಿದ್ದರಿಂದ ಕುಡ್ತ ವೆಂಕಣ್ಣನಿಗೂ, ಗೌರಮ್ಮನಿಗೂ ಮತ್ತು ಅವರಂತಹ ಇತರ ಬಡ ಜನರಿಗೂ ಪೀಕಲಾಟಕ್ಕಿಟ್ಟುಕೊಂಡಿತ್ತು. ಚಳಿಯಲ್ಲಿ ಗಡಗಡ ನಡುಗುತ್ತ ಕುಳಿತಿದ್ದ ಗೌರಮ್ಮನಿಗೆ, ನೀಲಿ ತನ್ನ ಒಂದು ಹಳೆ ಹೊದ್ದಿಕೆಯನ್ನು ಕೊಟ್ಟಳು. "ನಮ್ಮಮ್ಮ ಮಹಾತಾಯಿ, ನಿನಗ ಗಂಡುಮಗ ಹುಟ್ಟಿದರ, ಒಂದು ಸೀರೆ ನಾದರೂ ಬೇಡಿ ಪಡೀತಿನಿ"—ಎಂದು ಹರಸಿದಳು. ನೀಲಿ ನಕ್ಕು "ಗಂಡಾಗದೆ ಹೆಣ್ಣಾದರೆ?" ಎಂದು ಕೇಳಿದಳು. ಗೌರಮ್ಮ ಅದಕ್ಕೆ ಉತ್ತರ ಕೊಡುವುದಕ್ಕೂ ಮುಂಚೆಯೇ, "ಬಾಯಿ ಮುಚ್ಚು. ನಿನಗ ಗಂಡs ಹುಟ್ಟತವ. ನನ್ನ ಮಗ ಗರಡಿ ಮನಿ ಒಳಗ ಸಾಮು ಹಾಕಿ ನನ್ನಂತೆ ಹೆಸರು ಗಳಿಸಬೇಕಾಗ್ಯದ......" ಎಂದು ಕುಳಿತಲ್ಲಿಂದಲೆ ಗರ್ಜಿಸಿದ ಪುಲ್ಲಯ್ಯ.

ನೀಲಿ ಯಾವ ಮಾತನ್ನೂ ಆಡಲಿಲ್ಲ. ಪುಲ್ಲಯ್ಯ ಆಗಲೇ ತನ್ನ ಕಲ್ಪನಾಲೋಕದಲ್ಲಿ ವಿಹರಿಸತೊಡಗಿದ್ದ. ಮಗನಿಗಾಗಿ ಯಾವ ಯಾವ ವಿದ್ಯೆ ಹೇಗೆ ಹೇಗೆ ಕಲಿಸಬೇಕೆಂದು ಯೋಚಿಸುತ್ತ ಕುಳಿತಿದ್ದ.

ನರಸಿಂಹ ಭವಿಷ್ಯ ನುಡಿದ. "ದರಗಳು ಏರುತ್ತಾ ಹೋಗಿ, ಕೊಳ್ಳಲು ಗತಿಯಿಲ್ಲದೆ, ತಿನ್ನಲು ಕೂಳಿಲ್ಲದೆ ಜನ ವಿಲಿವಿಲಿ ಒದ್ದಾಡ್ತಾರ ಪಟ್ಟಣದಲ್ಲಿ. ಆಗಲೇ ರೇಷನಿಂಗ ಬಂದದ. ನಮಗೂ ಅದು ಬರ್ತದ. ಇದ್ದವರು ಇಲ್ಲ ಅಂತ ಹೇಳ್ತಾರ. ಇಲ್ಲದವರು ಸಾಯ್ತಾರ. ನಮ್ಮ ಹತ್ತಿರ ಏನೂ ಇರದಿದ್ದರೂ ನಾವು ಒಟ್ಟಿಗೆ ಹುಟ್ಟೇವಿ. ಆದರೂ, ಯಾರಿಗೆ ಯಾರೋ ಪುರಂದರ ವಿಠಲಾ. ಪಟ್ಟಣದಲ್ಲಂತೂ ಎಲ್ಲವೂ ಅಧ್ವಾನ ಆಗ್ಯದ. ಹಾರುವ ಹಕ್ಕಿಯನ್ನು ಪಂಜರದಲ್ಲಿಡಲು ಪ್ರಯತ್ನಿಸುತ್ತಿದ್ದ ಸರ್ಕಾರ, ಹೀಗೆ ನಡೆದರೆ ನಾಳೆ, ಹಲ್ಲು ಕೂಡಾ ಸರ್ಕಾರದವರೇ ತಿಕ್ಕಿ ತೊಳೆಯಬೇಕೆಂದು ಅರ್ಜಿಹಾಕಿ ಕೊಳ್ಳಬೇಕಾಗ್ತದ......"

ಈ ಮಾತುಗಳನ್ನು ಕೇಳಿದ ಒಬ್ಬಿಬ್ಬರು ಒಂದೊಂದು ರೀತಿ ಅಂದುಕೊಂಡರು. ರಾಮದಾಸು ತನ್ನ ಆಗ್ರ ಪೀಠಾಧಿಪತ್ಯವನ್ನು ಉಳಿಸಿಕೊಳ್ಳಲು, ಅಂದು ಸಂಜೆ ಮೈಮೇಲೆ ದೇವಿಯನ್ನು ಆಹ್ವಾನಿಸಿಕೊಂಡ. "ಕಾಲ ಬದಲಾಯ್ತು, ಮನುಷ್ಯರು,

ತಮ್ಮ ತಮ್ಮಲ್ಲೆ ಕಚ್ಚಾಡುವ ಕಾಲ ಇದೀಗ ಬಂದದ. ಆಕಾಶದಲ್ಲಿ ಇನ್ನು ಕರಿಮೋಡ ಗಳು ಕಾಣಲಾರವು. ಭೂಮಿಯ ಮೇಲೆ ಒಂದಂಗುಲದಷ್ಟು ಹಸಿರು ಹುಲ್ಲು ಕೂಡಾ ಇರದು. ದೆವ್ವಭೂತಗಳು ಪ್ರಜೆಗಳನ್ನು ಪೀಡಿಸಿ ಆಹುತಿ ತೆಗೆದುಕೊಂಡಾವು. ಸುಖ ಸಮೃದ್ಧಿಯಿಂದ ಮೆರೆದ ಊರುಗಳು, ಬರಡಾಗಿ ಹೋಗುವವು......"

ರಾಮದಾಸುವಿನ ಸುತ್ತ ಸೇರಿದ್ದ ಜನರು—"ತಾಯಿ, ನೀನೆ ನಮ್ಮನ್ನು ಸಲಹಬೇಕು. ಅದನ್ನು ಬಿಟ್ಟು ನೀನೇ ಬರಿಗೈ ತೋರಿಸಿದರ ನಮ್ಮ ಮಕ್ಕಳ ಬಾಡಿಹೋಗಾಣೆಲ್ಲ? ನೀನು ಮನಸ್ಸು ಮಾಡಿದರ, ಆಕಾಶದಲ್ಲಿ ಕರಿ ಮೋಡಗಳು ತುಂಬಿ ಮಳೆ ಆಗ್ತದ. ನಿನ್ನ ಮಕ್ಕಳು ಸಂತೋಷದಿಂದಿದ್ದಲ್ಲಿ, ನಿನಗೆ ಸಂಭ್ರಮವಾಗುವುದಿಲ್ಲವೆ? ನಿನ್ನ ಮಕ್ಕಳು ಹಾಯಾಗಿದ್ರ ನಿನ್ನ ಉತ್ಸವ ಮಾಡ್ತಾರೇಳು"—ಎಂದೆಲ್ಲ ಅಂಗಲಾಚಿದರು.

ರಾಮದಾಸುವಿನ ಧ್ವನಿ ಆಕಾಶಕ್ಕೇರಿತು. "ನನ್ನ ಮಕ್ಕಳೆ, ನಿಮ್ಮನ್ನು ನುಂಗಲು ಕಾದು ಕುಳಿತಿರುವ ದೆವ್ವಭೂತಗಳ ವಿರುದ್ಧ ನಾನು ಯುದ್ಧಮಾಡ್ತಿನಿ—ನನ್ನ ಮಕ್ಕಳಾದ ನಿಮ್ಮನ್ನು ಉಪವಾಸ ಕೊಲ್ಲುವುದಿಲ್ಲ—ಯಾರು ಏನೇ ಹೇಳಲಿ ನಂಬಬೇಡಿ. ನಾವೆ ಲ್ಲರೂ ಒಂದೇ ಎಂದುಕೊಂಡು ಇರುವವರು ಇರಲಾರದವರಿಗೆ ಕೊಟ್ಟು ಸಹಾಯ ಮಾಡಿದಲ್ಲಿ, ಮನುಷ್ಯ, ಮನುಷ್ಯನನ್ನು ನಂಬಿದಲ್ಲಿ, ಮಳೆ ಆಗದಿದ್ದರೂ, ಭೂಮಿ ಸುಟ್ಟರೂ ನಿಮಗೆ ಯಾವ ಬಾಧೆಯೂ ಬರುವುದಿಲ್ಲ." ರಾಮದಾಸು, ತನ್ನ ಕೆಲಸ ತಾನು ಮಾಡಿದ. ಆದರೆ ಪರಿಸ್ಥಿತಿಯಲ್ಲಿ ಮಾತ್ರ ಯಾವ ಬದಲಾವಣೆಯೂ ಆಗಿರಲಿಲ್ಲ. ಬಂಗಾರ ಶೆಟ್ಟಿ ಇದುವರೆಗೆ ದೊಡ್ಡ ಅಳತೆಯಿಂದ ಧಾನ್ಯ ಅಳೆದು, ಚಿಕ್ಕದಾದ ಮಾಪಿ ನಿಂದ ಮೇಲೆ ಕೊಸರು ಹಾಕುತ್ತಿದ್ದ. ಆದರೆ, ಈಗ ಶೆಟ್ಟಿ ಕೊಸರು ಹಾಕುವುದನ್ನು ನಿಲ್ಲಿಸಿದ್ದ. ಅದರಿಂದ, ಧಾನ್ಯಗಳ ಬೆಲೆಗಳು ಏರುತ್ತಿವೆ ಎಂದು, ಊರಿಗೆಲ್ಲ ತಿಳಿದು ಹೋಯಿತು. ತನ್ನ ಅಂಗಡಿಗೆ ಬರುವ ಮಕ್ಕಳ ಕೈಯಲ್ಲಿ ಬೆಲ್ಲದ ಚೂರು ಇಡುವುದು ಶೆಟ್ಟಿಯ ವಾಡಿಕೆಯಾಗಿತ್ತು. ಆದರೆ ಈಗ, ಅದನ್ನು ನಿಲ್ಲಿಸಿದ್ದಲ್ಲದೆ, ತೂಕದ ಬೊಟ್ಟು ಗಳನ್ನು ಸ್ವಲ್ಪವಾಗಿ ಕರಗಿಸಿ ತೂಕದಲ್ಲಿ ಸಹ ಮೋಸಮಾಡಹತ್ತಿದ.

ಮಿಲಿಟರಿಯಲ್ಲಿ ಸೇವೆ ಸಲ್ಲಿಸಿ ಹಿಂದಿರುಗಿ ಬಂದ ಆ ಊರಿನ ಯುವಕನೊಬ್ಬ, ತನ್ನೊ ಡನೆ, ಚಿತ್ರವಿಚಿತ್ರವಾದ ಸಾಮಾನುಗಳನ್ನು ತಂದಿದ್ದ. ಊರಿನಲ್ಲೆಲ್ಲಾ ಆವನ ಸುದ್ದಿಯೇ ಹರಡಿತ್ತು. ಹಳ್ಳಿಯ ಮುಗ್ಧ ಜನರು ಅವನನ್ನು ಕೂಡಿಸಿಕೊಂಡು, ವಿಚಿತ್ರ ವಿಚಿತ್ರವಾದ ಪ್ರಶ್ನೆಗಳನ್ನು ಕೇಳುತ್ತಿದ್ದರು. ನರಸಿಂಹ ಕೂಡಾ ಅವನಿಗೆ ಅನೇಕ ವಿಷಯಗಳ ಬಗ್ಗೆ ಪ್ರಶ್ನೆ ಹಾಕಿದ. ಟ್ಯಾಂಕುಗಳಿಗೆ ರೆಕ್ಕೆ ಇದ್ದಲ್ಲಿ, ಅವು ಮೇಲೆ ಗಾಳಿಯಲ್ಲಿ ಹಾರಾಡ ಬಹುದೆ ಎಂದು ಕೇಳಿದ. ಅದು ಮೇಲೆ ಹಾರಾಡಲಾರದೆಂದು ತಿಳಿದಾಗ, ರಾಮಾ ಯಣದಲ್ಲಿನ ಪುಷ್ಪಕ ವಿಮಾನ, ಮಹಾಭಾರತದಲ್ಲಿನ ಅಸ್ತ್ರಗಳ ಬಗ್ಗೆ ತಾನೇ ಮುಂದಾಗಿ ಹೇಳಿದ. ನಮ್ಮ ದೇಶದಲ್ಲಿ, ಈ ಪುಣ್ಯಭೂಮಿಯಾದ ಭಾರತದಲ್ಲಿ—ವರುಣಾಸ್ತ್ರ, ನಾರಾಯಣಾಸ್ತ್ರ, ಪಾಶುಪತಾಸ್ತ್ರ...... ಏನೆಲ್ಲ ಇದ್ದವು. ಆದರೆ ಜರ್ಮನರು, ಇವು

ಗಳನ್ನು ತಯಾರಿಸುವ ಮಾಹಿತಿಗಳನ್ನು ಒಳಗೊಂಡ ಗ್ರಂಥಗಳನ್ನು ದೋಚಿಕೊಂಡು ಹೋಗಿ, ಅವುಗಳ ಆಧಾರದ ಮೇಲೆಯೇ ಟ್ಯಾಂಕುಗಳು ಬಾಂಬುಗಳು ಮತ್ತು ಏನೆಲ್ಲ ಶಸ್ತ್ರಾಸ್ತ್ರಗಳನ್ನು ತಯಾರಿಸಿದರು. ಜರ್ಮನಿ ಇವುಗಳನ್ನು ತಯಾರಿಸಿದ್ದರಿಂದ, ಇಂಗ್ಲೀಷರು, ಅಮೇರಿಕನ್ನರು, ಜಪಾನಿಯರು ಅದನ್ನು ಕಲಿತುಕೊಂಡು ತಾವು ಸಹ ಹೊಸಹೊಸ ಶಸ್ತ್ರಾಸ್ತ್ರಗಳನ್ನು ತಯಾರಿಸಿದರೆಂದು—ನರಸಿಂಹ ಹೇಳಿದಾಗ ಊರ ಜನರು ಅವನ ಜಾಣತನಕ್ಕೆ ತಲೆದೂಗಿದರು.

"ಎಷ್ಟು ಊರು ತಿರುಗಿದರೇನು, ಎಷ್ಟು ಯುದ್ಧ ಮಾಡಿದರೇನು, ಒಂದೇ ದಿನದಾಗ ಯಾರಿಗೇನು ಜಯ ಲಭಿಸುವುದಿಲ್ಲ"—ನರಸಿಂಹ ತನ್ನ ತೀರ್ಮಾನ ತಿಳಿಸಿದ.

ಆ ಊರಿನಲ್ಲಿ ಇನ್ನೊಂದು ವಿಶೇಷ ಮಾರ್ಪಾಡಾಗಿತ್ತು. ಪಟ್ಟಣದಲ್ಲಿ ಇರುವಂತಹ ಕಾಫಿ ಹೋಟಲೊಂದು ರಸ್ತೆಯ ಅಂಚಿನಲ್ಲಿ ತಲೆ ಎತ್ತಿತ್ತು. ಈ ಪುಟ್ಟ ಹೋಟಲಿನಲ್ಲಿ ಇಡ್ಲಿ, ಸಾಂಬಾರು ಕೂಡಾ ಸಿಗುತ್ತಿತ್ತು. ಊರ ಶೆಟ್ಟಿಯ ಮಗ ತನ್ನ ತಂದೆಯಂತೆ ಮೂರು ಮಣದ ಚೀಲ ಹೊತ್ತು ಊರೂರು ತಿರುಗಿ ವ್ಯಾಪಾರ ಮಾಡುವ ಶಕ್ತಿ ಇಲ್ಲದೆ ಕುಳಿತಲ್ಲೆ ದುಡ್ಡು ಗಳಿಸುವ ಉಪಾಯವಾಗಿ ಈ ಹೋಟಲನ್ನು ತೆಗೆದಿದ್ದ. ಊರಿನ ಜನರು ತನ್ನ ಹೋಟಲಿಗೆ ಬಂದು ದುಡ್ಡು ಕೊಟ್ಟು ಕಾಫಿ ಕುಡಿಯುವರೆಂಬ ನಂಬಿಕೆ ಆತನಿಗಿರಲಿಲ್ಲ. ರಷಿಯನ್ ವೊಡ್ಕಾ, ಫ್ರೆಂಚ್ ದ್ರಾಕ್ಷಾರಸವನ್ನು ಮೀರಿಸುವಂಥ ತಂಗಳು ಮೊಸರನ್ನು ಉಂಡು ಆರಿದ ಅಂಬಲಿ ಕುಡಿಯುವ ಊರ ಜನರಿಗೆ ಕಾಫಿ ಹೋಟಲುಗಳಲ್ಲಿ ಕಾಲಿಡುವ ಪ್ರಯೋಜನವೇ ಇರಲಿಲ್ಲ. ಕೆಲವು ದಿನ, ಹೋಟಲಿಗೆ ಹೆಚ್ಚಿನ ಯಾವ ಜನರೂ ಬಾರದಿದ್ದಾಗ ಶೆಟ್ಟಿಯ ಮಗ ಜನರನ್ನು ಬಲವಂತ ಮಾಡಿ ಹೋಟಲಿಗೆ ಕರೆತಂದು ಕಾಫಿ–ತಿಂಡಿ ಕೊಟ್ಟ. ಯಾವುದೇ ಕೆಲಸದ ನಿಮಿತ್ತ ರಸ್ತೆಗೆ ಬಂದ ರೈತರು, ಹೋಟಲಿನಿಂದ ಹೊರಬರುತ್ತಿದ್ದ ಕಾಫಿ–ತಿಂಡಿಗಳ ವಾಸನೆಯಿಂದ ಬಾಯಲ್ಲಿ ನೀರೂರಿದಂತಾದಾಗ, ಒಳಹೊಗುತ್ತಿದ್ದರು. ಬರಬರುತ್ತ ಬಿಸಿಬಿಸಿಯಾದ ಇಡ್ಲಿ ಸಾಂಬಾರಿನ ರುಚಿಯ ಮುಂದೆ, ತಂಗಳು ಮೊಸರನ್ನ ಆರಿದ ಅಂಬಲಿ ರುಚಿಸದಾದವು. ಊರಿನಲ್ಲಿ ಸ್ವಲ್ಪ ವಯಸ್ಸಿಗೆ ಬಂದವರೆಲ್ಲ ಅಂದರೆ ಯುವಕರೆಲ್ಲ ಹೋಟಲಿಗೆ ಹೋಗುವ, ಇಡ್ಲಿ ತಿಂದು ಕಾಫಿ ಕುಡಿಯುವ ಹವ್ಯಾಸವನ್ನು ಬೆಳೆಸಿಕೊಂಡರು. ಹೋಟಲಿಗೆ ಹೋಗದಿದ್ದರೆ ತಮ್ಮ ಘನತೆಗೆ ಕುಂದು—ಎಂಬ ಅಭಿಪ್ರಾಯ ಈ ಯುವಕರಲ್ಲಿ ಮೂಡಿತ್ತು.

ದಿನಗಳು ಉರುಳಿದಂತೆ, ಊರಿನ ಜನಜೀವನದಲ್ಲಿ ಅಲ್ಪಸ್ವಲ್ಪ ಬದಲಾವಣೆಗಳು ಉಂಟಾದವು. ಯುದ್ಧಕಾಲದಲ್ಲಿ ಹೆಚ್ಚಾಗಿ ಕಾಗದದ ನೋಟುಗಳನ್ನು ಆ ಊರಿನ ಜನರು ಅದು ವರೆಗೆ ನೋಡಿಯೇ ಇರಲಿಲ್ಲ. ಆ ರೂಪಾಯಿಗಳನ್ನು ಪಡೆಯಲು ಊರಿನ ಮುದಿ ಜನರು ನಿರಾಕರಿಸುತ್ತಿದ್ದರು.

ಸೀಲಿ ಮತ್ತು ಪುಲ್ಲಯ್ಯ, ಈ ಪರಿವರ್ತನೆಗಳಲ್ಲಿ, ಈ ಮಾರ್ಪಾಟುಗಳ ಸುಳಿಯಲ್ಲಿ

ಸಿಕ್ಕಿಹಾಕಿಕೊಂಡಿದ್ದು ಸಹಜವಾಗಿತ್ತು. ನೀಲಿ ಬಸುರಿಯಾಗಿದ್ದರೂ ಕೂಡಾ ಮನೆಯ ಅಡಿಗೆ ಮುಂತಾದ ಕೆಲಸಗಳನ್ನು ಮಾಡಿಕೊಂಡು, ಗಂಡನ ಕೆಲಸಕಾರ್ಯಗಳಲ್ಲೂ ನೆರವಾಗುತ್ತಿದ್ದಳು.

ವಂಶಧಾರಾ ನದಿಯು, ನವಿರಿ ಗ್ರಾಮದ ಪಶ್ಚಿಮಕ್ಕೆ, ಉತ್ತರದಿಂದ ದಕ್ಷಿಣಕ್ಕೆ ಹರಿಯುತ್ತದೆ. ಊರಿನಿಂದ ಸ್ವಲ್ಪ ದೂರದಲ್ಲಿ, ಊರಿನ ದಕ್ಷಿಣದಲ್ಲಿ, ನದಿಯು ಪೂರ್ವದತ್ತ ತಿರುಗಿದೆ. ನದಿಯ ಈ ತಿರುವಿನಲ್ಲಿರುವ ನವಿರಿ ಗ್ರಾಮಕ್ಕೆ ಸೇರಿದ ಭೂಮಿಯೂ ಸಾಕಷ್ಟು ಫಲವತ್ತಾಗಿದ್ದು, ಆಕಾಶದೆತ್ತರಕ್ಕೆ ಬೆಳೆದು ನಿಂತ ತಾಳೆಮರ ಗಳಿವೆ. ಅಲ್ಲಲ್ಲಿ ಗೇರು ಬೀಜದ ಮತ್ತು ಇತರ ತೋಟಗಳಿವೆ. ಅಲ್ಲೊಂದು ಇಲ್ಲೊಂದು, ಬೃಹದಾಕಾರದ ಆಲದ ಮರಗಳು ತಮ್ಮ ತೋಳು ಚಾಚಿ ನಿಂತಿವೆ. ಈ ತೋಟದ ಆಚೆ, ಅಲ್ಲಲ್ಲಿ ನಡುಗಡ್ಡೆಗಳು ಕಾಣುತ್ತವೆ. ನದಿಯ ತಿರುವಿನಲ್ಲಿನ ಭೂಮಿಗೆ ಕಾಲುವೆಗಳ ಮೂಲಕ ನೀರು ಹರಿಸಲಾಗುತ್ತಿತ್ತು. ಆದ್ದರಿಂದ ಚಳಿಗಾಲದಲ್ಲಿ, ಭತ್ತ ಮತ್ತು ಕಬ್ಬು ಬೆಳೆಯಲು, ವರ್ಷದ ಇತರ ಕಾಲಗಳಲ್ಲಿ ತರಕಾರಿ ಬೆಳೆಯಲು ಅಲ್ಲಿ ಸಾಧ್ಯವಿದೆ. ಈ ಭೂಮಿಯ ಮೂರು ಕಡೆ ತೋಟಗಳು, ಒಂದು ಕಡೆ ನದಿ ಇರುವುದರಿಂದ, ಅಲ್ಲಿ ಯಾವಾಗಲೂ ತಂಗಾಳಿ ಬೀಸುತ್ತಿರುತ್ತದೆ. ಗೇರು ಬೀಜದ ತೋಟಗಳಲ್ಲಿ ಚಿಲಿಪಿಲಿ ಗುಟ್ಟುವ ಹಕ್ಕಿಗಳು, ಗಿಳಿವಿಂಡುಗಳು ಹಾರಾಡುತ್ತಿರುತ್ತವೆ. ಆಲದ ಮರದ ಮೇಲೆ ಕುಳಿತು ಹಗಲೆಲ್ಲ ನಿದ್ದೆಹೋಗುವ ಗೂಬೆಗಳು—ಒಂಟಿಯಾಗಿದ್ದ ಈಚಲ ಮರದ ಮೇಲೆ ಗೂಡುಕಟ್ಟಿಕೊಂಡ ಹಕ್ಕಿಗಳು, ಸಂಜೆಯಾದೊಡನೆ ಬಿಲದಿಂದ ಹೊರಗೆ ಬರುವ ತೋಳಗಳು—ದೂರದಲ್ಲಿ ಬಂಗಾಳ ಕೊಲ್ಲಿಯನ್ನು ಸೇರುವ ನದಿಯ ಆರ್ಭಟ ಎಲ್ಲವೂ ರಮ್ಯವಾಗಿವೆ, ಮನೋಹರವಾಗಿವೆ.

ಪುಲ್ಲಯ್ಯ ಮತ್ತು ನೀಲಿ ತಮ್ಮ ಸಾಲವನ್ನು ತೀರಿಸಲು, ತಮ್ಮ ತಾಪತ್ರಯಗಳನ್ನು ನೀಗಿಸಿಕೊಳ್ಳಲು, ಫಲವತ್ತಾದ ಈ ಭೂಮಿಯಲ್ಲಿ ಹಗಲಿರುಳು ದುಡಿಯುತ್ತಿದ್ದರು. ಸಂತೆಗೆ ತರಕಾರಿ ಒಯ್ದು ಮಾರಲು, ಅವರು ಆಗಲೇ ಸಿದ್ಧಗೊಳ್ಳುತ್ತಿದ್ದರು. ಬೆಳೆದು ನಿಂತ ಗಿಡಬಳ್ಳಿಗಳಿಗೆ, ಹಣ್ಣು-ಕಾಯಿಗಳಿಗೆ ಹಕ್ಕಿಗಳು ಮುತ್ತದಂತೆ. ಅಲ್ಲಲ್ಲಿ ಬೆದರು ಗೊಂಬೆಗಳನ್ನು ನಿಲ್ಲಿಸಿದ್ದರು.

ಚಳಿಗಾಲ ಹೋಗಿ, ಬೇಸಿಗೆ ಬಂದಿತು. ನದಿ ಕೆರೆಗಳಲ್ಲಿನ ನೀರಿನ ಮಟ್ಟ ದಿನದಿನಕ್ಕೆ ಇಳಿಯತೊಡಗಿತು. ಅಲ್ಲಲ್ಲಿ ನಿಂತ ನೀರಿನಲ್ಲಿ ಮನುಷ್ಯರು ಪಶುಗಳ ಜೊತೆಗೆ ಸ್ನಾನ ಮಾಡುತ್ತಿದ್ದರು. ಇಂಗಿಹೋಗುತ್ತಿದ್ದ ಕೆರೆಗಳನ್ನು ನೋಡಿ, ಮೀನು ಹಿಡಿಯುವವರಿಗೆ ನಿರಾಶೆಯಾಗುತ್ತಿತ್ತು. ಹರಿದ ತಮ್ಮ ಬಲೆಗಳನ್ನು ಸರಿಪಡಿಸಿಕೊಳ್ಳಲು ನೂಲು ಸಹ ದೊರಕದಿದ್ದಾಗ, ತಮ್ಮತಮ್ಮಲ್ಲೇ ಮಾತನಾಡಿಕೊಂಡು ಹತಾಶರಾಗಿ ಕೈಕಟ್ಟಿ ಕುಳಿತ ರಾಗಲೀ, ಯಾರ ಮುಂದೂ ಬಾಯಿ ಬಿಡಲಿಲ್ಲ. ಆದರೆ, ಊರಿನಲ್ಲಿನ ಬಟ್ಟೆ ಅಂಗಡಿ ಯವನು ಬಟ್ಟೆಗಳ ಬೆಲೆ ಏರಿಸಿದಾಗ, ಊರ ಜನರು ದಿಗ್ಭ್ರಮೆಗೊಂಡರು. ನೂಲು

ದೊರಕುತ್ತಿಲ್ಲವೆಂದು ತಿಳಿದಾಗ, ರಾಟೆನೂಲಿನ ಬೆಲೆಯೂ ಏರಬಹುದೆಂದು, ರಾಟೆಯಿಂದ ನೂಲು ತೆಗೆಯುತ್ತಿದ್ದ ಮುದುಕಿ ಸಂತೋಷಿಸಿದಳು. ಆದರೆ, ಹತ್ತಿಯ ಬೆಲೆಯೂ ಸಹ ಏರಿದೆ ಎಂದು ತಿಳಿದಾಗ, ಅವಳ ಸಂತೋಷ ಉಡುಗಿಹೋಯಿತು.

ನೀಲಿ, ಈಗ ತುಂಬಿದ ಬಸುರಿಯಾದರೂ, ಒಂದು ಕಡೆ ಕೂಡುತ್ತಿರಲಿಲ್ಲ. ಒಬ್ಬರ ಸಹಾಯವೂ ಇಲ್ಲದೆ, ತನ್ನ ಮನೆಯ ಕೆಲಸಗಳನ್ನು ತಾನು ಮಾಡಿಕೊಳ್ಳುತ್ತಿದ್ದಳು. ಪುಲ್ಲಯ್ಯ ಈಗ, ಮಗನನ್ನು ಎತ್ತಿಕೊಳ್ಳಲು ಹಾತೊರೆಯುತ್ತಿದ್ದ. ಮಲಗಿದ್ದ ಹೆಂಡತಿಯನ್ನು ದೀಕ್ಷೆಯಿಂದ ನೋಡುತ್ತ—"ಇವಳ ಹೊಟ್ಟೆಯಲ್ಲಿರುವ ನನ್ನ ಮಗ...... ಅವನು ಹುಟ್ಟಿದ ದಿನ, ಈ ಉರಿ ಬೇಸಿಗೆಯಲ್ಲೂ ಮಳೆ ಬಂದು...... ಎಲ್ಲೆಡೆಗಳಲ್ಲೂ ತಂಪಾಗುವುದು. ನನ್ನ ಮಗ ಮಾತನಾಡಿದಂದು, ಪಕ್ಷಿಗಳು ಸಹ ಮಾತಾಡುವವು. ನನ್ನ ಮಗನನ್ನು ನನ್ನ ಎದೆಯ ಮೇಲಿಟ್ಟುಕೊಂಡು ಬೆಳೆಸುತ್ತೇನೆ...... ಹೌದು, ನನ್ನ ಮಗ ದೊಡ್ಡವನಾಗಿ, ಮೀಸೆಯ ಮೇಲೆ ಕೈಯಿಟ್ಟುಕೊಂಡು ನ್ಯಾಯ–ನಿಜಾಯತಿಗಳನ್ನು ಹೇಳುವ ದೊಡ್ಡ ಮನುಷ್ಯನಾಗುತ್ತಾನೆ...... ತಾನು ಬಂಗಾರವಾಗಿ...... ಊರನ್ನು ಸಹ ಬಂಗಾರವಾಗಿಡುತ್ತಾನೆ......" ಎಂದು ಅಂದುಕೊಳ್ಳುತ್ತಿದ್ದ ಪುಲ್ಲಯ್ಯ.

ಒಂದು ದಿನ ಅವನು ಇದೇ ರೀತಿ ಮನಸ್ಸಿನಲ್ಲಿ ಮುಂಡಿಗೆ ಕಟ್ಟುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ಉತ್ಸಾಹ ಬಂದು, ದೊಡ್ಡದಾಗಿ ಕೇಕೆ ಹಾಕಿದ. ಮಲಗಿದ್ದ ನೀಲಿ ಥಟ್ಟನೆ ಕಣ್ಣು ಬಿಟ್ಟು ಸುತ್ತಲೂ ನೋಡಿದಳು. ಗಂಡ ಎದ್ದು ಕುಳಿತಿರುವುದನ್ನು ನೋಡಿ, "ಇನ್ನೂ ನಿದ್ದಿ ಬಂದಿಲ್ಲೇನು?"—ಎಂದು ಕೇಳಿದಳು.

"ಈಗ ಯಾಕ ನಿದ್ದಿ ಮಾಡಲಿ ನೋಡು, ನಾಳೆ ನನ್ನ ಮಗ, ಅಮ್ಮ ಅಂತ ಕರೆಯದೆ ಯಾವಾಗಲೂ ಅಪ್ಪಾ ಅಂತ ಕೂಗತಾನೋ ಇಲ್ಲೋ ನೋಡು."

ಗಂಡನ ಈ ಮಾತು ಕೇಳಿ ನೀಲಿ ನಕ್ಕಳು. ಅನಂತರ, "ಈಗ ನನಗೊಂದು ಕನಸು ಬಿದ್ದಿತ್ತು" ಎಂದು ಹೇಳಿದಳು.

"ನನಗ್ಗೊತ್ತು, ಕನಸಿನಲ್ಲಿ ಒಂದು ಆನೆ ಬಂದಿತ್ತು. ಬಸುರಿಯ ಕನಸಿನಲ್ಲಿ ಆನೆ ಬಂದರೆ ಗಂಡು ಹುಟ್ಟುತ್ತದಂತಾರ, ಅಂದ ಮ್ಯಾಲೆ ನಿನಗೂ ಗಂಡು ಹುಟ್ಟೋದು ದಿಟ."

"ಇಲ್ಲ, ಕನಸಿನ್ಯಾಗ ನನಗ ಹೆಣ್ಣು ಹುಟ್ಟಿ, ನನ್ನ ಮಗಳು ನನ್ನನ್ನು ಅಮ್ಮ, ಅಮ್ಮಾ ಅಂತ ಕರೆದ್ಹಾಂಗಾತು" ಎಂದು ಹೇಳಿ, ನೀಲಿ ಕಣ್ಣು ಮುಚ್ಚಿಕೊಂಡಳು.

"ನೋಡೋಣ ಹಾಗಾರ. ನಮ್ಮಪ್ಪ ಮಲ್ಲೇಶಿ ಮಹಾ ಪೌರುಷವುಳ್ಳ ವ್ಯಕ್ತಿ. ಸಾಯೋಮುಂದ, ಮತ್ತೆ ಇದೇ ಮನ್ಯಾಗ ಗಂಡಾಗಿ ಹುಟ್ಟಲಿಲ್ಲ ಅಂದರ, ಜುಟ್ಟು ಹಿಡಿದು ಎಳೀದ ಬಿಡ್ತೀನೇನು?" ಎನ್ನುತ್ತ ಪುಲ್ಲಯ್ಯ ಹೆಂಡತಿಯ ಮುಂದೆ ಕೈಚಾಚಿದ.

"ಯಾಕ ಜುಟ್ಟು ಹಿಡೀತೀದಿ" ಎಂದು ನೀಲಿ ಕೇಳಿದಾಗ ಮಾತ್ರ ಪುಲ್ಲಯ್ಯ ಉತ್ತರ ನೀಡದಾದ. ಅವನು ಪೆಚ್ಚುಪೆಚ್ಚಾಗಿ ಹೆಂಡತಿಯ ಮುಖ ನೋಡುತ್ತಿದ್ದಾಗಲೇ ಅವಳು ಕಣ್ಣು ತೆರೆದಳು. ಆ ಮಂದ ಬೆಳಕಿನಲ್ಲಿ, ಮಂದಹಾಸದಿಂದ ತುಂಬಿದ ಅವಳ

ಮುಖದ ಕಾಂತಿಯನ್ನು ನೋಡಿ ಪುಲ್ಲಯ್ಯನ ಬಾಯಿಯಿಂದ ಮಾತೇ ಹೊರಡಲಿಲ್ಲ. ನೀಲಿ ಅವನ ಕೈಗಳ ಮೇಲೆ ತನ್ನ ಕೈಗಳನ್ನಿಟ್ಟು, ಮೃದುವಾಗಿ, "ಸಂತೋಷ ಹೆಚ್ಚಾದಾಗ ತಡೆದುಕೊಳ್ಳಲಾರೆವು. ಅದೇ ರೀತಿ ದುಃಖ ಹೆಚ್ಚಾದರೂ ಸಹ ನಾವು ತಡೆದುಕೊಳ್ಳ ಲಾರೆವು" ಅಂದಳು.

"ಯಾರಿಗೆ? ಯಾರ ಬಗ್ಗೆ ನೀನು ಈ ಮಾತು ಹೇಳ್ತಿದಿ?"—ಪುಲ್ಲಯ್ಯ ಕೇಳಿದ.

"ನನಗಲ್ಲೇಳು. ಲೋಕರೂಢಿ ಹೇಳಿದೆ. ನೋಡು, ಮಗನೇ ಹುಟ್ಟಬೇಕೆಂದು ಆಸೆ ಪಟ್ಟು, ಮಗನೇ ಹುಟ್ಟುತ್ತಾನೆಂದು ಕುಣಿದಾಡುತ್ತೀದಿ. ನಾಳೆ ನಮ್ಮ ಹಣೆಬರಹ ಸರಿಯಾಗಿರದೆ ಹೆಣ್ಣು ಹುಟ್ಟಿದರೆ, ನೀನೇನು ಮನಿ ಬಿಟ್ಟು ಓಡಿಹೋಗ್ತಿ ಏನು? ಹೆಣ್ಣು ಹುಟ್ಟಿತಾ ಅಂತ ಅದನ್ನೇನು ಎಲ್ಲಾದರೂ ಒಗೆದು ಬರ್ತೀ ಏನು? ಒಂದು ವೇಳೆ ಗಂಡು ಹುಟ್ಟಿದ ಮಾತ್ರಕ್ಕೆ ಬಿರಿದು–ಬಾವಲಿಗಳು ಬರ್ತಾವೇನು? ಅವನು ದೊಡ್ಡವನಾಗಿ ನಾಲ್ಕು ಜನರೊಳಗೆ ಭೇಷ್ ಅನ್ನಿಸಿಕೊಂಡರ, ನಿನಗ ಶ್ರೇಯಸ್ಸು. ಒಂದು ವೇಳೆ ನಮಗೆ ಮಗನೇ ಹುಟ್ಟಿದಲ್ಲಿ ಅವನು ದೊಡ್ಡವನಾಗಿ ನಾಲ್ಕು ಜನರಿಗೆ ಬೇಕಾದವ ನಾಗಬೇಕಾದರೆ ನಾವು ಅವನಿಗೆ ತಕ್ಕ ಶಿಕ್ಷಣ ನೀಡಬೇಕಾಗ್ತದ. ಗೊಬ್ಬರ ಹಾಕದ ಗಿಡ ಬೆಳೆಯೋದಿಲ್ಲ. ಗಿಡ ಬೆಳೀದೆ ಹೂಬಿಡೋದಿಲ್ಲ."

ಪುಲ್ಲಯ್ಯ ಮಾತನಾಡಲಿಲ್ಲ. ನೀಲಿ ಹೇಳಿದ ಪ್ರತಿಯೊಂದು ಮಾತು ಅವನು ಕೇಳಿಸಿಕೊಂಡಿದ್ದನಾದರೂ ಅವಳೇ ಮಾತನಾಡಿದ್ದೆಂತು ನಂಬಲಾಗಲಿಲ್ಲ ಅವನಿಗೆ. ಯಾವುದೇ ಒಂದು ಅದೃಶ್ಯವಾಣಿ ಆಕಾಶವಾಣಿ ತನಗೆ ಬುದ್ಧಿ ಹೇಳಿದಂತೆ ಅವನಿಗೆ ಭಾಸವಾಗಿತ್ತು. ಅವನು ಹಾಗೆ ಕುಳಿತಿದ್ದಾಗಲೇ ನೀಲಿ ಮತ್ತೆ ನಿದ್ರೆಹೋದಳು.

ಮರುದಿನ ರಾತ್ರಿ, ಊರಿನ ಮುಖ್ಯ ಬೀದಿಯಲ್ಲಿ ಬುಡುಬುಡಕಿಯವರಿಂದ ಕಥಾ–ಕಾಲಕ್ಷೇಪದ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ತುಂಬಿದ ಬಸುರಿ ನೀಲಿ ಕೂಡಾ ಅಲ್ಲಿಗೆ ಹೋಗಿ ರಸ್ತೆಯ ಪಕ್ಕದಲ್ಲಿದ್ದ ಮನೆಯೊಂದರ ಕಟ್ಟೆಯ ಮೇಲೆ ಕುಳಿತಿದ್ದಳು. ಬುಡುಬುಡಕಿ ಪದ್ಮನಾಭ ಸ್ತ್ರೀವೇಷ ಹಾಕಿಕೊಂಡಿದ್ದ. ಗಡುಸಾದ ಮುಖದ ಮೇಲೆ ಹುಲುಸಾದ ಮೀಸೆ ಹೊತ್ತ ಪದ್ಮನಾಭ. ಕೆಂಪು ಅಂಚಿನ ಸೀರೆಯುಟ್ಟು ಕೊಳೆಯಾದ ಕುಪ್ಪಸ ತೊಟ್ಟು ಬಂದಿದ್ದ.

ನಡು ಬೀದಿಯಲ್ಲಿ ಸ್ವಲ್ಪ ಎತ್ತರವಾದ ವೇದಿಕೆಯನ್ನು ನಿರ್ಮಿಸಲಾಗಿತ್ತು. ವೇದಿಕೆಯ ಎರಡೂ ಕಡೆಗಳಲ್ಲಿ ಸೀಮೆ ಎಣ್ಣೆಯಿಂದ ತುಂಬಿದ ಕಂದೀಲುಗಳನ್ನು ಬೆಳಗಿಸಿ ಇಡಲಾಗಿತ್ತು. ಅವುಗಳ ಹಿಂದೆ ಇಬ್ಬರು ಹುಡುಗರು ಕುಳಿತಿದ್ದರು. ಈ ವೃಂದ ನಡುಬೀದಿಗೆ ಬರುವ ವೇಳೆಗೆ ಊರಿನಲ್ಲಿದ್ದ ಎಲ್ಲರೂ ಅಲ್ಲಿ ಬಂದು ಸೇರಿದ್ದರು.

ಸೀರೆಯುಟ್ಟ. ಮೀಸೆ ಹೊತ್ತ ನಾರಿರತ್ನ ಪ್ರಾರ್ಥನೆಯನ್ನು ಪ್ರಾರಂಭಿಸಿದಳು.

ಪ್ರಾರ್ಥನೆಯಾಯಿತು. ಸ್ತ್ರೀವೇಷಧಾರಿ ಗಂಡು ಮುಂದೆ ಬಂದು ನಡು ಬಾಗಿಸಿ, ಎಲ್ಲರಿಗೂ ನಮಸ್ಕರಿಸಿದ. ಆ ಮೇಲೆ, ತನ್ನ ಪಾಂಡಿತ್ಯವನ್ನು ಪ್ರಕಟಿಸುವ ಮಾದರಿ

ಯಲ್ಲಿ "ಈ ಸಭಾಭವನದಲ್ಲಿರುವ ಬೂಸುರೋತ್ತಮರು, ರಾಜರು, ವೈಣಿಕರು, ಎಲ್ಲರೂ ಅನುಮತಿ ಕೊಟ್ಟಲ್ಲಿ, ನನ್ನ ಸಂಗೀತ ಮುಂದುವರಿಯುತ್ತದೆ" ಎಂದು ಹೇಳಿದ.

ಊರಿನ ಹಿರಿಯ ರೈತ, "ನಿನಗೆ ಯಾವ ಯಾವ ಕಥೆಗಳು ಬರುತ್ತವೆ ಹೇಳು?"—ಎಂದು ಕೇಳಿದ. ಮೀಸೆ ಹೊತ್ತ ಆ ಸ್ತ್ರೀರತ್ನ, "ಕಾಕಮ್ಮನ ಕಥೆ, ಶಶಿರೇಖ ಪರಿಣಯ, ಬಾಣಾಸುರನ ಯುದ್ಧ ಮತ್ತು......" ಎಂದೆಲ್ಲ ಹೇಳುತ್ತಿರುವಾಗಲೇ, ಅಲ್ಲಿ ಸೇರಿದ್ದವರು ಶಶಿರೇಖಾಪರಿಣಯವೆಂದು ಕೂಗಹತ್ತಿದರು. ಅಂತೆಯೇ ಅದೇ ಕಥೆಯನ್ನು ಹೇಳಲು ಆತ ಮುಂದಾದ. ಅರ್ಧರಾತ್ರಿ ಮೀರಿತ್ತು. ಕಥೆ ಮುಗಿಯುವುದಕ್ಕೂ ಮುಂಚೆಯೇ ಮನೆಗೆ ಹೊರಟಾಗ, ಪುಲ್ಲಯ್ಯ ಅವರ ಹಿಂದೆಯೇ ಹೊರಟ.

ಇತ್ತ ಕಥೆಯಲ್ಲಿ ಶಶಿರೇಖಾಳ ವಿರಹವೇದನೆಯ ಸಂದರ್ಭ—ಅತ್ತ ನೀಲಿಗೆ ಬಸುರಿನ ಬಾಧೆ. ನೀಲಿಗೆ ಬೇನೆ ಪ್ರಾರಂಭವಾಗಿದೆ ಎಂದು ತಿಳಿದ ಕೂಡಲೆ ಗಂಗವ್ವ ಮತ್ತು ಅಕ್ಕಪಕ್ಕದ ಮನೆಯ ಹೆಂಗಸರು ಒಳಗಿನ ಕೋಣೆಗೆ ನುಗ್ಗಿದರು.

ಪುಲ್ಲಯ್ಯ ಹುಟ್ಟಿದಾಗ, ನೀಲಿ ಹುಟ್ಟಿದಾಗ ಬಂದಿದ್ದ ಸೂಲಗಿತ್ತಿಯೇ ಈಗಲೂ ಬಂದಿದ್ದಳು. ಹಣ್ಣಾದ ಆ ಮುದುಕಿ ಸೂಲಗಿತ್ತಿ, ಎಲ್ಲರನ್ನೂ ಪಕ್ಕಕ್ಕೆ ತಳ್ಳಿ, ಹೆರಿಗೆ ಮಾಡಿಸಲು ಮುಂದಾಗಿದ್ದಳು. ಅವಳು ಹೆರಿಗೆ ಮಾಡಿಸಲಿರುವುದು ಇದು ಎಷ್ಟನೇ ಸಲವೋ ಏನೋ?

ಪುಲ್ಲಯ್ಯ ಹೊರಗಡೆ ಶತಪಥಹಾಕುತ್ತಿದ್ದ. ಒಳಗಿನಿಂದ ನೀಲಿ ನರಳುವುದು ಕೇಳಿಸುತ್ತಿತ್ತು. ಅದನ್ನು ಕೇಳಿ, ಪುಲ್ಲಯ್ಯ ತುಂಬಾ ಬೇಜಾರುಪಟ್ಟುಕೊಳ್ಳುತ್ತಿದ್ದ. ಆಗಲಿ ಪೂರ್ವದಲ್ಲಿ ರವಿ ತನ್ನ ಬರುವನ್ನು ಸಾರಿದ್ದ. ಒಳಗಿನಿಂದ "ಕ್ಯಾ, ಕ್ಯಾ......" ಕೂಸಿನ ಅಳುವು ಕೇಳಿಸಿತು. ಪುಲ್ಲಯ್ಯ ನಿಂತಲ್ಲೆ ಒಮ್ಮೆ ಪುಟಿದೆದ್ದ. ಅಪ್ರಯತ್ನವಾಗಿ ಅವನ ಬಾಯಿಯಿಂದ "ಮಲ್ಲೇಶಿ" ಎಂಬ ಕೂಗು ಹೊರಟಿತು.

ಸೂಲಗಿತ್ತಿ ಒಳಗಿನಿಂದಲೇ ಕೂಗಿದಳು—"ಮಲ್ಲಮ್ಮ". "ಹಾಗಿದ್ದರೆ ಈ ಪ್ರಪಂಚವೆ ತಲೆಕೆಳಗಾದೀತು" ಎಂದ ಪುಲ್ಲಯ್ಯ.

ಒಳಗಿದ್ದ ಹೆಣ್ಣುಮಕ್ಕಳು ಇದನ್ನು ಕೇಳಿ ಗಟ್ಟಿಯಾಗಿ ನಗಹತ್ತಿದರು.

ಕೂಸು ಮಾತ್ರ, ಮನೆಯ ಸೂರು ಹಾರಿಹೋಗುವ ಹಾಗೆ ಅಳುತ್ತಿತ್ತು. ಸ್ವಲ್ಪ ಹೊತ್ತಾದ ಮೇಲೆ ಹೊರಬಂದ ಗಂಗವ್ವ ನಗುತ್ತ, "ಕೂಸು ಬಹಳ ಅಳ್ತಿದೆಯಾದರೂ ಬಂಗಾರಾಗ್ಯದ...... ಎಷ್ಟು ಮುದ್ದಾಗಿದೆ ಅಂದರ ತಲಿ ತುಂಬ ಕೂದಲ......"

ಪುಲ್ಲಯ್ಯನಿಗೆ, ಅದೇಕೋ, ಆ ಹೆಣ್ಣುಮಕ್ಕಳ ಮಾತಿನಲ್ಲಿ ನಂಬಿಕೆ ಬರಲಿಲ್ಲ.

"ಹಾದಿ ಬಿಡ್ರಿ...... ನಾನೇ ನೋಡ್ತೀನಿ...... ಕೂಸು ಗಂಡಾಗಿರಲೇಬೇಕು...... ಸ್ವರ್ಗದಾಗಿರೋ ನಮ್ಮಪ್ಪ ನನಗ ಮೋಸ ಮಾಡ್ತಾನೇನು......? ಕೂಸು ಗಂಡಾಗಿರಲೇಬೇಕು...... ಸರಿರಿ, ನಾನು ನೋಡ್ತೀನಿ"—ಎನ್ನುತ್ತ ಪುಲ್ಲಯ್ಯ ಹೆರಿಗೆಕೋಣೆಯಲ್ಲಿ ಕಾಲಿಟ್ಟ.

"ಒಳ್ಳೇದು–ಕೆಟ್ಟದು ನೋಡಿ ಕೂಸಿನ್ನ ನೋಡು. ಹೀಂಗ ಅವಸರ ಮಾಡಬ್ಯಾಡ ......" ಗಂಗವ್ವ ಅವನನ್ನು ತಡೆದಳು.

"ಕೆಟ್ಟದೇನು ಬಂತು...... ಎಲ್ಲಾ ಒಳ್ಳೇದs ಆಗ್ಯದ......" ಎನ್ನುತ್ತಾ, ಒಳಗೆ ಹೋಗಿಯೇ ಬಿಟ್ಟ ಪುಲ್ಲಯ್ಯ. ಒಳಗಿದ್ದ ಎಲ್ಲಾ ಹೆಣ್ಣುಮಕ್ಕಳು ಒಂದು ಪಕ್ಕಕ್ಕೆ ಸರಿದು ನಿಂತರು. ನೀಲಮ್ಮನ ಅಜ್ಜಿ, ಹುಚ್ಚುಹುಚ್ಚಾಗಿ ನಗುತ್ತಾ ಕುಳಿತಿದ್ದಳು...... ಕಂದೀಲಿನ ಮಂದಬೆಳಕಿನಲ್ಲಿ, ಹೊರಸಿನ ಮೇಲೆ ಮಲಗಿದ್ದ ನೀಲಿಯ ಮುಖ, ಬಿರುಗಾಳಿಯಲ್ಲಿ ಸಿಕ್ಕು, ಸಮುದ್ರದಲ್ಲಿ ಮುಳುಗಿ ದಡಸೇರಿದವರ ಮುಖದಂತಿತ್ತು. ಅವಳ ಪಕ್ಕದಲ್ಲಿ...... ನಿಜವಾಗಿಯೂ ಬಂಗಾರದಂತಹ ಗಂಡುಮಗುವಿತ್ತು. ಪುಲ್ಲಯ್ಯ ಕಣ್ಣಗಲಿಸಿ ಮಗನನ್ನು ನೋಡಿದ. ನೋಡಿ, ಉಕ್ಕಿ ಬಂದ ಸಂತೋಷದಲ್ಲಿ ನಗುತ್ತ ಮೀಸೆಯನ್ನು ತಿರುವಿದ......

"ಮಗ ಈಗs ಹೀಗಿದ್ದಾನ ಅಂದ ಮ್ಯಾಲೆ...... ನನ್ನನ್ನು ಮೀರಿಸುವ ಉಸ್ತಾದ ಆಗ್ತಾನ...... ನನಗಿಂತ ಗಟ್ಟಿಗನಾಗ್ತಾನ"—ಎಂದುಕೊಳ್ಳುತ್ತಾ, ಪುಲ್ಲಯ್ಯ ಹೆಂಡತಿಯನ್ನು ನೋಡಿದ. ಇಬ್ಬರ ಕಣ್ಣುಗಳೂ ಒಂದಾದವು. ಅವು ತಮ್ಮದೇ ಆದ ಭಾಷೆಯಲ್ಲಿ ಮಾತನಾಡಿಕೊಂಡವು. ಸ್ತ್ರೀಗೆ ಇನ್ನೇನು ಬೇಕು? ಇದುವರೆಗೂ ಯೌವ್ವನದಲ್ಲಿ ಮೈಮರೆತು ಗಂಡನೊಡನೆ ಸರಸಸಲ್ಲಾಪಗಳಾಡಿ, ಆತನನ್ನು ಪ್ರೀತಿಸಿದ್ದಾಯಿತು—ಆತನನ್ನು ಆರಾಧಿಸಿದ್ದಾಯಿತು. ಈಗ ಬಂಗಾರದಂತಹ ಮಗ ಹುಟ್ಟಿದ್ದ. ಅವಳ ನೋಟದಲ್ಲಿ ಸಹಜವಾಗಿ ಗರ್ವ ಇಣುಕಿನೋಡುತ್ತಿತ್ತು—ತೃಪ್ತಿಯು ಹೊರಹೊಮ್ಮುತ್ತಿತ್ತು.

## [ 12 ]

ಸ್ತ್ರೀವೇಷಧಾರಿ ಪದ್ಮನಾಭಂ, ರಾತ್ರಿಯಿಂದ ಬೆಳಗಿನ ಜಾವದ ವರೆಗೂ ಕೂಗಿಕೊಂಡದ್ದಕ್ಕೆ ಅವನಿಗೆ ಬಂದ ಸಂಭಾವನೆ ಶೂನ್ಯವಾಗಿತ್ತೆಂದೇ ಹೇಳಬಹುದು. ಅವನು ಕಥೆ ಹೇಳಿ ಹಾಡು ಹಾಡುತ್ತಿರುವ ವರೆಗೂ ಹಾಯಾಗಿ ಕುಳಿತು ಕೇಳಿದ ಜನ, ಅವನ ಹಾಡು ಮುಗಿದ ಕೂಡಲೆ, ಅಲ್ಲಿಯವರು ಅಲ್ಲಿಯೇ ಮಾಯವಾಗಿದ್ದರು. ಬೆಳಗಾಗುತ್ತಲೆ ಕೈ ಚಾಚಿಕೊಂಡು ಮನೆ–ಮನೆ ಅಲೆಯದೆ ಪದ್ಮನಾಭನಿಗೆ ಗತ್ಯಂತರವಿರಲಿಲ್ಲ. ಹಾಗೆ ಮನೆಮನೆಗೂ ಹೋಗಿ ಬೇಡಿಕೊಳ್ಳುತ್ತಾ, ಅವನು ಪುಲ್ಲಯ್ಯನ ಮನೆಗೂ ಬಂದ.

"ಮಹಾಭಾರತವೆಲ್ಲಾ, ಒಬ್ಬ ಮುದುಕನ ಮತ್ತು ಒಬ್ಬ ಕುರುಡನ ಕಥೆಯೇ ಸರಿ. ಆ ಕಥೆ ಕೇಳಿ ತಂಪಾದ ಹೊತ್ತಿನಲ್ಲಿ ಹುಟ್ಟಿದ ನನ್ನ ಮಗ—ಅಂದಮ್ಯಾಲೆ, ಅವನು ಆ ಕಥೆಯಷ್ಟೇ ಪ್ರಸಿದ್ಧಿಯಾಗಲಾರನೇ"—ಎಂದು ಹೆಮ್ಮೆಯಿಂದ ಹೇಳಿದ ಪುಲ್ಲಯ್ಯ,

ಪದ್ಮನಾಭನನ್ನು ಸಂತೋಷದಿಂದಲೇ ಸ್ವಾಗತಿಸಿದ. "ಪದ್ಮನಾಭ, ನನ್ನ ಮಗ ಹುಟ್ಟಿದಾಗ, ತುಂತುರು ಹನಿ ಬಂದು ಈ ಭೂಮಿ ತಣ್ಣಗಾಯಿತು ನೋಡು"—ಎಂದು ಮೀಸೆ ತೀಡಿಕೊಂಡ.

ನೀಲಿ ಐದನೆಯ ದಿನವೇ ಅಡಿಗೆಮನೆಯಲ್ಲಿ ಕಾಲಿಡಲು ಇಚ್ಛಿಸಿದಾಗ, ಅವಳ ಅಜ್ಜಿ ಬೇಡವೆನ್ನಲಿಲ್ಲ. ಮಗ ಹುಟ್ಟಿದ ಹನ್ನೊಂದನೆಯ ದಿನಕ್ಕೆಲ್ಲ, ನೀಲಿ ಮನೆಯ ಎಲ್ಲಾ ಕೆಲಸಕಾರ್ಯಗಳನ್ನು ಮಾಡಹತ್ತಿದಳು. ಇಪ್ಪತ್ತೊಂದನೆಯ ದಿನ, ಊರಿನ ಮುತ್ತೈದೆಯರು ಗಂಗೆಯ ಪೂಜೆಗಾಗಿ ನೀಲಿಯನ್ನು ನದಿಯ ತೀರಕ್ಕೆ ಕರೆದೊಯ್ದರು. ಉಸುಕಿನ ಮೂರು ಕುಪ್ಪೆ ಮಾಡಿಸಿ, ನೀಲಿಯ ಕೈಯಿಂದ ಪೂಜೆಮಾಡಿಸಿದರು. ಅನಂತರ ಎಲ್ಲರೂ, ಮಗುವನ್ನು ಕಾಪಾಡುವಂತೆ ಗಂಗೆಗೆ ಮೊರೆ ಇಟ್ಟರು. ಅದಾದ ನಂತರ, ನೀಲಿ, ನದಿಗೂ ಸಹ ಹೋಗಿ ನೀರು ತರಲು ಪ್ರಾರಂಭಿಸಿದಳು. ಅಂದಿನಿಂದ ಹೊಲದಲ್ಲೂ ಸಹ ಕೆಲಸ ಮಾಡಹತ್ತಿದಳು. ತೋಟಕ್ಕೆ ಹೋಗುವುದು, ಮನೆ ಕೆಲಸ ಮಾಡಿಕೊಳ್ಳುವುದು, ಕೂಸನ್ನು ನೋಡಿಕೊಳ್ಳುವುದು ಎಲ್ಲವೂ ಸಹಜವಾಗಿಬಿಟ್ಟಿತು. ನೀಲಿ ತೋಟಕ್ಕೊ ಅಥವಾ ನೀರು ತರಲು ನದಿಗೊ ಹೋದಾಗ, ಮಗನನ್ನು ಅಜ್ಜಿಯ ಬಳಿ ಬಿಟ್ಟುಹೋಗುತ್ತಿದ್ದಳು.

ಮಗುವಿಗೆ ದಿನ ಬಿಟ್ಟು ದಿನ ನೀರು ಹಾಕುತ್ತಿದ್ದಳು. ತಲೆತುಂಬಾ ಬೆಳೆದ ಕಪ್ಪು ಕೂದಲಿನಲ್ಲಿ ಕೈಯಾಡಿಸಿ ಕೂಸನ್ನು ಮುದ್ದಾಡುತ್ತಿದ್ದ ಅರಿಯದ ಮಹಿಳೆಯರು, "ಹೆಣ್ಣು ಮಗುವೆ......?" ಎಂದು ಕೇಳುತ್ತಿದ್ದರು. ಹಾಗೆ ಯಾರೇ ಆಗಲಿ ಕೇಳಿದ್ದು ಪುಲ್ಲಯ್ಯನ ಕಿವಿಗೆ ಬಿದ್ದಲ್ಲಿ, ಅವನು ಉರಿದೇಳುತ್ತಿದ್ದ. ತಂದೆ ಸದಾ ಎತ್ತಿಕೊಂಡು ತಿರುಗಿದಲ್ಲಿ ಮಗು ಸೊರಗುವದೆಂದು ಹೇಳಿ, ಮುದುಕಿ, ಮಗುವನ್ನು ಪುಲ್ಲಯ್ಯನ ಕೈಗೆ ಕೊಡಲು ನಿರಾಕರಿಸುತ್ತಿದ್ದಳು. ಮೈಕೈ ತುಂಬಿಕೊಂಡಿದ್ದ ಕೂಸನ್ನು ನೋಡಿ, "ಪುಲ್ಲಯ್ಯನ ಮಗ, ಪುಲ್ಲಯ್ಯನನ್ನೂ ಮೀರಿಸುತ್ತಾನೆ"—ಎಂದು ಊರಿನ ಜನರು ಅಂದುಕೊಂಡಿದ್ದರು. ಇಂತಹ ಮಾತು ಕಿವಿಗೆ ಬಿದ್ದಲ್ಲಿ, ಮುದುಕಿ, ಮರಿಮೊಮ್ಮಗನ ದೃಷ್ಟಿ ತೆಗೆಯುತ್ತಿದ್ದಳು. ಅವಳ ಈ ದೃಷ್ಟಿ ತೆಗೆಯುವ ಆರಾಟಕ್ಕೆ, ಮನೆಯಲ್ಲಿನ ಇದ್ದಲು, ಪೊರಕೆ, ಮೆಣಸಿನ ಕಾಳು ಸಾಕಾಗುತ್ತಿರಲಿಲ್ಲ. ಮಗುವಿಗೆ ನೀರು ಹಾಕುವಾಗಲೂ ಸಹ ಮುದುಕಿ ಎದುರಿಗೆ ನಿಲ್ಲುತ್ತಿದ್ದಳು. ತಳದಲ್ಲಿನ ನೀರು ಹಾಕಿದಲ್ಲಿ ಮಗು ಸೊರಗುವದೆಂದು ಹೇಳಿ, ಕೂಸಿಗೆ ಯಾವ ರೀತಿ ನೀರು ಹಾಕಬೇಕೆಂಬುದನ್ನು ತೋರಿಸುತ್ತಿದ್ದಳು.

ಇಪ್ಪತ್ತೇಳನೆಯ ದಿನ ಮಗುವನ್ನು ತೊಟ್ಟಿಲಿಗೆ ಹಾಕಿದರು. ಅಂದು, ಪುಲ್ಲಯ್ಯನ ಸಂಭ್ರಮಕ್ಕೆ ಮಿತಿಯೇ ಇರಲಿಲ್ಲ. ಊರಿನಲ್ಲಿ ಆಗಲೇ ಪಡಿತರವನ್ನು ಜಾರಿಗೆ ತರುವ ಮಾತು ನಡೆದಿತ್ತು. 'ವಾರ್ ಫಂಡ್'ಗಾಗಿ (ಯುದ್ಧನಿಧಿಗಾಗಿ) ಎಲ್ಲರೂ ದುಡ್ಡು ಕೊಡಬೇಕೆಂದು ಶಾನುಭೋಗ ಹೇಳಿದ್ದ. "ಅದನ್ನು ಆಮೇಲೆ ನೋಡಿದರಾಯಿತು.

ಈಗಂತೂ ನಾಲ್ಕು ಜನರು ಬಂದು ನನ್ನ ಮಗನ್ನ ನೋಡಿ ಸಂತೋಷಪಟ್ಟು ಆಶಿರ್ವದಿಸಲಿ"—ಎಂದು ಪುಲ್ಲಯ್ಯ ಧಾರಾಳವಾಗಿಯೇ ಖರ್ಚುಮಾಡಿದ.

ಬಂದವರೆಲ್ಲರೂ ಮಗುವನ್ನು ನೋಡಿ ಹರಸಿದರು. ಒಂದು ತಿಂಗಳು ಕೂಡಾ ತುಂಬದ ಕೂಸು, ನಾಲ್ಕು ತಿಂಗಳ ಕೂಸಿನಂತೆ ಕಾಣುತ್ತಿತ್ತು. ಆಗಸ್ಟ್ ತಿಂಗಳ ಕೊನೆಯಾಗಿದ್ದರಿಂದ, ಬಿಸಿಲು ಕಡಿಮೆಯಾಗಿ, ಎಲ್ಲೆಡೆಯಲ್ಲೂ ತಂಪು ಬಿದ್ದಿತ್ತು. ಹೊಲಗದ್ದೆಗಳಲ್ಲಿ, ಭೂಮಿಯಲ್ಲಿನ ಸತ್ವವನ್ನು ಹೀರಿಕೊಂಡ ಪೈರು ಕಂಗೊಳಿಸುತ್ತಿತ್ತು. ರೈತರ ಹೃದಯವನ್ನು ತಣಿಸುವಂತಹ ಬಂಗಾರದಂತಹ ಪೈರು. ಈ ಸಂತಸದಲ್ಲೆ, ಪುಲ್ಲಯ್ಯನ ಮನೆಯ ಸಂಭ್ರಮ ಸೇರಿತ್ತು. ಗಂಗವ್ವ, ಪುಲ್ಲಯ್ಯನ ಮದುವೆಯಲ್ಲಿ ಹಿರಿತನ ವಹಿಸಿಕೊಂಡು ಓಡಾಡಿದಂತೆ, ಈಗಲೂ ಸಹ ಓಡಾಡಿದಳು. ಆದರೆ ಅವಳ ಮನೆಯಲ್ಲಿ ಮಾತ್ರ, ಈಗ ಅವಳದೇನೂ ನಡೆಯುತ್ತಿರಲಿಲ್ಲ. ದವಸ–ಧಾನ್ಯಗಳ ಬೆಲೆಗಳು ಏರಿ, ದಾನ–ಧರ್ಮಗಳು ಕಡಿಮೆಯಾದವು. ಆದರೆ, ಗಂಗವ್ವನ ಕೈಗೆ ಹಿಡಿ–ತಡೆ ಇರಲಿಲ್ಲ. ಆದ್ದರಿಂದ ಮನೆಯ ಎಲ್ಲ ಕಾರಭಾರವನ್ನೂ ಅಳಿಯನೇ ವಹಿಸಿಕೊಂಡಿದ್ದ. ಈಗ ಗಂಗವ್ವ ನಿಸ್ಸಹಾಯಕಳಾಗಿದ್ದಳು. ತನ್ನ ಕೈಯಿಂದ ಏನೂ ಆಗದಿದ್ದರೂ, ತನ್ನ ಒಳ್ಳೆಯತನದಿಂದ, ಒಳ್ಳೆಯ ಮಾತಿನಿಂದ, ಅವಳು ಈಗಲೂ ಸಹ ಎಲ್ಲರಿಗೂ ಬೇಕಾದವಳಾಗಿದ್ದಳು. ಪುಲ್ಲಯ್ಯನ ಮಗನನ್ನು ನೋಡಿ, ಸಂತೋಷಿಸಿದ ಗಂಗವ್ವ, "ನಾನು ಈಗ ಯಾವ ಕೆಲಸಕ್ಕ ಬರ್ತೀನಪಾ? ನನ್ನ ಕೈಯಾಗ ಏನದ? ನಿನ್ನಂತಹ ಮುದ್ದು ಮೊಮ್ಮಗನ ಬೆಳ್ಳಿ ಉಡದಾರಾನಾದರೂ ತರಲಿಕ್ಕೆ ಆಗಲಿಲ್ಲ ನನಗ"—ಎಂದು ಕೊರಗಿದಳು.

ಇದನ್ನು ಕೇಳಿಸಿಕೊಂಡ ನೀಲಿ, "ಅಯ್ಯೋ ಅದಕ್ಕೇನಂತ, ನಿನ್ನ ಆಶಿರ್ವಾದ, ನಿನ್ನ ಪ್ರೀತಿ–ವಿಶ್ವಾಸ ಅವನಿಗೆ ರಾಮರಕ್ಷೆ"—ಎಂದು ಸಮಾಧಾನ ಹೇಳಿದಳು.

"ಎಂತಹ ಮುದ್ದುಮಗನ್ನ ಹಡೆದೆವ್ವ. ಮನೀಗೊಂದೆ ಅಲ್ಲದೆ, ಇಡೀ ಓಣಿಗೆ ಜೀವಕಳೆ ಬಂದದ. ಸತ್ತ ಸ್ವರ್ಗ ಸೇರಿದ ಆ ಮಲ್ಲಯ್ಯ......" ಗಂಗವ್ವ ಅದೇನನ್ನೊ ಹೇಳಹೊರಟಿದ್ದಳು.

ಅಷ್ಟರಲ್ಲಿ, ತನ್ನ ತಂದೆಯ ಹೆಸರು ಕೇಳಿ ಸಂತೋಷದಿಂದ ಉಬ್ಬಿಹೋದ ಪುಲ್ಲಯ್ಯ ಕುಳಿತಲ್ಲಿಂದ ಪುಟಿದೆದ್ದು—"ಅವ್ವಾ, ಅದು ನೋಡು, ನಮ್ಮಪ್ಪ ಮಲ್ಲಯ್ಯ ಕಿಲಕಿಲ ನಗೋದು ನೋಡು...... ಇವನೇ ನಮ್ಮಪ್ಪ ಮಲ್ಲೂ...... ಮಲ್ಲೇಶಿ......" ಎಂದು ಉತ್ಸಾಹದಿಂದ ಕೂಗುತ್ತಾ ಮಗನನ್ನು ಎತ್ತಿಕೊಂಡು ಹೊರಗೋಡಿದ. ಮಗುವಿಗೆ, ಕೊನೆಗೆ ಅದೇ ಹೆಸರು ಕಾಯಂ ಆಯಿತು.

ಪುಲ್ಲಯ್ಯನಿಗೆ, ಈಗ 'ಮಲ್ಲೇಶಿ' ಅಂದರೆ ಪಂಚಪ್ರಾಣ. ತಾಯಿಯ ಹಾಲಿನಿಂದ ದಿನದಿನಕ್ಕೆ ಬೆಳೆಯುತ್ತಿದ್ದ ಮಲ್ಲೇಶಿಯನ್ನು ಕಂಡು ಅವನಿಗೆ ಎಲ್ಲಿಲ್ಲದ ಸಂತೋಷ. ಈಗ ನೀಲಿ, ಮಧುರವಾದ ನೋಟ ಬೀರಿ ತನ್ನನ್ನು ಹುಚ್ಚನನ್ನಾಗಿ ಮಾಡುತ್ತಿರಲಿಲ್ಲವಾದರೂ, ಅವಳ ದೇಹದ ಅಮೃತತುಲ್ಯವಾದ ಸ್ಪರ್ಶಸುಖ ದೊರೆಯುತ್ತಿರಲಿಲ್ಲ

ವಾದರೂ, ಬೆಳೆಯುತ್ತಿರುವ ಮಗನನ್ನು ನೋಡಿ, ಅದರಲ್ಲೆ ಎಲ್ಲ ಸುಖವನ್ನೂ ಪಡೆ ಯುತ್ತಿದ್ದ ಪುಲ್ಲಯ್ಯ.

ಕುಡ್ಡ ವೆಂಕಣ್ಣ, ಮೊಮ್ಮಗನಿಗೆ ಏನೂ ಕೊಡಲಾಗಲಿಲ್ಲವೆಂದು ಮನಸ್ಸಿನಲ್ಲೆ ಒದ್ದಾಡುತ್ತಿದ್ದ. ಗೌರಮ್ಮ, ತನ್ನ ಗತವೈಭವವನ್ನು ನೆನೆಸಿಕೊಂಡು ಕಣ್ಣೀರು ತಂದು ಕೊಂಡಳು. ಮಗನನ್ನು ತೊಟ್ಟಿಲಲ್ಲಿ ಹಾಕಿದ ದಿನ, ನೀಲಿ, ಅವರಿಬ್ಬರಿಗೂ ಹೊಟ್ಟೆ ತುಂಬ ಅನ್ನ ಹಾಕಿದಳು. ಅವರ ಮನಸ್ಸಿನಲ್ಲಿ ಮನೆಮಾಡಿದ್ದ ನೋವನ್ನು ಅರ್ಥ ಮಾಡಿಕೊಂಡ ನೀಲಿ—"ದೇವರ ದರ್ಶನಕ್ಕ ಹೋದರ, ಹಣ್ಣು-ಕಾಯಿ ಒಯ್ಯಬೇಕೂ ಅಂತ ಯಾವ ನಿಯಮಾನೂ ಇಲ್ಲ. ಗಿಡದಾಗಿನ ಎರಡು ಹೂವು ಆರಿಸಿಕೊಂಡು ಹೋಗಿ, ಅದನ್ನೇ ದೇವರಿಗೆ ಅರ್ಪಿಸಿದರ ಮೋಕ್ಷ ಸಿಗಾಣಿಲ್ಲೇನು? ನೀವಿಬ್ಬರೂ ನನ್ನ ಮಗನ್ನ ಆಶೀರ್ವದಿಸಿರಿ—ಅಷ್ಟೇ ಸಾಕು"—ಎಂದು ಮಗುವನ್ನು ಅವರ ಬಳಿ ಒಯ್ದಳು.

ಕುಡ್ಡ ವೆಂಕಣ್ಣ, ಮಗುವನ್ನು ತಡವರಿಸಿ, ಮನಸ್ಸಿನಲ್ಲಿ ಹುಟ್ಟಿದ ಕ್ಷೋಭೆಯನ್ನು ಮುಚ್ಚಿಕೊಳ್ಳಲಾಗದೆ, "ನಾನೊಬ್ಬ ಪಾಪಿಷ್ಠ...... ನನಗೂ ಕಣ್ಣಿದ್ದರ......" ಎಂದು ನೊಂದುಕೊಂಡ.

ಗೌರಮ್ಮ ಕೂಸನ್ನು ನೋಡಿ, ಮುದ್ದಾಡಿ, ಹೊಗಳಿದಳು. ಅವಳ ಹೊಗಳಿಕೆಯನ್ನು ಕೇಳಿಸಿಕೊಂಡ ವೆಂಕಣ್ಣ—" ಅಮ್ಮ, ಮಾಡಿದ ಧರ್ಮಕಮ್ಮ ಬೆನ್ನು ಬಿಡಾಣಿಲ್ಲಂತ. ನಿನ್ನ ಮಗ ನಾಲ್ಕು ಮಂದಿ ಕೈಲೆ ಶಭಾಷ್ ಅನ್ನಿಸಿಕೊಳ್ಳಬೇಕು"—ಎಂದು ಹೇಳುತ್ತಾ, ಕುಳಿತಲ್ಲೆ ಸುತ್ತಮುತ್ತ ಕೈಸವರಿದ. ಕೈಗೆ ಒಂದು ಮಣ್ಣಿನ ಹೆಂಟೆ ಸಿಕ್ಕಾಗ, ವೆಂಕಣ್ಣನ ಮುಖದ ಮೇಲೆ ನಗುವು ಚಿಮ್ಮಿತು. ಅವನು, ಆ ಮಣ್ಣಿನ ಹೆಂಟೆಯನ್ನು ಎತ್ತಿಕೊಂಡು, ಕೂಸಿನ ಕೈಯಲ್ಲಿ ಅದನ್ನಿಟ್ಟು, "ಮಲ್ಲೇಶಿ, ಮನುಷ್ಯನಿಗೆ ಹುಟ್ಟಿದಾಗಿನಿಂದ ಸಾಯೋ ವರೆಗೂ, ಅಷ್ಟs ಯಾಕ ಸತ್ತಮ್ಯಾಲೂ ಇದೇ ಗತಿ"—ಎಂದ.

"ವಸ್ತ್ರ ಒಡವಿ ಕೊಡೊ ಶಕ್ತಿ ಇರದಿದ್ದರ, ಸುಮ್ಮನಿರಬೇಕು. ಅದನ್ನ ಬಿಟ್ಟು......" ಗೌರಮ್ಮ ಬುಸುಗುಟ್ಟುತ್ತಾ ಏನೋ ಹೇಳಹತ್ತಿದಳು.

ಕುಡ್ಡ ವೆಂಕಣ್ಣನ ಕಣ್ಣುಗಳಿಂದ ನೀರು ಹರಿಯುತ್ತಿತ್ತು. ಅದನ್ನು ನೋಡಿ ನೀಲಿ, ಅವನ ಮನಸ್ಸಿನಲ್ಲಿ ತುಂಬಿದ್ದ ಕರುಣೆಯನ್ನು, ಅವನ ಹೃದಯದ ನೋವನ್ನು ಅರ್ಥ ಮಾಡಿಕೊಂಡಳು. ವೆಂಕಣ್ಣ ಕೂಸಿನ ಕೈಯಲ್ಲಿ ಇಟ್ಟಿದ್ದ ಮಣ್ಣಿನ ಹೆಂಟೆಯನ್ನು, ಒಂದು ದೊಡ್ಡ ಸಿಧಿಯಂತೆ ಕಂಡಳು. ಮಗುವನ್ನು ಎತ್ತಿಕೊಂಡು ಹೋಗಿ ಮಲಗಿಸಿ ದಳು. ವೆಂಕಣ್ಣ ಕೊಟ್ಟಿದ್ದ ಮಣ್ಣಿನ ಹೆಂಟೆಯನ್ನು ಕೂಸಿನ ತಲೆದಿಂಬಿನ ಕೆಳಗೆ ಇಟ್ಟಳು.

ಹೀಗೆಯೇ ದಿನಗಳುರುಳಿದವು. ಈ ನಡುವೆ ಪುಲ್ಲಯ್ಯ ಹೆಂಡತಿಯೊಡನೆ ತನಗೇನೂ ಸಂಬಂಧವಿಲ್ಲದಂತೆ, ಯಾವಾಗಲೂ ಮಗನ ಆರೈಕೆಯಲ್ಲೇ ಮುಳುಗಿರುತ್ತಿದ್ದ. ಅದೊಂದು ದಿನ, ನೀಲಿ, ಹೊಲದಿಂದ ಬಂದ ಗಂಡನ ಮುಖ ನೋಡಿ, ಸಮ್ಮೋಹನಾಸ್ತ್ರ ಬೀರಿ ಮುಗುಳ್ನಕ್ಕಳು. ಆದರೆ ಪುಲ್ಲಯ್ಯ, ಅವಳತ್ತ ನೋಡಲೇ ಇಲ್ಲ. ಅವನು

ತೊಟ್ಟಿಲಲ್ಲಿ ಮಲಗಿದ್ದ ಮಗನನ್ನೆ ನೋಡುತ್ತಿದ್ದ. ನೀಲಿ, ತೊಟ್ಟಿಲನ್ನು ತೂಗುತ್ತಾ......

"ಜೋಜೋ ಜೋಜೋ ಜೋ......ಎಂದು ತೂಗುವೆನು

ಮಲಗು ನೀ ಎನ್ನ ಜಾಣ ಮಗುವೆ......

ಮಲಗು ನೀ ಎನ್ನ ಮುದ್ದು ಮಗುವೆ......" ಎಂದು ಹಾಡುತ್ತಾ, ಕೊನೆಯಲ್ಲಿ, "ಕೋತಿಯಂತಹ ಮುಖದ ಗಂಡನ ಕಟ್ಟಿಕೊಂಡು, ಚಿನ್ನದಂತಹ ಮಗುವ ಪಡೆದೆ"—ಎಂದು ತನ್ನದೇ ಒಂದು ನುಡಿ ಸೇರಿಸಿದಳು.

ಪುಲ್ಲಯ್ಯ, ಆಗ ಮಾತ್ರ ಹೆಂಡತಿಯನ್ನು ನೋಡಿದ. ಕೋತಿಯಂತೆ ಮುಖ ಮಾಡಿದ. ನೀಲಿ ಆವನನ್ನು ನೋಡಿ ನಕ್ಕಳು. ಮತ್ತೆ ಅವರ ಬಾಳಿನಲ್ಲಿ ವಸಂತದ ಆಗಮನವಾಯಿತು. ಕೆಲದಿನಗಳಿಂದ ಮಗನ ಲಾಲನೆ–ಪಾಲನೆಯಲ್ಲಿ ಮರೆಯಾಗಿದ್ದ ಯೌವ್ವನ ಮತ್ತೆ ಬಿಸಿನೀರಿನ ಬುಗ್ಗೆಯಂತೆ ಉಕ್ಕಿ ಬಂತು. ಇಬ್ಬರ ಮುಖದ ಮೇಲೂ ನಗುವಿನ ಅಲೆಗಳು ಲಾಸ್ಯವಾಡಿದವು.

## [ 13 ]

ಚಳಿಗಾಲದ ಒಂದು ಸಂಜೆ. ಆಗಲೇ ಮಬ್ಬುಗತ್ತಲು ಹರಡಿತ್ತು. ರಾಮದಾಸು ದೇವಿಯನ್ನು ಆಹ್ವಾನಿಸಿಕೊಂಡು ರಾಗವಾಗಿ ಏನನ್ನೋ ಹೇಳುತ್ತಿದ್ದ. ಹೊಲದಿಂದ ಹೊರಟಿದ್ದ ಪುಲ್ಲಯ್ಯ ಮತ್ತು ನೀಲಿ, ಅದೇ ದಾರಿಯಲ್ಲಿ ಬರುತ್ತಿದ್ದರು. ಈ ಸಲದ ಫಸಲು ಅಷ್ಟೊಂದು ತೃಪ್ತಿಕರವಾಗಿರಲಿಲ್ಲ. ಮಿಡತೆಗಳ ದಂಡು ಬಂದು ಸಾಕಷ್ಟು ನಷ್ಟವಾಗಿತ್ತು. ತೆನೆಗಳು ಬಲಿತಂತೆ ಕಾಣುತ್ತಿದ್ದವಾದರೂ, ಅರ್ಧದಷ್ಟು ತೆನೆಗಳಲ್ಲಿ ಹಾಲೇ ಇರಲಿಲ್ಲ. ಇಂತಹುದರಲ್ಲಿ, ಧಣಿ ಮಹಾ ಲೆಕ್ಕಾಚಾರದ ಮನುಷ್ಯ. ತನಗೆ ದಕ್ಕುವುದರಲ್ಲಿ ಒಂದು ಕಾಳು ಕೂಡಾ ಕಡಿಮೆಯಾಗಬಾರದೆಂಬ ಛಲ ಉಳ್ಳವ. ದವಸ–ಧಾನ್ಯಗಳ ಜೊತೆಗೆ ಎಲ್ಲಾ ದರಗಳು ಗಗನಕ್ಕೇರುತ್ತಿವೆ—ಎಂದೆಲ್ಲ ಮಾತನಾಡಿಕೊಳ್ಳುತ್ತಾ ಹೊರಟಿದ್ದರು.

ಗುಡಿಯನ್ನು, ಗುಡಿಯಲ್ಲಿನ ವಿಗ್ರಹಗಳನ್ನು, ಆ ವಿಗ್ರಹಗಳನ್ನು ಆರಾಧಿಸುವ ರಾಮದಾಸುವನ್ನು ನೋಡಿದಲ್ಲಿ, ಆ ಗ್ರಾಮದ ಜನರಲ್ಲಿ ಉಂಟಾದ ಪರಿವರ್ತನೆಯ ಅರಿವಾಗುತ್ತಿತ್ತು. ಎರಡು ವರ್ಷಗಳ ಹಿಂದೆ ಇದ್ದುದಕ್ಕೂ, ಈಗಿನದಕ್ಕೂ ಅಜಗಜಾಂತರವಿತ್ತು. ರಾಮದಾಸುವಿನ ಮಾತುಗಳಿಗೆ, ಆತನ ಉಪದೇಶಗಳಿಗೆ ಹೆದರುವವರಾರೂ ಈಗ ಆ ಊರಿನಲ್ಲಿರಲಿಲ್ಲವೆಂದಲ್ಲ, ಆತನಿಗೆ ಹೆದರುವವರ ಕೈಯಲ್ಲಿ ಈಗ ಯಾವ ಅಧಿಕಾರವೂ ಇರಲಿಲ್ಲ. ದೇವರಲ್ಲಿ ಭಯ–ಭಕ್ತಿಗಳನ್ನಿಟ್ಟುಕೊಂಡಿದ್ದ ದೇಸಾಯರು ಮತ್ತು ಶಾನುಭೋಗರ ಪರಿಸ್ಥಿತಿ ಇದೇ ಆಗಿತ್ತು. ಯಾರಾದರೂ ದೇವಿಯ ವಿಷಯ

ವನ್ನು, ರಾಮದಾಸುವಿನ ವಿಷಯವನ್ನು ಹೇಳಿದಲ್ಲಿ, ಅದನ್ನು ಕೇಳುವಷ್ಟು ವ್ಯವಧಾನ ಆ ಊರಿನ ಹೊಸ ಪೀಳಿಗೆಯವರಿಗಿರಲಿಲ್ಲ. ನೀಲಮ್ಮಳ ಗುಡಿ, ಗುಡಿಯಲ್ಲಿನ ವಿಗ್ರಹ ಗಳು ಮತ್ತು ರಾಮದಾಸುವಿಗೆ, ಬದಲಾದ ಆ ಊರಿನಲ್ಲಿ ಯಾವ ಪ್ರಾಧಾನ್ಯತೆಯೂ ಇರಲಿಲ್ಲ. ದೇವಿಯ ರಥೋತ್ಸವ ನಡೆಸಬೇಕೆಂದು ರಾಮದಾಸು ಗೋಗರೆದನಾದರೂ, ಅದನ್ನು ಕಿವಿಗೆ ಹಾಕಿಕೊಳ್ಳಲು ಆ ಊರಿನಲ್ಲಿ ಯಾರೂ ಇರಲಿಲ್ಲ.

ಹೊದ್ದುಕೊಳ್ಳಲು ತುಂಡು ಬಟ್ಟೆಯೂ ಇಲ್ಲದ ರಾಮದಾಸು, ಚಳಿಯಲ್ಲಿ ನಡುಗುತ್ತ ದೇವಿಯನ್ನು ಆಹ್ವಾನಿಸಿದ್ದ. ಆಗಲೇ ಕತ್ತಲು ಕವಿದಿತ್ತು. ದೇವರ ಮುಂದಿನ ಎಣ್ಣೆದೀಪ ಈಗಲೊ ಆಗಲೊ ನಂದಿಹೋಗುವಂತೆ ಮಿಣುಕುತ್ತಿತ್ತು.

ಗುಡಿಯ ಹೊರಗೆ ನಿಂತೇ ದೇವಿಗೆ ನಮಸ್ಕರಿಸಿ ಹೋಗಲುಪಕ್ರಮಿಸಿದ ಪುಲ್ಲಯ್ಯ ಮತ್ತು ನೀಲಿಯನ್ನು ನೋಡಿದ ರಾಮದಾಸು, ಕೈಮಾಡಿ ಅವರನ್ನು ನಿಲ್ಲಿಸಿದ. ನಂತರ ತಾನೇ ಎದ್ದು ಅವರ ಬಳಿ ಬಂದು, "ಕೇಳಿದಿರಾ, ಮಹಾತಾಯಿ ನೀಲಮ್ಮ ಹೇಳಿದ್ದನ್ನು? ಹೋಗಿ ಆ ದೇಸಾಯರಿಗೆ ಮತ್ತು ಶಾನುಭೋಗರಿಗೆ ತಿಳಿಸಿ. ನಾನು ಹೇಳಿದ್ರು, ನನ್ನ ಬುದ್ಧಿ ಕೆಟ್ಟದ ಅಂತ ನಗ್ತಾರ ಅವರು"—ಎಂದು ಹೇಳಿದ.

ಪುಲ್ಲಯ್ಯ ಸರಿ—ಎಂದು ತಲೆಹಾಕಿ ಮುಂದೆ ಹೊರಟ. ರಾಮದಾಸು ಗುಡಿಯ ಬಾಗಿಲು ಹಾಕಿಕೊಂಡು ಅವರ ಹಿಂದೆಯೇ ಹೊರಟ. ಮುಪ್ಪಡರಿದಂತೆ ಅವನ ಮೈ ನಡುಗುತ್ತಿತ್ತು. ರಾಮದಾಸು ಈಗ ಒಬ್ಬ ನೊಂದ ಜೀವಿ ಆಗಿದ್ದ. ಅವನು ಯಾವ ಮಗನ ಮೇಲೆ ತನ್ನೆಲ್ಲ ಆಶೆ—ಆಕಾಂಕ್ಷೆಗಳನ್ನು ಇಟ್ಟುಕೊಂಡಿದ್ದನೊ, ಅದೇ ಮಗ ಇಂದು ಅವನಿಗೆ ಗಂಜಿ ಹಾಕಲೂ ಸಹ ನಿರಾಕರಿಸುತ್ತಿದ್ದ. ಇಸ್ಪೇಟು ಮುಂತಾದ ದುಶ್ಚಟಗಳಲ್ಲಿ ಬಿದ್ದಿದ್ದ ಅವನ ಮಗ, ಆಟದಲ್ಲಿ ಸೋತ ದಿನ, ಮನೆಯವರೆಲ್ಲರ ಮೇಲೂ ರೇಗಾಡುತ್ತಿದ್ದ. ಗೆದ್ದ ದಿನ ಹೆಂಡ ಕುಡಿದು ಬೀಳುತ್ತಿದ್ದ—ಇಲ್ಲವೆ—ತಂದೆ ಯನ್ನು ದೂಷಿಸುತ್ತಿದ್ದ. ಬೆಂದ ಹೃದಯದಿಂದ ಮುಪ್ಪಾಗಿದ್ದ ರಾಮದಾಸು, ದಂಪತಿ ಗಳ ಹಿಂದೆ ಹಿಂದೆ ಹೆಜ್ಜೆ ಹಾಕುತ್ತಾ, "ನೀಲಮ್ಮಾ, ಈ ಜಗತ್ತಿನ್ಯಾಗ ಯಾವುದೂ ಶಾಶ್ವತವಲ್ಲ. ನಾನೂ ಕೂಡ, ಇಂದಿಲ್ಲ ನಾಳೆ ಸಾಯೋದು ದಿಟ. ನನ್ನ ಹಾಂಗ, ನನ್ನ ಮಗನೂ ಸಾಯ್ತಾನ. ಆದರೂ, ನಮ್ಮನಮ್ಮೊಳಗ ಎಷ್ಟು ಅಂತರ ಅದ ನೋಡು. ನಾನು ಇದುವರೆಗೆ ಒಂದು ದಿನಾನೂ ಅಂಗಿ ಹಾಕಿಕೊಂಡಿಲ್ಲ. ಅದs ನನ್ನ ಮಗ, ಯಾವಾಗ್ಲೂ ಅಂಗಿ ಹಾಕಿಕೊಂಡು ಮೆರೀತಾನ. ನಾಳೆ ಅವನ ಮಗ, ಅವನಿಗಿಂತ ಮುಂದಾಗಿ, ಪಟ್ಟಣದ ಸಾಹೇಬ್ರು ಹಾಂಗ ಕೋಟು ಹಾಕಿಕೊಂಡು ಮೆರೀಬಹುದು. ಆದರ, ಅದರಿಂದ ಏನು ಲಾಭ? ಮೊಸಡಿ ಸೊಟ್ಟ ಇಟ್ಟುಕೊಂಡು, ಮೈಯಲ್ಲಾ ಶೃಂಗಾರ ಮಾಡಿಕೊಂಡರ ಏನು ಬಂತು? ಈ ಊರಿನ ಗತಿ ಈಗ ಹಾಗs ಆಗ್ಯದ. ಲಕ್ಷ್ಮಿ ಬಂದರ, ಲಕ್ಷಣ ಬರ್ತದ ಅಂತಾರ. ಆದರ, ಇಲ್ಲೆ, ಕೈಗೆ ಬಂದ ದುಡ್ಡು ಎಲ್ಲಿ ಕರಗ್ತದೊ ಅಂತ ಬಚ್ಚಿಟ್ಟುಕೊಂಡು ದಾನಧರ್ಮ ಎಲ್ಲಾ ಬಿಟ್ಟು ಕೂತಾರ. ಎಲ್ಲಾರೂ

ಧನಪಿಶಾಚಿ ಆಗ್ಯಾರ. ಒಬ್ಬರಿಗೊಬ್ಬರು ನೆರವಾಗೋದು ಬಿಟ್ಟು, ಹರಕೊಂಡು ತಿನ್ನತಾರ."

ನೀಲಿಯ ಮನೆ ಬಂತು. ಅವಳು ಮನೆಯಲ್ಲಿ ಕಾಲಿಡುತ್ತಾ, ರಾಮದಾಸುವನ್ನೂ ಸಹ ಒಳಗೆ ಕರೆದಳು. ಪುಟ್ಟ ಕಂದೀಲಿನಿಂದ ಬೆಳಗಿದ್ದ ಕೋಣೆಯಲ್ಲಿನ ಮಂಚದ ಮೇಲೆ ಮಗು ಮಲಗಿತ್ತು. ಮಗುವಿನ ಕಾಲುಗಳ ಬಳಿ ಕುಳಿತ ನೀಲಿಯ ಅಜ್ಜಿ ಮುಸಿಮುಸಿ ನಗುತ್ತಿದ್ದಳು. ಇನ್ನೂ ಮೂರು ತಿಂಗಳು ಕೂಡ ತುಂಬದ ಕೂಸು, ದೀಪದತ್ತ ಮುಖ ಮಾಡಿ, ಅದನ್ನೆ ನೋಡುತ್ತ ನಗುತ್ತಿತ್ತು.

ರಾಮದಾಸು ಮಂಚದ ಬಳಿ ಹೋಗಿ, ಮಗುವನ್ನು ನೋಡಿದ. ಕೂಸು ಕೈಕಾಲು ಗಳನ್ನು ಆಡಿಸುತ್ತಾ, ನಗುತ್ತಾ ಮಲಗಿದ್ದನ್ನು ನೋಡಿ, ಹೋಗಿ ಅದರ ಪಕ್ಕದಲ್ಲಿ ಕುಳಿತ. ಮಗುವನ್ನು ಎತ್ತಿ ಮುದ್ದಾಡಿದ. ಕೇಕೆ ಹಾಕುತ್ತಿದ್ದ ಮಗುವನ್ನು ಎತ್ತಿ— "ಆಗಲೇ ಅಮ್ಮಾ ಅಂತಾನಲ್ಲ"—ಎಂದ.

ಅಲ್ಲಿಯೇ ಇದ್ದ ಪುಲ್ಲಯ್ಯ, ಗಬಕ್ಕನೆ—"ಅಮ್ಮಾ ಅಲ್ಲ, ಅಪ್ಪ ಅಂತಾನ"—ಎಂದ.

"ಇರ್ಲಿ ಬಿಡೊ...... ಅದರೊಳಗೇನದ. ಹಂದಿ ಹತ್ತು ಮರಿ ಹಾಕಿದರೇನು? ಆನೆ ಒಂದು ಮರಿ ಹಾಕಿದರೇನು? ನಿಮ್ಮ ರಕ್ತ ಹಂಚಿಕೊಂಡು, ನಿಮ್ಮ ಊಟದಾಗ ಪಾಲು ಪಡೆದು ದೊಡ್ಡವನಾಗುವ ನಿಮ್ಮ ಈ ಮಗನಾದರೂ ಹೆಚ್ಚುತ್ತಿರುವ ಅನ್ಯಾಯ ವನ್ನು ಸರಿಪಡಿಸುವಂತಾಗಲಿ"—ರಾಮದಾಸು ಹರಸಿದ.

ಇದನ್ನು ಕೇಳಿ ದಂಪತಿಗಳ ಮುಖ ಸಂತೋಷದಿಂದ ಅರಳಿತು. ರಾಮದಾಸು ಅಲ್ಲೀದೆದ್ದು ಹೊರಹೋಗುತ್ತಾ, "ಏನವ್ವಾ, ಮರಿ ಮೊಮ್ಮಗನ ಮದುವೆ ನೋಡ್ತಿಯೊ ಇಲ್ಲೊ"—ಎಂದು ಮುದುಕಿಯನ್ನು ಮಾತನಾಡಿಸಿದ.

"ನಂದೇನದ, ಎಲ್ಲಾ ಆಯ್ತಲ್ಲ. ನನ್ನ ತಲೆಯ ಮೇಲಿನ ನೆರಳು ಹೋದ ದಿನನ ನಾನೂ ಸತ್ತೆ"—ಮುದುಕಿ ಹೇಳಿದಳು.

ಮುದುಕಿಯ ಗಂಡ ಎಂತಹವನಿದ್ದನೆಂಬುದನ್ನು ಅರಿತಿದ್ದ ರಾಮದಾಸು, ತನ್ನಷ್ಟಕ್ಕೆ ತಾನು ನಕ್ಕಾಗ, ಮುದುಕಿ ಅವನ ನಗುವಿನ ಹಿಂದಿದ್ದ ಅರ್ಥವನ್ನು ಮನಗಂಡು, "ನನ್ನ ಗಂಡ ಕೆಟ್ಟವನೆಂದು ಇಡೀ ಲೋಕವೇ ಅಂದರೂ, ನನ್ನ ಪಾಲಿಗೆ ಆತ ಒಳ್ಳೆಯವನಾಗಿದ್ದ. ಮನುಷ್ಯರಾಗಿ ಹುಟ್ಟಿದ ಮ್ಯಾಲೆ ಯಾರನ್ನಾದರೂ ನಂಬಿಕೊಂಡು ಜೀವಿಸಲೇಬೇಕು. ನನ್ನ ಗಂಡ ಹೇಗಿದ್ದನೊ—ಏನೊ, ಅವನು ಒಳ್ಳೆಯವನೆಂದು ನಂಬಿ ಬದುಕು ಸಾಗಿಸಿದೆ. ನಂಬಿಕೆಯಿಂದ ಬಾಳ್ವೆ ನಡೆಸುವದು ಕೂಡ ಒಂದು ಪುಣ್ಯ"—ಎಂದಳು.

ರಾಮದಾಸು, ಮುದುಕಿಗೆ ನಮಸ್ಕರಿಸಿ ಹೊರಟವನು. "ನೋಡು ಪುಲ್ಲಯ್ಯ, ನಾಲ್ಕು ಜನರ ಜತಿ ಬದುಕಬೇಕಾದರ, ಒಬ್ಬರಿಗಾದರೂ ಕೆಡುಕು ಮಾಡಬೇಕಾಗ್ತದ. ಆ ನಾಯ್ಡು, ಸಹಕಾರಿ ಸಂಘದ ಬೋರ್ಡ್ ಹಾಕಿದ. ದೇಸಾಯರು, ಶಾನುಭೋಗರು ಮತ್ತ ಮಿಾಸೆ ಹೊತ್ತ ಇತರ ಜನರು ಅವನ ಜತಿ ಆದರು. ನ್ಯಾಯ ಅಂಬೋದು

ಅಡವಿ ಪಾಲಾತು. ನಾಡು ಕಾಡಾಯಿತು. ಸರ್ಕಾರದವರು ನಾಲ್ಕು ಜನರಿಗೆ ಒಳ್ಳೇದಾಗಲಿ ಅಂತ ಮಾಡಿದ ಕೆಲಸಕ್ಕ ಇವರು ನೊಣ ಮುಕುರಿದ್ಹಾಂಗ ಮುಕ್ಕಿಕೊಂಡು, ತಮ್ಮ ಅನುಕೂಲ ನೋಡಿಕೊಂಡರು. ಇವರ್ನ ನೋಡಿದರ ನನ್ನ ಹೊಟ್ಟಿ ಉರೀತದ, ಈ ಚಂಡಾಲರಿಂದ ಊರು ಪಾರಾಗಲಿ ಅಂತ, ಮಹಾತಾಯಿ ನೀಲಮ್ಮನ್ನ ದಿನನಿತ್ಯ ಬೇಡಿಕೊಳ್ತೀನಿ......"

"ಅಯ್ಯ, ಇದಕ್ಯಾಕ ಇಷ್ಟು ಒದ್ದಾಡ್ತಿ...... ಇಂದಿಲ್ಲ ನಾಳೆ, ತಮ್ಮತಮ್ಮೊಳಗ ಜಗಳಾಡಿಕೊಂಡು ಸಾಯ್ತಾರ."

"ಬ್ಯಾಡ ಪುಲ್ಲಯ್ಯ, ಹಾಂಗನ್ನ ಬ್ಯಾಡ. ಅವರು ಬೇಕಾದರ ನೂರು ವರ್ಷ ಬದುಕಲಿ. ಅವರು ಸತ್ತರ ನಮಗೇನೂ ಬರಾಣಿಲ್ಲ. ಅವರಿಗೆ ದೇವರು ಒಳ್ಳೆ ಬುದ್ದಿ ಕೊಡಲಿ—ಸಾಕು. ಅವರ ಹತ್ತಿರ ದುಡ್ಡಿದ್ದರ, ತಿಂದುಂಡು ಹಾಯಾಗಿರಲಿ, ಯಾರು ಬ್ಯಾಡಾಂತರ? ಆದರ ಬಡವರ ಮ್ಯಾಲೆ ಸ್ವಲ್ಪ ಕರುಣೆ ತೋರಿಸಲಿ...... ದೇವರು—ದಿಂಡರು—ಅಂತ ಭಕ್ತಿ ಇಟ್ಟುಕೊಳ್ಳದ್ದಕ್ಕ, ನಮಗ ಈ ಗತಿ ಬಂದದ. ದೇವಿ ಪೂಜಾ ಮಾಡಿಸಿ, ರಥೋತ್ಸವ ಮಾಡಿಸಿದರ, ಸಮೃದ್ಧವಾದ ಬೆಳೆ ಬಂದು, ಎಲ್ಲಾರೂ ಸುಖವಾಗಿರ ಬಹುದು."

ಪುಲ್ಲಯ್ಯ ಅಂಗಳದ ವರೆಗೂ ಹೋಗಿ ರಾಮದಾಸುವನ್ನು ಕಳುಹಿಸಿ ಬಂದ. ನೀಲಿ, ಮಗನಿಗೆ ಹಾಲು ಕುಡಿಸುತ್ತಿದ್ದಳು. ಮುದುಕಿ, ಮೂಲೆ ಹಿಡಿದು ಮಲಗಿದ್ದಳು. ಪುಲ್ಲಯ್ಯ ಹೋಗಿ ಮಂಚದ ಮೇಲೆ ಕುಳಿತು, "ಯಾಕೊ ಈ ಊರಿನ ವ್ಯವಹಾರಾ ಸರಿಯಿಲ್ಲ"—ಅಂದ.

"ಯಾಕ, ಏನಾಯಿತು?"—ನೀಲಿ ಕೇಳಿದಳು.

"ರಾಷನ್ನು-ಮಣ್ಣು-ಮಸುಡಿ-ಅಂತ ನಮಗೇನೊ ದೊಡ್ಡದಾಗಿ ಕಾರ್ಡು ಕೊಟ್ಟಾರ. ಆದರ, ರಾಷನ್ನಿನ್ಯಾಗ ನಮಗ ಸಿಗೋದು ಬರೀ ಗಂಜಿ—ಅಂಬಲಿ. ಅದೇ ಆ ನಾಯ್ಡುನ ಮನ್ಯಾಗ ಅಕ್ಕಿ ಚೀಲ ರಾಶಿಯಾಗಿ ಬಿದ್ದಾವ. ನಮಗ ಅಂದರ ನಮ್ಮ ಪಾಲಿನ ಅಕ್ಕೀನ್ನ, ಪಟ್ಟಣದವರಿಗೆ ಮಾರಿ ದುಡ್ಡು ಮಾಡಿಕೊಂಡು ಬಂಗಲೇ ಕಟ್ಟಿಸಿಕೊಂಡು ಹಾಯಾಗಿದ್ದಾರ ಈ ನನ್ನ ಮಕ್ಕಳು. ನಾವು ಮಾತ್ರ ಉಪವಾಸ ಬಿದ್ದು......" ಪುಲ್ಲಯ್ಯ ಕೋಪದಿಂದ ಕೂಗಾಡ ಹತ್ತಿದ.

ನೀಲಿ ಯಾವ ಮಾತೂ ಆಡದೆ, ಮಗನನ್ನು ಎತ್ತಿ ಮಂಚದ ಮೇಲೆ ಮಲಗಿಸಿದಳು. ಊಟವಾಯಿತು. ಪುಲ್ಲಯ್ಯ ಕೈತೊಳೆದು, ಮನೆಯ ಮುಂದಿನ ಜಗುಲಿಯ ಮೇಲೆ ಕುಳಿತ. ನೀಲಿ, ಅಡಿಗೆ ಮನೆಯ ಕೆಲಸ ಮುಗಿಸಿಕೊಂಡು, ಆಡುತ್ತಾ ಮಲಗಿದ್ದ ಮಗನ ಬಳಿ ಕುಳಿತಳು. ಅಷ್ಟರಲ್ಲಿ, ಅದೇ ದಾರಿಯಲ್ಲಿ ಹೋಗುತ್ತಿದ್ದ ಸಂಜೀವಿ, 'ಪುಲ್ಲಯ್ಯ' —ಎಂದು ಕರೆದ. ಪುಲ್ಲಯ್ಯ, 'ಏನು ಸಂಜೀವಿ'—ಎಂದು ಕೇಳಿದಾಗ, ಅವನೂ ಬಂದು ಜಗುಲಿಯ ಮೇಲೆ ಕುಳಿತುಕೊಂಡ.

ಸಂಜೀವಿ, ಆ ಊರಿನಲ್ಲಿ ಕುಳ್ಳನೆಂದು ಪ್ರಸಿದ್ಧಿಯಾಗಿದ್ದ. ಕುಳ್ಳನಾದರೂ, ಗರಡಿ ಮನೆಯಲ್ಲಿ ಸಾಮು ಹಾಕಿ, ಅಂಗಸೌಷ್ಠವವನ್ನು ಬೆಳೆಸಿಕೊಂಡಿದ್ದ. ಅದರೊಡನೆ ಮುಖವನ್ನು ಆವರಿಸುವಂತೆ ಗಿರಿಜಾ ಮೀಸೆ ಬೆಳೆಸಿದ್ದ. ಯಾವಾಗಲೂ ಕೈಯಲ್ಲಿ ಕೋಲು ಹಿಡಿದು ಹೊರಡುತ್ತಿದ್ದ ಸಂಜೀವಿ, ವಯಸ್ಸಿನಲ್ಲಿ, ಪುಲ್ಲಯ್ಯನಿಗಿಂತ ಹತ್ತು ವರ್ಷ ದೊಡ್ಡವನು. ಕುಳ್ಳನಿಗೆ ಕೋಟಿ ಬುದ್ಧಿ ಅಂತಾರ. ಸಂಜೀವಿ ಕೂಡ ಪ್ರಚಂಡ ನಾಗಿದ್ದ. ಸರ್ಕಾರವನ್ನೆ ಎದುರು ಹಾಕಿಕೊಂಡ ಗಟ್ಟಿಗನಾಗಿದ್ದ. ಆ ದಿನಗಳಲ್ಲಿ ಕಳ್ಳಭಟ್ಟಿ ಇಟ್ಟು, ಸರ್ಕಾರಿ ಅಧಿಕಾರಿಗಳಿಗೆ ತಲೆನೋವಾಗಿದ್ದ. ಸಂಜೀವಿಯ ಇರುವನ್ನು, ಅವನು ಭಟ್ಟಿ ಇಟ್ಟಿದ್ದ ಸ್ಥಳವನ್ನು ಪತ್ತೆ ಹಚ್ಚಲು, ಎಂತೆಂಥವರಿಗೂ ಸಾಧ್ಯವಾಗಿರಲಿಲ್ಲ. ಸಂಜೀವಿಯನ್ನು ಹಿಡಿದುಕೊಟ್ಟವರಿಗೆ ಐನೂರು ರೂಪಾಯಿ ಬಹುಮಾನ ಕೊಡುವು ದಾಗಿ ಸರ್ಕಾರ ಪ್ರಕಟಿಸಿತ್ತು. ಅದಾದ ಒಂದು ವರ್ಷದ ವರೆಗೂ, ಸಂಜೀವಿ ಪೋಲೀಸರ ಕೈಗೆ ಸಿಗಲಿಲ್ಲ. ಕೊನೆಗೆ ಚಾಣಾಕ್ಷನಾದ ಒಬ್ಬ ಇನ್ಸ್‌ಪೆಕ್ಟರ್, ಊರಿನಲ್ಲಿ ನಾಲ್ಕು ದಿನ ಇದ್ದು, ಸಂಜೀವಿಯ ಗುಟ್ಟು ಅರಿಯುವಲ್ಲಿ ಯಶಸ್ವಿಯಾದ. ಆ ಇನ್ಸ್‌ಪೆಕ್ಟರ್, ಉತ್ತರದಿಂದ ಒಬ್ಬ ಜಟ್ಟಿ ಬಂದಿರುವುದಾಗಿಯೂ, ಅವನನ್ನು ಎದುರಿಸುವ ಗಂಡಸು ಯಾರಾದರೂ ಇದ್ದಲ್ಲಿ, ಇಂತಹ ದಿನ, ಇಂತಹ ಗ್ರಾಮದ ಬಳಿ ಒಂದು ಸವಾಲನ್ನು ಅಂಗೀಕರಿಸಬೇಕೆಂದೂ, ಸುತ್ತಮುತ್ತಲಿನ ನಾಲ್ಕು ಹಳ್ಳಿಗಳಲ್ಲಿ ಡಂಗುರ ಸಾರಿಸಿದ. ಉತ್ತರದ ಆ ಜಟ್ಟಿಯನ್ನು ನೋಡಿದವರೆಲ್ಲರೂ, ನಿಜವಾಗಿಯೂ ಗಾಬರಿಗೊಂಡರು. ಆಗ, ಊರಿನ ಜಗಜಟ್ಟಿ ಎನ್ನಿಸಿಕೊಂಡಿದ್ದ ಸಂಜೀವಿಯ ಬಗ್ಗೆ, ಊರಿನ ಜನರು ತಲಾ ಒಂದು ಮಾತನಾಡಿದರು. ಇದನ್ನು ಕೇಳಿಸಿಕೊಂಡ ಸಂಜೀವಿ, ಊರಿನ ಹೆಸರನ್ನು. ತನ್ನ ಮರ್ಯಾದೆಯನ್ನು ಉಳಿಸಿಕೊಳ್ಳುವ ಛಲದಿಂದ, ಎಲ್ಲಿಂದಲೊ ಬಂದು ಅಖಾಡಾಕ್ಕಿಳಿದ. ಎಲ್ಲರೂ ಕಣ್ಣುಬಿಟ್ಟು ನೋಡುವುದರೊಳಗಾಗಿ, ಸಂಜೀವಿ, ಉತ್ತರದ ಆ ಜಟ್ಟಿಗೆ ಮಣ್ಣು ಮುಕ್ಕಿಸಿದ್ದ. ಆದರೆ, ತಾನು ಸ್ವತಃ ಪೋಲೀಸರ ಕೈಯಲ್ಲಿ ಸಿಕ್ಕಿ ಹಾಕಿಕೊಂಡ. ಸಂಜೀವಿಯನ್ನು ಬಿಡಿಸಿಕೊಳ್ಳಲು ಊರಿನ ಜನರು ಮುಂದಾದರು. ಜನರ ಗದ್ದಲ ಹೆಚ್ಚಾದಾಗ, ಪೋಲೀಸರು ಗುಂಡು ಹಾರಿಸಿದರು. ಅಂತೂ, ಸಂಜೀವಿ ಮೂರು ವರ್ಷ ಜೇಲಿನಲ್ಲಿದ್ದು ಬಂದ. ಊರಿಗೆ ಬಂದವನು ತಲೆ ಎತ್ತಿ ತಿರುಗು ವಂತಿರಲಿಲ್ಲ. ಅದೇ ಸಮಯದಲ್ಲಿ, ಅವನ ಪ್ರೀತಿಗೆ ಪಾತ್ರಳಾಗಿದ್ದ ಹೆಣ್ಣು ಬೇರೆ ಯುವನನ್ನು ಕೂಡಿಕೊಂಡಿದ್ದಳು. ತನ್ನ ಪ್ರೇಯಸಿ, ಬೇರೆಯವರ ತೋಳತೆಕ್ಕೆಯಲ್ಲಿರುವು ದನ್ನು ಸಹಿಸದಾದ ಸಂಜೀವಿ, ಕೈಯಲ್ಲಿ ಕತ್ತಿ ಹಿಡಿದು ಅವಳ ಮನೆಗೆ ನುಗ್ಗಿದ. ಕೋಪಾವೇಶದಿಂದ ಕೆಂಡವಾಗಿದ್ದ ಸಂಜೀವಿಯನ್ನು ನೋಡಿ, "ಬಾ, ಬಾ...... ಈಗ ನನ್ನ ಕೊಲ್ಲಲಿಕ್ಕೆ ಬಂದಿ ಅಲ್ಲs...... ಬಾ...... ಇಷ್ಟು ದಿನ ನಾನು ಹ್ಯಾಂಗ ಬದುಕಿದೆ—ಅಂತ, ಹೊಟ್ಟಿ ಹ್ಯಾಂಗ ತುಂಬಿಕೊಂಡೆ ಅಂತ ಒಮ್ಮೆ ಆದರೂ ವಿಚಾರ ಮಾಡಿ ಏನು? ನೀನೇನೊ ಜೇಲು ಸೇರಿ ಹಾಯಾಗಿದ್ದಿ. ಆದರ ನನ್ನ ಗತಿ ಏನು ಅಂತ

ನೀನು ವಿಚಾರಿಸಲಿಲ್ಲ...... ಆಯ್ತು...... ಎಲ್ಲಾ ನನ್ನ ಹಣೆಬರಹ...... ಹೋಗು, ಇಲ್ಲಿಂದ ಸುಮ್ಮನೆ ಹೋಗು. ಹೋಗಿ, ಸಾಧ್ವಿಯಾದ ಹೆಂಡತಿ ಜೊತೆ ಸಂಸಾರ ಕಟ್ಟಿಕೊಂಡು ಹಾಯಾಗಿರು. ಇಷ್ಟು ದಿನ ಅವಳ ಜೀವ ತಿಂದಿ, ಈಗಾದರೂ ಅವಳಿಗೆ ಸುಖ ಕೊಡು ಹೋಗು. ಇಂದಿನಿಂದ ನೀನು ನನ್ನ ತಮ್ಮನ ಸಮಾನ. ಹಿರಿಯಳಾಗಿ ಹೇಳ್ತೀನಿ. ಇಲ್ಲಿಂದ ಹೋಗು"—ಎಂದು ಬುದ್ಧಿ ಹೇಳಿದಳು. ಅವಳು ಕೂಡಿಕೊಂಡ ಹೆಣ್ಣಾಗಿದ್ದರೂ ಸಂಜೀವಿಗೆ ಆ ರೀತಿ ಬುದ್ಧಿ ಹೇಳಿದ್ದು ಒಂದು ರೀತಿ ಯಿಂದ ಸರಿಯಾಗಿತ್ತು. ಏಕೆಂದರೆ, ಅವಳು, ವಯಸ್ಸಿನಲ್ಲಿ, ಸಂಜೀವಿಗಿಂತ ದೊಡ್ಡವ ಳಾಗಿದ್ದಳು—ಅವಳನ್ನು ಕೊಲ್ಲಲು ತನ್ನ ಕೈಲಾಗದೆಂದು ಸಂಜೀವಿಗೆ ತಿಳಿದಾಗ, ಅವನು ಅಲ್ಲಿಂದ ನೇರವಾಗಿ ನದಿ ದಂಡೆಗೆ ಹೋಗಿ ಕುಳಿತ. ನಡುರಾತ್ರಿಯಾದರೂ, ತನ್ನ ಗತಜೀವನದ ಬಗ್ಗೆ ಮೆಲುಕುಹಾಕುತ್ತಾ ಕುಳಿತಿದ್ದ ಸಂಜೀವಿ, ಧಿಗ್ಗನೆದ್ದು ಕೈಯಲ್ಲಿದ್ದ ಕತ್ತಿಯನ್ನು ನದಿಯಲ್ಲಿ ಎಸೆದ. ಹಾಗೆಯೇ ಧಡಧಡ ನೀರಿಗಿಳಿದು ಮೂರು ಸಲ ಮುಳುಗು ಹಾಕಿದ. ಒದ್ದೆ ಮುದ್ದೆಯಾದ ಆ ಬಟ್ಟೆಯಲ್ಲೆ ಮನೆಗೆ ಹೋಗಿ ಬಾಗಿಲು ತಟ್ಟಿದ. ಹೆಂಡತಿಯೇ ಬಂದು ಬಾಗಿಲು ತೆರೆದಾಗ, ಸಂಜೀವಿ ಅವಳನ್ನು ಅಲ್ಲಿಯೇ ಬಿಗಿದಪ್ಪಿ ಕಣ್ಣೀರು ಸುರಿಸಿದ. ಇನ್ನು ಮುಂದೆ ಬೇರೆ ಹೆಣ್ಣನ್ನು ತಲೆ ಎತ್ತಿ ನೋಡುವು ದಿಲ್ಲವೆಂದು ಶಪಥಮಾಡಿದ. ಹೆಂಡತಿ ಅವನ ಕಣ್ಣೊರಸಿ ಮುದ್ದಾಡಿದಳು. ಅವನನ್ನು ಅಪ್ಪಿ ಸಹಿಸಲಾಗದ ಸಂತೋಷದಿಂದ ಕಣ್ಣೀರಿಟ್ಟಳು.

ಸಂಜೀವಿ, ಅಂದಿನಿಂದ ತನ್ನ ಗ್ರಹಗತಿಯೆ ಬದಲಾಯಿಸಿತೆಂದು ಹೇಳುತ್ತಿದ್ದ. ಹೊಲದಲ್ಲಿ ಮೈಮುರಿಯುವ ಹಾಗೆ ದುಡಿದು, ನನ್ನವರು, ನನ್ನದು—ಎಂಬ ಮಮ ಕಾರ ಬೆಳೆಸಿಕೊಂಡ. ವರ್ಷದೊಳಗಾಗಿ, ಅವರ ಮನೆಯಲ್ಲಿ ತೊಟ್ಟಿಲು ತೂಗುತ್ತಿತ್ತು. ಅಂತೂ ಒಡೆದು ಹಾಳಾಗಿಹೋಗುತ್ತಿದ್ದ ಒಂದು ಮನೆ, ಒಂದು ಸಂಸಾರ ಉಳಿಯಿತು. ಸಂಜೀವಿಯ ಹೆಂಡತಿ ಒಳ್ಳೆಯವಳು—ತಿಳುವಳಿಕೆಯುಳ್ಳವಳು. ಸಂಜೀವಿ ಹೆಂಡತಿಯ ಆಜ್ಞಾಧಾರಕನಾದ. ಹಾಗೆ ನಡೆದುಕೊಂಡದ್ದರಿಂದಲೇ ನಾಲ್ಕೈದು ವರ್ಷಗಳಲ್ಲಿ ಅವನೂ ಒಬ್ಬ ಗಣ್ಯ ವ್ಯಕ್ತಿಯಾದ. ಸಂಜೀವಿ ಈಗ ಮೂರು ಮಕ್ಕಳ ತಂದೆಯಾದರೂ ಪರೆಯದ ಹುಡುಗರಂತಿದ್ದ. ಹುಲಿವೇಷ ಹಾಕಿಕೊಂಡು, ಮನೆಯ ಮಾಳಿಗೆ ಏರಿ, ಹಂಜವನ್ನು ಬಾಯಿಯಿಂದಲೇ ಕೊರಕಿಹಾಕುವಷ್ಟು ಶಕ್ತಿಯುಳ್ಳವನಾಗಿದ್ದ.

ಅಂತಹ ಸಂಜೀವಿ, ಪುಲ್ಲಯ್ಯನನ್ನು ಮಾತನಾಡಿಸಲು ಬಂದಿದ್ದ. ಇಬ್ಬರೂ ಊರಲ್ಲಿ ನಡೆಯುತ್ತಿದ್ದ ಅನ್ಯಾಯದ ಬಗ್ಗೆ ಮಾತನಾಡಿಕೊಳ್ಳುತ್ತಿದ್ದರು. ಏರುತ್ತಿರುವ ಬೆಲೆ ಗಳು, ಅದರಿಂದಾಗಿ ಉಂಟಾಗಿರುವ ಹಾಹಾಕಾರ, ಬಡಜನರ ದುಸ್ಥಿತಿ—ಎಲ್ಲದರ ಬಗ್ಗೆಯೂ ಚರ್ಚಿಸಿದರು. "ಊರಿನ ಹಿರೇರು, ಮುಖಂಡರು ಏನೂ ಮಾಡದ ಸುಮ್ಮನೆ ಕುಂತಾರ. ನಾವಾದರೂ ಹೋಗಿ, ಆ ದೇಸಾಯರ್ನ, ನಾಯ್ಡುನ್ನ ಕೇಳ ಬೇಕು"—ಎಂದ ಪುಲ್ಲಯ್ಯ.

ಅದೇ ಹೊತ್ತಿಗೆ, ಮಗನನ್ನು ಎತ್ತಿಕೊಂಡು ಬಾಗಿಲಿಗೆ ಬಂದಿದ್ದ ನೀಲಿ, "ನೀವು ಮಾತಾಡಿದ್ದು ಎಲ್ಲಾ ಕೇಳಿದೆ. ನಾಳೆ ಆ ನಾಯ್ಡು, ನಿಮ್ಮ ರೇಷನ್ನು ನೀವು ತೊಗೊಳ್ರಿ, ನಿಮಗಾಗಿರುವ ಬಟ್ಟೆ ನೀವು ಕೊಳ್ರಿ ಅಂತ ಹೇಳಿದ್ರ, ಎಷ್ಟು ಮಂದಿ ಹತ್ತರ ದುಡ್ಡದ ಅಂಬೋದನ್ನ ಯೋಚಿಸ್ರಿ"—ಎಂದು ಹೇಳಿದಳು.

"ಖರೆ ಹೇಳಿದಿ ನೋಡು" ಸಂಜೀವಿ ತಲೆದೂಗಿದ.

"ಖರೆ ಏನು ಬಂತು? ನಮಗಂತ ಸರ್ಕಾರ ಕೊಟ್ಟ ಅಕ್ಕಿ, ಬಟ್ಟೆ ತೊಗೊಳ್ಳೊ ತಾಕತ್ತು ನಮಗಿರದಿದ್ದರ, ಹಾಂಗ ಅಂತ ಹೇಳಿ ಅದನ್ನ ಸರ್ಕಾರಕ್ಕ ವಾಪಸ್ ಕೊಡ ಬೇಕು. ಅದನ್ನ ಬಿಟ್ಟು ಈ ಮಕ್ಕಳು ನಮ್ಮ ಹೆಸರು ಹೇಳಿ, ನಮ್ಮ ಹೊಟ್ಟೆ ಮ್ಯಾಲ ಹೊಡದು, ದುಡ್ಡಿ ಮಾಡಿಕೊಂಬೋದು ಎಲ್ಲಿ ನ್ಯಾಯ...... ಎಲ್ಲಾರೂ ಲುಚ್ಚೇರು, ಎಲ್ಲಾನೂ ಮೋಸ."

ಗಂಡನ ಆವೇಶ ನೋಡಿ ನೀಲಿ ನಕ್ಕಳು. ಪುಲ್ಲಯ್ಯ ರೇಗಿಕೊಂಡು, "ನಾಳೆ ಹೋಗಿ ಆ ಸ್ಟೋರಿನ ಹತ್ತಿರ ಕೂಡ್ತೀನಿ. ಬಂದು ಹೋಗೋವರಿಗೆಲ್ಲ, ಊರಾಗ ನಡೀತಿರೋ ಈ ಅನ್ಯಾಯ ಹೇಳ್ತೀನಿ"—ಎಂದ.

"ಆ ನಾಯ್ಡು ನಾಳೆ ನಿನಗ ತಿರುಗಿಬಿದ್ದರ?"

"ಯಾಕ ತಿರುಗಿ ಬೀಳ್ತಾನ. ಹಾಂಗೇನಾದರೂ ಮಾಡಿದರ, ಸರ್ಕಾರದವರಿಗೆ, ಮೇಲಿನ ಅಧಿಕಾರಿಗಳಿಗೆ ಹೇಳ್ತೀನಿ."

ಆ ಸ್ಟೋರು, ಆ ಸ್ಟೋರಿನ ವ್ಯಾಪಾರ–ವ್ಯವಹಾರ ಅರಿತಿದ್ದ ಸಂಜೀವಿ, "ಲೇ ಪುಲ್ಲಯ್ಯ, ಸುಮ್ಮನಿರು. ಇಲ್ಲದ್ದ ಪಾರುಪತ್ಯ ಮಾಡಬ್ಯಾಡ"—ಎಂದು ಬುದ್ಧಿ ಹೇಳಿ ಅಲ್ಲಿಂದ ಎದ್ದ.

"ನೋಡವ್ವಾ ನೀಲಿ, ಹುಲ್ಲಿನ ಬಣವೆ ಹತ್ತರ ನಾಯಿಯನ್ನು ಕಾಯಲಿಕ್ಕಿಡತಾರ—ಯಾಕ ಗೊತ್ತೇನು? ನಾಯಿ ಹುಲ್ಲು ತಿನ್ನೋದಿಲ್ಲ, ಇನ್ನೊಬ್ಬರಿಗೆ ತಿನ್ನಲಿಕ್ಕೆ ಬಿಡಾ ಣಿಲ್ಲ. ಊರಿನ ಈ ಹಿರೇರು, ಈ ಮುಖಂಡರ ದ್ವೇಷ ಕಟ್ಟಿಕೊಂಡು ಊರಾಗಿರಲಿಕ್ಕೆ ಸಾಧ್ಯಯಿಲ್ಲ. ಅದಕ್ಕ ಹೇಳ್ತೀನಿ ಪುಲ್ಲಯ್ಯ, ಅವರ್ನ ಕೆಣಕ ಬ್ಯಾಡಾಂತ. ತಾಯಿ–ತಂದೆ ಹೋದರೂ ಬದುಕಬಹುದಾಗಲಿ, ಈ ಜನರ ದ್ವೇಷ ಕಟ್ಟಿಕೊಂಡು ಊರಾಗಿರಲಿಕ್ಕಿಲ್ಲ, ಬದುಕಲಿಕ್ಕೆ ಸಾಧ್ಯವಿಲ್ಲ. ಅದೂ ಅಲ್ಲದ, ನಾಳೆ ಏನಾದರೂ ಹೆಚ್ಚುಕಡಿಮೆ ಆದರ, ಈ ದೊಡ್ಡವರ ನಮಗ ಸಹಾಯ ಮಾಡಬೇಕs ಹೊರತಾಗಿ, ಗತಿ ಇಲ್ಲದವರು ಏನು ಮಾಡ್ಯಾರು"—ಎಂದು ಹೇಳಿ ಸಂಜೀವಿ ಹೊರಟುಹೋದ.

ಪುಲ್ಲಯ್ಯ ಯಾವ ಮಾತೂ ಆಡದೆ, ಸ್ವಲ್ಪ ಹೊತ್ತು ಮೀಸೆಯ ಮೇಲೆ ಕೈ ಆಡಿ ಸುತ್ತಾ ಕುಳಿತು, ಆ ಮೇಲೆ ಎದ್ದು ಒಳಗೆ ಹೋದ. ಹೆಂಡತಿಯ ಮುಖ ನೋಡಿ, ಮಗನನ್ನು ಎತ್ತಿಕೊಂಡು ಹಾಗೆಯೇ ನೆಲದ ಮೇಲೆ ಉರುಳಿದ. ಮಗನನ್ನು ಎದೆಯ ಮೇಲೆ ಕೂಡಿಸಿಕೊಂಡು—"ಮಲ್ಲೇಶಿ, ನಿನ್ನ ತಾತ, ನಿಮ್ಮಪ್ಪ ನೀತಿಗೆ–ನ್ಯಾಯಕ್ಕ

ಕಟ್ಟು ಬಿದ್ದವರು...... ಇನ್ನ ನೀನು ಏನು ಮಾಡ್ತಿಯೊ ಏನೊ?"—ಎಂದು ಪ್ರಶ್ನಿಸಿದ.

ಮಗು ನಕ್ಕಾಗ, ಪುಲ್ಲಯ್ಯನಿಗೆ ಕಚಗುಳಿ ಇಟ್ಟಂತಾಯಿತು. ಮಗನನ್ನು ಮುದ್ದಾಡ ತೊಡಗಿದ.

## [ 14 ]

ಸಂಕ್ರಾಂತಿ ಬರುವ ವೇಳೆಗೆ, ಪುಲ್ಲಯ್ಯನ ಮಗ ಮಲ್ಲಯ್ಯ, ಗೊಂಬೆಗಳನ್ನು ಹಿಡಿದು ಕೊಂಡು ಆಡತೊಡಗಿದ್ದ. ಮನೆಯಲ್ಲಿನ ಸಾಮಾನುಗಳನ್ನು ಕಿತ್ತುಹಾಕಿ ತಂದೆಯ ಮುಖ ನೋಡಿ ನಸುನಗುತ್ತಿದ್ದ. ಪುಲ್ಲಯ್ಯನ ಸಂತೋಷ ಹೇಳತೀರದು. ಅವನು ಉತ್ಸಾಹದಿಂದ, "ಧಿನಕ್...... ಧಿನಕ್ ಝುಂಜಿನಕಡಿ" —ಎಂಬ ತಮಟೆಯ ನಾದ ವನ್ನು ಬಾಯಿಯಿಂದಲೇ ಹೇಳುತ್ತಾ ಮಗನ ಮುಂದೆ ಕುಣಿದಾಡಿದ...... ಮಗ, ತನ್ನ ಕುಣಿತಕ್ಕೆ ತಕ್ಕಂತೆ ಚಪ್ಪಾಳೆ ತಟ್ಟುತ್ತಿರುವಂತೆಯೂ...... ಬಾಯಿ ತೆರೆದು ಕೇಕೆ ಹಾಕುತ್ತಿರುವಂತೆಯೂ ಪುಲ್ಲಯ್ಯ ಭ್ರಮೆಪಡತೊಡಗಿದ. ಒಂದು ಸಲ ಅವನು ಮಗುವನ್ನು ಮೇಲಕ್ಕೆತ್ತಿ ಹಿಡಿದ. ಆದರೂ ಮಗು, ಇತರ ಮಕ್ಕಳಂತೆ ಭಯಪಡದೆ ನಕ್ಕಿತು. ಆದರೆ, ಮುದುಕಿ ಮಾತ್ರ ಪುಲ್ಲಯ್ಯನನ್ನು ತರಾಟೆಗೆ ತೆಗೆದುಕೊಂಡಳು.

"ಯಾರಂತ ತಿಳಿದೀದಿ—ಕಣ್ಣು ತೆರೆದು ನೋಡು. ನಾನು ತಲೆ ಕೆಳಗಾಗಿ ನಿಂತಾಗ, ನನ್ನ ಈ ಮಗ ಸರಸರನೆ ಮೇಲೇರಿ ನನ್ನ ಕಾಲುಗಳ ಮೇಲೆ ನಿಂದರತಾನೊ ಇಲ್ಲೊ ನೋಡು."

ಮಲ್ಲೇಶಿಗೆ ಇನ್ನೂ ಆರು ತಿಂಗಳು ಕೂಡ ತುಂಬಿರಲಿಲ್ಲ. ಆಗಲೆ ಎದ್ದು ಕೂಡ ತೊಡಗಿದ. ಅದನ್ನು ನೋಡಿದ ಪುಲ್ಲಯ್ಯ, "ನೋಡಿದಿಲ್ಲ ಹ್ಯಾಂಗ ಎದ್ದು ಕೂತ ಕೊಂಡ. ಇನ್ನೇನು ಎದ್ದು ನಿಂತುಕೊಳ್ತಾನ......" ಎನ್ನುತ್ತ ಮಗನನ್ನು ಎತ್ತಿ ಮುದ್ದಾಡಿದ.

ಮುದುಕಿ, ತನ್ನ ಬೊಚ್ಚು ಬಾಯಿ ತೆರೆದು ನಗುತ್ತಾ, "ವಯಸ್ಸಿಗೆ ತಕ್ಕ ಹಾಂಗ ಆಹಾರ, ಆಹಾರಕ್ಕ ತಕ್ಕಹಾಂಗ ಹುಡುಗರು ಬೆಳೀತಾರ...... ನಿನ್ನ ಮಗ ಇನ್ನೂ ಒಂದು ವರ್ಷದೊಳಗ, ತಪ್ಪೇಲಿಗೆ ತಪ್ಪೇಲಿನ ಖಾಲಿ ಮಾಡ್ತಾನ...... ಅಯ್ಯ ನನ್ನ ಜನ್ಮ ಹಾಳಾಗ...... ಕೂಸಿಗೆ ನನ್ನದs ದೃಷ್ಟಿ ತಾಕೀತು"—ಎಂದು, ಮೊಮ್ಮಗನ ಮುಖದ ಮೇಲೆ ಕೈಯಾಡಿಸಿ ಲಟಿಕೆ ಮುರಿದಳು.

ಮಲ್ಲೇಶಿ ದಿನದಿನಕ್ಕೆ ಬೆಳೆದು, ಎಲ್ಲರ ಮನಸ್ಸನ್ನೂ ಸೂರೆಗೊಂಡ.

ಈ ಸಲ ಬೆಳೆಗೆ, ಅಲ್ಲಲ್ಲಿ ಹುಳು ಹಿಡಿದಿದ್ದರೂ ಕೂಡ, ಫಸಲು ಚೆನ್ನಾಗಿಯೇ ಇತ್ತು..

ಆದರೂ, ಗೇಣಿಯ ಪಾಲು ಕೊಟ್ಟ ನಂತರ ಉಳಿದದ್ದು ತೀರ ಕಡಿಮೆಯಾಗಿತ್ತು. ಪುಲ್ಲಯ್ಯ ತನ್ನ ಸ್ವಂತ ಹೊಲದಲ್ಲಿ ಬೆಳೆದ ಧಾನ್ಯದಲ್ಲೆ ಸಂಸಾರ ನಡೆಸಬೇಕಾಗಿತ್ತು. ಮನೆಯಲ್ಲಿದ್ದ ಕಾಳು ಮುಗಿದಲ್ಲಿ, ರೇಷನ್ನಿಗೆ ದುಡ್ಡು ಒದಗಿಸುವುದು ಸುಲಭವಾಗಿರಲಿಲ್ಲ. ರಾಟೆಯಿಂದ ತೆಗೆದ ನೂಲು ಮಾರಿದಲ್ಲಿ ಬರುವ ಹಣ ಹೇಳಿಕೊಳ್ಳುವಷ್ಟಿರಲಿಲ್ಲ. ಏನಾದರೂ ಕೆಲಸ ಮಾಡಬೇಕೆಂದರೂ ಬೇಸಿಗೆ ಕಳೆಯುವ ವರೆಗೆ ಹಳ್ಳಿಗಳಲ್ಲಿ ಕೆಲಸವೇ ಇರುವುದಿಲ್ಲ.

ಬದುಕು ಕಷ್ಟವಾಗಿದ್ದರೂ ಕೂಡ, ಆ ಬಗ್ಗೆ ಯೋಚಿಸುವಷ್ಟು ವ್ಯವಧಾನ ಪುಲ್ಲಯ್ಯನಿಗಿರಲಿಲ್ಲ. ಮಗನ ಲಾಲನೆ–ಪಾಲನೆಯಲ್ಲಿ ಅವನು ಎಲ್ಲವನ್ನೂ ಮರೆತಿದ್ದ. ಮಲ್ಲೇಶಿ ಈಗ ಚಂದಿರನನ್ನು ನೋಡಿ, "ತಾರತಮ್ಮಯ್ಯ ತಾರಮ್ಮಯ್ಯ" ಮಾಡುವುದನ್ನು ಕಲಿತಿದ್ದ. ಅಂಗಳದಲ್ಲಿದ್ದ ಮರದ ಮೇಲೆ ಗುಬ್ಬಚ್ಚಿಗಳು ಕೂತು ಅರಚಿದಲ್ಲಿ, ತಲೆ ಎತ್ತಿ ನೋಡುತ್ತಿದ್ದ. ತಾಯಿ–ತಂದೆಯನ್ನು ಗುರುತಿಸಿ ನಗುತ್ತಿದ್ದ. ಅವರು ಎತ್ತಿ ಮುದ್ದಾಡದಿದ್ದಲ್ಲಿ ಅಳುತ್ತಿದ್ದ. ಆಗಲೇ ಅವನಿಗೆ ಹಲ್ಲುಗಳು ಬರಲು ಪ್ರಾರಂಭವಾಗಿದ್ದವು. ಅವನು ನಕ್ಕಾಗ, ಆ ಹಾಲು ಹಲ್ಲುಗಳು ಅಂದವಾಗಿ ಕಾಣುತ್ತಿದ್ದವು.

ಸರ್ಕಾರ ಆ ವರ್ಷದಿಂದಲೇ, ಧಾನ್ಯವನ್ನು ಸಂಗ್ರಹಿಸಲು ಪ್ರಾರಂಭಿಸಿತು. ಊರಿನಲ್ಲಿನ ಮುದುಕಿಯರು ಕೂಡ, ತಮಗೆ ಮಹಾ ಇಂಗ್ಲೀಷ್ ಬಂದವರಂತೆ, "ಪೊಕೂರಮೆಂಟ" (ಪ್ರೊಕ್ಯೂರಮೆಂಟ್) ಎಂದು ಮಾತನಾಡತೊಡಗಿದರು. ಅಂತೂ, ಧಾನ್ಯ ಸಂಗ್ರಹಣೆಗಾಗಿ ಸರ್ಕಾರ ಕೈಗೊಂಡ ಕ್ರಮಗಳಿಂದ ಗ್ರಾಮಸ್ಥರು ಭಯಭೀತರಾಗಿದ್ದರು. ಕೆಲವರು ಧೈರ್ಯವುಳ್ಳವರು, ಧಾನ್ಯ ಕೊಡುವುದಿಲ್ಲವೆಂದು ಪಟ್ಟುಹಿಡಿದರು. ನಾವು ನಮ್ಮ ಬೆವರು ಸುರಿಸಿ ಬೆಳೆದ ಧಾನ್ಯ ಸರ್ಕಾರಕ್ಕೆ ಕೊಡಬೇಕಂದರೆ—ಸರ್ಕಾರಕ್ಕೆ ನ್ಯಾಯ–ಅನ್ಯಾಯದ ಪರಿವೆಯೇ ಇಲ್ಲ—ಎಂದೆಲ್ಲ ಜನರು ಮಾತನಾಡಿಕೊಂಡರು. "ಬೆಳೆದು ನಿಂತ ಪೈರು ನೋಡಿ, ಯಾರ ಹೊಲದಾಗ ಎಷ್ಟು ಎಷ್ಟು ಧಾನ್ಯ ಬರಬಹುದೆಂಬೊದನ್ನ ಸರ್ಕಾರದವರು ಈಗಾಗಲೇ ಅಂದಾಜು ಲೆಕ್ಕ ಹಾಕಿಕೊಂಡಾರ. ಈಗ, ಆ ಸುಳ್ಳು ಲೆಕ್ಕ ತೋರಿಸಿ ಧಾನ್ಯ ಕೊಡ್ರಿ ಅಂತ ನಮಗ ಗಂಟು ಬಿದ್ದರ ಹ್ಯಾಂಗ. ಈಗ ನಾವು ಕೊಡಾಣಿಲ್ಲಾ ಅಂದರ, ಪೋಲೀಸರು ಬರ್‍ತಾರಂತ. ಹೆಚ್ಚು ಮಾತಾಡಿದರ, ಜೇಲಿನ್ಯಾಗ ಹಾಕ್ತಾರ"—ಎಂದು ನರಸಿಂಹ ಹೇಳಿದ.

"ನನ್ನ ಧಾನ್ಯ ಮುಟ್ಟಲಿಕ್ಕೆ ಯಾರಿಗೆ ಧೈರ್ಯ ಅದನೊ ಮುಂದ ಬರಲಿ. ಇದ್ದವರು ಮೊದಲು ಕೊಡಲಿ. ಇಸಕೊಳ್ಳೊವರು, ಮೊದಲು ಇದ್ದವರ ಹತ್ತಿರ ಇಸಕೊಂಡು, ಆಮ್ಯಾಲೆ ನಮ್ಮವರ ಹತ್ತಿರ ಬಂದರ ಅದೂ ಒಂದು ಮಾತು. ಇದ್ದವರನ್ನು ಬಿಟ್ಟು ಇರಲಾರದವರ ಜೀವ ಅರತೀನಿ ಅಂದರ......" ಎಂದು ಮೀಸೆ ಹುರಿಮಾಡಿದ ಪುಲ್ಲಯ್ಯ.

"ಈ ಸರೆ, ಏನೊ ಸುಮ್ಮನಿರಬಹುದು. ಆದರ ಮುಂದಿನ ವರ್ಷ ಮಿಡತೆಗಳ

ದಂಡಿನ ಹಾಂಗ ಬಂದು ಎಲ್ಲಾ ದೋಚಿಕೊಂಡು ಹೋಗ್ತಾರೇಳು"—ಎಂದು, ನರಸಿಂಹ ಭವಿಷ್ಯ ನುಡಿದ.

ಉತ್ತರಾಧಿಕಾರತ್ವದ ಕಾಯ್ದೆಗೆ ಅನುಗುಣವಾಗಿ, ಪಟ್ಟಣದಲ್ಲಿದ್ದ ಪ್ಲೀಡರ್ ಸೀತಾ ರಾಮಸ್ವಾಮಿಯ ಸಂತಾನ, ಊರಿನ ಶಾನುಭೋಗರ ಎಲ್ಲ ಕೆಲಸಕಾರ್ಯಗಳನ್ನು ನೋಡಿಕೊಳ್ಳಬೇಕಾಗಿತ್ತು. ಆದರೆ ಸೀತಾರಾಮಸ್ವಾಮಿ, ಈ ಕೆಲಸಕಾರ್ಯಗಳ ಹೊರೆ ಯನ್ನು ತಲೆಗೆ ಹಚ್ಚಿಕೊಳ್ಳದೆ, 400 ರೂಪಾಯಿಗಳನ್ನು ಪಡೆದು, ತನ್ನ ಹಕ್ಕುಗಳನ್ನು, ಊರಿನಲ್ಲಿನ ಹಿರಿಯ ನಾಯ್ಡುಗೆ ವಹಿಸಿಕೊಟ್ಟಿದ್ದ. ಈಗಿದ್ದ ಶಾನುಭೋಗ ಮುವತ್ತೈದು ವರ್ಷದವನಾಗಿದ್ದರೂ, ಆರು ಮಕ್ಕಳ ತಂದೆ. ಅವನ ತಂದೆ ಒಂದು ಮುದಿ ತೋಳ ದಂತಿದ್ದ. ವ್ಯವಹಾರದಲ್ಲಿ ಚಾಣಾಕ್ಷ. ಭೂಸಂಬಂಧವಾದ ವ್ಯವಹಾರಗಳನ್ನು ಕುದುರಿಸಿಕೊಟ್ಟು, ದುಡ್ಡು ಸಂಪಾದಿಸಿ ಬದುಕುತ್ತಿದ್ದ ಮಗ ಶಾನುಭೋಗನಾದಾಗ, ಅವನಿಗೂ ಅಧಿಕಾರ ದೊರಕಿದಂತಾಯಿತು. ಇದುವರೆಗೆ, ಭೂಮಿಯ ಮಾರಾಟ ಮುಂತಾದ ವಿಷಯಗಳಲ್ಲಿ ಮಾತ್ರ ಅವನ ಅಧಿಕಾರ ನಡೆಯುತ್ತಿತ್ತು. ಆದರೆ ಈಗ, ಪ್ರೊಕ್ಯೂರಮೆಂಟ ಜಾರಿಗೆ ಬಂದಾಗ ಆತನ ಅಧಿಕಾರದ ದರ್ಪ ಹೆಚ್ಚಿತು.

ಈ ಮುದಿ ತೋಳ, ಒಂದು ಕಾಲದಲ್ಲಿ ಚೆನ್ನಾಗಿ ಬಾಳು ಬದುಕಿದ್ದ. ಅಕ್ಷಯಪಾತ್ರೆ ಯಂತೆ ಫಸಲು ನೀಡುವ ಹತ್ತು ಎಕರೆ ಭೂಮಿ ಹೊಂದಿದ್ದ. ಸುತ್ತುಮುತ್ತಲಿನ ಹತ್ತು ಗ್ರಾಮಗಳಲ್ಲಿ ದೊರೆಯಂತೆ ಮೆರೆದ. ಇದ್ದ ಒಬ್ಬ ಮಗಳ ಮದುವೆ ಸಂಭ್ರಮ ದಿಂದ ನಡೆಸಿ, ಐದು ದಿನ ಅನ್ನ ಸಂತರ್ಪಣೆ ಮಾಡಿಸಿದ. ಜಲಮೂರು ಜಮೀನುದಾರ ರೆಂದರೆ, ಆಗಿನ ಕಾಲದಲ್ಲಿ ಚಕ್ರವರ್ತಿಗಳಂತಿದ್ದರು. ಅವರ ಮನೆಯಲ್ಲಿ ಲಕ್ಷ್ಮೀ-ಸರಸ್ವತಿ ಯರ ಸಂಗಮವೇ ಆಗಿತ್ತು. ಜಮೀನುದಾರರ ಹಿರಿಯ ಮಗ, ಖರಗ್‌ಪುರದಲ್ಲಿ ರೈಲ್ವೆ ಅಧಿಕಾರಿಯಾಗಿದ್ದ. ಆ ಜಮೀನುದಾರರ ವೈಭವ ಮನೆಮನೆಯ ಮಾತಾಗಿತ್ತು. ನವಿರಿ ಗ್ರಾಮದ ಈ ಮುದಿ ತೋಳ ಅಂತಹವರ ಮನೆಗೆ ತನ್ನ ಮಗಳನ್ನು ಕೊಟ್ಟು ಸಂಬಂಧ ಬೆಳೆಸಿದ್ದ. ಈಳಿಗೆಯಿಂದ ಹಿಡಿದು ಸುಪ್ಪತ್ತಿನ ಮಂಚದ ವರೆಗೂ ಎಲ್ಲಾ ಸಾಮಾನು ಕೊಟ್ಟು, ಹದಿನೆಂಟು ಎತ್ತಿನ ಬಂಡಿಗಳಲ್ಲಿ ಸಾಮಾನುಗಳನ್ನು ತುಂಬಿ, ಪಲ್ಲಕ್ಕಿಯಲ್ಲಿ ಮಗಳನ್ನು ಕೂಡಿಸಿ, ನೂರಾ ಒಂದು ಕಾವಲುಗಾರರ ಜೊತೆ ಮಗಳನ್ನು ಗಂಡನ ಮನೆಗೆ ಕಳುಹಿಸಿದ್ದ. ಅನೇಕ ವರ್ಷಗಳ ವರೆಗೆ, ಆ ಸುತ್ತಮುತ್ತಲಿನ ಹಳ್ಳಿಯ ಜನರು, ಭವ್ಯವಾದ ಈ ಮದುವೆಯನ್ನು ಮರೆತಿರಲಿಲ್ಲ. ಆದರೆ, ಈ ಕೀರ್ತಿ ಪಡೆ ಯಲು, ಮುದಿ ತೋಳ, ಫಲವತ್ತಾದ ತನ್ನ ಹತ್ತು ಎಕರೆ ಜಮೀನನ್ನು ಕಳೆದು ಕೊಂಡಿತ್ತು.

ಮುದಿ ತೋಳ, ನವಿರಿ ಗ್ರಾಮದ ಆ ಶಾನುಭೋಗ, ತನ್ನ ಜೀವನದಲ್ಲಿ ಮಾಡಿದ ಘನಕಾರ್ಯ ಅದೊಂದೆಯಾಗಿತ್ತು. ಅದರಲ್ಲೆ ಅವನ ಜಂಘಾಬಲ ಉಡುಗಿಹೋಗಿತ್ತು. ಮಗಳು ಗಂಡನ ಮನೆ ಸೇರಿಕೊಂಡ ನಂತರ ಒಂದು ಘಟನೆ ಜರುಗಿತು. ಹದಿನೈದು

ವರ್ಷದ ಹುಡುಗಿಯ ತಿಳಿವಳಿಕೆಯನ್ನು, ಬುದ್ಧಿಮತ್ತೆಯನ್ನೂ ಅಳೆದು ನೋಡಲು, ಆ ಹುಡುಗಿಯ ಅತ್ತೆ ಮತ್ತು ವಿಧವೆಯಾಗಿ ಮನೆ ಸೇರಿದ್ದ ನಾದಿನಿ ಒಂದು ಉಪಾಯ ಹೂಡಿದ್ದರು. ಮನೆತುಂಬ ಆಳುಗಳು ಇದ್ದರೂ ಕೂಡ, ಮನೆಯವರಿಗೆಲ್ಲ ಸೊಸೆಯೇ ಅಡಿಗೆ ಮಾಡಬೇಕೆಂದೂ, ಅದು ತಮ್ಮ ಮನೆಯ ನಡವಳಿಕೆ—ಎಂದೂ ಹೇಳಿದರು. ಅಡಿಗೆಗೆ ಬೇಕಾದ ಎಲ್ಲ ತರಕಾರಿಗಳನ್ನು ಹೆಚ್ಚಿ ಕಲಬೆರಕೆ ಮಾಡಿ, ಅಡಿಗೆ ಮನೆಯ ಹೊಸ್ತಿಲಲ್ಲಿಟ್ಟು ಕೈಕಟ್ಟಿ ಕುಳಿತರು. ಸರಿ, ಹುಡುಗಿ ಸೆರಗು ಕಟ್ಟಿಕೊಂಡು ಅಡಿಗೆಗೆ ನಿಂತಳು. ಯಾವುದಕ್ಕೆ ಯಾವ ತರಕಾರಿ ಬೇಕೆಂಬುದನ್ನು ಆರಿಸಿಟ್ಟುಕೊಂಡು, ಅಡಿಗೆ ಯನ್ನು ಪ್ರಾರಂಭಿಸಿದಳು. ಒಲೆಯ ಮೇಲಿನ ದೊಡ್ಡ ತಪ್ಪಲೆಯನ್ನು ಇಳಿಸಲು ಬಟ್ಟೆ ಸಿಗದಿದ್ದಾಗ, ಹುಡುಗಿ ಹಿರಿಯರಾದ ಅತ್ತೆಯನ್ನು ಕೇಳಿದಳು. ಆದರೆ, ಆ ಅತ್ತೆ ಯಾದವಳು, "ಹಡೆದವರು ಹರಕು ಬಟ್ಟೆಯನ್ನೂ ಕೊಡಲಿಲ್ಲೇನು ನಿನಗೆ"—ಎಂದು ಹಂಗಿಸಿದಳು. ಹುಡುಗಿ ಯಾವ ಮಾತೂ ಆಡಲಿಲ್ಲ. ತಾನು ಉಟ್ಟಿದ್ದ ರೇಷ್ಮೆಯ ಜರಿಸೀರೆಯ ಅಂಚನ್ನೇ ಹರಿದು, ಅದರಿಂದಲೇ ತಪ್ಪಲೆಯನ್ನು ಇಳಿಸಿದಳು. ಮುದಿ ಅತ್ತೆ, ವಿಧವೆ ನಾದಿನಿ ಬಾಯಿಬಿಟ್ಟುಕೊಂಡು ಕುಳಿತರು. ಈ ಘಟನೆಯನ್ನು ಆ ಮುದಿ ತಂದೆ ಎಲ್ಲರ ಮುಂದೂ ಹೇಳಿಕೊಂಡು, ತನ್ನ ಮಗಳು ತನ್ನ ಘನತೆ ಗೌರವ ಕಾಪಾಡಿದ ಳೆಂದು ಗೌರವಪಡುತ್ತಿದ್ದರು.

ಈ ಮುದಿ ಶಾನುಭೋಗ, ತನ್ನ ಸ್ವಂತ ಭೂಮಿ ಕೈಬಿಟ್ಟು ಹೋದಾಗ, ನಾಲ್ಕು ದಿನ ಹಾಗೂ ಹೀಗೂ ಕಾಲಕಳೆದ. ಕೊನೆಗೆ ತನ್ನ ಮಗನಿಗೆ ಊರಿನ ಶಾನುಭೋಗತ್ವವನ್ನು ದೊರಕಿಸಿಕೊಟ್ಟು, ಅದರಲ್ಲಿ ತಾನೂ ಅಧಿಕಾರ ಚಲಾಯಿಸಹತ್ತಿದ. ಊರಿನ ಜನರಲ್ಲಿ ಅಸಮಾಧಾನ ತಲೆದೋರಿದ್ದು, ಊರಿನ ಜನರು ತಮ್ಮತಮ್ಮಲ್ಲೇ ಗುಸುಗುಸು ನಡೆಸಿದ್ದು ಈ ಶಾನುಭೋಗನ ಕಿವಿಗೂ ಬಿತ್ತು. ಸರ್ಕಾರ ತನ್ನ ಪಗಾರ ಹೆಚ್ಚಿಸಲಿಲ್ಲವೆಂದು ಮೊದಲೆ ಕುಪಿತನಾಗಿದ್ದ ಶಾನುಭೋಗ, ಊರಿನ ಜನರಿಂದ ಮಾಮೂಲು ಬರುವುದು ನಿಂತಾಗ ರೌದ್ರಾವತಾರ ತಳೆದ. ದಿನಕ್ಕೊಂದು ಬಗೆಯ ಲೆಕ್ಕ, ದಿನಕ್ಕೊಂದು ಮೋಸ ಮಾಡುವುದನ್ನು ರೂಢಿಸಿಕೊಂಡ. ಸರ್ಕಾರದಿಂದ ಹೆಚ್ಚಿನ ಬಲಾತ್ಕಾರವಿರಲಿಲ್ಲವಾದ್ದ ರಿಂದ, ಯಾರು ಎಷ್ಟು ಧಾನ್ಯ ಕೊಟ್ಟರೂ ಮರು–ಮಾತಾಡದೆ ಪಡೆದು, ಏನೂ ಸಿಕ್ಕಿಲ್ಲ ವೆಂದು ವರದಿ ಕಳುಹಿಸುತ್ತಿದ್ದ.

ಹತ್ತು ವರ್ಷಗಳ ಹಿಂದೆ 60 ರೂಪಾಯಿಗೆ ಸಿಗುತ್ತಿದ್ದ ಧಾನ್ಯ, ಈಗ 600 ರೂಪಾಯಿ ಕೊಟ್ಟರೂ ಸಿಗುತ್ತಿರಲಿಲ್ಲ. ಎಲ್ಲವೂ ತಲೆಕೆಳಗಾಗಿ, ಯಾವುದಕ್ಕೂ ಇತಿ–ಮಿತಿ—ಎಂಬುದು ಉಳಿದಿರಲಿಲ್ಲ. ಸಾರ್ವಜನಿಕರು, ಬಡವರು, ಜೀವನದ ಹೊರೆ ಯನ್ನು ಹೊರಲಾರದೆ ಎಲ್ಲವನ್ನೂ ದೇವರ ಮೇಲೆ ಹಾಕಿ, ಹಾಗೂ ಹೀಗೂ ಜೀವನ ಸಾಗಿಸಿದ್ದರು. ಧಾನ್ಯಗಳ ಜೊತೆಗೆ ಉಪ್ಪು–ಬೇಳೆಕಾಳುಗಳ ಬೆಲೆಗಳೂ ಸಹ ಗಗನಕ್ಕೇರ ಹತ್ತಿದ್ದವು. ಊರಿನ ಶೆಟ್ಟಿ, ಬೆಲೆ ಒಂದಾಣೆ ಹೆಚ್ಚಿಸಿದಲ್ಲಿ, ಐದಾಣೆ ಹೆಚ್ಚಿದೆ ಎಂದು

ಹೇಳಿ ಜನರನ್ನು ಸುಲಿಯತೊಡಗಿದ. ಸಹಕಾರಿ ಅಂಗಡಿಯಲ್ಲಿ ಯೋಗ್ಯ ಬೆಲೆಗೆ ಧಾನ್ಯ ಮತ್ತಿತರ ಸರಕುಗಳು ಸಿಗುತ್ತಿದ್ದವು. ಆದರೆ, ಊರಿನ ನಾಯ್ಕು ಮತ್ತು ದೇಸಾಯರ ಪಿತೂರಿಯಿಂದ, ಆ ಧಾನ್ಯ, ರಾತ್ರೋರಾತ್ರಿ ಪಟ್ಟಣ ಸೇರುತ್ತಿತ್ತು. ಅಂತೂ, ನಿಯತ್ತು ಬಿಟ್ಟವರು, ದುರ್ವ್ಯವಹಾರದಲ್ಲಿ ತೊಡಗಿದ್ದ ಊರಿನ ಹಿರಿಯರು ಸಾಕಷ್ಟು ದುಡ್ಡು ಗಿಟ್ಟಿಸಿ ಸುಖವಾಗಿಯೇ ಇದ್ದರು.

ಗ್ರಾಮದೇವತೆ ನೀಲಮ್ಮಳ ಆರಾಧಕ ರಾಮದಾಸುವಿನ ವಿವೇಚನೆಯ ಮಾತುಗಳನ್ನು ಯಾರೂ ಕಿವಿಗೆ ಹಾಕಿಕೊಳ್ಳುತ್ತಿರಲಿಲ್ಲ. ಈಗ ಅವನನ್ನು ಕೇಳುವವರು, ಮಾತಾಡಿಸು ವವರೂ ಸಹ ಯಾರೂ ಉಳಿದಿರಲಿಲ್ಲ. ಹೊಟ್ಟೆಗಿಲ್ಲದೆ ಉಪವಾಸ ಬೀಳುವುದು ಆತನಿಗೆ ಸಹಜವಾಗಿತ್ತು. ಆದರೂ ನೀಲಮ್ಮಳ ಗುಡಿಯಲ್ಲಿ ಕುಳಿತು ದೇವರನ್ನು ಆರಾಧಿಸು ವುದನ್ನು ಅವನು ಬಿಡಲಿಲ್ಲ. ಒಮ್ಮೊಮ್ಮೆ ದುಃಖ ಉಮ್ಮಳಿಸಿ ಬಂದು, ಗುಡಿಯಲ್ಲಿ ಕುಳಿತೆ ಕಣ್ಣೀರು ಸುರಿಸುತ್ತಿದ್ದ. ಜಗದೊಡತಿ ನೀಲಮ್ಮ ತನ್ನ ಬಾಧೆಯನ್ನು ಅರಿತು ಕೊಳ್ಳುವಳೆಂಬ ವಿಶ್ವಾಸದಿಂದ ಅವನು ತೃಪ್ತನಾಗಿದ್ದ. ಆ ತೃಪ್ತಿಯಲ್ಲೆ, ತನ್ನ ಹಸಿವನ್ನು ಮರೆಯಲು ಯತ್ನಿಸುತ್ತಿದ್ದ. ಬೀದಿ ಬೀದಿ ಅಲೆದು, "ಮಹಾತಾಯಿ ನೀಲಮ್ಮಳ ಉತ್ಸವ ನಡೆಸಿ. ಮಳೆ–ಬೆಳೆ ಬಂದು, ಬೆಲೆಗಳು ಇಳೀತಾವ"—ಎಂದು ಕಂಡಕಂಡವರಿ ಗೆಲ್ಲ ಹೇಳಿದ. "ನಮ್ಮ ಕೈಯಾಗ ಏನದ. ಇಂಥಾದ್ದನ್ನೆಲ್ಲ ಊರಿನ ಹಿರಿಯರು ಮುಂದಾಗಿ ಮಾಡಬೇಕು. ಅವರಿಗೆ ಹೇಳು ಹೋಗು"—ಎಂದು ಎಲ್ಲರೂ ಜಾರಿ ಕೊಳ್ಳುತ್ತಿದ್ದರು. ಊರಿನ ಹಿರಿಯರ ಮುಂದೆ ಈ ಮಾತೆತ್ತಿದಾಗ, ಅವರು ಪಕಪಕನೆ ನಗುತ್ತಿದ್ದರು. ಅವರ ಈ ಅಟ್ಟಹಾಸದಿಂದ ರಾಮದಾಸುವಿನ ಹೊಟ್ಟೆಯುರಿ ಹೆಚ್ಚು ತ್ತಿತ್ತೆ ಹೊರತಾಗಿ, ಯಾವ ಪ್ರಯೋಜನವೂ ಆಗಲಿಲ್ಲ. ಹೊಟ್ಟೆ ಹಸಿದರೂ ಕೂಡ, ಯಾರ ಮುಂದೆಯೇ ಆಗಲಿ ಕೈಯೊಡ್ಡಿ ಬೇಡಲು, ಆತನ ಅಭಿಮಾನ ಆತನಿಗೆ ಅಡ್ಡಿ ಯಾಗಿತ್ತು. ಈ ಉಪವಾಸ–ವನವಾಸಗಳಿಂದಾಗಿ, ರಾಮದಾಸುವಿನ ಆರೋಗ್ಯ ಕ್ಷೀಣಿಸಿತ್ತು. ಒಂದು ದಿನ ರಾತ್ರಿ, ಗುಡಿಯಿಂದ ಹೊರಟ ರಾಮದಾಸು ನಿತ್ರಾಣ ದಿಂದಾಗಿ ಮುಂದೆ ಹೆಜ್ಜೆ ಇಡಲು ಕೈಲಾಗದೆ ನಿಂತುಬಿಟ್ಟ. ಅದೇ ಹೊತ್ತಿಗೆ ಆ ದಾರಿಯಲ್ಲಿ ಹೋಗುತ್ತಿದ್ದ ಪುಲ್ಲಯ್ಯ ಕಣ್ಣಿಗೆ ಬಿದ್ದಾಗ, ರಾಮದಾಸುವಿಗೆ ಜೀವ ಬಂದಂತಾಯಿತು. ಪುಲ್ಲಯ್ಯ, ಆ ವೇಳೆಗೆ, ನೀಲಮ್ಮಳ ಉತ್ಸವ ನಡೆಸುವಂತೆ, ರಾಮದಾಸುವಿನ ಪರವಾಗಿ, ದೇಸಾಯರ ಮುಂದೆ ಮತ್ತು ಶಾನುಭೋಗರಿಗೆ ಹೇಳಿ ಅವರ ಅಪಹಾಸ್ಯಕ್ಕೀಡಾಗಿದ್ದ. ಆದರೂ ರಾಮದಾಸುವಿನ ಬಗ್ಗೆ ಅವನಿಗಿದ್ದ ಆದರಾಭಿಮಾನ ಕಡಿಮೆಯಾಗಿರಲಿಲ್ಲ. ರಾಮದಾಸು, ಪುಲ್ಲಯ್ಯನ ಭುಜದ ಮೇಲೆ ಕೈಯಿಟ್ಟು, ತನ್ನ ಭಾರವನ್ನೆಲ್ಲ ಅವನ ಮೇಲೆ ಹಾಕಿ, ಕಾಲೆಳೆದುಕೊಂಡು ಹೊರಟ. ಪುಲ್ಲಯ್ಯ, ಆತನನ್ನು ನೇರವಾಗಿ ತನ್ನ ಮನೆಗೆ ಕರೆದೊಯ್ದ. ಮಲ್ಲೇಶಿ ಆಗಲೇ ಪುಟ್ಟಪುಟ್ಟ ಹೆಜ್ಜೆಗಳನ್ನಿಡತೊಡಗಿದ್ದ. ಅಮ್ಮಾ, ಅಪ್ಪಾ...... ಅತ್ತೆ...... ತಾತ—ಎಂದೆಲ್ಲ ತೊದಲು ನುಡಿಯಲೂ ಸಹ

ಪ್ರಾರಂಭಿಸಿದ್ದ. ಮಲ್ಲೇಶಿ ತಪ್ಪುತಪ್ಪು ಹೆಜ್ಜೆ ಇಡುತ್ತಾ ತನ್ನ ಬಳಿ ಬಂದಾಗ, ರಾಮದಾಸು ಅವನನ್ನು ಎತ್ತಿ ಮುದ್ದಾಡಿದ. ಮಂದವಾದ ಆ ಬೆಳಕಿನಲ್ಲಿ ಬಿಳಿಯ ಗಡ್ಡ, ತಲೆತುಂಬ ಕೂದಲನ್ನು ಬೆಳೆಸಿಕೊಂಡಿದ್ದ ರಾಮದಾಸುವನ್ನು ನೋಡಿ, ಮಲ್ಲೇಶಿ, "ತಾತ...... ತಾತ......" ಎಂದು ಕೇಕೆ ಹಾಕಿದ.

"ಆ ತಾಯಿ, ಮಹಾತಾಯಿ ನೀಲಮ್ಮ ಇವನನ್ನು ರಕ್ಷಿಸುತ್ತಾಳೆ...... ಕತ್ತಲಿನಲ್ಲಿ ಬೆಳಕಾಗಿ, ನೂರು ಜನರೊಳಗ ಸರದಾರನಾಗಿ ಬಾಳ್ತಾನೇಳು ನಿನ್ನ ಮಗ......" ಎಂದು ರಾಮದಾಸು ಆಶೀರ್ವದಿಸಿದ.

ಫುಲ್ಲಯ್ಯ, ಮಗನ ಎದುರಿಗೆ ಧಿನಕ್......ಧಿನಕ್...... ಎಂದು ಕುಣಿದಾಗ, ಮಲ್ಲೇಶಿ ತಂದೆಯನ್ನು ಅನುಸರಿಸಿ ಕೇಕೆ ಹಾಕಿದ. ತಂದೆಯಂತೆ ಕುಣಿಯಲು ಹೋಗಿ, ಜೋಲಿಹೋಗಿ ಕೆಳಗೆ ಬಿದ್ದ. ಆದರೂ, ಅಳದೆ ಮೇಲೆದ್ದು ಮತ್ತೆ ಜೋರಾಗಿ ಕೇಕೆ ಹಾಕಿದ. ಫುಲ್ಲಯ್ಯ ಆನಂದಾತಿರೇಕದಿಂದ ಅವನನ್ನು ಮೇಲೆತ್ತಿ ಕುಣಿಯತೊಡಗಿದ.

ರಾಮದಾಸು ಹಸಿದು ಬಂದದ್ದನ್ನು ಅರಿತ ನೀಲಿ, ಒಳಹೋಗಿ ಒಂದು ರೊಟ್ಟಿ–ಚಟ್ನಿ ತಂದುಕೊಟ್ಟಳು. ರಾಮದಾಸು ಅದನ್ನು ಪಡೆದು ಕಣ್ಣಿಗೆ ಹಚ್ಚಿಕೊಂಡು, ದೇವಿಯನ್ನು ಸ್ಮರಿಸಿ, ಗಬಗಬನೆ ತಿಂದು ನೀರು ಕುಡಿದ. ಹೊಟ್ಟೆಗೆ ಆಹಾರ ಬಿದ್ದಿದ್ದರಿಂದ ಮೈಯಲ್ಲಿ ಸ್ವಲ್ಪ ಶಕ್ತಿ ಬಂದಂತಾದಾಗ, ಮಲ್ಲೇಶಿಯನ್ನು ಮುದ್ದಾಡಿ ಮನೆಗೆ ಹೊರಟ. ಮಗನ ಜೊತೆ ಆಡುತ್ತಾ ಕುಳಿತಿದ್ದ ಫುಲ್ಲಯ್ಯ, ರಾಮದಾಸು ಹೋದುದನ್ನು ಗಮನಿಸಲೇ ಇಲ್ಲ.

ಊರಿನ ದೊಡ್ಡ ಬೀದಿಯಲ್ಲಿ, ಅದೇಕೊ ಜನರು ಗುಂಪುಕಟ್ಟಿಕೊಂಡು ನಿಂತಿದ್ದರು. ಅವರ ನಡುವೆ ನಿಂತಿದ್ದ ನರಸಿಂಹ, ದೊಡ್ಡ ಧ್ವನಿಯಲ್ಲಿ ಏನೇನೊ ಸುದ್ದಿ ಹೇಳುತ್ತಿದ್ದ.

"ನೆಹ್ರೂ ಮತ್ತು ಗಾಂಧಿ, ಮಹಾಭಾರತದ ಅರ್ಜುನ ಮತ್ತು ಕೃಷ್ಣಪರಮಾತ್ಮನ ಹಾಂಗಿದ್ದಾರ. ಗಾಂಧೀಜಿ ದೇವರ ಅವತಾರ—ಅಂಬೋದು ರೂಪಾಯಿಗೆ ಹದಿನಾರಾಣೆ ಖರೆ. ಆ ದೇವರು ಮನಸ್ಸು ಮಾಡಿದಾಗ ಹನ್ನೊಂದು ಅಕ್ಷೋಹಿಣಿ ಸೈನ್ಯ ಹೊಂದಿದ್ದ ವೀರ ಕೌರವರು ಸೋತು ಮಣ್ಣು ಮುಕ್ಕಿದರಂತ; ಇನ್ನ ಈ ಬಿಳಿಯರದೇನು ಮಹಾ? ನಾಳೆ, ಈ ಬಿಳಿಯರ ರಾಜ್ಯ ಹೋಗಿ, ನಮ್ಮ ರಾಜ್ಯ ಬರ್ತದ...... ಆಗ ನೋಡ್ರಿ''—ನರಸಿಂಹನ ಈ 'ಭಾಷಣ' ಕೇಳಲು, ಜನರು ಹೆಚ್ಚು ಹೆಚ್ಚಾಗಿ ಸೇರತೊಡಗಿದರು. ರಾಮದಾಸು ಕೂಡ, ಅಲ್ಲಿಯೇ ಇದ್ದ ದೇಸಾಯರ ಮನೆಯ ಜಗುಲಿಯ ಮೇಲೆ ಕುಳಿತು, ಅವನ ಮಾತು ಕೇಳತೊಡಗಿದ.—"ಈಗ ಇದ್ದವೆಲ್ಲ ಬದಲಾಗ್ತದ...... ಕಾಂಗ್ರೆಸ್ಸಿನ ಸರ್ಕಾರ ಬರ್ತದ. ಈ ಕಾಂಗ್ರೆಸ್ಸಿನವರಿಗೆಲ್ಲ ಆ ನೆಹ್ರೂ ಮುಖಂಡ. ಆತನಽ ಈ ದೇಶದ ಸ್ವರೂಪ ಬದಲಾಯಿಸಿಬಿಡ್ತಾನ...... ಹೆಚ್ಚು ಮಕ್ಕಳಿದ್ದವರಿಗೆ ಹೆಚ್ಚು ಹೊಲ–ಹೆಚ್ಚು ಭೂಮಿ...... ಕಡಿಮೆ ಮಕ್ಕಳಿರುವವರಿಗೆ ಕಡಿಮೆ ಭೂಮಿ ಇರಬೇಕೂ ಅಂತ ಕಾಯ್ದೆ ಮಾಡ್ತಾರ......"

"ಮಕ್ಕಳು ಇರದಿದ್ದರ"—ಯಾರೋ ಕೂಗಿದರು.

"ಅಂತಹವರಿಗೆ ತೀರ ಅಂದರ ತೀರ ಕಡಿಮೆ ಭೂಮಿ ಕೊಡ್ತಾರ"—ಎಂದು ಉತ್ತರ ಹೇಳಿ ಗಂಟಲು ಸರಿಪಡಿಸಿಕೊಂಡ ನರಸಿಂಹ, ತನ್ನ 'ಭಾಷಣ' ಮುಂದುವರಿಸಿದ— "ಪಟ್ಟಣದಾಗ, ಆಗಲೇ ಗುಜುಗುಜು ಪ್ರಾರಂಭ ಆಗ್ಯದ. ನಾಳೆ ನಮ್ಮ ಮಕ್ಕಳು ಕೂಡ ಕಲೆಕ್ಟರ್ ಆಗಬಹುದು......"

"ಹೋಗಹೋಗಲೇ ಪೆದ್ದ"—ಯಾರೊ ಹಂಗಿಸಿದರು.

ಆದರೆ ನರಸಿಂಹ ತನ್ನ ಪಟ್ಟು ಬಿಡಲಿಲ್ಲ. "ಭಾವಿ ಬಿಟ್ಟು ಹೊರಗ ಬರದ ಕಪ್ಪಿಗೆ ಲೋಕ ಎಷ್ಟು ದೊಡ್ಡದು—ಅಂಬೋದು ಹ್ಯಾಂಗ ತಿಳಿದೀತು. ನಾನು ಹೇಳಿದ್ದು ನಂಬರಿ. ನಮ್ಮ ಮಕ್ಕಳು ಓದಿ ಶಾಣ್ಯಾರ ಆದರ, ನಾಳೆ ಸರ್ಕಾರಿ ನೌಕರರಾಗಿ ಹಿರಿಯ ಅಧಿಕಾರಿಗಳಾಗಿ ಮೆರೀತಾರ. ಈಗಿರೊ ಜಾತಿ–ಮತಗಳ ಭೇದ–ಭಾವ ಆಗ ಇರಾಣೆಲ್ಲ. ಅಗಸನ ಮಗ, ಕ್ಷೌರಿಕನ ಮಗಳನ್ನ, ಕ್ಷೌರಿಕನ ಮಗಳು ಬ್ರಾಹ್ಮಣನ ಮಗನ್ನ ಮದುವೆ ಆಗಬಹುದು. ಇಂತಹ ಅಂತರ್‌ಜಾತಿ ವಿವಾಹಗಳಿಗೆ ಅಡ್ಡಿಯುಂಟು ಮಾಡುವವರನ್ನು ಸರ್ಕಾರ ಜೇಲಿನಲ್ಲೂ ಸಹ ಹಾಕಬಹುದಾಗಿದೆ."

- "ಅದೇನಾರ ಆಗಲಿ...... ಈಗಿನ ಈ ಅಭಾವ, ಈ ಕೊರತೆ ನೀಗಸ್ತಾರೇನು? ಅದನ್ನು ಹೇಳು"—ಗುಂಪಿನಲ್ಲಿನ ಒಬ್ಬ ಮುದುಕಿ ಕೇಳಿದಳು.

"ಈ ಅಭಾವಕ್ಕ, ಇಂದಿನ ಈ ಪರಿಸ್ಥಿತಿಗೆ ಕಾರಣರಾದವರನ್ನೆಲ್ಲ ಸರ್ಕಾರ ಜೇಲಿಗೆ ಹಾಕ್ತದ. ಆಗ, ಈ ಅಭಾವ, ನಮ್ಮ ಈ ಸಂಕಷ್ಟಗಳು ನಿರ್ನಾಮ ಆಗ್ತಾವ. ನಮ್ಮ ಸರ್ಕಾರ, ನಮ್ಮ ಜನರ ಸರ್ಕಾರ ಅಂದ ಮ್ಯಾಲೆ, ನಮಗ ಒಳ್ಳೇದನ್ನs ಮಾಡ್ತದ. ಎಲ್ಲಾ ಕೆಲಸ ಹ್ಯಾಂಗ ಮಂತ್ರ–ಮಾಟ ಮಾಡಿದ್ಹಾಂಗ ಸರಸರ ಆಗಿ ಹೋಗ್ತಾವ"— ನರಸಿಂಹ ಹೇಳುತ್ತಲೇ ಇದ್ದ.

ಅವನ ಈ ಮಾತುಗಳು ಅನೇಕರಿಗೆ ಹಿಡಿಸಿದುವಾದರೂ, ರಾಮದಾಸುವಿಗೆ ಹಿಡಿಸ ಲಿಲ್ಲ. ಆತ ಕುಳಿತಲ್ಲಿಂದೆದ್ದು, ನಿಧಾನವಾಗಿ ಆ ಗುಂಪಿನೊಳಗೆ ನುಸುಳಿದ. ಆ ಗುಂಪಿ ನಲ್ಲಿ ನಿಂತಿದ್ದ ಕೆಲವು ಜನರನ್ನು ನೋಡಿದಾಗ. ರಾಮದಾಸುವಿನ ಮೈಯುರಿದು ಹೋಯಿತು. ಊರಿಗೆ ಹಿರಿಯರೆನ್ನಿಸಿಕೊಂಡವರ ಮಕ್ಕಳೆಲ್ಲಾ ಅಲ್ಲಿ ಸೇರಿದ್ದರು. ಊರಿನ ಗಣ್ಯರೆನ್ನಿಸಿಕೊಂಡವರ ಈ ಸಂತಾನ ಶಿರೋಮಣಿಗಳಿಗೆ, ಹೆಂಡ ಕುಡಿಯುವುದು, ಹತ್ತು ಸಲ ಪಟ್ಟಣಕ್ಕೆ ಹೋಗಿ ಸಿನೆಮಾ ನೋಡುವುದು. ಸಿಗರೇಟು ಸೇದುವುದು, ಮುಗ್ಧರಾದ ಹಳ್ಳಿಯ ಯುವತಿಯರನ್ನು ಕೆಡಿಸುವುದು—ಇವೇ ಕಾರ್ಯವಾಗಿದ್ದವು. ಇದೇ ಯುವ ಪೀಳಿಗೆ, ಈಗ ಊರಿನ ಹಿರಿಯ ಪೀಳಿಗೆ ಎನ್ನಿಸಿಕೊಂಡಿತ್ತು. ಊರಿನಲ್ಲಿ ಅವರದೇ ಮಾತು, ಅವರದೇ ರಾಜ್ಯವಾಗಿತ್ತು.

ಜನಸಮೂಹದಲ್ಲಿ ನುಸುಳಿಕೊಂಡು ಮುಂದೆ ಬಂದಿದ್ದ ರಾಮದಾಸು—"ನರ ಸಿಂಹ"—ಎಂದು ಕೂಗಿದ. ಉಗ್ರನಾಗಿದ್ದ ರಾಮದಾಸುವಿನ ಆ ಧ್ವನಿಯನ್ನು ಕೇಳಿ ಯಾರೂ ಮಾತನಾಡದಾದರು. ರಾಮದಾಸು, ಎಲ್ಲರೂ ಮೌನವಾಗಿದ್ದುದನ್ನು

ನೋಡಿ—"ನರಸಿಂಹ, ಯಾರಲಾ ನಿನಗ ಹೇಳಿದ್ದು, ಎಲ್ಲಾ ಕೆಲಸಾನೂ ಮಂತ್ರ–ಮಾಟ ದ್ಹಾಂಗ ಸುಲಭವಾಗಿ ಆಗ್ತಾವಂತ"—ಎಂದು ಕೇಳಿದ. ನರಸಿಂಹ ಏನನ್ನೊ ಹೇಳಲು ಬಾಯಿ ತೆರೆದ. ರಾಮದಾಸು ಅವನನ್ನು ಅಷ್ಟಕ್ಕೆ ತಡೆದು—"ಯಾರು ಅಧಿಕಾರಕ್ಕ ಬಂದರೇನಾತು. ನಮ್ಮೊಳಗ ನೀತಿ, ನ್ಯಾಯ ಇಲ್ಲದೆ ಇದ್ದಾಗ, ಯಾರೂ ಏನೂ ಮಾಡ ಲಾರರು. ನೀತಿ ನ್ಯಾಯ ಬಿಟ್ಟು, ಅನ್ಯಾಯಕ್ಕ ದುಂಬಾಲು ಬಿದ್ದಿದ್ದಕ್ಕs ನಮ್ಮ ಗತಿ ಹೀಗಾಗ್ಯದ...... ಇನ್ನೂ ಅಧ್ವಾನ ಆಗ್ತದ......" ಎಂದು ಹೇಳಿ, ಅಲ್ಲಿಯೇ ನಿಂತಿದ್ದ ನಾಯ್ಡುನತ್ತ ಬೊಟ್ಟು ಮಾಡಿ, "ಊರಿನ ಈ ಮಹಾಪುರುಷರಿದ್ದಾರಲ್ಲಾ, ಇವರ ಪೈಕಿ ಎಷ್ಟು ಜನರಿಗೆ ನೀತಿ–ನ್ಯಾಯದ ಅರಿವದ ಹೇಳು? ಊರಾಗಿನ ಜನರು ಹಸಿವಿನಿಂದ ಕಂಗಾಲಾಗಿ ಸಾಯುತ್ತಿರುವಾಗ, ದುಡ್ಡು ಮಾಡಿಕೊಳ್ಳಲು ಹವಣಿಸುತ್ತಿರೊ ಈ ಕುಡುಕರು, ಈ ಹೀರೇರಿಂದ ಯಾರಿಗೇನು ಪ್ರಯೋಜನ ಆಗ್ಯದ ಹೇಳು ನರಸಿಂಹ"—ಎಂದು ಕೇಳಿದ.

ಈ ಮಾತಿನಿಂದ ನಾಯ್ಡುಗೆ ಮುಳ್ಳು ಚುಚ್ಚಿದಂತಾಯಿತು. ಅವನು ಸಿಟ್ಟಿನಿಂದ, "ಬಾಯಿ ಮುಚ್ಕೊ ಬಡ್ಡೀ ಮಗನೆ"—ಎಂದು ಕೂಗಿದ.

ರಾಮದಾಸುವಿಗೂ ಸಹ ಎಲ್ಲಿಲ್ಲದ ಆಕ್ರೋಶ ಬಂದು "ಮುಚ್ಚತೀನೊ—ನಾನು ಬಾಯಿ ಮುಚ್ಚತೀನಿ. ಆದರ ನೀನು—ಹೆಂಗಸರ ಸೆರಗು ಹಿಡಕೊಂಡು ಮೆರೆಯೊ ಗಂಡಸು—ಯಾವ ಊರಿನ ಹಿರಿಯನೊ ಹೇಳು? ನೀನು ಈ ಊರಿನ ದೊಡ್ಡ ಮನುಷ್ಯ ಆಗಿದ್ದರ, ಈ ವೇಳೆಗೆ ಮಹಾತಾಯಿ ನೀಲಮ್ಮಳ ಉತ್ಸವ ಮಾಡಿಸಿ, ಊರಿನ ಜನರ ಸಂಕಷ್ಟ ದೂರ ಮಾಡುವಂತೆ, ಆ ತಾಯಿಯನ್ನು ಬೇಡಿಕೊಳ್ಳುತ್ತಿದ್ದಿ......"...

ಕುಡಿದ ಅಮಲಿನಲ್ಲಿದ್ದ ನಾಯ್ಡು, ರೇಗಿಕೊಂಡು, ತೂರಾಡುತ್ತಾ ಮುಂದೆ ಬಂದು, ರಾಮದಾಸುವಿನ ತಲೆಗೆ ಕೈಬೀಸಿ ಹೊಡೆದ. ಊರಿನ ಹಿರಿಯನೇ ಕೈ ಎತ್ತಿದ ಮೇಲೆ, ಅವನ ಅನುಯಾಯಿಗಳು ಬಿಡುತ್ತಾರೆಯೇ? ಅವರೂ ರಾಮದಾಸುವನ್ನು ಹೊಡೆ ಯಲು ಮುಂದಾದರು. ದಾಸು ಮಾತ್ರ, ಒಂದೇ ಸಮನೆ ಅವರನ್ನು ಬಯ್ಯುತ್ತಿದ್ದ. "ನೀವು ಒಬ್ಬ ತಂದೆಗೆ ಹುಟ್ಟಿದ ಮಕ್ಕಳಾಗಿದ್ದಲ್ಲಿ, ಊರಿನ ಜನರನ್ನು ಮೋಸಮಾಡಿ ಸಂಪಾದಿಸಿರುವ ದುಡ್ಡನ್ನು, ಹೊಟ್ಟೆಗಿಲ್ಲದೆ ಸಾಯುತ್ತಿರುವವರಿಗೆ ಹಂಚಿ ಕೊಡ್ರಿ"—ಎಂದು ಕೂಗುತ್ತಲೇ ಇದ್ದ.

ಮಗನನ್ನು ಆಡಿಸುತ್ತಾ ಕುಳಿತಿದ್ದ ಪುಲ್ಲಯ್ಯನ ಕಿವಿಗೆ ಈ ಕೂಗಾಟ ಬಿದ್ದಾಗ, ಅವನು ಧಾವಿಸಿ ಬಂದ. ರಾಮದಾಸುವನ್ನು ಸುತ್ತುವರಿದಿದ್ದ ಜನರನ್ನು ಹಿಂದಕ್ಕೆ ತಳ್ಳಿದ ಪುಲ್ಲಯ್ಯ, ಕೆಳಗೆ ಬಿದ್ದಿದ್ದ ರಾಮದಾಸುವನ್ನು ನೋಡಿದ. ಅದುವರೆಗೆ ರೌದ್ರಾವತಾರ ತಳೆದಿದ್ದ ರಾಮದಾಸುವಿನ ಕಣ್ಣುಗಳು, ಪುಲ್ಲಯ್ಯನನ್ನು ನೋಡಿ ಸೌಮ್ಯವಾದವು. ಅದರೊಡನೆ ಆತನ ಕಣ್ಣಿನಿಂದ ಕಣ್ಣೀರಿನ ಕೋಡಿ ಹರಿಯಿತು.

"ಎಂತಹ ಪಶುಗಳು ನೀವು. ಆ ಮೂಕ ಪಶುಗಳಿಗಾದರೂ ದಯೆ–ದಾಕ್ಷಿಣ್ಯ

ಇರ್ತದಾಗಲಿ, ನಿಮಗ ಅದರ ವಾಸನೀನೂ ಹತ್ತಿಲ್ಲ. ಪಾಪ, ಮುದಿಯ. ಮುದಿ ಮನುಷ್ಯನ ಮ್ಯಾಲೆ ಕೈಮಾಡ್ತೀರಲ್ಲ ನಿಮಗೇನು ಹೇಳಬೇಕು. ಗಂಡಸರಾಗಿದ್ದರ ಮುಂದ ಬರ್ರಿ ನೋಡ್ತೀನಿ...... ಇಲ್ಲದಿದ್ದರ, ಸುಮ್ಮನೆ ಇಲ್ಲಿಂದ ಹೊರಟು ಹೋಗ್ರಿ...... ನೀವು ಮನುಷ್ಯರಲ್ಲ ಕತ್ತೆಗಳು...... ಹಂದಿಗಳು......" ಪುಲ್ಲಯ್ಯ ಬಾಯಿಗೆ ಬಂದದ್ದನ್ನೆಲ್ಲ ಹೇಳತೊಡಗಿದ.

"ಏ–ಯಾರೊ ನೀನು?"—ನಾಯ್ಡು ದರ್ಪದಿಂದ ಕೇಳಿದ.

"ನಾನs...... ಪುಲ್ಲಯ್ಯ. ಇಲ್ನೋಡು, ನೀನು ಈ ಊರಿನ ಪೋಲೀಸ ಪಟೇಲ ಆಗಿದ್ದಲೆ, ನಿನ್ನ ಅಧಿಕಾರಕ್ಕ ತಕ್ಕಹಾಂಗ ಮರ್ಯಾದೆಯಿಂದ ನಡೆದುಕೊಳ್ಳೋದನ್ನು ಕಲಿತುಕೊ." ಅಲ್ಲಿಯೇ ನಿಂತಿದ್ದ ಕೆಂಪಯ್ಯನ ಮಗ ರಾಜಣ್ಣ ನಡುವೆಯೆ ಬಾಯಿಹಾಕಿ, ಪುಲ್ಲಯ್ಯನನ್ನು ತಾತ್ಸಾರದಿಂದ ನೋಡಿ, "ಹೋಗಹೋಗಲೇ ನಿಂದೇನು"—ಎಂದು ಮೂದಲಿಸಿದ. ಮೊದಲೇ ಹಸಿದ ಹುಲಿಯಾಗಿದ್ದ ಪುಲ್ಲಯ್ಯ ಮುಂದೆ ಹೋಗಿ, ರಾಜಣ್ಣನ ಕೈಹಿಡಿದು ಒಂದೇ ಉಸುರಿಗೆ ಎತ್ತಿ ಆಚೆ ಒಗೆದ. ಅಷ್ಟು ದೂರ ಹೋಗಿ ಬಿದ್ದ ರಾಜಣ್ಣ, ಏಳಲಾಗದೇ, ಬಿದ್ದಲ್ಲಿಂದಲೇ—"ನಾನು ನಿನ್ನ ಶಾಸ್ತಿ ಮಾಡದಿದ್ದರ, ......ನಾನು ನಮ್ಮಪ್ಪ ಕೆಂಪಯ್ಯನಿಗೆ ಹುಟ್ಟಿದ ಮಗನೇ ಅಲ್ಲ" ಎಂದು ಚೀರಿದ.

"ಹೋಗಲೆ ಕತ್ತೆ. ಕೆಂಪಯ್ಯಗs ಹುಟ್ಟಿದವನ ಹಾಂಗ ಮಾತಾಡ್ತೀಯಲ್ಲ. ಕುಡ್ಡ ವೆಂಕಣ್ಣನಲೇ ನಿನ್ನಪ್ಪ, ನೆನಪಿರಲಿ"—ಎಂದು ಹಂಗಿಸಿದ ಪುಲ್ಲಯ್ಯ.

ಇದರಿಂದ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತು. ಅಲ್ಲಿ ಸೇರಿದ್ದ ಜನರ ಪೈಕಿ ಕೆಲವರು ರಾಜಣ್ಣನನ್ನು ಅವನ ಮನೆಗೆ ಎಳೆದುಕೊಂಡು ಹೋದರು.

ಪುಲ್ಲಯ್ಯ, ರಾಮದಾಸುವನ್ನು ಕೈಹಿಡಿದು ಎಬ್ಬಿಸಿ, ಮುಂದೆ ನಡೆದ. ದುಃಖ ತಪ್ತನಾಗಿದ್ದ ರಾಮದಾಸುವಿನ ಬಾಯಿಯಿಂದ ಮಾತೇ ಹೊರಡಲಿಲ್ಲ. ಅವರು ಹಾಗೆ ಮೌನವಾಗಿ ಹೊರಟಿದ್ದಾಗ, ರಸ್ತೆಯ ಪಕ್ಕದಲ್ಲಿನ ಜಗುಲಿಯೊಂದರ ಮೇಲೆ ಕುಡ್ಡ ವೆಂಕಣ್ಣ ಮತ್ತು ಗೌರಮ್ಮ ಭಿಕ್ಷೆಗಾಗಿ ಕುಳಿತಿದ್ದರು. ಆಗಲೇ, ಊರಿನ ನಡುಬೀದಿ ಯಲ್ಲಿ ನಡೆದ ಜಗಳದ ಸುದ್ದಿ ಊರೆಲ್ಲಾ ಹರಡಿತ್ತು. "ತಾಯಿ, ಆ ರಾಮದಾಸು, ನೀಲಮ್ಮಳ ಉತ್ಸವ ಮಾಡಿಸಿ ಅಂಥ ಬಾಯಿಬಾಯಿ ಬಿಡ್ತಾನ. ಈಗಂತೂ ಕಂಗಾಲಾಗಿ ಜಗಳಕ್ಕ ಇಳದಾನ...... ಎಂತಹ ಕಾಲ ಬಂತು. ಆ ಮಹಾತಾಯಿ ನೀಲಮ್ಮ ಕೂಡ, ತನ್ನ ನೀತಿ–ನಿಯಮ ಕಳೆದುಕೊಂಡಳೋ ಏನೊ? ಇರದಿದ್ದರ ಈಗ ಈ ಪರಿಸ್ಥಿತಿನೇ ಬರ್ತಿರಲಿಲ್ಲ." ಕುಡ್ಡ ವೆಂಕಣ್ಣ ಆ ಮನೆಯೊಡತಿಗೆ ಹೇಳಿದ.

ಇದನ್ನು ಕೇಳಿಸಿಕೊಂಡ ರಾಮದಾಸು, "ಛೆ, ಛೆ—ಆ ಮಹಾತಾಯಿ ನೀತಿ–ನಿಯಮ ಇಟ್ಟುಕೊಂಡಾಳಂತs ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ನಾವು ಇನ್ನೂ ಬದುಕಿದ್ದೀವಿ"—ಎಂದ.

ಅದಾದ ಮೇಲೆ ರಾಮದಾಸು ಮತ್ತೆ ಮಾತನಾಡಲಿಲ್ಲ. ಮನೆ ಸಮೀಪಿಸಿದರೂ,

ಆತ ಬಿಚ್ಚಿದ ತನ್ನ ಜಡೆಯಂತಹ ಜುಟ್ಟನ್ನು ಗಂಟುಹಾಕಲಿಲ್ಲ. ಆಕಾಶದಲ್ಲಿ ನಕ್ಷತ್ರಗಳು ಹೊಳೆಯುತ್ತಿದ್ದವು. ರಸ್ತೆಯಲ್ಲಿ ಅವರಿಬ್ಬರನ್ನು ಬಿಟ್ಟು ಯಾರೂ ಇರಲಿಲ್ಲ. ರಾಮದಾಸು, ನಡುಬೀದಿಯಲ್ಲೆ ನಿಂತು, "ನೋಡು ಪುಲ್ಲಯ್ಯ, ನಾನೂ ಒಂದು ಕಾಲದಾಗ ಸುಳ್ಳು ಹೇಳ್ತಿದ್ದೆ—ಇದ್ದದ್ದು–ಇಲ್ಲದ್ದು ಹೇಳಿ, ಅವರಿವರ ಮುಂದೆ ಕೈಚಾಚಿ ಹೊಟ್ಟೆ ತುಂಬಿಕೊಳ್ಳುತ್ತಿದ್ದೆ. ಏನೊ, ಆ ಮಹಾತಾಯಿಯ ಭಕ್ತಿ ಹುಟ್ಟಿತು. ಆ ದೇವಿನ್ನ ನಂಬಿ, ಆಕೀನ್ನ ಆರಾಧಿಸಿದೆ...... ನನಗೂ ಸದ್ಗತಿ ಬಾತು."

ಪುಲ್ಲಯ್ಯ ಏನನ್ನೊ ಹೇಳಲು ಬಾಯಿ ತೆರೆದಾಗ, ರಾಮದಾಸು ಅದನ್ನು ಕೇಳಿಸಿ ಕೊಳ್ಳದೆ, "ನೀತಿಗಾಗಿ, ನ್ಯಾಯಕ್ಕಾಗಿ, ಹೊಟ್ಟೆಗಿಲ್ಲದ ಸಾಯಬಹುದು—ನಾಲ್ಕು ಜನ ರಿಂದ ಏಟು ತಿನ್ನಬಹುದು. ಆ ಮಹಾತಾಯಿ ನಮ್ಮಂತಹ ನಿರ್ಗತಿಕರಿಗೆ ಒಲಿತಾಳ.— ಅದಲ್ಲದ, ನನ್ನ ಮನಸ್ಸಿನ್ಯಾಗ ಯಾವ ಕೆಡಕೂ ಇರಲಾರದಾಗ, ಯಾರು ಏನು ಮಾಡಿ ದರೂ ನನಗೇನೂ ಆಗಾಣೆಲ್ಲ.—ಆಯ್ತು; ನೀನು ಹೋಗು ಪುಲ್ಲಯ್ಯ" ಎಂದು ರಾಮದಾಸು ಹೇಳಿದಾಗ, ಪುಲ್ಲಯ್ಯ ಅಲ್ಲಿಂದ ಹಿಂದಿರುಗಿದ.

ರಾಮದಾಸು ನಿಧಾನವಾಗಿ ಹೆಜ್ಜೆ ಇಡುತ್ತಾ ಮನೆ ಸೇರುವ ವೇಳೆಗೆ, ಅವನ ಮಗ, ಕೆಂಡಕಾರುತ್ತಾ, ಬಾಗಿಲ ಬಳಿಯೇ ನಿಂತಿದ್ದ. "ಊರಿನವರ ಜತಿ ಜಗಳಾಡಿ, ನನ್ನ ಮಾನ–ಮರ್ಯಾದಿ ಮಣ್ಣುಗೂಡಿಸಿ, ಈಗ ಇಲ್ಲಿಗ್ಯಾಕ ಬಂದೀದಿ. ಹೋಗು, ನನ್ನ ಮನ್ಯಾಗ ನೀನು ಕಾಲಿಡುವ ಅಗತ್ಯವಿಲ್ಲ. ಇಂದಿನಿಂದ ನೀನು ಬ್ಯಾರೆ ಇರು"—ಎಂದ ಮಗರಾಯನ ಮಾತುಕೇಳಿ ರಾಮದಾಸು ಅವಾಕ್ಕಾದ.

ಆ ಕ್ಷಣದಲ್ಲಿ, ರಾಮದಾಸುವಿನ ಕಣ್ಣುಗಳ ಮುಂದೆ ನಕ್ಷತ್ರಗಳಂತೆ ಹೊಳೆಯುವ ನೀಲಮ್ಮದೇವಿಯ ಪಾದಾರವಿಂದಗಳು ಕಾಣಿಸಿಕೊಂಡವು. ಇನ್ನು ತನಗೆ ಆ ದೇವಿಯ ಗುಡಿಯೇ ಗತಿ ಎಂದು ನಿರ್ಧರಿಸಿದ ಭಕ್ತ ರಾಮದಾಸು, ಮುಗುಳ್ನಕ್ಕ.

## [ 15 ]

ವೀರಾವೇಶದಿಂದ ಮನೆಗೆ ಹಿಂದಿರುಗಿದ ರಾಜಣ್ಣ, ಹೆಂಡತಿಯಿಂದ ಬಯ್ಯಿಸಿಕೊಳ್ಳು ವುದು ತಪ್ಪಲಿಲ್ಲ. ನಾಯ್ಡುವಿನ ಗತಿಯೂ ಅದೇ ಆಗಿತ್ತು. ಹೆಂಡತಿ ಬಾಯಿ ತೆರೆದಾಗ, ನಾಯ್ಡುವಿನ ಬಾಯಿ ಕಟ್ಟಿದಂತಾಗಿ, ಕಮಕ್–ಕಿಮಕ್ ಅನ್ನದೆ ಮೂಲೆ ಹಿಡಿದು ಕುಳಿತ. ಪುಲ್ಲಯ್ಯ ತನ್ನ ಕಾಲುಗಳ ಮೇಲೆ ಬೀಳುವಂತೆ ಮಾಡುತ್ತೇನೆಂದು, ರಾಜಣ್ಣನ ಹೆಂಡತಿ ಗಂಡನನ್ನು ಹುರಿದುಂಬಿಸಿದಳು. ನಾಯ್ಡುವಿನ ತಂದೆ, ರಾಮದಾಸುವನ್ನು ಸಮರ್ಥಿಸಿ ಮಾತನಾಡಿದಾಗ, ಅವನ ಸೊಸೆ ಅವನನ್ನು ತರಾಟೆಗೆ ತೆಗೆದುಕೊಂಡಳು.

ಒಂದು ಕಾಲದಲ್ಲಿ ಮಾವನನ್ನು ನೋಡಿ ಗದಗದ ನಡುಗುತ್ತಿದ್ದ ಸೊಸೆ, ಈಗ ಮಾವನನ್ನೆ ಗದರಿಸುವಂತಾಗಿದ್ದಳು.

ದಿನ ದಿನಕ್ಕೆ ಏರುತ್ತಿದ್ದ ಬೆಲೆಗಳಿಂದಾಗಿ, ಜನರಲ್ಲಿ ಹಾಹಾಕಾರವೆದ್ದಿತ್ತು. ಹೊಟ್ಟೆಗೆ ಗಂಜಿ ಕೂಡ ಸಿಗದಂತಾದಾಗ, ಎಷ್ಟೋ ಕುಟುಂಬಗಳು ಒಡೆದುಹೋದವು. ಬಡ ಜನರು, ತಮ್ಮಲ್ಲಿದ್ದ ಚೂರು–ಪಾರು ಒಡವೆ ವಸ್ತುಗಳನ್ನು ಕೂಡ ಮಾರಿಕೊಂಡು ಹೊಟ್ಟೆತುಂಬಿಕೊಂಡರು. ಕುಯ್ಲು ಪ್ರಾರಂಭವಾಗಿರಲಿಲ್ಲವಾದ್ದರಿಂದ, ಯಾರಿಗೇ ಆಗಲಿ, ಮಾಡಲು ಕೆಲಸವೂ ಇರಲಿಲ್ಲ. ಹಸಿವು, ಕೆಲವರನ್ನು ಊರು ಬಿಡಿಸಿತ್ತು. ಕೂಲಿ–ನಾಲಿ ಮಾಡಿಕೊಂಡು ಹೊಟ್ಟೆ ತುಂಬಿಕೊಳ್ಳುವ ಆಶೆಯಿಂದ ಪಟ್ಟಣ ಸೇರಿದವರು, ಅಲ್ಲಿಯೂ ಕೂಡ ಕೆಲಸ ಸಿಕ್ಕದಂತಾದಾಗ ಸುಳ್ಳು ಹೇಳುವುದು, ಕಳವುಮಾಡುವುದು ಕಲಿತುಕೊಂಡರು. ನ್ಯಾಯವಾಗಿಯೋ, ಅನ್ಯಾಯವಾಗಿಯೋ ಏನಾದರೂ ಗಿಟ್ಟಿದಲ್ಲಿ ಊರಿಗೆ ಬರುತ್ತಿದ್ದರು. ಇಲ್ಲದಿದ್ದಲ್ಲಿ ಪೋಲೀಸರ ಕೈಗೆ ಸಿಕ್ಕು, ಸಂತೋಷವಾಗಿಯೇ ಜೈಲಿಗೆ ಹೋಗುತ್ತಿದ್ದರು. ಈ ದಾರುಣ ಪರಿಸ್ಥಿತಿಯನ್ನು ಕಂಡು, ನರಸಿಂಹ ತಮಗೆ ಸುಳ್ಳು ಹೇಳಿದನೆಂದು, ಊರ ಜನರು ಅವನನ್ನು ಹಂಗಿಸತೊಡಗಿದರು. ಆದರೆ, ನರಸಿಂಹನ ಬಾಧೆ ಬೇರೆಯೇ ಆಗಿತ್ತು. ಒಪ್ಪತ್ತು ತಾನು ಊಟಮಾಡದಿದ್ದರೆ, ಮಕ್ಕಳಿಗಾದರೂ ಆದೀತೆಂದು, ಒಪ್ಪತ್ತು ಉಪವಾಸವೇ ಇರುತ್ತಿದ್ದ. ಯಾರಾದರೂ ಕೇಳಿದಲ್ಲಿ, ತಾನು ಯಾವುದೊ ವ್ರತ ಹಿಡಿದವನಂತೆ ಮಾತನಾಡುತ್ತಿದ್ದ. ಯಾರಾದರೂ ತನ್ನನ್ನು ಹಂಗಿಸಿದಲ್ಲಿ —"ಕೂಸು ಹುಟ್ಟಿದ ಕೂಡಲೇ ನಡೀತದೇನು? ಸ್ವಲ್ಪ ಸಮಾಧಾನ ಮಾಡಿಕೊಳ್ರಿ. ನಮ್ಮ ಸರ್ಕಾರಕ್ಕ ಇನ್ನೂ ಅನುಭವ ಸಾಲದು, ನಾಲ್ಕು ದಿನ ಅಧಿಕಾರ ನಡೆಸಿ ಅನುಭವ ಗಳಿಸಲಿ. ಆಮ್ಯಾಲೆ, ನಾವು ಹೀಂಗ ಉಪವಾಸ ಬಿದ್ದು ಒದ್ದಾಡಲಿಕ್ಕೆ ಬಿಡ್ತದೇನು ನಮ್ಮ ಸರ್ಕಾರ......" ಎಂದು ಸಮಾಧಾನ ಹೇಳಲು ಪ್ರಯತ್ನಿಸುತ್ತಿದ್ದ ನರಸಿಂಹ. "ಇದನ್ನೆಲ್ಲ ಯಾರಿಗೆ ಹೇಳ್ತೀದಿ. ಸರ್ಕಾರ ಮನಸ್ಸು ಮಾಡಿದರ, ನಂದೀನ್ನ ಕತ್ತಿ ಮಾಡಬಹುದು, ಕತ್ತೀನ್ನ ನಂದಿ ಮಾಡಬಹುದು. ಈ ಅಭಾವ, ಈ ಕೊರಗು ಹೋಗಲಾಡಿಸೋದು ಏನು ಮಹಾ"—ಎಂದು ಯಾರಾದರೂ ಸವಾಲು ಹಾಕಿದಲ್ಲಿ, ನರಸಿಂಹ ಭಾಷಣವನ್ನೆ ಬಿಗಿಯುತ್ತಿದ್ದ.

"ಪ್ರಜೆಗಳಿಗೆ ಒಳ್ಳೆಯದಾಗಲೀ ಅಂತ ಸರ್ಕಾರ ಕಂಟ್ರೋಲ ಜಾರಿಗೆ ತಂದಿತು. ಆದರ ಸರ್ಕಾರದ ನೌಕರರು ಒಂದು ಕಡೆ, ವ್ಯಾಪಾರಿಗಳು ಮತ್ತು ಊರ ಮುಖಂಡರು ಮತ್ತೊಂದು ಕಡೆ ಆಗಿ, ಪ್ರಜೆಗಳ ಹೊಟ್ಟೆಯುರಿಸಿ ಗಂಟುಮಾಡಿಕೊಂಡು ಹಾಯಾಗಿದ್ದಾರ. ಆಯ್ತು, ಅವರಾದರೂ ಎಷ್ಟು ತಿಂದಾರು, ಎಷ್ಟು ಗಂಟುಮಾಡಿಕೊಂಡಾರು —ಅನ್ಯಾಯವಾಗಿ ಗಳಿಸಿದ ದುಡ್ಡು, ಅನ್ಯಾಯವಾದ ರೀತಿಯಲ್ಲೆ ಕರಗಿಹೋಗ್ತದ. ಮಾಡಿದ ಪಾಪ ಯಾರನ್ನೂ ಬಿಟ್ಟಿಲ್ಲ. ನಿಮಗ, ನನಗ, ಸಾವು ಖಚಿತವಾದರೂ, ನ್ಯಾಯಕ್ಕ—ನೀತಿಗೆ ಸಾವು ಇಲ್ಲ"—ಎಂದು ಹೇಳುತ್ತಿದ್ದ ನರಸಿಂಹ, ತನ್ನ ಎದೆಯನ್ನು

ತಟ್ಟಿಕೊಂಡು, "ನನ್ನ ಸರ್ಕಾರ ದೊಡ್ಡದಾಗಿ, ಬಲಿಷ್ಠವಾಗಿ ಅಧಿಕಾರ ಚಲಾಯಿಸಲು ಪ್ರಾರಂಭಿಸಿದಾಗ ನಾನು ಸುಖಪಡ್ತೀನಿ. ಈಗ ಅನ್ಯಾಯ ಮಾಡ್ತಿರೋವವರೆಲ್ಲಾ ಆಗ ಅಳದಿದ್ರ ನೋಡ್ರಿ. ಮಾಡಿದ ಕರ್ಮ ಬಿಟ್ಟಿದ್ದಲ್ಲ. ನಾನಂತೂ, ಹೀಂಗs ನ್ಯಾಯಕ್ಕ ನೀತಿಗೆ ದುಂಬಾಲು ಬಿದ್ದು ಸಾಯ್ತೀನಾಗಲಿ...... ಅನ್ಯಾಯಕ್ಕ, ಅನೀತಿಗೆ ಕೈಹಾಕಾಣೆಲ್ಲ"—ಎಂದು ಸಾರುತ್ತಿದ್ದ.

ಪುಲ್ಲಯ್ಯ, ನರಸಿಂಹನ ಬೆನ್ನು ತಟ್ಟಿ, "ಸರಿಯಾದದ್ದನ್ನೇ ಹೇಳದಿ ಮಹಾರಾಯ. ನಾವು ಹೀಂಗs ಸಾಯ್ತೀವಿ ಹೊರತಾಗಿ...... ಅನ್ಯಾಯಕ್ಕ ಬಾಗೋದಿಲ್ಲ. ಈ ದೊಡ್ಡ ಮನುಷ್ಯೇರು ಏನು ಮಾಡ್ತಾರೊ ನೋಡೋಣ"—ಎನ್ನುತ್ತಿದ್ದ.

ಈ ಮಾತುಗಳನ್ನು ಕೇಳಿಸಿಕೊಂಡಿದ್ದ ರಾಜಣ್ಣ ಮುಸಿಮುಸಿ ನಗುತ್ತಿದ್ದ. ಒಂದು ದಿನ, ಅವನ ಜೊತೆಗಿದ್ದ ನಾಯ್ಡು, "ಯಾಕಲಾ ನರಸ್ಯಾ, ರೇಷನ್ ತೊಗೊಳ್ಳಿಕ್ಕೆ ಬರಲಿಲ್ಲ. ನಿನಗ ಬ್ಯಾಡಾದರ ಹೇಳು. ನಿನ್ನ ಕಾರ್ಡು ಕೊಟ್ಟರ, ಮತ್ತು ಬ್ಯಾರೆ ಅವರಿಗಾದರೂ ಪ್ರಯೋಜನ ಆಗ್ತದ"—ಎಂದು ಕೆಣಕಿದ.

"ನನ್ನ ಕಾರ್ಡು ಯಾಕ ಕೊಡಬೇಕು. ನಾನು ನನಗ ಬೇಕಾದಾಗ ರೇಷನ್ ತೊಗೊತೀನಿ, ಇಲ್ಲದಾಗ ಬಿಡ್ತೀನಿ."

"ನಿನ್ನ ಕಾರ್ಡು ಕೊಡದಿದ್ದರ ಕೆಲಸ ನಡೆಯಾಣೆಲ್ಲ" ಎಂದು ಹೇಳಿ, ನಾಯ್ಡು ತನ್ನ ಕೈಗಡಿಯಾರವನ್ನು ನೋಡಿ ಹೊರಟುಹೋದ.

"ನರಸಿಂಹ, ಇವರ ಉರದಾಟ ಯಾಕೊ ಬಹಳಾಯ್ತು. ನಾವು, ಇದನ್ನೆಲ್ಲ ಅಮಲ್ದಾರರಿಗೆ ಯಾಕ ಹೇಳಬಾರದು"—ಪುಲ್ಲಯ್ಯ ಕೇಳಿದ.

"ಎಲ್ಲಾರ ಹಣೆಬರಹಾನೂ ಇಷ್ಟ ಆಗ್ಯದ. ಆ ಅಮಲದಾರ ಏನು ಕಡಿಮಿ ಅಂತ ತಿಳಿದಿದೇನು? ಮಗಳ ಮದುವೆಗಾಗಿ ಇಡೀ ಈ ತಾಲೂಕ ತೊಳೆದುಬಿಟ್ಟ ಭೂಪ. ಆಯ್ತು, ರಾಡಿ ನೀರು ಹರಿದುಹೋದ ಮ್ಯಾಲೆ, ತಿಳಿನೀರು ಬಂದೇ ಬರ್ತದ. ಯಾರು ಮಾಡಿದ ಕರ್ಮ ಅವರಿಗೆ. ಅವರು ನನ್ನ ಕಣ್ಣಿಗೆ, ನಿನ್ನ ಕಣ್ಣಿಗೆ ಮಣ್ಣು ಹಾಕಿ ನಮ್ಮನ್ನು ಮಂಕುಮಾಡಬಹುದು. ಆ ದೇವರ ಕಣ್ಣು ಮುಚ್ಚಲಿಕ್ಕೆ ಆಗ್ತದೇನು ಇವರಿಂದ"—ಎನ್ನುತ್ತಾ ನರಸಿಂಹ ಕಾಲ್ತೆಗೆದ.

ಪುಲ್ಲಯ್ಯ ಮನೆ ಮುಟ್ಟಿದಾಗ, ಮಲ್ಲೇಶಿ ಕುಣಿಯುತ್ತಾ ಬಂದು ನಿಂತ. ಅವನನ್ನು ಎತ್ತಿಕೊಂಡು ಪುಲ್ಲಯ್ಯ ಮುದ್ದಾಡಿದ. ಅವನು ಕಿಲಕಿಲನೆ ನಕ್ಕಾಗ, ಆ ಒಂದು ಕ್ಷಣ ತನ್ನೆಲ್ಲ ಸಂಕಷ್ಟಗಳನ್ನೂ ಮರೆತ.—ಆ ವೇಳೆಗಾಗಲೇ ಪೈರು ಸಾಕಷ್ಟು ಬೆಳೆದಿತ್ತು. ಅಲ್ಲಲ್ಲಿ ಕುಯ್ಲಿನ ಕೆಲಸ ಕೂಡ ಪ್ರಾರಂಭವಾಗಿತ್ತು. ಅಕ್ಕಿಯ ಬೆಲೆ, ಕಂಟ್ರೋಲಿನಲ್ಲಿ ಪಲ್ಲಕ್ಕೆ ಇನ್ನೂರು ರೂಪಾಯಿಗಳಾಗಿತ್ತಾದರೂ, ಅದು ಆ ಬೆಲೆಗೆ ದೊರೆಯುತ್ತಿರಲಿಲ್ಲ. ಕಾಳಸಂತೆಯಲ್ಲಿ ಮಾತ್ರ, ಅಕ್ಕಿಯ ಬೆಲೆ ನಾನ್ನೂರು—ಆರುನೂರಕ್ಕೆ ಏರಿತ್ತು.

ಈ ಸಲದ ಫಸಲು ಸಮೃದ್ಧಿಯಾಗಿತ್ತು. ಕುಯ್ಲಾಗಿ ಧಾನ್ಯ ಮನೆಗೆ ಬಂದು ಬಿದ್ದರೂ

ಕೂಡ, ಒಬ್ಬರೂ ಒಂದು ಹಿಡಿ ಭತ್ತವನ್ನು ಯಾರಿಗೆ ಆಗಲಿ ದಾನ ಮಾಡಲಿಲ್ಲ. ಎಲ್ಲರೂ ಭತ್ತವನ್ನು ಬಂಗಾರದಂತೆ ಬಚ್ಚಿಟ್ಟುಕೊಂಡಿದ್ದರು. ಆದರೆ ನೀಲಿ ಮಾತ್ರ, ಪ್ರತಿ ಸಲದಂತೆ ಈ ಸಲವೂ ಕೂಡ ಭತ್ತ ಅಳೆದುಕೊಡಲು ಪ್ರಾರಂಭಿಸಿದಾಗ, ಪುಲ್ಲಯ್ಯ ರೇಗಿದ. "ಭತ್ತ ಈಗ ಬಂಗಾರಕ್ಕಿಂತಲೂ ತುಟ್ಟಿ ಆಗ್ಯದ. ಸ್ವಲ್ಪ ಹಿಡಿತಡಿ ಮಾಡಿ ಸಂಸಾರ ನಡಸು"—ಎಂದು ಹೆಂಡತಿಗೆ ಬುದ್ಧಿ ಹೇಳಿದ. ಆದರೆ, ನೀಲಿ ಸುಮ್ಮನೆ ನಕ್ಕು, —"ಇದನ್ನ ಬಂಗಾರ ಅಂತ ತಿಳಿದು ಮನ್ಯಾಗ ಇಟ್ಟುಕೊಳ್ಳಲಿಕ್ಕೆ ಆಗ್ತದೇನು? ಎಲ್ಲಾನೂ ನನ್ನದು, ಎಲ್ಲಾನೂ ನನಗ ಬೇಕು ಅಂದರ—ಉಳಿದವರು ಏನು ಉಪವಾಸ ಸಾಯಬೇಕೇನು"—ಎಂದು ಕೇಳಿದಳು.

ಪುಲ್ಲಯ್ಯ ಮತ್ತೆ ಮಾತನಾಡಲಿಲ್ಲ. ಅವನ ಧಣಿ ಸೀತಾರಾಮಸ್ವಾಮಿ, ಸರ್ಕಾರ ದಿಂದ ಅನುಮತಿ ಪಡೆದು, ತನ್ನ ಪಾಲಿನ ಧಾನ್ಯ ತಾನು ಪಡೆದುಕೊಂಡು ಹೋದ. ಮಗ ಹೊಲದಲ್ಲಿ ಕಾಲಿಟ್ಟಿದ್ದರಿಂದಲೇ, ಅವನ ಕಾಲಗುಣದಿಂದಲೇ, ಈ ಸಲ ಬೆಳೆ ಸಮೃದ್ಧಿಯಾಗಿದ್ದೆಂದು, ಪುಲ್ಲಯ್ಯ ಊರಿನ ತುಂಬ ಹೇಳಿಕೊಂಡು ಬಂದ.

1948ನೇ ಸಾಲು. ಹೊಲಗಳಲ್ಲಿ ಹೆಸರುಕಾಳು ಬೆಳೆದು ನಿಂತಿತ್ತು. ಸಂಕ್ರಾಂತಿ ಹಬ್ಬಕ್ಕೆ ಸರಿಯಾಗಿ, ಪುಲ್ಲಯ್ಯ, ಮಗನಿಗಾಗಿ ಇನ್ನೊಂದು ಬಂಗಾರದ ಕಡೆ ಮಾಡಿಸಿದ. ಮಲ್ಲೇಶಿ ಮೊದಮೊದಲು ಅದನ್ನು ಕಿತ್ತೊಗೆಯಲು ಪ್ರಯತ್ನಿಸಿದನಾದರೂ, ಅಭ್ಯಾಸ ವಾದನಂತರ ಸುಮ್ಮನಿದ್ದ. ಈಗ ಅವನು ತಾಯಿಯ ಸೆರಗನ್ನು ಬಿಟ್ಟು ತಂದೆಯ ಹಿಂದೆ ಹಿಂದೆ ಹೊರಡಲು ಪ್ರಾರಂಭಿಸಿದ್ದ. ರಾತ್ರಿ ಯಾವಾಗಲಾದರೂ ಮಲ್ಲೇಶಿ ಅಳಲು ಪ್ರಾರಂಭಿಸಿದಲ್ಲಿ, ಪುಲ್ಲಯ್ಯನೆ ಎದ್ದು ಅವನನ್ನು ಎತ್ತಿಕೊಂಡು, ಭುಜದ ಮೇಲೆ ಹಾಕಿ ಕೊಂಡು ತಟ್ಟಿ ಮಲಗಿಸುತ್ತಿದ್ದ. ನಾಲ್ಕು ದಿನ ಕೂಸು ಸರಿಯಾಗಿ ನಿದ್ದೆ ಮಾಡದೆ ಅಳಲು ಪ್ರಾರಂಭಿಸಿದಾಗ, ಯಾವುದೊ ದುಷ್ಟಗಾಳಿ ತಟ್ಟಿರಬಹುದೆಂದು ಶಂಕಿಸಿ, ನೀಲಿಯ ಅಜ್ಜಿ, ಮರಿಮೊಮ್ಮಗನ ದೃಷ್ಟಿ ತೆಗೆಸಿ, ಮಂತ್ರ ಹಾಕಿಸಿದಳು. ಅದಾದ ಮೇಲೆ ಮಲ್ಲೇಶಿಯ ಅಳುವು ಕಡಿಮೆಯಾಗಿತ್ತು. ಒಮ್ಮೊಮ್ಮೆ ತಂದೆ ಹೊರಹೋದಾಗ, ಆತನನ್ನು ನೆನೆಸಿಕೊಂಡು ಅಳುತ್ತಿದ್ದ. ಆಗಾಗ ತಂದೆಯ ಹಿಂದೆ ಹೋಗುತ್ತಿದ್ದ. ಪುಲ್ಲಯ್ಯ ಕರೆದೊಯ್ಯದಿದ್ದಾಗ ದೊಡ್ಡ ರಾಗ ತೆಗೆಯುತ್ತಿದ್ದ.

ಮುದುಕಿ, ಮರಿಮೊಮ್ಮಗ ಅತ್ತಾಗಲೆಲ್ಲಾ, ಏನಾದರೂ ಹಾಡುತ್ತಿದ್ದಳು. ಮೊಮ್ಮಗ ಅಳುವುದನ್ನು ನಿಲ್ಲಿಸದೆ, ದಿನದಿನಕ್ಕೆ ಕಿರುಕುಳ ಕೊಡಹತ್ತಿದಾಗ, ಯಾವುದೊ ಬಾಲಾರಿಷ್ಟ ಬಡಿದುಕೊಂಡಿರಬಹುದೆಂದು, ಮಣ್ಣಿನ ಗೊಂಬೆ ಮಾಡಿಸಿ, ಐದು ಎಲೆಗಳು, ಐದು ಕಡಬು, ಕಪ್ಪು ಬಟ್ಟೆ, ಅನ್ನ—ಎಲ್ಲವನ್ನೂ ಒಂದು ಮರದಲ್ಲಿ ಇಡಿಸಿ ಒಂದು ದೀಪ ಇಟ್ಟು, ಊರಿನ ದಕ್ಷಿಣಕ್ಕೆ ಅದನ್ನು ಹಾಕಿಸಿದಳು. ಮಗುವಿನ ಅಳು ಕಡಿಮೆ ಆಯಿತಾ ದರೂ, ಅವನು ಅದೇಕೊ ಸೊರಗತೊಡಗಿದ. ಆಕಾಶದಲ್ಲಿ, ಪೂರ್ವದಲ್ಲಿ ರಕ್ತವರ್ಣದ ಮೋಡಗಳು ಕಾಣಿಸತೊಡಗಿದವು. ಇದನ್ನೆಲ್ಲ ನೋಡಿದ ಮುದುಕಿ, ಯಾವುದೊ

ಅನರ್ಥವಾಗಲಿದೆ ಎಂದು ಅನುಮಾನಿಸಿದಳು. "ನಮ್ಮ ಕಾಲದಾಗ, ಈ ಕಂಟ್ರೋಲು ಈ ರೇಷನ್, ಅದು—ಇದೂ ಒಂದೂ ಇರಲಿಲ್ಲ. ಎಂಥಾ ಕಾಲ ಬಂತು—ಹಾಳಾದ್ದು" —ಎಂದು ಗೊಣಗಿಕೊಂಡಳು ಮುದುಕಿ.

ನೀಲಿ, ಮನೆಯಲ್ಲಿ ಉಳಿದಿದ್ದ ಚೂರು ಗಂಜಿಯನ್ನು ಕೂಡ, ವೆಂಕಣ್ಣ, ಗೌರಮ್ಮ ನಂತಹ ಅನಾಥರಿಗೆ ಹಾಕುತ್ತಿದ್ದಳು. ಒಂದು ದಿನ ಪುಲ್ಲಯ್ಯ, ಹಗಲು ಕಳೆದರೂ ಮನೆಗೆ ಬಂದಿರಲಿಲ್ಲ. ನೀಲಿ, ಗಂಡನಿಗಾಗಿ ಅನ್ನ ಮಾಡಿಟ್ಟು ಕುಳಿತಿದ್ದಳು. ಅಷ್ಟರಲ್ಲೇ ಭಿಕ್ಷೆ ಬೇಡುತ್ತಾ ಒಬ್ಬ ಕುಷ್ಠರೋಗಿ ಅವಳ ಮನೆಯ ಬಾಗಿಲಿಗೆ ಬಂದ. ಕುಷ್ಠರೋಗ ಮೈತುಂಬ ಹರಡಿಕೊಂಡು, ನೋಡಲು ಭಯಾನಕವಾಗಿ ಕಾಣುತ್ತಿದ್ದ. ಅವನು, ಪುಲ್ಲಯ್ಯನ ಮನೆಯ ಮುಂದೆ ಬಂದು, "ಈ ಊರಿನ ಆ ಕೊನೆಯಿಂದ ಇಲ್ಲಿವರೆಗೂ ಅಂಗಲಾಚಿ ಬೇಡಿಕೊಳ್ಳುತ್ತಾ ಬಂದೆ. ಆದರ, ಒಬ್ಬರಿಗೂ ನನ್ನ ಮ್ಯಾಲೆ ಕನಿಕರ ಬರ ಲಿಲ್ಲ...... ಎರಡು ದಿನದಿಂದ ಉಪವಾಸ ಇದ್ದೀನಿ. ಹಸಿವು ತಡಕೊಳ್ಳಲಿಕ್ಕೆ ಆಗದ, ಹೀಂಗ ಹೋಗಿ ನದ್ಯಾಗ ಬಿದ್ದು ಸಾಯಬೇಕಂತ ಮಾಡೀನಿ. ನನ್ನ ಹೆಣ, ಮೀನುಗಳಿಗೆ ತೋಳಗಳಿಗೆ ಆಹಾರ ಆದರ, ಅಷ್ಟೇ ನನ್ನ ಪುಣ್ಯ ಅಂತ ಅಂದಕೊಂತೀನಿ......" ಎಂದು ನೀಲಿಗೆ ಹೇಳಿದ.

"ರಾಮ...... ರಾಮ...... ಎಂಥಾ ಮಾತಪ್ಪಾ ಅದು."

"ನಾನು ಯಾವ ಪಾಪಾನೂ ಮಾಡಿಲ್ಲ ತಾಯಿ. ಆದರೂ ಈ ರೋಗ ನನಗ ಬಡಿದು ಕೊಂಡತು. ನನಗ ಹೀಗಾಯಿತಲ್ಲಾ ಅಂತ ದೇವರನ್ನು ದೂಷಿಸಲಿಕ್ಕೆ ನನಗ ಅಧಿಕಾರ ಇಲ್ಲ. ಯಾವ ಜನ್ಮದಾಗ ಏನು ಪಾಪ ಮಾಡಿದ್ದೆನೊ ಏನೊ, ಈ ಜನ್ಮದಾಗ ಅನುಭವಿಸಬೇಕಾಗ್ಯದ"—ಎಂದು ಭಿಕ್ಷುಕ ದುಃಖ ತೋಡಿಕೊಂಡ.

ನೀಲಿ, ಎರಡನೆಯ ಮಾತನಾಡದೆ ಒಳಗೆ ಹೋಗಿ, ಗಂಡನಿಗಾಗಿ ಮಾಡಿಟ್ಟಿದ್ದ ಅನ್ನ ದಲ್ಲಿ ಅರ್ಧ ತಂದು ಆ ಭಿಕ್ಷುಕನ ಕೈಯಲ್ಲಿದ್ದ ಪಾತ್ರೆಗೆ ಹಾಕಿದಳು. ತನ್ನ ಪಾತ್ರೆಗೆ ಬೀಳುತ್ತಲೇ, ಹಸಿದ ಆ ಭಿಕ್ಷುಕ—ಗಬಗಬನೆ ತಿಂದು ಮುಗಿಸಿದ. ಅದನ್ನು ನೋಡಿದ ನೀಲಿ, ಒಳಗೆ ಹೋಗಿ ಇನ್ನೂ ಸ್ವಲ್ಪ ಅನ್ನ ತಂದು ಹಾಕಿದಳು. ಭಿಕ್ಷುಕ, ಅದನ್ನು ತುತ್ತು ಮಾಡಿ ಬಾಯಿಗೆ ಹಾಕಿಕೊಳ್ಳುತ್ತಲೇ—"ತಾಯಿ, ಈ ಹೊಟ್ಟೆ ಒಂದು ಸಮುದ್ರದ್ಹಾಂಗ ಅದ. ಹಸಿವು ಒಂದು ಉರಿ ಇದ್ಹಾಂಗ. ಉರಿಗೆ, ಬೆಂಕಿಗೆ ತುಪ್ಪ–ಎಣ್ಣೆ ಹಾಕುತ್ತಲೇ ಇರಬೇಕು. ಇಲ್ಲದಿದ್ದರ, ಅದು ತಣ್ಣಗಾಗಿ ಮನುಷ್ಯನನ್ನೆ ಆಹುತಿ ತಗೊತದ. ಅಮ್ಮಾ ಇವತ್ತು ಒಂದು ಜೀವ ಉಳಿಸಿದ ಪುಣ್ಯ ನಿನಗ ಬಂತು. ನಿನ್ನ ಈ ಧರ್ಮ, ನಿನ್ನನ್ನು ಸದಾ ಕಾಪಾಡ್ತದಮ್ಮಾ"—ಎಂದು ಹರಸಿದ.

ನೀಲಿ ಒಲೆ ಹೊತ್ತಿಸುತ್ತಿದ್ದಾಗ ಪುಲ್ಲಯ್ಯ ಮನೆಗೆ ಹಿಂದಿರುಗಿದ. ಮನೆಯಲ್ಲಿ ಕಾಲಿಡುತ್ತಲೇ, ಓಡಿಬಂದ ಮಗನನ್ನೂ ಸಹ ನಿರ್ಲಕ್ಷಿಸಿ, ನೇರವಾಗಿ ಹೋಗಿ ಮಂಚದ ಮೇಲೆ ಬಿದ್ದುಕೊಂಡ. ಅವನ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು.

ಸೀಲಿ ಒಲೆಯ ಮುಂದಿನಿಂದ ಎದ್ದು ಬಂದವಳು, ಗಂಡನನ್ನು ನೋಡಿ ಚಕಿತಳಾದಳು. ತಂದೆಯ ಕಣ್ಣಿನಲ್ಲಿ ನೀರು ನೋಡಿ. ಮಲ್ಲೇಶಿ ಕೂಡ ಅಳತೊಡಗಿದ. ನೀಲಿಯ ಕಣ್ಣಿನಲ್ಲೂ ನೀರಾಡಿತು. ಮುದುಕಿಯ ಕಣ್ಣುಗಳೂ ಸಹ ಮಸುಕುಮಸುಕಾದವು. ಅವಾಗಲೇ ಊರೆಲ್ಲಾ ಸುದ್ದಿ ಹರಡಿತ್ತು. ಹಿರಿಯರು. ಕಿರಿಯರು, ಮುದುಕರು— ಮಕ್ಕಳು, ಹೆಣ್ಣು–ಗಂಡು, ಊರಿನಲ್ಲಿನ ಎಲ್ಲರ ಕಣ್ಣುಗಳಲ್ಲೂ ಅಂದು ನೀರಾಡಿತು. ಕುಷ್ಠರೋಗಿಗೆ ವಿಷಯ ತಿಳಿದಾಗ, ಅವನೂ ಕೂಡ ತಲೆ ಜಜ್ಜಿಕೊಂಡು ಅಳತೊಡಗಿದ.

ಊರಿಗೆ ಊರೇ ನೀಲಮ್ಮಳ ಗುಡಿಯ ಬಳಿ ಸೇರಿತ್ತು. ಯಾವನೊ ತಲೆತಿರುಕ, ಭಯ–ಭಕ್ತಿಯಿಲ್ಲದ ನಾಸ್ತಿಕ ದೇವಿಯ ವಿಗ್ರಹವನ್ನು ಒಡೆದು ಅಪವಿತ್ರಗೊಳಿಸಿದ್ದ. ದೇವಿಯ ವಿಗ್ರಹವಿರದಿದ್ದರೂ, ದೇವಿ ತಮ್ಮ ಕೈಬಿಡಲಾರಳೆಂದು ಕೆಲವರು ಸಮಾಧಾನ ಪಟ್ಟುಕೊಂಡರು. ದೇವರು ಇಲ್ಲದೆ ಇದ್ದಲ್ಲಿ ಈ ಪ್ರಪಂಚ ಇರಲು ಸಾಧ್ಯವೇ— ಪ್ರಳಯವಾಗಿ ಎಲ್ಲವೂ ನಾಶವಾಗುವುದಿಲ್ಲವೇ—ಎಂದು ಇತರ ಕೆಲವರು ಹೇಳು ತ್ತಿದ್ದರು. ಎಲ್ಲರೂ, ಆತ್ಮಶಾಂತಿಗಾಗಿ. ತಮ್ಮ ಮನಸ್ಸಿನ ದುಗುಡವನ್ನು ಕಡಿಮೆಮಾಡಿ ಕೊಳ್ಳುವುದಕ್ಕಾಗಿ ಪ್ರಾರ್ಥನೆ ಸಲ್ಲಿಸಿದರು. ಅದಾದ ಹತ್ತನೆಯ ದಿನ, ಗುಡಿಯ ಎದುರಿನ ವಿಶಾಲವಾದ ಸ್ಥಳದಲ್ಲಿ, ಊರಿನ ಜನರು ಸೇರಿ ಅನ್ನಸಂತರ್ಪಣೆ ನಡೆಸಿದರು. ಗುಡಿಯ ಬಾಗಿಲ ಬಳಿ ಕುಳಿತಿದ್ದ ರಾಮದಾಸು, ಊಟಕ್ಕೆ ಕುಳಿತಿದ್ದ ಭಿಕ್ಷುಕರ ಮುಖ ನೋಡಿ ಸಂತಸಪಟ್ಟ. ನೀಲಮ್ಮಳತ್ತ ನೋಡಿದ. ಆ ಮಹಾತಾಯಿ ಆನಂದದಿಂದ ನಗುತ್ತಿರುವಂತೆ ಭಾಸವಾದಾಗ, ರಾಮದಾಸು, ಅಲ್ಲಿ ಸೇರಿದ್ದ ಜನರನ್ನುದ್ದೇಶಿಸಿ, "ನೋಡ್ರಿ, ಆ ಮಹಾತಾಯಿಗೆ ಸಂತೋಷವಾಗಿದೆ...... ಆ ಗಾಂಧಿ ಮಹಾತ್ಮ ಒಬ್ಬ ದೇವರು—ಆ ದೇವರ ಹೆಸರು ಹೇಳಿ ಒಳ್ಳೆಯ ಕೆಲಸ ಮಾಡ್ರಿ. ನೀವು ಒಳ್ಳೆ ಕೆಲಸಕ್ಕ ಕೈಹಾಕಿದರ, ಎಲ್ಲಾ ಅಪಶಕುನಗಳೂ ದೂರವಾಗಿ, ದೇವಿಗೆ ಸಂತೋಷ ಆಗ್ತದ"— ಎಂದು ಕೂಗಿ ಹೇಳಿದ.

ಅಲ್ಲಿಯೇ ಕುಳಿತಿದ್ದ ನರಸಿಂಹ ಸರಕ್ಕನೆ ಮೇಲೆದ್ದು, "ಆ ದೇವರನ್ನು, ಇನ್ನು ನಾವು ಮೊದಲಿನ ರೂಪದಾಗ ನೋಡಲಿಕ್ಕಾಗುವುದಿಲ್ಲ.—ಆದರ ನಮ್ಮಮ್ಮ ಮಹಾತಾಯಿ ಮನಸ್ಸು ಮಾಡಿದ್ದಕ್ಕ. ಇಂದು ಇಷ್ಟು ಜನರು ಇಲ್ಲಿ ಸೇರಿದರು. ಇಲ್ಲದಿದ್ದರ, ಆ ದೇಸಾಯರ ಹಾಂಗ ಎಲ್ಲರೂ ತಮ್ಮತಮ್ಮ ಮನ್ಯಾಗ ಕೂತಿರತಿದ್ದರು. ಮನ್ಯಾಗ ಕೂತು ಹೊಟ್ಟೆತುಂಬ ಒಬ್ಬನೇ ಉಂಡು, ಉಳಿದವರು ಏನಾರ ಆಗಲಿ ಅಂಬುವವನು ಮನುಷ್ಯನೇ ಅಲ್ಲ. ಇದ್ದುದರಲ್ಲೆ ತಾನೂ ಉಂಡು ನಾಲ್ಕು ಜನರಿಗೂ ನೆರವಾಗುವ ವ್ಯಕ್ತಿಯೇ ನಿಜವಾದ ಮನುಷ್ಯ. ತಾನು ಉಣ್ಣದೆ, ತನ್ನ ಪಾಲನ್ನು ಇತರರಿಗೆ ಕೊಡು ವವನು, ನಿಜವಾಗಿಯೂ ಮಹಾಪುರುಷ. ಈ ಊರಾಗಂತೂ ಕಂಡಕಂಡವರು ದೊಡ್ಡ ಮನುಷ್ಯರಾಗಿ ಮೆರೀತಾರ ಆತು......" ಎಂದು ಬಾಯಿಗೆ ಬಂದದ್ದನ್ನೆಲ್ಲ ಹೇಳ ತೊಡಗಿದ.

ಇದನ್ನು ಕೇಳಿಸಿಕೊಂಡ ಊರಿನ ಹಿರಿಯರು ಮುಖ ಸೊಟ್ಟು ಮಾಡಿಕೊಂಡರು. ಕಿರಿಯರು ನರಸಿಂಹ ಹೇಳಿದ್ದನ್ನು ಶ್ರದ್ಧೆಯಿಂದ ಕೇಳಿ, ತಲೆದೂಗಿದರು. ಅಷ್ಟರಲ್ಲಿ ಅದೆಲ್ಲೊ ಇದ್ದ ನಾಯ್ಡು ಬಂದು, ಸಂಜೀವಿಯ ಕಿವಿಯಲ್ಲಿ ಏನೊ ಹೇಳಿ ಹೋದ. ಸಂಜೀವಿ, ನರಸಿಂಹನ ಕೈಹಿಡಿದು ಎಳೆದು, "ನಿನ್ನ ಭಾಷಣ ಆಮ್ಯಾಲೆ ಮಾಡುವಿಯಂತ, ಈಗ ಅನ್ನ ಬಡಿಸು. ಬಾ...... ಬಾ, ಇತ್ಲಾಗ......" ಎಂದು ಕರೆದ.

ನರಸಿಂಹ ಇನ್ನು ಕೆಲಸ ಮಾಡುವುದನ್ನು ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲೆಂದು ಸಂಜೀವಿಯ ಹಿಂದೆ ಹೊರಟು, ಸಾರು ಬಡಿಸಲು ಮುಂದಾದ.

## [ 16 ]

ಮಗ ಬಂದು ತನ್ನ ಕೊರಳಿಗೆ ಕೈಹಾಕಿ ಜೋತುಬಿದ್ದಾಗ, ಪುಲ್ಲಯ್ಯ ಅವನನ್ನು ಹಾಗೆಯೆ ಎತ್ತಿಕೊಂಡು ರಸ್ತೆಗೆ ಇಳಿದ. ಸಂತೋಷದಿಂದ ಕೇಕೆ ಹಾಕುತ್ತಿದ್ದ ಮಲ್ಲೇಶಿ, ಓಡುವಂತೆ ಬಲಾತ್ಕರಿಸಿದಾಗ. ಪುಲ್ಲಯ್ಯ ಓಡಲೂ ಸಹ ಪ್ರಾರಂಭಿಸಿದ. ಹೀಗೆ ಆಡಆಡುತ್ತಲೇ, ಪುಲ್ಲಯ್ಯ ಗಂಗವ್ವಳ ಮನೆ ತಲುಪಿದ.

ಗಂಗವ್ವ ಹೊಟ್ಟೆನೋವಿನಿಂದ ನರಳುತ್ತಿದ್ದಳು. ಸೋಡಾ, ಅಜವಾನ—ಯಾವುದ ರಿಂದಲೂ ಅವಳ ಹೊಟ್ಟೆನೋವು ಕಡಿಮೆಯಾಗಲಿಲ್ಲ. ಪಕ್ಕದ ಊರಿನ ನಾಟಿವೈದ್ಯ ಕೊಟ್ಟ ಲವಣಗಳಿಂದ ಹೊಟ್ಟೆನೋವು ಕಡಿಮೆಯಾಗಿತ್ತಾದರೂ ಇದ್ದಕ್ಕಿದ್ದಂತೆ ನೋವು ಕಾಣಿಸಿಕೊಳ್ಳುತ್ತಿತ್ತು.

ಗಂಗವ್ವನನ್ನು ಸುತ್ತುವರಿದಿದ್ದ ಜನ, ಏನೇನೊ ಸಲಹೆ ನೀಡಿದರು. "ಪಟ್ಟಣಕ್ಕೆ ಕರೆದುಕೊಂಡು ಹೋದಲ್ಲಿ, ಹೊಟ್ಟೆಯ ಫೋಟೊ ತೆಗೆದು ಏನಾಗಿದೆ ಎಂಬುದನ್ನು ಹೇಳ್ತಾರ"—ನರಸಿಂಹ ಸೂಚಿಸಿದ. ಆದರೆ ಗಂಗವ್ವನ ಅಳಿಯ ಯಾರ ಮಾತನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ. ಮೊದಲೆ ಧನಪಿಶಾಚಿ. ಮೇಲೆ ಮನೆಯ ಹಿರಿಯತನ ಬೇರೆ ಬಂದಿತ್ತು. "ಯಾಕಿದ್ದೀತು. ಆ ವೈದ್ಯ ಬಂದು ಔಷಧಿ ಕೊಡ್ತೀನಿ ಅಂತ ಹೇಳ್ಯಾನ. ಸುಮ್ಮನೆ ಅವಸರ ಮಾಡಬ್ಯಾಡ್ರಿ"—ಎಂದು ಹೇಳಿ ತಪ್ಪಿಸಿಕೊಂಡ.

ನಾಟಿ ವೈದ್ಯ ಕೊಟ್ಟ ಯಾವುದೊ ಒಂದು ಪುಡಿಕೆಯನ್ನು ಕೊಟ್ಟಾಗ, ಗಂಗವ್ವನ ಹೊಟ್ಟೆನೋವು ಸ್ವಲ್ಪ ಮಟ್ಟಿಗೆ ಕಡಿಮೆ ಆಯಿತು. ಅದೇ ವೇಳೆಗೆ ಬಂದ ಪುಲ್ಲಯ್ಯ ಮತ್ತು ಅವನ ಮಗನನ್ನು ನೋಡಿ, ಗಂಗವ್ವನ ಮುಖದ ಮೇಲೆ ಮಂದಹಾಸ ಮೂಡಿತು. ಅವಳು ಮಲಗಿದಲ್ಲಿಂದಲೇ ಕೈಚಾಚಿ ಮಲ್ಲೇಶಿಯನ್ನು ಎತ್ತಿಕೊಳ್ಳಲು ಪ್ರಯತ್ನಿಸಿದಾಗ, ಅವನು ತಪ್ಪಿಸಿಕೊಂಡು ತಂದೆಯ ಬಳಿ ಓಡಿಹೋದ.

ಇಂತಹ ಸಮಯಕ್ಕಾಗಿಯೇ ಕಾದಿದ್ದ ಗಂಗವ್ವನ ಅಳಿಯ, ಮದುವೆಗೆ ಪಡೆದ ಸಾಲ

ಹಿಂದಿರುಗಿಸುವಂತೆ ಪುಲ್ಲಯ್ಯನಿಗೆ ಖಡಾಖಂಡಿತವಾಗಿ ಹೇಳಿದ. ಯಾವುದೋ ಕೆಲಸಕ್ಕೆ ದುಡ್ಡಿನ ಅಡಚಣೆಯುಂಟಾಗಿದೆ ಎಂದೂ, ಆದಷ್ಟು ಬೇಗನೆ ಸಾಲ ತೀರಿಸಬೇಕೆಂದೂ ಅವನು ದುಂಬಾಲು ಬಿದ್ದಾಗ, ಪುಲ್ಲಯ್ಯ ಯಾವ ಮಾತೂ ಆಡದೆ ತೆಪ್ಪಗಿದ್ದ. ಗಂಗವ್ವ ಮುಂದಾಗಿ, "ಇಷ್ಟು ಅವಸರ ಮಾಡಿ ನಿಂತ ಕಾಲಪ್ಯಾಲ ಸಾಲ ಹಿಂದಿರುಗಿಸು ಅಂದರ, ಆತಾದರೂ ಎಲ್ಲಿಂದ ಕೊಡ್ತಾನ. ಇನ್ನೂ ಸ್ವಲ್ಪ ದಿನ ತಡಿ"—ಎಂದು ಅಳಿಯನಿಗೆ ಬುದ್ಧಿ ಹೇಳಿದಳು. "ಆತಗ ದುಡ್ಡಿನ ಅಗತ್ಯ ಬಿದ್ದಾಗ ಸಾಲ ಕೊಟ್ಟು, ಈಗ ನಮಗ ಬೇಕಾದಾಗ ಅವನ್ನ ತಿರುಗಿ ಕೇಳಬಾರದಂತಿ ಏನು? ದಿನದಿನಕ್ಕ ಬೆಲೆಗಳು ಏರಿ, ನನಗ ಈಗ ದುಡ್ಡಿನ ತೀರ ಅಗತ್ಯ ಬಿದ್ದದ. ಪುಲ್ಲಯ್ಯ, ನೀನು ಹ್ಯಾಂಗಾದರೂ ಮಾಡಿ ಸಾಲ ತೀರಿಸಿದರ, ಅದರಿಂದ ನನಗೂ ಅನುಕೂಲ ಆಗ್ತದ"—ಎಂದು, ಗಂಗವ್ವನ ಅಳಿಯ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದ.

ಅಲ್ಲಿ ತಲೆ ಆಡಿಸಿ ಮನೆಗೆ ಬಂದ ಪುಲ್ಲಯ್ಯ, "ಅವನಿಗೆ ಯಾರೊ ಹೇಳಿಕೊಟ್ಟಾರ. ಇಲ್ಲದಿದ್ದರ, ಮೊನ್ನಿನಃ ಧಾನ್ಯ ಮಾರಿ ಏಳುನೂರು ರೂಪಾಯಿ ಪಡದವನ ಹತ್ತಿರ ದುಡ್ಡಿಲ್ಲ ಅಂದರ ಯಾರು ನಂಬ್ತಾರ"—ಎಂದು ಹೆಂಡತಿಯ ಮುಂದೆ ಹೇಳಿದ.

ನೀಲಿ, ಒಂದು ನಿಮಿಷ ಮೌನವಾಗಿದ್ದವಳು—"ಇಷ್ಟು ದಿನ ಸುಮ್ಮನಿದ್ದರು...... ಇನ್ನೊಬ್ಬರಾಗಿದ್ದರ ಇಷ್ಟು ದಿನ ಸುಮ್ಮನಿರತಿದ್ದರೇನು?"...ಎಂದು ಕೇಳಿದಳು.

"ನಮಗ ಅವರೇನು ಬಿಟ್ಟೀಗೆ ಸಾಲ ಕೊಟ್ಟಾರೇನು? ಕೊಟ್ಟ ಸಾಲಕ್ಕ ಬಡ್ಡಿ ತೊಗೊ ವಲ್ಲರೇನು? ಈಗಿನ ಕಾಲದಾಗ ಕೂಡ, ಮೊದಲಿನ ಹಾಂಗ ಧಾನ್ಯ ಅಳೆದು ಬಡ್ಡಿ ಕೊಡತಾ ಬಂದೀನಿ—ಇದು ಕಮ್ಮಿ ಏನು?"

"ಅದೆಲ್ಲ ಯಾಕ ಈಗ. ತೊಗೊಂಡ ಸಾಲ ಇಂದಿಲ್ಲ ನಾಳೆ ತಿರುಗಿಸಲೇಬೇಕು. ಈಗ ಈ ಚಿನ್ನ, ಈ ಬೆಳ್ಳಿ ಆಭರಣ ತೊಗೊಂಡು ಏನು ಮಾಡಬೇಕಾಗ್ಯದ ನನಗ. ಇದನ್ನ ಮಾರಿ, ಅವರ ಸಾಲ ತೀರಿಸಿಬಿಡ್ರಿ"—ಎನ್ನುತ್ತ ನೀಲಿ ತನ್ನ ಮೈಮೇಲಿನ ಒಡವೆಗಳನ್ನು ತೆಗೆದು ಗಂಡನ ಕೈಗೆ ಕೊಟ್ಟಳು. ಪುಲ್ಲಯ್ಯ, ಅಕ್ಕಸಾಲಿಗನ ಮನೆಗೆ ಹೋಗಿ ಬಂದು "ಬಳಸಿದ ಬಂಗಾರ ಅಂತ, ತೊಲಿಗೆ ನಾಲ್ಕು ರೂಪಾಯಿ ನುಂಗಬೇಕಂತ ಮಾಡ್ತಾನ ಅಂವ. ಇಲ್ಲಿ ಮಾರೋದಕ್ಕಿಂತ ಪಟ್ಟಣಕ್ಕ ಹೋಗಿ ಮಾರಿದರಾಯಿತು"—ಎಂದು ಹೇಳಿದ.

"ಈ ಊರಿನ್ನ, ಈ ಜನರನ್ನ ನಂಬಿಕೊಂಡು ಬದುಕಿಕೊಂಡಿರುವವರನ್ನು ಬಿಟ್ಟು, ಗೊತ್ತು ಪರಿಚಯ ಇಲ್ಲದವರಿಗೆ ಮಾರಿದರ ಏನು ಬಂತು. ಏನೊ ಬಡವ–ಮಕ್ಕಳೊಂದಿಗ, ನಾಲ್ಕು ರೂಪಾಯಿ ಗಳಿಸಿಕೊಳ್ಳಲಿಕ್ಕೆ ಆಶಾಪಡ್ತಾನ. ಏನಾದರೂ, ನಾವು ಕೊಂಡ ಬೆಲೆಗಿಂತ ಈಗ ಹೆಚ್ಚಿಗೆ ದುಡ್ಡು ಬರ್ತದಲ್ಲ...... ಅಂದಮ್ಯಾಲೆ ಇವನಿಗೆ ಮಾರಿಬಿಡ್ರಿ"—ಎಂದು ನೀಲಿ ಒತ್ತಾಯಪಡಿಸಿ ಗಂಡನನ್ನು ಕಳುಹಿಸಿದಳು.

ಒಡವೆ ಮಾರಿ ಬಂದ ಹಣದಲ್ಲಿ ಸಾಲ ತೀರಿಸಿದ್ದಾಯಿತು. ಉಳಿದ ದುಡ್ಡಿನಲ್ಲಿ

ಬಟ್ಟೆ ಕೊಳ್ಳಬೇಕೆಂದು ಕೊಆಪರೇಟಿವ್ ಸ್ಟೋರ್ಸ್‌ಗೆ ಹೋದಾಗ, ಅಲ್ಲಿ ಬಟ್ಟೆಗಳೇ ಇರಲಿಲ್ಲ. ಪುಲ್ಲಯ್ಯ ರೇಗಿಕೊಂಡು ಕೂಗಾಡಿದಾಗ "ನಿನ್ನ ಕೈಯಾಗ ದುಡ್ಡು ಬಂದು, ನೀನು ಆರಿವಿ ಕೊಳ್ಳಲಿಕ್ಕೆ ಬರ್ತೀ ಅಂತ, ಇದ್ದುದನ್ನೆಲ್ಲ ತಗದು ಇಡಬೇಕಾಗಿತ್ತೇನು ನಿನಗ"—ಎಂದು ಅವಹೇಳನ ಮಾಡಿದ—ಅಂಗಡಿಯಲ್ಲಿ ಕುಳಿತಿದ್ದ ನಾಯ್ಡು.

ಊರಿನ ನೇಗಾರ ಪಾಪಯ್ಯನ ಬಳಿ ಹೋದಾಗ, ನೂಲಿನ ದರಗಳು ಏರಿವೆ ಎಂದೂ ಕಂಟ್ರೋಲ್ ದರಕ್ಕೆ ನೂಲು ಸಿಗುತ್ತಿಲ್ಲವೆಂದೂ ಗೋಳಿಡುತ್ತಲೇ ಸೀರೆ ತೋರಿಸಿದ. ಪುಲ್ಲಯ್ಯ ಹೆಂಡತಿಗೊಂದು, ಮುದುಕಿಗೊಂದು ಸೀರೆ ಕೊಂಡು, ತನಗಾಗಿ ಒಂದು ಪಂಚೆ ಖರೀದು ಮಾಡಿದ. ಮೊದಲು ಎರಡು ರೂಪಾಯಿಗೆ ಸಿಗುತ್ತಿದ್ದ ಸೀರೆಯ ಬೆಲೆ ಈಗ ಹತ್ತು ರೂಪಾಯಿಯಾಗಿತ್ತು. ಆದರೂ, ಊರಿನವನೇ ಆದ ಪಾಪಯ್ಯನ ಬಳಿ ಬಟ್ಟೆ ಕೊಂಡದ್ದಕ್ಕಾಗಿ ನೀಲಿಗೆ ತುಂಬ ಸಂತೋಷವಾಗಿತ್ತು.

ನೀಲಿ ಹೊಸ ಸೀರೆಯುಟ್ಟು ಅಕ್ಕಪಕ್ಕದ ಮನೆಗಳಲ್ಲಿದ್ದ ಹಿರಿಯ ಮುತ್ತೈದೆಯರಿಗೆ ನಮಸ್ಕರಿಸಿ ಬಂದಳು. ಮುದುಕಿ, ಹೊಸ ಸೀರೆಯುಟ್ಟು, ಬೊಚ್ಚುಬಾಯಿ ತೆರೆದು ನಗುತ್ತಾ, ಮರಿಮೊಮ್ಮಗನನ್ನು ಎತ್ತಿಕೊಂಡು ಮುದ್ದಾಡಿದಳು. ಹೊಲಕ್ಕೆ ಹೋಗಿದ್ದ ಪುಲ್ಲಯ್ಯ ಹಿಂದಿರುಗಿ ಬಂದಾಗ, ಮಲ್ಲೇಶಿ ಓಡಿಹೋಗಿ, ಅವನ ಕಾಲುಗಳಿಗೆ ಜೋತು ಬಿದ್ದ. ಪುಲ್ಲಯ್ಯ ಮಗನನ್ನು ಎತ್ತಿಕೊಂಡು ಮುದ್ದಾಡಿ, ಮನೆಯ ಮುಂದಿನ ಜಗುಲಿಯ ಮೇಲೆ ಕುಳಿತ. ಮಗನನ್ನು ಮೇಲೆ ತೂರಿ ಹಿಡಿದುಕೊಂಡ. ತೊಟ್ಟಿಲು ತೂಗುವಂತೆ ಮಗನನ್ನು ಕೈಯಲ್ಲಿ ಹಿಡಿದು ತೂಗಾಡಿದ. ಇದಾವುದಕ್ಕೂ ಅವನು ಅಂಜದೆ—ಅಳುಕದೆ ನಗುತ್ತಿದ್ದುದನ್ನು ನೋಡಿ ಪುಲ್ಲಯ್ಯನಿಗೆ ಸಂತೋಷವಾಯಿತು. ದಿನದಿನಕ್ಕೆ ತಂದೆ–ಮಗನ ನಡುವಣ ಸಂಬಂಧ ಗಾಢವಾಗಹತ್ತಿತು. ಮಲ್ಲೇಶಿ, ಹಗಲೆನ್ನದೆ, ರಾತ್ರಿಯೆನ್ನದೆ ತಂದೆಯ ಬಳಿಯೇ ಇರುತ್ತಿದ್ದ. "ಅವನು ಅವನಪ್ಪನ ಮಗನೇ ಹೊರತಾಗಿ ಅಮ್ಮನ ಮಗನಲ್ಲ"—ಎಂದು ಮುದುಕಿ ಆಗಾಗ ಹಾಸ್ಯಮಾಡುತ್ತಿದ್ದಳು. "ಅಪ್ಪನ ಮಗನಾದರೇನು—ಅವ್ವನ ಮಗನಾದರೇನು?—ನಿನಗಂತೂ ಅವನು ಮುದ್ದಿನ ಮರಿಮೊಮ್ಮಗನಽ"—ಎಂದು ಪುಲ್ಲಯ್ಯ ಹೇಳುತ್ತಿದ್ದ. ಆಗ ಮುದುಕಿಯ ಸಂತೋಷ ಮಿತಿಮೀರುತ್ತಿತ್ತು. ಮುದುಕಿ ಎಲ್ಲಿದ್ದರೂ, ಏನು ಮಾಡುತ್ತಿದ್ದರೂ, ಅವಳ ಕಣ್ಣುಗಳು ಮಾತ್ರ ಮರಿ ಮೊಮ್ಮಗನ ಮೇಲಿನಿಂದ ಸರಿಯುತ್ತಿರಲಿಲ್ಲ.

ಮುದುಕಿ, ಆಗಾಗ ತನ್ನ ಗತ ಜೀವನವನ್ನು ನೆನೆಸಿಕೊಳ್ಳುತ್ತಿದ್ದಳು. ಅವಳು, ಎಂದೇ ಆಗಲಿ, ಯಾವುದಕ್ಕೇ ಆಗಲಿ, ಬೇಸರಿಸಿಕೊಂಡಿರಲಿಲ್ಲ. ದುಃಖ ಬಂದಾಗ ಕೊರಗಲಿಲ್ಲ.—ಸುಖ ಬಂದಾಗ ಉಬ್ಬಲಿಲ್ಲ.—ಮರಿಮೊಮ್ಮಗ, ಹೊಲಕ್ಕೆ ಹೊರಟಿದ್ದ ತಂದೆಯ ಹಿಂದೆ ಹೊರಟಾಗ, ಮುದುಕಿ ಅವನನ್ನು ತಡೆದಳು. ಮಲ್ಲೇಶಿ ಅಜ್ಜಿಯ ಕೈಗಳಿಂದ ಪಾರಾಗಲು ಶತಪ್ರಯತ್ನ ಮಾಡಿದ. ಅಜ್ಜಿಯ ಕೂದಲು ಹಿಡಿದು ಎಳೆದ. ಏನಾದರೂ ಮುದುಕಿ ಬಿಡದಾದಾಗ, ಕೈಕಾಲು ಬಡಿಯುತ್ತಾ ಅವಳ ಕೈಯಿಂದ ಕೊಸರಿಕೊಂಡ.

ಮುದುಕಿ ಅವನ ಪೌರುಷ ನೋಡಿ—"ಯಾವ ವೃಕ್ಷದ ಬೀಜವೊ ಇದು......" ಎಂದು ನಗುತ್ತಿದ್ದಳು. ಆ ವೇಳೆಗಾಗಲೇ ತಂದೆ ತನ್ನನ್ನು ಬಿಟ್ಟು ಹೋದದ್ದರಿಂದ ಮಲ್ಲೇಶಿ ಅಳತೊಡಗಿದ. ಯಾರು ಎಷ್ಟು ಸಮಾಧಾನ ಮಾಡಿದರೂ ಸುಮ್ಮನಾಗದೆ, ಅತ್ತೂ ಅತ್ತು, ಕೊನೆಗೆ ನಿದ್ರೆಹೋದ.

ಹೊಲದಿಂದ ಹಿಂದಿರುಗಿದ ಪುಲ್ಲಯ್ಯ, ಮಗ ನೆಲದ ಮೇಲೆ ಮಲಗಿದ್ದನ್ನು ನೋಡಿ, ಎತ್ತಿ ಮಂಚದ ಮೇಲೆ ಮಲಗಿಸಲು ಪ್ರಯತ್ನಿಸಿದಾಗ, ಅವನು ಎಚ್ಚೆತ್ತು, "ಅಪ್ಪಾ—" ಎಂದು ಕೇಕೆ ಹಾಕಿದ. ತಂದೆಯ ಮುಖ ನೋಡಿ, ಅವನಿಗೆ ಪುನಃ ಜೀವ ಬಂದಂತಾಗಿತ್ತು.

ಊರಿನ ಶಾನುಭೋಗನ ತಂದೆಗೆ, ತಾನು ಕಳೆದುಕೊಂಡ ಆಸ್ತಿಯನ್ನು ಪುನಃ ಪಡೆಯುವ ಆಸೆ ಇತ್ತೊ ಇಲ್ಲವೊ ತಿಳಿಯದು. ಆದರೆ, ತನ್ನ ಮಗನ ಸಂಸಾರ ಸುಗಮವಾಗಿ, ಅವನ ಕುಟುಂಬಕ್ಕೆ ಸರಿಹೋಗುವಷ್ಟು ಭೂಮಿ–ಕಾಣಿ ಮಾಡಿಕೊಳ್ಳ ಬೇಕೆಂಬ ಹಂಬಲ ಮಾತ್ರ ಅವನಲ್ಲಿತ್ತು. ಕಂಟ್ರೋಲಿನ ದಿನಗಳಲ್ಲಿ, ದುಡ್ಡು ಮಾಡಿ ಕೊಳ್ಳಲು ಅವಕಾಶವಿದ್ದಾಗ, ಕಣ್ಣು ಮುಚ್ಚಿ ಕುಳಿತುಕೊಳ್ಳುವಷ್ಟು ಬುದ್ಧಿಗೇಡಿ ಅವನಾಗಿರಲಿಲ್ಲ. ತನಗೆ "ಮಾಮೂಲು" ದೊರೆಯುತ್ತಿದ್ದರಿಂದ ಊರಿನಲ್ಲಿನ ಜನರು, ರಾತ್ರಿ, ತಮ್ಮಲ್ಲಿದ್ದ ಧಾನ್ಯವನ್ನು ಪಟ್ಟಣದ ಕಾಳಸಂತೆಗೆ ಸಾಗಿಸುತ್ತಿದ್ದುದು ಅರಿತೂ ಕೂಡ, ಅವನು ಸುಮ್ಮನಿರುತ್ತಿದ್ದ. ಅವನ ಈ ಮೌನಕ್ಕೂ ಕೂಡ ಬೆಲೆ ಇದ್ದಾಗ, ದುಡ್ಡು ಗಳಿಸುವುದು ಅವನಿಗೇನು ಕಷ್ಟವಾಗಿರಲಿಲ್ಲ. ಕೋಆಪರೇಟಿವ್ ಸ್ಟೋರ್ಸ್ ಸೇರಿಕೊಂಡು ಅದರಲ್ಲೂ ಸಹ ಸ್ವಲ್ಪ ದುಡ್ಡು ಮಾಡಿಕೊಂಡ. ಇದಲ್ಲದೆ ಪ್ರೊಕ್ಯೂರ ಮೆಂಟ್‌ನ ಲೆಕ್ಕದಲ್ಲಿ ಹೆಚ್ಚೂ ಕಡಿಮೆ ಮಾಡಿ, ಬೇಕಾದಷ್ಟು ಸಂಪಾದಿಸಿದ. ಎಷ್ಟು ಬಂದರೂ ಮುದಿಯನಿಗೆ ತೃಪ್ತಿ ಎಂಬುದಿರಲಿಲ್ಲ. ಬಂದುದರಲ್ಲೆ ಸರಿದೂಗಿಸಿಕೊಂಡು ಹೋಗುವುದು, ಸೊಸೆಗೆ ಮೊದಲಿನಿಂದಲೂ ಬಾರದು. ಅವರಿಗಿಂತ ದೊಡ್ಡ ಕುಟುಂಬ ಗಳಿಗೆ ತಿಂಗಳಿಗೆ ನಾಲ್ಕು ಸೇರು ಎಣ್ಣೆ ಸಾಕಾಗುತ್ತಿತ್ತಾದರೂ, ಅವರ ಕುಟುಂಬಕ್ಕೆ ಎಂಟು ಸೇರಾದರೂ ಸಾಕಾಗುತ್ತಿರಲಿಲ್ಲ. ಮುದಿಯ ಎಷ್ಟು ಬಡಿದುಕೊಂಡರೂ, ಆತನ ಮಾತನ್ನು ಕೇಳುವವರಿರಲಿಲ್ಲ. ಎಷ್ಟು ಬಂದರೂ ಮನೆಯ ಖರ್ಚು ಸರಿದೂಗು ತ್ತಿರಲಿಲ್ಲ.

ಆ ವರ್ಷದ ಎಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಪ್ರೊಕ್ಯೂರಮೆಂಟ್ ಭರದಿಂದ ಸಾಗಿತ್ತು. ಏಜೆಂಟರು ಒಂದು ಪಲ್ಲಕ್ಕೆ 300 ರೂಪಾಯಿಗಳ ಕಂಟ್ರೋಲ್ ದರದಲ್ಲಿ ಧಾನ್ಯ ಕೊಳ್ಳುತ್ತಿದ್ದರು. ಅದೇ ಏಜೆಂಟರು, ನಡುರಾತ್ರಿಯಲ್ಲಿ, ಆ ಧಾನ್ಯವನ್ನು ಕಾಳಸಂತೆಗೆ ಕಳುಹಿಸಿ, ಪಲ್ಲ ಧಾನ್ಯ 700 ರೂಪಾಯಿಗಳಿಗೆ ಮಾರುತ್ತಿದ್ದರು. ಈ ಕಳ್ಳ ವ್ಯಾಪಾರದಲ್ಲಿ ಸರ್ಕಾರದ ನೌಕರರು ಕೂಡ ಶಾಮೀಲಾಗಿದ್ದರು. ಶಾನುಭೋಗನ ಲೆಕ್ಕದ ಚಾಕಚಕ್ಯತೆಯಿಂದಾಗಿ ಹತ್ತು ಪಲ್ಲ ಧಾನ್ಯ ಬೆಳೆದ ಊರಿನ ದೇಸಾಯಿ, ಒಂದು ಪಲ್ಲ ಧಾನ್ಯ ಬೆಳೆದಂತೆ ಲೆಕ್ಕ ತೋರಿಸಿ, ಅದರಲ್ಲೆ ಸ್ವಲ್ಪ ಭಾಗವನ್ನು ಪ್ರೊಕ್ಯೂರಮೆಂಟ್‌ಗೆ

ಕೊಟ್ಟ. ಒಂದು ಪಲ್ಲ ಬೆಳೆದ ಬಡ ರೈತ, ಬೆಳೆದುದರಲ್ಲಿ ಅರ್ಧ ಪಾಲನ್ನು ಸರ್ಕಾರಕ್ಕೆ ಕೊಡಬೇಕಾಯಿತು. ಈ ಅನ್ಯಾಯವನ್ನು ಪ್ರಶ್ನಿಸಿದಾಗ, ದೇಸಾಯರು, ಕೂಲಿಗಳಿಗೆ, ಮನೆ ಆಳುಗಳಿಗೆ, ತನ್ನ ಸಂಸಾರಕ್ಕೆ, ಪಶುಗಳ ಆಹಾರಕ್ಕೆ—ಎಲ್ಲದಕ್ಕೂ ಧಾನ್ಯ ಉಳಿಸಿಕೊಂಡು ಉಳಿದ ಒಂದು ಪಲ್ಲವನ್ನೆ ಪ್ರೊಕ್ಯೂರಮೆಂಟ್‌ಗೆ ಕೊಟ್ಟಿದ್ದಾರೆಂದು ಹೇಳಲಾಯಿತು. ಪೋಲೀಸರು, ಆಗಾಗ ಊರಿಗೆ ಬರುತ್ತಿದ್ದ ಹಿರಿಯ ಅಧಿಕಾರಿಗಳು, ದೇಸಾಯರ ಆಳುಗಳು—ಈ ವಾದವನ್ನೆ ಸಮರ್ಥಿಸುತ್ತಿದ್ದರಿಂದ, ಕಿರಿಯ ರೈತನ ಬವಣೆಯನ್ನು ಯಾರೂ ಕೇಳದಾದರು.

ಪುಲ್ಲಯ್ಯನ ಬವಣೆಯೂ ಇದೇ ಆಗಿತ್ತು. ಪ್ರೊಕ್ಯೂರಮೆಂಟಿಗಾಗಿ ಹದಿನೈದು ಪುಟ್ಟಿ ಧಾನ್ಯ ಅಳೆಯಬೇಕೆಂದು ಶಾನುಭೋಗ ದುಂಬಾಲು ಬಿದ್ದಿದ್ದ. "ನನ್ನ ಹತ್ತಿರ ಇರೋದು ಹತ್ತು ಪುಟ್ಟಿ ಧಾನ್ಯ. ಅದರೊಳಗ ಕುಯ್ಲು ಮಾಡಿದವರಿಗೆ, ಆಳುಗಳಿಗೆ—ಎಲ್ಲರಿಗೂ ಕೊಟ್ಟು, ಉಳಿದದ್ದರೊಳಗ ಇಡೀ ವರ್ಷ ಸಾಗಿಸಬೇಕು ನಾನು. ಇನ್ನ ಹದಿನೈದು ಪುಟ್ಟಿ ಧಾನ್ಯ ಎಲ್ಲಿಂದ ತರಲಿ"—ಎಂದು ಪುಲ್ಲಯ್ಯ ಕೈ ಆಡಿಸಿದ. ಪ್ರೊಕ್ಯೂರ್‌ಮೆಂಟಿಗೆ ಧಾನ್ಯ ಕೊಡಲೇಬೇಕು—ಎಂದು ಶಾನುಭೋಗ ಪಟ್ಟುಹಿಡಿದು ಪುಲ್ಲಯ್ಯನ ಮನೆಗೆ ಬಂದಾಗ, "ನನ್ನ ಧಾನ್ಯ ಮುಟ್ಟೊ ಧೈರ್ಯ ಇದ್ದವರು ಮುಂದೆ ಬರ್ರಿ. ಕಾಲು ಮುರಿದು ಕೈಯಾಗ ಕೊಟ್ಟು ಕಳಿಸ್ತೀನಿ"—ಎಂದು, ಪುಲ್ಲಯ್ಯ ಅವರಿಗೆ ಎದುರಾಗಿ ನಿಂತ.

ಧಾನ್ಯ ಅಳೆಯಲು ಬಂದವರು, ದೂರದಿಂದಲೇ ಹಿಂದಿರುಗಿ ಹೋದರು. ಇದು ನಡೆದಾಗ ನೀಲಿ ಮನೆಯಲ್ಲಿರಲಿಲ್ಲ. ನೀರು ತರಲು ನದಿಗೆ ಹೋಗಿದ್ದಳು. ಅವಳು ನದಿಯಿಂದ ಹಿಂದಿರುಗಿದಾಗ, ಮುದುಕಿ ನಡೆದುದೆಲ್ಲವನ್ನೂ ಹೇಳಿದಳು. ನೀಲಿ, ಕೂಡಲೆ ಶಾನುಭೋಗರ ಮನೆಗೆ ಹೋದಳು. ಶಾನುಭೋಗ ಊರಿನ ಪುಂಡರು–ಪೋಕರ ಜೊತೆ ಇಸ್ಪೇಟು ಆಡುತ್ತಾ ಕುಳಿತಿದ್ದ. ನೀಲಿ, ಅವನ ಮುಂದೆ ನಿಂತು, ತಮ್ಮನ್ನು ಈ ಆಪತ್ತಿನಿಂದ ಪಾರುಮಾಡಬೇಕೆಂದು ಪರಿಪರಿಯಿಂದ ಬೇಡಿಕೊಂಡಳು. ಆದರೆ ಶಾನುಭೋಗ ಅವಳ ಮಾತನ್ನು ಕಿವಿಗೆ ಹಾಕಿಕೊಳ್ಳದೆ—"ಈಗ ನೀನು ಏನು ಹೇಳಿದರೂ ಪ್ರಯೋಜನವಿಲ್ಲ. ನಿನಗಿರೋ ಬುದ್ಧಿ ನಿನ್ನ ಗಂಡನಿಗಿದ್ದಿದ್ದರ ಈಗ ಈ ಜಗಳನಃ ಬರ್‍ತಿರಲಿಲ್ಲ"—ಎಂದ.

ಇಸ್ಪೇಟಿನ ಆಟದಲ್ಲಿ ಮಗ್ನನಾಗಿದ್ದ ಶಾನುಭೋಗ, ನೀಲಿ ಎಷ್ಟು ಅಂಗಲಾಚಿದರೂ ಲಕ್ಷಿಸದೆ, ಅಲ್ಲಿಂದ ತೊಲಗುವಂತೆ ಗದರಿಸಿದ. ಮುಂದೇನಾಗುವುದೋ ಎಂದು ಭಯಪಡುತ್ತ ಮನೆಗೆ ಬಂದಾಗ, ಮನೆಯ ಮುಂದೆ ನಿಂತಿದ್ದ ಪುಲ್ಲಯ್ಯ—"ಇನ್ನು ನಮ್ಮ ಮನೀಗೆ ಬರೊ ಧೈರ್ಯ ಆದರೂ ಅದೇನು ಆ ಜನಕ್ಕ"—ಎಂದು ಮೀಸೆ ಹುರಿ ಮಾಡಿದ.

ಪುಲ್ಲಯ್ಯ, ಆಗಲೇ ಮಗನಿಗೆ ಕುಸ್ತಿಯ ಪಟ್ಟುಗಳನ್ನು ಹೇಳತೊಡಗಿದ್ದ. ತನಗಿರದ ಮೀಸೆಗಳನ್ನು ಹುರಿಮಾಡುವುದನ್ನೂ ಸಹ, ಪುಲ್ಲಯ್ಯ ಮಗನಿಗೆ ಕಲಿಸಿದ್ದ. ತೊಡೆ

ಬಡಿದುಕೊಂಡು ಕೇಕೆ ಹಾಕುವುದನ್ನು ಪುಲ್ಲಯ್ಯ ಮಗನಿಗೆ ತೋರಿಸಿಕೊಡುತ್ತಿದ್ದಾಗ, ನೀಲಿ ಅದನ್ನು ನೋಡುತ್ತಾ ಕುಳಿತುಬಿಡುತ್ತಿದ್ದಳು. "ಈ ಸರೆ ಯಾರಾದರೂ ನನ್ನ ಮನಿ ಬಾಗಿಲಿಗೆ ಬರಲಿ. ಅವರನ್ನ ಓಡಿಸಲಿಕ್ಕೆ ಈ ನನ್ನ ಮಗನs ಸಾಕು"—ಎಂದು ದೊಡ್ಡದಾಗಿ ನಕ್ಕು, ಮಗನನ್ನು ಎತ್ತಿಕೊಂಡು ಬೀದಿಗಿಳಿದ ಪುಲ್ಲಯ್ಯ.

ಇದಾದ ನಾಲ್ಕನೆಯ ದಿನವೇ, ಪೋಲೀಸರು ಮತ್ತು ಕಂದಾಯ ಖಾತೆಯ ಅಧಿಕಾರಿಗಳು ಊರಿಗೆ ಬಂದರು. ಪೋಲೀಸರು ಮತ್ತು ಅಧಿಕಾರಿಗಳನ್ನು ನೋಡಿದ ಸಣ್ಣ ರೈತರು ಹೆದರಿಕೊಂಡು, ತುಟಿ ಪಿಟಕ್ ಅನ್ನದೆ ಧಾನ್ಯ ಅಳೆದುಕೊಟ್ಟರು. ಕಣ್ಣೀರು ಸುರಿಸುತ್ತಲೇ, ಕೈಗೆ ಬಂದ ಕಾಗದದ ನೋಟುಗಳನ್ನು ಅಲಕ್ಷದಿಂದ ಪೆಟ್ಟಿಗೆಗೆ ಹಾಕಿ ದುಃಖಿಸುತ್ತ ಕುಳಿತರು.

ಪುಲ್ಲಯ್ಯ, ಮೀಸೆಗಳನ್ನು ಹುರಿ ಮಾಡಿಕೊಂಡು, ಕೈಯಲ್ಲಿ ಒಂದು ಕೋಲು ಹಿಡಿದುಕೊಂಡು, ಮನೆಯ ಜಗುಲಿಯ ಮೇಲೆ ಕುಳಿತಿದ್ದ. ಮುದುಕಿ, ಅಂಗಳದಲ್ಲಿನ ಹುಲ್ಲಿನ ಮೇದೆಯ ಹತ್ತಿರ, ಕುಳ್ಳು ಬಡಿಯುತ್ತ ಕುಳಿತಿದ್ದಳು. ನೀಲಿ ಹೊಲಕ್ಕೆ ಹೋಗಿದ್ದಳು. ಮಗ ಮಲ್ಲೇಶಿ ತೊಟ್ಟಿಲಲ್ಲಿ ಹಾಯಾಗಿ ಮಲಗಿದ್ದ.

ಪೋಲೀಸರು ಮತ್ತು ಅಧಿಕಾರಿಗಳ ದಂಡು, ಪುಲ್ಲಯ್ಯನ ಮನೆಯ ಮೇಲೆ ದಾಳಿ ಮಾಡಿತು.

"ನೀನೆ ಏನೊ ಪುಲ್ಲಯ್ಯ?" ರೆವೆನ್ಯೂ ಇನ್‌ಸ್ಪೆಕ್ಟರ್ ಕೇಳಿದ.

"ಹೌದು ಧಣಿ."

"ಪ್ರೊಕ್ಯೂರ್‌ಮೆಂಟಿಗೆ ಹದಿನೈದು ಬುಟ್ಟಿ ಧಾನ್ಯ ಕೊಡ್ತೀಯೊ ಅಥವಾ ಜೈಲಿಗೆ ಹೋಗ್ತೀಯೊ?"

"ಯಾಕ್ರಿ ಸಾಹೇಬ್ರ, ಸುಮ್ಮಸುಮ್ಮನೆ ಕಣ್ಣು ಯಾಕ ಕೆಂಪು ಮಾಡ್ತೀರಿ."

"ಅಂದರ—"

"ಧಾನ್ಯ ಕೊಡೋಹಾಂಗಿಲ್ಲ—ಕೊಡೊದಿಲ್ಲ."

"ನೀನು ಕೊಡಾಣೆಲ್ಲ ಅಂದರ ನಾವು ಬಿಡ್ತೀವೇನು? ಧಾನ್ಯ ಅಳದು, ನಿನಗ ಕೊಡಬೇಕಾದ ದುಡ್ಡು ನಿನ್ನ ಮುಖದ ಮ್ಯಾಲೆ ಒಗದು ಹೋಗ್ತೀವಿ"—ಎನ್ನುತ್ತಾ ರೆವೆನ್ಯೂ ಇನ್ಸ್‌ಪೆಕ್ಟರ್ ಮುಂದಡಿ ಇಟ್ಟಾಗ, ಪುಲ್ಲಯ್ಯ ರೌದ್ರಾವತಾರ ತಳೆದ. ಕೈಯಲ್ಲಿನ ಕೋಲನ್ನು ಝಳಪಿಸುತ್ತ, "ಮುಂದ ಹೆಜ್ಜಿ ಇಡಬ್ಯಾಡ್ರಿ. ನನ್ನ ಮನ್ಯಾಗಕಾಲಿಟ್ರ ನಿಮ್ಮ ಮೈಯಾಗಿನ ಒಂದಾದರೂ ಮೂಳಿ ಇರಾಣೆಲ್ಲ...... ಒಂದು ಪುಟ್ಟಿ ಧಾನ್ಯ ಬೆಳೆದವನು, ಹತ್ತು ಪುಟ್ಟಿ ಬೆಳೆದವನಷ್ಟೇ ಧಾನ್ಯ ಕೊಡಬೇಕಂದರ ಹ್ಯಾಂಗಾದೀತು? ಇಲ್ಲದ್ದ ಲೆಕ್ಕ ಬರದು, ಮೋಸಮಾಡಿ, ನಮ್ಮಂತಹ ಬಡವರ ಹೊಟ್ಟಿ ಯಾಕ ಉರಸ್ತೀರಿ" —ಎಂದು ಕೂಗಾಡಿದ.

"ಸಾಕುಮಾಡೊ ನಿನ್ನ ಉಪನ್ಯಾಸ"—ಎನ್ನುತ್ತಾ ರೆವೆನ್ಯೂ ಇನ್ಸ್‌ಪೆಕ್ಟರ್ ಮುಂದೆ

ಬಂದಾಗ, ಪುಲ್ಲಯ್ಯ ಅವನನ್ನು ತಡೆದು ಕಣ್ಣಲ್ಲಿ ಕಣ್ಣಿಟ್ಟು ತೀಕ್ಷ್ಣವಾಗಿ ನೋಡಿದ. ಆ ಅಧಿಕಾರಿ ಪೋಲೀಸರಿಗೆ ಸಂಕೇತ ನೀಡಿದಾಗ, ಪೋಲೀಸರು ಪುಲ್ಲಯ್ಯನನ್ನು ಸುತ್ತು ವರಿದರು. ರೆವೆನ್ಯೂ ಇನ್ಸ್‌ಪೆಕ್ಟರ್ ಈಗ ಧೈರ್ಯದಿಂದ ಮುಂದೆ ಹೋಗಿ, ಅಡಕಲು ಕೋಣೆಯನ್ನು ಸಮೀಪಿಸಿದ. ಪುಲ್ಲಯ್ಯ ಸಿಟ್ಟಿನಿಂದ, "ಕೋಣೆಯ ಬಾಗಿಲು ಮುಟ್ಟ ಬೇಡ"—ಎಂದು ಅರಚಿಕೊಂಡ. ಅವನ ಕೂಗನ್ನು ಕೇಳಿ, ಆ ಅಧಿಕಾರಿ ತತ್ತರಿಸಿದ ನಾದರೂ, ಗರ್ವದಿಂದ ಕೋಣೆಯ ಬಾಗಿಲನ್ನು ಸಮೀಪಿಸಿದ. ಪುಲ್ಲಯ್ಯ ಒಂದೇ ನೆಗೆತಕ್ಕೆ ಅವನ ಬಳಿ ಹೋಗಿ, ಅಧಿಕಾರಿಯನ್ನು ಜಗುಲಿಯ ಮೇಲಿನಿಂದ ಕೆಳಕ್ಕೆ ನೂಕಿದ.

ಮಣ್ಣು ಮುಕ್ಕಿದ ಅಧಿಕಾರಿಗೆ, ಒಂದು ನಿಮಿಷ ಏನು ಮಾಡಬೇಕೆಂಬುದು ತೋಚ ದಾಯಿತು. ಕೊನೆಗೆ ತನಗಾದ ಅವಮಾನವನ್ನು ಸಹಿಸಿಕೊಳ್ಳಲಾಗದೆ, "ಹಿಡಿಯಿರಿ ಅವನ್ನ, ಬೇಡಿ ಹಾಕ್ರಿ"—ಎಂದು ಕೂಗಿದ. ಪುಲ್ಲಯ್ಯ, ಅದಾಗಲೇ ತನ್ನ ಸ್ಥಿಮಿತ ವನ್ನು ಕಳೆದುಕೊಂಡಿದ್ದ. ಕೈಯಲ್ಲಿದ್ದ ಕೋಲನ್ನು ತಿರುವುತ್ತ, ಪೋಲೀಸರು ತನ್ನ ಸಮೀಪಕ್ಕೆ ಬರದಂತೆ ಮಾಡಿದ್ದ. ಕೈಯ ಜೊತೆಗೆ ಅವನ ಬಾಯಿಯೂ ಸಹ ಕೆಲಸ ಮಾಡತೊಡಗಿತ್ತು. ಅವನ ಬಾಯಿಯಿಂದ ಅವಾಚ್ಯ ಶಬ್ದಗಳ ಸುರಿಮಳೆ ಆಗತೊಡ ಗಿತ್ತು. ಅಷ್ಟರಲ್ಲಿ ನದಿಗೆ ಹೋಗಿದ್ದ ನೀಲಿ ಓಡುತ್ತಾ ಬಂದಳು. ಗಂಡನ ಭೀಭತ್ಸ ಸ್ವರೂಪ ನೋಡಿ, ಅವಳೂ ಸಹ ಭಯಭೀತಳಾದಳು. ಒಳಗೆ ತೊಟ್ಟಿಲಲ್ಲಿ ಮಲಗಿದ್ದ ಮಲ್ಲೇಶಿ, ಜೋರಾಗಿ ಅಳಲು ಪ್ರಾರಂಭಿಸಿದ್ದ. ಮುದುಕಿ ತನ್ನ ಕಣ್ಣಮುಂದಿನ ದೃಶ್ಯ ವನ್ನು ನೋಡಲಾಗದೆ, ಮುಖ ಮುಚ್ಚಿಕೊಂಡು ಕುಳಿತಿದ್ದಳು. ನಾಲ್ವರು ಪೋಲೀಸರು ಒಬ್ಬನ ಮೇಲೆ ಮುಗಿ ಬೀಳಲು ಪ್ರಯತ್ನಿಸಿದರಾಗಲೀ, ಪುಲ್ಲಯ್ಯನ ಲಾಠಿ ಪ್ರಹಾರ ವನ್ನು ತಡೆದುಕೊಳ್ಳಲಾಗದೆ ಹಿಂದೆ ಸರಿದರು. ಆ ವೇಳೆಗೆ, ಊರಿಗೆ ಊರೆ ಅಲ್ಲಿ ಸೇರಿತ್ತು.

ನೀಲಿ ತಲೆಯ ಮೇಲಿನ ಬಿಂದಿಗೆಯನ್ನು ಕೆಳಗಿಟ್ಟು, ಅದು ಯಾವ ಮಾಯ ದಿಂದಲೊ ಏನೊ, ಗಂಡನ ಕಾಲುಗಳನ್ನು ಹಿಡಿದುಕೊಂಡು ಏನನ್ನೊ ಹೇಳುತ್ತಿದ್ದಳು. ಪುಲ್ಲಯ್ಯನ ಮುಖದ ಮೇಲಿನ ಬೆವರು ಹನಿಹನಿಯಾಗಿ ನೀಲಿಯ ಮೇಲೆ ಬೀಳುತ್ತಿತ್ತು. ಅವನ ಆವೇಶ ಸ್ವಲ್ಪ ಕಡಿಮೆಯಾದಾಗ, ಸುತ್ತಮುತ್ತ ಸೇರಿದ್ದ ಜನರು ಅವನ ಕಣ್ಣಿಗೆ ಬಿದ್ದರು. ತನ್ನ ಕಾಲುಗಳನ್ನು ಹಿಡಿದುಕೊಂಡು ಕೂಗುತ್ತಿದ್ದವಳು ತನ್ನ ಹೆಂಡತಿಯೆ— ಎಂಬ ಅರಿವು ಬಂತು. ಆ ಕೋಲಾಹಲದಲ್ಲೆ ಮಗನ ಅಳುವು ಅವನ ಕಿವಿಗೆ ಬಿತ್ತು. ಅದುವರೆಗೆ ತಾನು ಯಾವುದೊ ಬೇರೆ ಲೋಕದಲ್ಲಿದ್ದಂತೆ ಆತನಿಗೆ ಭಾಸವಾಯಿತು. ಏಟು ತಿಂದ ಪೋಲೀಸರು, ಈಗ ಸ್ವಲ್ಪ ಧೈರ್ಯ ತಂದುಕೊಂಡು ಅವನ ಬಳಿ ಸಾರಹತ್ತಿ ದರು. ಅವರನ್ನು ನೋಡಿ, "ಮಾಂಸಖಂಡಗಳಿರದ ಈ ಕುನ್ನಿಗಳ ಮೇಲೆ ನಾನು ನನ್ನ ಬಲಪ್ರಯೋಗ ಮಾಡಿದೆನೆ? ಅಯ್ಯೋ ಪಾಪ"—ಎಂದುಕೊಂಡ ಪುಲ್ಲಯ್ಯ.

ಕೈಯಲ್ಲಿದ್ದ ಕೋಲನ್ನು ಕೆಳಕ್ಕೆಸೆದು ಅಲ್ಲಿಂದ ಹೊರಡಲು ಮುಂದಾದ ಪುಲ್ಲಯ್ಯ ನನ್ನು ಪೋಲೀಸರು ಹಿಡಿದುಕೊಂಡರು. ಅವರಿಂದ ಬಿಡಿಸಿಕೊಂಡು ಮನೆಯ ಒಳಗೆ ಓಡಿದ ಪುಲ್ಲಯ್ಯ, ತೊಟ್ಟಿಲಲ್ಲಿ ಮಲಗಿ ಅಳುತ್ತಿದ್ದ ಮಗನನ್ನು ಎತ್ತಿಕೊಂಡು ಮುದ್ದಾಡಿದ. "ಮಲ್ಲು—ಮಲ್ಲೇಶಿ, ಇವತ್ತು ನಿಮ್ಮಪ್ಪ, ಮೀಸೆ ಇಲ್ಲದ ಹೆಣ್ಯಾಗಳ ಜೊತೆ ಹೊಡೆದಾಡಿದ...... ಇನ್ನು ವನಗ ಈ ಮೀಸೆ ಇದ್ದು ಏನು ಉಪಯೋಗ?" —ಎಂದು ಗೋಳಿಟ್ಟ ಪುಲ್ಲಯ್ಯ.

ಮಲ್ಲೇಶಿ, ತನ್ನ ತಂದೆ ತನ್ನೊಡನೆಯೇ ಮಾತನಾಡುತ್ತಿರುವಂತೆ, ಅವನ ಮಾತನ್ನು ಅರ್ಥಮಾಡಿಕೊಂಡವನಂತೆ ನೋಡಿದ. ಅಷ್ಟರಲ್ಲಿ ಪೋಲೀಸರು ಒಳನುಗ್ಗಿ, ಅವನ ಕೈಗಳಿಗೆ ಬೇಡಿ ತೊಡಿಸಿದರು. ಪುಲ್ಲಯ್ಯ, ಮತ್ತೆ ಅಳಲು ಪ್ರಾರಂಭಿಸಿದ ಮಗನನ್ನು ನೋಡಿದ. ನಂತರ ಅಲ್ಲಿಯೇ ನಿಂತಿದ್ದ ಹೆಂಡತಿಯನ್ನು ನೋಡಿದ. ಆಕೆಯ ಕಣ್ಣುಗಳು ನೀರಿನಿಂದ ತುಂಬಿದ್ದುದನ್ನು ನೋಡಿದ. ನೀಲಿ, ತನ್ನನ್ನು ನೋಡಿ ದೃಷ್ಟಿ ತಪ್ಪಿಸಿದಾಗ, ತಾನು ಯಾವುದೋ ತಪ್ಪು ಮಾಡಿದೆನೆಂಬ ಅರಿವು ಪುಲ್ಲಯ್ಯನಿಗಾಯಿತು. ಹಾಗೆಯೆ, ಪೋಲೀಸರ ಜೊತೆ ಮನೆಯ ಹೊರಗೆ ಕಾಲಿಟ್ಟ. ಊರಿನ ನಡುಬೀದಿಯಲ್ಲಿ, ಕೈಗಳಿಗೆ ಬೇಡಿ ಹಾಕಿಸಿಕೊಂಡು ಹೊರಟಿದ್ದ ಪುಲ್ಲಯ್ಯನನ್ನು ನೋಡಿ, ತನ್ನ ಮನೆಯ ಅಂಗಳದಲ್ಲಿ ನಿಂತಿದ್ದ ರಾಜಣ್ಣ ಸಂತೋಷದಿಂದ ಕುಣಿದಾಡಿದ.

## [ 17 ]

ನರಸಿಂಹ ಮತ್ತು ರಾಮದಾಸು, ಪಟ್ಟಣಕ್ಕೋಡಿದರು. ಸಂಜೆಗೆ ಊರಿಗೆ ಹಿಂದಿರುಗಿ, ಜಾಮೀನಿನ ಮೇಲೆ ಪುಲ್ಲಯ್ಯನನ್ನು ಬಿಡಿಸಿಕೊಂಡು ಬರಲು ಪುನಃ ಹೋಗಬೇಕೆಂದು ತಿಳಿಸಿದರು. ಹೇಗಾದರೂ ಮಾಡಿ ಪುಲ್ಲಯ್ಯನ ಪರವಾಗಿ ಒಬ್ಬ ವಕೀಲನನ್ನು ನೇಮಿಸ ಬೇಕಾಗಿತ್ತು. ಆದರೆ ಅದಕ್ಕೆ ಬೇಕಾದ ದುಡ್ಡು ಮಾತ್ರ ಯಾರ ಬಳಿಯೂ ಇರಲಿಲ್ಲ. ಯಾರನ್ನು ಕೇಳಬೇಕು—ಎಂದು ನೀಲಿ ಯೋಚಿಸುತ್ತಾ ಕುಳಿತಿದ್ದಾಗ, ರಾಜಣ್ಣನ ಹೆಂಡತಿ ಬಂದು ಒಳ್ಳೊಳ್ಳೆ ಮಾತನಾಡಿ, ಕೇಳುವುದಕ್ಕೆ ಮುಂಚೆಯೆ ಐವತ್ತು ರೂಪಾಯಿಗಳನ್ನು ಕೊಟ್ಟುಹೋದಳು. ನೀಲಿ, ಅಷ್ಟಕ್ಕೆ ಕೃತಜ್ಞತೆ ವ್ಯಕ್ತಪಡಿಸಿದಳು.

ಇದಾದ ಮರುದಿನ, ಮತ್ತೆ, ಅಧಿಕಾರಿಗಳ ಗುಂಪು ಪುಲ್ಲಯ್ಯನ ಮನೆಯ ಮುಂದೆ ಹಾಜರಾಯಿತು. ಒಳಗಿದ್ದ ನೀಲಿ, ಅವರನ್ನು ನೋಡುತ್ತಲೇ ಹೊರಬಂದಳು.

ಪುಲ್ಲಯ್ಯನಿಂದ ಅವಮಾನಿತನಾದ ಅಧಿಕಾರಿಯೇ ಮುಂದಾಗಿ, "ಧಾನ್ಯ ಕೊಡಮ್ಮ" ಎಂದು ಕೇಳಿದ.

ನೀಲಿ ಮರುಮಾತನಾಡದೆ, ಉಗ್ರಾಣದ ಬೀಗ ತೆಗೆದು ಬಾಗಿಲು ದೂಡಿದಳು.

ಆ ಮೇಲೆ ಅಧಿಕಾರಿಯ ಮುಂದೆ ನಿಂತು—"ಧಣೇರ, ಕೊಡಬೇಕಾದವರಿಗೆಲ್ಲಾ ಕೊಟ್ಟು ಉಳಿದದ್ದನ್ನು ಮಾತ್ರ ಇಲ್ಲಿ ಇಟ್ಟುಕೊಂಡೀವಿ. ಬಡವರು, ನಮ್ಮ ಬಡ ಸಂಸಾರಕ್ಕ ಅದೆಷ್ಟು ಉಳಿಸಿಹೋಗ್ತೀರೋ ಉಳಿಸ್ರಿ. ನೀವೆಲ್ಲಾ ಹಿರೇರು—ತಿಳಿದವರು. ನಿಮಗೆ ನ್ಯಾಯಾ ಅಂತ ತೋರಿದ್ದನ್ನ ಮಾಡ್ರಿ"—ಎಂದು ಸವಿನಯದಿಂದ ಬೇಡಿಕೊಂಡಳು.

ಅವಳ ವಿನಯ ತುಂಬಿದ ಮಾತುಗಳನ್ನು ಕೇಳಿ, ರೆವೆನ್ಯೂ ಇನ್ಸ್‌ಪೆಕ್ಟರ್‌ನ ಮನಸ್ಸು ಕರಗಿತು. ಆತ ನಿಂತಲ್ಲಿಂದಲೇ ಅಡಕಲು ಕೋಣೆಯೊಳಗೆ ಬಗ್ಗಿ ನೋಡಿ—"ಪಟ್ಟಣ ದಾಗ ಕೂಡ, ನಿಮ್ಮಂತಹ ಜನರು ಬೇಕಾದಷ್ಟಿದ್ದಾರ. ಅವರ್ನ ನಿಮ್ಮಂತಹ ರೈತರು ಪೋಷಿಸಬೇಕು. ಇಲ್ಲದಿದ್ದರ ಅವರು ಹೊಟ್ಟೆಗಿಲ್ಲದ ಸಾಯ್ತಾರ"—ಎಂದ.

"ಹೌಂದ್ರಿ ಧಣೇರ. ಒಬ್ಬ ಉಣ್ಣೋದs ನಾಲ್ಕು ಜನರು ಉಂಡರ ಪ್ರಪಂಚ ನಡೆಯೋದು."

"ಖರೇ ಹೇಳಿದಿ ನೋಡು. ನಾನೇನೂ ಪಶು ಅಲ್ಲ. ನಾನು ಮನುಷ್ಯನs...... ಇರಲಿ, ಒಂದು ಪುಟ್ಟಿ ಧಾನ್ಯ ಕೊಡು—ಅಷ್ಟೇ ಸಾಕು"—ಎಂದು ಆ ಅಧಿಕಾರಿ ಹೇಳಿದಾಗ, ನೀಲಿಯ ಮುಖ ಅರಳಿತು. ಅವಳು, "ಧಣೇರ, ಒಂದs ಯಾಕ ಎರಡು ಪುಟ್ಟಿ ತೊಗೊಳ್ರಿ,"—ಎಂದು ಸಂತೋಷದಿಂದ ಕೊಡಲು ಮುಂದಾದಳು.

ಆ ಅಧಿಕಾರಿಗೂ ಸಂತೋಷವಾಯಿತು. ನೀಲಿಯಿಂದ ಒಂದು ಪುಟ್ಟಿ ಧಾನ್ಯ ಪಡೆದು ಕೊಳ್ಳುವಂತೆ, ಆತ, ಏಜೆಂಟರಿಗೆ ಹೇಳಿ ಮುಂದೆ ಹೋದ.

ಪುಲ್ಲಯ್ಯ, ನರಸಿಂಹ ಮತ್ತು ರಾಮದಾಸು, ನಡುಹಗಲಿನಲ್ಲಿ, ಪಟ್ಟಣದಿಂದ ನಡೆದುಕೊಂಡು ಬಂದರು. ಜಾಮೀನಿನ ಮೇಲೆ ಬಿಡುಗಡೆ ಹೊಂದಿದ್ದ ಪುಲ್ಲಯ್ಯ, ಊರಿನ ನಡುಬೀದಿಯಲ್ಲಿ ಬರಲು ನಾಚಿಕೊಂಡು, ಸಂದಿಗಳಲ್ಲಿ ಹೊರಟು, ಮನೆ ಸೇರಿದ. ಮಲ್ಲೇಶಿ, ತಂದೆಯನ್ನು ನೋಡುತ್ತಲೇ ಕೇಕೆಹಾಕಿದ. ಪುಲ್ಲಯ್ಯ ಮಗನನ್ನು ಎತ್ತಿ ಮುದ್ದಾಡುತ್ತಾ, "ನನ್ನ ಮಗನೆ, ಒಂದು ದಿನದಾಗ ಒಣಗಿ ಕಡ್ಡಿಯಾದೆಲ್ಲೊ"—ಎಂದು ಮರುಗಿದ.

ಅದನ್ನು ಕೇಳಿಸಿಕೊಂಡ ನರಸಿಂಹ, "ಈ ಮಗನಿಂದ ದೂರವಾಗಿ, ನೀನೂ ಒಣಗಿ ಕಡ್ಡಿಯಾಗಿ ಏಳು"—ಎಂದು ನಗೆಯಾಡಿದ.

ನೀಲಿ ಮಾತ್ರ, ಯಾವ ಮಾತೂ ಆಡದೆ, ಮೌನವಾಗಿದ್ದಳು. ಪುಲ್ಲಯ್ಯ, ಊಟಕ್ಕೆ ಕುಳಿತಾಗ, ಎದುರಿಗಿದ್ದ ಹೆಂಡತಿಯ ಮುಖ ನೋಡಲು ನಾಚಿದ. ಆದರೂ, ತನಗೆ ಅನ್ಯಾಯ ಮಾಡಿದ ಗ್ರಾಮಸ್ಥರ ಮೇಲೆ, ಅಧಿಕಾರಿಗಳ ಮೇಲೆ ಮನಸ್ಸಿನಲ್ಲಿ ಕೆಂಡ ಕಾರುತ್ತಿದ್ದ. ತಂದೆ-ಮಗ ಜೊತೆಯಾಗಿ ಊಟಕ್ಕೆ ಕುಳಿತಿದ್ದಾಗ, ನೀಲಿ, ಅಲ್ಲಿಯೇ ಮೌನವಾಗಿ ನಿಂತಿದ್ದಳು. ಮುದುಕಿ ಮನೆಯ ಜಗುಲಿಯ ಮೇಲೆ ಕುಳಿತು ಜಡೆ ಹಾಕಿಕೊಳ್ಳುತ್ತಿದ್ದಳು. ಪುಲ್ಲಯ್ಯ ಅನ್ನ ಉಂಡ ನಂತರ, ನೀಲಿ ಅಂಬಲಿ ಹಾಕಿದಳು. ಮಗನೂ ಸಹ ಅಂಬಲಿ ಹಾಕಿಸಿಕೊಳ್ಳಲು ಮುಂದಾದಾಗ ಪುಲ್ಲಯ್ಯ ಬೇಡವೆಂದ.

ಆ ವೇಳೆಗೆ, ಪುಲ್ಲಯ್ಯ ಊರಿಗೆ ಬಂದ ವಿಷಯ ತಿಳಿದು, ಊರ ಜನರು ಅವನನ್ನು ಮಾತನಾಡಿಸಲು ಬಂದರು. ಅವರೆಲ್ಲ ಹೋದ ಮೇಲೆ, ಪುಲ್ಲಯ್ಯ, ತುಂಬಿದ ಉದ್ವೇಗದಿಂದ ಮನೆಯಲ್ಲೆ ಶತಪಥಹಾಕಿದ. ತನಗಾದ ಅಪಮಾನಕ್ಕೆ ಕಾರಣರಾದ ಜನರನ್ನು ಸುಮ್ಮನೆ ಬಿಡುವುದಿಲ್ಲವೆಂದು ಘರ್ಜಿಸಿದ. ಯಾರು ಬಂದು ಧಾನ್ಯ ಒಯ್ತಾರೊ ನೋಡ್ತೀನಿ—ಎಂದು ಕೂಗಾಡಿದ. ಇದನ್ನು ಕೇಳಿಸಿಕೊಂಡ ಮುದುಕಿ—"ಯಾಕ ಅಷ್ಟು ರೇಗಾಡ್ತೀದಿ. ನೀನು ಯಾರ ಮ್ಯಾಲೆ ಸಿಟ್ಟು ಮಾಡಿಕೊಳ್ತಿಯೊ ಅವರೂ ಮನುಷ್ಯರೆ. ಕೆಟ್ಟದು-ಒಳ್ಳೇದು-ಎಂಬೊ ಜ್ಞಾನ ಮನುಷ್ಯರಿಗೆ ಇರ್ತದ ಹೊರತಾಗಿ, ಪ್ರಾಣಿಗಳಿಗಿರತದೇನು......?" ಎಂದು ಏನನ್ನೊ ಹೇಳಲು ಹೊರಟಾಗ, "ನೀನು ಸುಮ್ಮನಿರಮ್ಮಾ"—ಎಂದು ಪುಲ್ಲಯ್ಯ ಗದರಿಸಿದ. ಮುದುಕಿ ಬಾಯಿ ಮುಚ್ಚಿಕೊಂಡು ಕುಳಿತಳು. ನೀಲಿ, ಗಂಡ ತನ್ನ ಮನಸ್ಸಿನಲ್ಲಿನ ಸಿಟ್ಟನ್ನು ಕಕ್ಕುವವರೆಗೂ ಸುಮ್ಮನಿದ್ದಳು. ಪುಲ್ಲಯ್ಯನ ಆರಾಟ ಕಡಿಮೆ ಆಗಲಿಲ್ಲ. ಆವೇಶದಿಂದ ಮನೆಯ ಜಗುಲಿಯ ಮೇಲೆ ಕಾಲಿಟ್ಟವನು, ಏನೊ ಜ್ಞಾಪಿಸಿಕೊಂಡು ಮತ್ತೆ ಒಳಗೆ ಹೋಗಿ ಕುಳಿತ. ಗರಡಿಯಲ್ಲಿ ಗಟ್ಟಿಗನೆನಿಸಿಕೊಂಡ ಪುಲ್ಲಯ್ಯ, ನೀತಿವಂತನಾದ ಮಲ್ಲಯ್ಯನ ಮಗ ಪುಲ್ಲಯ್ಯ, ಊರಿನ ನಡುಬೀದಿಯಲ್ಲಿ ಕೈಗಳಿಗೆ ಬೇಡಿಹಾಕಿಸಿಕೊಂಡು ಹೋದದ್ದು, ಆಗಲೇ, ಸುತ್ತಮುತ್ತಲಿನ ಹಳ್ಳಿಗಳ ಜನರಿಗೂ ಸಹ ತಿಳಿದಿತ್ತು. ಇಷ್ಟೇ ಅಲ್ಲದೆ, ಒಂದು ದಿನ ಜೈಲಿನಲ್ಲೂ ಸಹ ಕಳೆದುಬಂದದ್ದು—ಇನ್ನೂ ಹೆಚ್ಚಿನ ಅವಮಾನವಾಗಿತ್ತು. ತನಗೆ ಈ ರೀತಿ ಆಗುವದೆಂದು ಪುಲ್ಲಯ್ಯ, ಕನಸುಮನಸಿನಲ್ಲೂ ಸಹ ಅಂದುಕೊಂಡಿರಲಿಲ್ಲ. ನ್ಯಾಯಾನ್ಯಾಯಗಳ ಬಗ್ಗೆ ಯೋಚಿಸುತ್ತಿದ್ದ ಪುಲ್ಲಯ್ಯ, "ಈ ಕಾಲದಾಗ ಅನ್ಯಾಯಕ್ಕs ಗೆಲುವು. ನ್ಯಾಯ—ಅಂಬೋದು ಅಡವಿಪಾಲಾಗ್ಯದ"—ಎಂದು ಗಟ್ಟಿಯಾಗಿಯೇ ಹೇಳಿದ. ರಾಟಿ ತಿರುವುತ್ತ ಕುಳಿತಿದ್ದ ನೀಲಿ ಈ ಮಾತನ್ನು ಕೇಳಿ—"ಯಾಕ ಇಷ್ಟ್ಯಾಕ ಒದ್ದಾಡ್ತೀದಿ? ಯಾಕ ಸುಮ್ಮನ ಮನಸ್ಸಿಗೆ ಹಚ್ಚಿಕೊಂಡು ವ್ಯಸನಪಡ್ತೀದಿ"—ಎಂದು ಕೇಳಿದಳು.

"ವ್ಯಸನ ಆಗಾಣಿಲ್ಲೇನು ಮತ್ತ. ಊರಿನ ಹಿರಿಯರು ಹೀಂಗ ಅನ್ಯಾಯ ಮಾಡಿದರ, ಊರಿಗೆ ಊರೆ ಹಾಳಾಗ್ತದ."

"ಊರು ಹಾಳಾದರ ನಾವಾದರೂ ಎಲ್ಲಿರ್ತೀವಿ? ಗಾಳಿಗೆ ತೂರಿದ ಹತ್ತಿ ಗಾಳಿ ಒಳಗ ಎಷ್ಟು ಹೊತ್ತು ಇದ್ದೀತು......... ಹೂವು ಗಿಡದಾಗಿದ್ದರ ನೋಡಲು ಚೆಂದ—ಮುಡಿಯಲು ಅಂದ".

"ಅಂದರ—ಈಗ ಏನಂತೀದಿ ನೀನು?" ಪುಲ್ಲಯ್ಯ ಬೇಸರದಿಂದ ಕೇಳಿದ.

"ನೀನು ನಿನ್ನ ಪೌರುಷ ತೋರಿಸದೆ ಸುಮ್ಮನಿದ್ದಿದ್ದರ, ಇಷ್ಟೆಲ್ಲ ಆಗ್ತಿರಲಿಲ್ಲ"—ನೀಲಿ ಹೇಳಿದಳು.

ಪುಲ್ಲಯ್ಯ ಯಾವ ಮಾತೂ ಆಡದೆ ಮೀಸೆ ತಿರುವುತ್ತಾ ಕುಳಿತ. ನೀಲಿ ಒಮ್ಮೆ

ಗಂಡನನ್ನು ನೋಡಿ, ಮತ್ತೆ ರಾಟಿಯತ್ತ ದೃಷ್ಟಿ ಬೀರಿ, "ನೀನು ಯಾವ ಅಧಿಕಾರಿನ್ನ ಜಗುಲಿ ಮ್ಯಾಲಿಂದ ನೂಕಿಸಿ ಅವಮಾನ ಮಾಡಿದಿಯೊ, ಅದೇ ಅಧಿಕಾರಿ ಎರಡು ಪುಟ್ಟಿ ಧಾನ್ಯ ತೊಗೊಳ್ರಿ ಅಂದರ, ಒಂದs ಪುಟ್ಟಿ ಸಾಕು ಅಂತ ತೊಗೊಂಡು ಹೋದ. ದಿನ ಬೆಳಗಾದರ ಯಾವ ರಾಜಣ್ಣನ ಓಯ್ತಿಯೊ, ಅದೇ ರಾಜಣ್ಣನ ಹೆಣ್ತಿ ಕೊಟ್ಟ ಐವತ್ತು ರೂಪಾಯಿ ಸಾಲದಿಂದ ನೀನು ಮನೀಗೆ ಬಂದೀದಿ. ನಾವು ಒಬ್ಬರನ್ನೂ ಹಚ್ಚಿ ಕೊಳ್ಳದಿದ್ದರ, ಇನ್ನೊಬ್ಬರು ನಮ್ಮನ್ನ ಯಾಕ ಹಚಿಕೋತಾರ."

ಪುಲ್ಲಯ್ಯ, ಹೆಂಡತಿ ಇನ್ನು ಏನಾದರೂ ಹೇಳುವಳೇನೊ ಎಂದು, ಅವಳನ್ನೆ ನೋಡುತ್ತ ಕುಳಿತ. ಆದರೆ, ಆಕೆ ಮತ್ತೆ ಮಾತಾಡಲಿಲ್ಲ. ತನ್ನ ಗಂಡನ ವರ್ತನೆಯಿಂದ ಅವಳು ಬೇಸರಗೊಂಡದ್ದು, ಅವಳ ಮುಖದ ಮೇಲೆ ಎದ್ದು ಕಾಣುತ್ತಿತ್ತು.

ಎರಡು ದಿನಗಳಾದರೂ, ಪುಲ್ಲಯ್ಯ ಮನೆಯಿಂದ ಕದಲಲಿಲ್ಲ. ಊರಿನ ಜನರು— ಪರಿಚಿತರು ಬಂದು ಮಾತನಾಡಿಸಿಕೊಂಡು ಹೋಗುತ್ತಿದ್ದರಾಗಲಿ, ಪುಲ್ಲಯ್ಯ ಮಾತ್ರ ಯಾರನ್ನೇ ಆಗಲಿ ಭೇಟಿಯಾಗಲು ಹೋಗಲಿಲ್ಲ. ಹೆಂಡತಿಯನ್ನು ಸಹ ಸರಿಯಾಗಿ ಮಾತನಾಡಿಸುತ್ತಿರಲಿಲ್ಲ. ಆದರೆ ಮಗನ ಜೊತೆ ಮಾತ್ರ ಆಡುತ್ತಿದ್ದ—ಮಾತಾಡುತ್ತಿದ್ದ.

ಪುಲ್ಲಯ್ಯನ ಮೊಕದ್ದಮೆ, ದಿನದಿಂದ ದಿನಕ್ಕೆ ಮುಂದೂಡಲ್ಪಟ್ಟಿತು. ವಕೀಲಿಯ ಖರ್ಚಿನ ಜೊತೆ, ಮೊಕದ್ದಮೆಯ ದಿನ ಪಟ್ಟಣಕ್ಕೆ ಹೋಗಿಬರುವ ಖರ್ಚು ಕೂಡ ಹೆಚ್ಚುತ್ತಾ ಹೋಯಿತು. ಪುಲ್ಲಯ್ಯನ ಕೈಯಲ್ಲಂತೂ ದುಡ್ಡಿರಲಿಲ್ಲ. ಇದ್ದ ಧಾನ್ಯ ವನ್ನಾದರೂ ಮಾರಿಕೊಂಡು ಖರ್ಚು ನೀಗಿಸಿಕೊಳ್ಳಬೇಕೆಂದರೆ ಅಷ್ಟು ಧಾನ್ಯವೂ ಇರಲಿಲ್ಲ. ಒಂದು ವೇಳೆ ಇದ್ದುದನ್ನು ಮಾರಿದರೂ, ಬೇಕಾದಾಗ ಹೆಚ್ಚು ಬೆಲೆ ಕೊಟ್ಟು ಕೊಳ್ಳು ವುದು ಕಷ್ಟವೇ ಆಗಿತ್ತು. ಸಾಲ ಕೇಳದೆ, ಪುಲ್ಲಯ್ಯನಿಗೆ ಇನ್ನಾವ ಉಪಾಯವೂ ತೋಚ ಲಿಲ್ಲ. ಆದರೆ, ಮೊದಲಿನಂತೆ, ಮನುಷ್ಯನನ್ನು ನಂಬಿ, ಮಾತನ್ನು ನಂಬಿ ಸಾಲ ಕೊಡು ವವರು ಯಾರೂ ಇರಲಿಲ್ಲ. ಸರ್ಕಾರದ ಬಡ್ಡಿ ದರದ ಮೇಲೆ, ಅಂದರೆ ತಿಂಗಳಿಗೆ ನೂರಕ್ಕೆ ಎಂಟಾಣೆಯಂತೆ ಬಡ್ಡಿ ಮೇಲೆ ಸಾಲ ಪಡೆಯಬಹುದಾಗಿತ್ತು. ಈ ಬಡ್ಡಿ ಯನ್ನು ಧಾನ್ಯದ ರೂಪದಲ್ಲಿ ಕೊಟ್ಟಲ್ಲಿ ವರ್ಷಕ್ಕೆ ಮೂರು ಪುಟ್ಟಿ ಧಾನ್ಯ ಕೊಡ ಬೇಕಾಗಿತ್ತು. ಊರಿನ ಶೆಟ್ಟಿಯಲ್ಲದೆ, ದೇಸಾಯರು ಕೂಡ ಈ ಬಡ್ಡಿ ವ್ಯವಹಾರಕ್ಕೆ ಇಳಿದಿದ್ದರು. ವರ್ಷಕ್ಕೆ ಮೂರು ಪುಟ್ಟಿ ಧಾನ್ಯ ಕೊಡುವುದು ಅನ್ಯಾಯವೆಂದು, ಪುಲ್ಲಯ್ಯ ಯಾರ ಬಳಿಯೇ ಆಗಲಿ ಸಾಲ ಕೇಳಲು ಹೋಗಲಿಲ್ಲ. ಆದರೆ, ಸಾಲ ಪಡೆ ಯದೆ ಗತ್ಯಂತರವೂ ಇರಲಿಲ್ಲ. ನೀಲಿ, ರಾಜಣ್ಣನ ಹೆಂಡತಿಗೆ ದುಂಬಾಲುಬಿದ್ದು ಎರಡು ಪುಟ್ಟಿ ಧಾನ್ಯ ಪಡೆದುಕೊಂಡು ಬಂದಳು. ಕೊನೆಗೆ ಸ್ವಂತ ಭೂಮಿಯನ್ನೆ ಅಡ ವಿಟ್ಟು ಸಾಲ ಪಡೆಯುವ ಸ್ಥಿತಿ ಬಂತು.

ಮಳೆಗಾಲದ ವೇಳೆಗೆ, ಪುಲ್ಲಯ್ಯನ ಮೊಕದ್ದಮೆಯ ವಿಚಾರಣೆ ಮುಗಿಯಿತು. ಆ ಐದು ತಿಂಗಳಲ್ಲಿ, ಪುಲ್ಲಯ್ಯ ಇನ್ನೂರು ರೂಪಾಯಿಗಳಿಗೂ ಹೆಚ್ಚು ಖರ್ಚು

ಮಾಡಿದ್ದ. ಹುಣ್ಣಿನ ಮೇಲೆ ಉಪ್ಪು ಎರಚಿದಂತೆ, ನ್ಯಾಯಾಲಯ, ನೂರು ರೂಪಾಯಿ ಜುಲ್ಮಾನೆ ವಿಧಿಸಿತು. ಜುಲ್ಮಾನೆ ಕೊಡದಿದ್ದ ಪಕ್ಷದಲ್ಲಿ, ಎರಡು ತಿಂಗಳು ಕಾರಾಗೃಹ ವಾಸ ಅನುಭವಿಸಬೇಕೆಂದು ನ್ಯಾಯಮೂರ್ತಿಗಳು ತೀರ್ಪು ನೀಡಿದರು. ಆ ದಿನ, ನವಿರಿ ಗ್ರಾಮದ ಸುಮಾರು ಮೂವತ್ತು ಜನರು ನ್ಯಾಯಾಲಯಕ್ಕೆ ಬಂದಿದ್ದರು. ಪುಲ್ಲಯ್ಯ ಅವರ ಮುಂದೆ ತನ್ನ ಆಕ್ರೋಶವನ್ನು ವ್ಯಕ್ತಪಡಿಸಿ—"ಆ ನ್ಯಾಯಮೂರ್ತಿಗೆ ನ್ಯಾಯ—ಅನ್ಯಾಯದ ಪರಿಜ್ಞಾನವೇ ಇಲ್ಲ. ಈ ಪರಪಂಚದಾಗ ನ್ಯಾಯ—ನೀತಿ—ಅಂಬೋದು ಎಂದೋ ಸತ್ತುಹೋಗ್ಯದ"—ಎಂದು ಕೂಗಾಡಿದ. ಗಂಡ ಜೇಲಿಗೆ ಹೋಗುವುದನ್ನು ತಪ್ಪಿಸುವುದಕ್ಕಾಗಿ, ನೀಲಿ, ರಾಜಣ್ಣನ ಹೆಂಡತಿಯ ಮೊರೆಹೋದಳು. ಇಂತಹ ಪರಿಸ್ಥಿತಿಯಲ್ಲಿ, ರಾಜಣ್ಣನ ಹೆಂಡತಿ ತನ್ನ ಸೇಡು ತೀರಿಸಿಕೊಳ್ಳಲು ಮುಂದಾದಳು. ಅವಳು ಬಿಟ್ಟಿಗೆ ದುಡ್ಡು ಕೊಡುವಂತೆ ನೂರು ರೂಪಾಯಿ ಕೈಯಲ್ಲಿಟ್ಟು, ಭೂಮಿಯನ್ನು ಆಧಾರವಾಗಿ ಬರೆದುಕೊಡುವಂತೆ ನೀಲಿಯನ್ನು ಪುಸಲಾಯಿಸಿದಳು.

ನೀಲಿ, ಗಂಡನೊಡನೆ ಮಾತನಾಡುವುದಾಗಿ ಹೇಳಿ ದುಡ್ಡು ಪಡೆದು ಬಂದಳು. ಇದಾದ ಒಂದು ವಾರ, ಪುಲ್ಲಯ್ಯ ಮನೆಯ ಹೊರಗೆ ತಲೆಹಾಕಲಿಲ್ಲ. ತಾನಾಯಿತು, ತನ್ನ ಮಗನಾಯಿತು. ಮನೆಯಿಂದ ಹೊರ ಬರಲೇ ಇಲ್ಲ. ಹೊಲಕ್ಕೆ ಹೋಗಬೇಕಾದಲ್ಲಿ, ಎತ್ತುಗಳಿಗೆ ಬೇಕಾದ ಹಸಿಮೇವನ್ನು ತರಲು ಹೊರಗೆ ಹೋಗಬೇಕಾಗಿ ಬಂದಲ್ಲಿ ಮಾತ್ರ, ಪುಲ್ಲಯ್ಯ ತುಂಬ ಖಿನ್ನನಾಗುತ್ತಿದ್ದ. ಎಲ್ಲರೂ ತನ್ನನ್ನು ನೋಡಿ ಬೊಟ್ಟು ತೋರಿಸುತ್ತಿರುವಂತೆ, ತನ್ನನ್ನು ನೋಡಿ ಅಪಹಾಸ್ಯ ಮಾಡುತ್ತಿರುವಂತೆ ಭ್ರಮೆ ಪಡುತ್ತಿದ್ದ. ಆಗಾಗ, ಮಗನನ್ನು ಭುಜದ ಮೇಲೆ ಕೂಡಿಸಿಕೊಂಡು, ನೀಲಮ್ಮಳ ಗುಡಿಗೆ ಹೋಗಿ, ರಾತ್ರಿಯಾಗುವ ವರೆಗೆ ಅಲ್ಲಿಯೇ ಕೂಡುತ್ತಿದ್ದ. ಕತ್ತಲಾಗುವುದರ ಒಳಗಾಗಿ ಮರಿಮೊಮ್ಮಗನನ್ನು ಮನೆಗೆ ಕರೆತರದಿದ್ದಲ್ಲಿ, ಮುದುಕಿ ಪುಲ್ಲಯ್ಯನ ಮೇಲೆ ರೇಗಾಡುತ್ತಿದ್ದಳು. ಯಾವುದಾದರೂ ಗಾಳಿ, ದೆವ್ವ ಒಡಿದುಕೊಂಡರೆ, ಮರಿಮೊಮ್ಮಗ ಸೊರಗುತ್ತಾನೆಂಬುದು ಅವಳ ಕಳವಳ.

ಹೊಲದಲ್ಲಿ ಬೆಳೆದು ನಿಂತ ಫಸಲು ಇನ್ನೂ ಹಣ್ಣಾಗಿರಲಿಲ್ಲ. ಫಸಲು ಕೈಗೆ ಬರಬೇಕಾದರೆ ಇನ್ನೂ ಒಂದು ತಿಂಗಳಾದರೂ ಬೇಕಾಗಿತ್ತು. ಮನೆಯಲ್ಲಿ ಒಂದು ಹಿಡಿ ಕಾಳೂ ಇರಲಿಲ್ಲ. ಯಾರನ್ನಾದರೂ ಸಾಲ ಕೇಳದೆ ಗತ್ಯಂತರವಿರಲಿಲ್ಲವಾದರೂ, ಸಾಲಕೇಳಲು ಪುಲ್ಲಯ್ಯನ ನಾಲಿಗೆ ಏಳಲೇ ಇಲ್ಲ. ನೀಲಿಯೆ, ಮತ್ತೆ ರಾಜಣ್ಣನ ಹೆಂಡತಿಯ ಬಳಿ ಹೋಗಿ ಸಾಲ ತಂದಳು. ಆಗಲೇ ಅಕ್ಕಿಯ ಬೆಲೆ, ರೂಪಾಯಿಗೆ ಪಡಿ (ಸುಮಾರು ಒಂದೂವರೆ ಸೇರು) ಆಗಿತ್ತು. ಅಭಾವದ ಪರಿಸ್ಥಿತಿ ಇನ್ನೂ ತೀವ್ರವಾಗಿಯೇ ಇತ್ತು. ಕಂಟ್ರೋಲಿನಲ್ಲಿ ಕೊಡಲಾಗುತ್ತಿದ್ದ ಅಕ್ಕಿ, ಮೆಕ್ಕೆತೆನೆಯಂತೆ ಕೆಂಪಗೆ, ದಪ್ಪಗಾಗಿದ್ದವು. ದನಗಳು ಕೂಡ ಅವುಗಳನ್ನು ತಿನ್ನುವಂತಿರಲಿಲ್ಲ. ಆದರೆ, ಆ ದಪ್ಪ ಅಕ್ಕಿಯನ್ನೇ ತಂದು ಕುಟ್ಟಿದಲ್ಲಿ ಸಾಕಷ್ಟು ನುಚ್ಚು ಸಿಗುತ್ತಿತ್ತು. ಆ ನುಚ್ಚಿನಿಂದ ಅನ್ನ

ಮಾಡಲಾಗುತ್ತಿರಲಿಲ್ಲವಾದರೂ, ಇನ್ನೇನಾದರೂ ಮಾಡಿಕೊಳ್ಳಬಹುದಾಗಿತ್ತು. ಬಹಿರಂಗ ಪೇಟೆಯಲ್ಲಿ ಅಕ್ಕಿ ಸಿಗುವುದೂ ಸಹ ಕಷ್ಟವಾಗಿತ್ತು. ಅದರ ಜೊತೆಗೆ ಉಪ್ಪು, ಬೇಳೆ, ಎಣ್ಣೆಯ ದರಗಳೂ ಸಹ ವಿಪರೀತ ಏರತೊಡಗಿದ್ದವು. ಇದ್ದವರಿಗೆ ಮತ್ತಷ್ಟು ದುಡ್ಡು ಮಾಡಿಕೊಳ್ಳಲು, ಇಲ್ಲದವರು ಮತ್ತಷ್ಟು ಗೋಳಿಡಲು ಆಗಲೇ ಪ್ರಾರಂಭವಾಗಿತ್ತು. ಅಂತಹ ದಿನಗಳಲ್ಲೂ ಕೂಡ, ನೀಲಿಯ ಉದಾರತನಕ್ಕೆ ಭಂಗಬರಲಿಲ್ಲ. ಎಲ್ಲಿ ಏನೂ ಸಿಗದಿದ್ದಲ್ಲಿ, ಜೀವ ಉಳಿಸಿಕೊಳ್ಳಲು ಬೇಕಾಗುವಷ್ಟು ಹಿಡಿ ಗಂಜಿಯಾದರೂ ನೀಲಿಯ ಮನೆಯಲ್ಲಿ ಸಿಗುವದೆಂಬ ದೃಢ ವಿಶ್ವಾಸ, ಕುಷ್ಠರೋಗಿಗೆ, ಕುಡ್ಡ ವೆಂಕಣ್ಣನಿಗೆ ಮತ್ತು ದರಿದ್ರಳಾದ ಗೌರಮ್ಮಳಿಗಿತ್ತು.

ನೀಲಿ ಪಡೆದ ಅಕ್ಕಿಯ ಬೆಲೆಯನ್ನು ಪಡಿಗೆ ರೂಪಾಯಿ ಏರಿಸಿ, ಬೇಳೆಯ ಬೆಲೆಯನ್ನು ರೂಪಾಯಿಗೆ ಎರಡು ಪಡಿಯಂತೆ ಏರಿಸಿ, ಸಾಲದ ಮೇಲಿನ ಬಡ್ಡಿಯನ್ನು, ಮೂರನೂರಾ ಐವತ್ತರಿಂದ, ನಾಲ್ಕುನೂರಾ ಐವತ್ತಕ್ಕೆ ತಂದಿದ್ದ ರಾಜಣ್ಣ. ಆ ಸಲದ ಬೆಳೆಯೂ ಸಹ ಅಷ್ಟು ತೃಪ್ತಿಕರವಾಗಿರಲಿಲ್ಲ. ಫಸಲು ಅರ್ಧಕ್ಕೆ ಅರ್ಧ ಹಾಳಾಗಿತ್ತು. ಉಳಿದ ಧಾನ್ಯದಲ್ಲಿ ಮೂರರಲ್ಲಿ ಎರಡನೆಯ ಭಾಗದಷ್ಟು ಧಾನ್ಯ ಬಡ್ಡಿಗೆ ಹೋಯಿತು. ದಾನ-ಧರ್ಮ, ಅಗಸರವನು, ಕ್ಷೌರಿಕ ಇವರಿಗೆಲ್ಲ ಕೊಡಬೇಕಾದುದನ್ನು ಕೊಟ್ಟ ಮೇಲೆ, ಕೇವಲ ಎರಡು ಪುಟ್ಟಿ ಧಾನ್ಯ ಮಾತ್ರ ಉಳಿಯಿತು. ಗೇಣಿ ಹಿಡಿದ ಜಮೀನಿನಲ್ಲಿ ಬೆಳೆದ ಧಾನ್ಯ, ಗೇಣಿ ಕೊಡುವುದರಲ್ಲೆ ಸರಿಹೋಯಿತು. ಎರಡು ಪುಟ್ಟಿ ಧಾನ್ಯದಲ್ಲೇ ಇಡೀ ವರ್ಷ ಹೇಗೆ ಕಳೆಯಬೇಕೆಂಬುದು ಪುಲ್ಲಯ್ಯನಿಗೆ ಯೋಚನೆಗಿಟ್ಟುಕೊಂಡಿತು. ಈಗ ಅವನು ಮೊದಲಿನಂತೆ ಹುಷಾರಾಗಿರಲಿಲ್ಲ. ಅವನು ಸೊರಗುತ್ತಿರುವಂತೆ, ಅವನ ಶಿಷ್ಯರು ಪದೆಪದೆ ಹೇಳುತ್ತಿದ್ದರು. ಅವನ ಶಿಷ್ಯರು ಈಗ ಬಲಿತ ವಯಸ್ಸಿನವರಾಗಿದ್ದರು. ಆದರೂ ಕೂಡ, ಅವರಲ್ಲಿ ಯಾವ ಉತ್ಸಾಹವೂ ಇರಲಿಲ್ಲ. ಪುಲ್ಲಯ್ಯ ಅವರ ವಯಸ್ಸಿನಲ್ಲಿ ಉತ್ಸಾಹದಿಂದ ತುಂಬಿತುಳುಕುತ್ತಿದ್ದನಲ್ಲದೆ, ಗಟ್ಟಿಗನೆನಿಸಿಕೊಂಡಿದ್ದ. ಸುತ್ತಮುತ್ತಲಿನ ನಾಲ್ಕು ಹಳ್ಳಿಗಳಲ್ಲಿ ಹೆಸರುಗಳಿಸಿದ್ದ. ಆದರೆ, ಅವನ ಶಿಷ್ಯರ ಪೈಕಿ ಯಾರೇ ಆಗಲಿ ಅಂತಹ ಹೆಸರು ಗಳಿಸಲಿಲ್ಲ. ಪುಲ್ಲಯ್ಯನಿಗೆ, ಅವರನ್ನು ನೋಡಿದಾಗಲೆಲ್ಲಾ ಮರುಕ ಹುಟ್ಟುತ್ತಿತ್ತು. ಕೇಕೆ ಹಾಕುತ್ತಿದ್ದ ಮಗನನ್ನು ನೋಡಿದಾಗ ಮಾತ್ರ ಪುಲ್ಲಯ್ಯನಿಗೆ ಸಮಾಧಾನವಾಗುತ್ತಿತ್ತು.—ಹೊಟ್ಟೆ ತುಂಬ ಊಟ ಮಾಡಿದಷ್ಟು ತೃಪ್ತಿಯಾಗುತ್ತಿತ್ತು. "ನನ್ನ ಮಗನಂತಹವರು ಮತ್ತೆ ಈ ಜಗತ್ತಿನ್ಯಾಗ ನ್ಯಾಯ-ನೀತಿಯನ್ನ ನಿಲ್ಲಿಸ್ತಾರ. ನನ್ನ ಮಗ, ಹುಣ್ಣಿಮೆಯ ಚಂದಿರನಂತೆ, ಈ ವಿಶ್ವವನ್ನೇ ಬೆಳಗ್ತಾನ. ಇವನು ಇರೋವರೆಗೂ ನನಗೆ ಯಾವ ಕೊರತೆಯೂ ಇಲ್ಲ"—ಎನ್ನುತ್ತಿದ್ದ ಪುಲ್ಲಯ್ಯ. ಇಂತಹುದರಲ್ಲೂ, ಊರಿನಲ್ಲಿ ಹೊಸ ಹೊಸ ಮನೆಗಳು ತಲೆ ಎತ್ತತೊಡಗಿದ್ದವು. ಊರಿನ ಹಿರಿಯ ರೈತ ಅಂದರೆ ದೇಸಾಯರು, ಆಗಲೇ ಹೆಂಚಿನ ಮನೆ ಕಟ್ಟಿಸಿದ್ದ. ಊರಿನ ಶೆಟ್ಟಿಯ ಗುಡಿಸಲು ಮಾಯವಾಗಿ ಗಚ್ಚಿನ

ಮನೆ ಬಂದಿತ್ತು. ಇದಕ್ಕೆ ವ್ಯತಿರಿಕ್ತವಾಗಿ, ಇದ್ದ ಮುರುಕು ಗುಡಿಸಲುಗಳ ಮೇಲೆ ಚಾಪೆ ಹೆಣೆಸಿ ಹುಲ್ಲು ಹಾಕಿಸಿಕೊಳ್ಳಲೂ ಸಹ ಅನೇಕರಿಗೆ ಗತಿಯಿರಲಿಲ್ಲ. ಮಾತಿಗೆ ಬೆಲೆಯೇ ಇರದಂತಾಗಿತ್ತು. ಈಗ ಎಲ್ಲಕ್ಕೂ ದುಡ್ಡೆ ದೊಡ್ಡದಾಗಿತ್ತು. ನೀತಿ–ನ್ಯಾಯವನ್ನು ಒಳ್ಳೆಯದು ಮತ್ತು ಕೆಟ್ಟದನ್ನು ದುಡ್ಡಿನಿಂದಲೇ ಅಳೆಯಲಾಗುತ್ತಿತ್ತು. ಇದನ್ನೆಲ್ಲ ನೋಡಿ, ತನ್ನ ಕೂದಲೂ ಸಹ ನೆರೆಯುತ್ತಿರುವಂತೆ ಪುಲ್ಲಯ್ಯನಿಗೆ ಭಾಸವಾಗುತ್ತಿತ್ತು. ಈ ದಾರುಣ ಪರಿಸ್ಥಿತಿಯನ್ನು ನೋಡಿ ನೊಂದುಕೊಂಡ ರಾಮದಾಸು, ಹಗಲೆನ್ನದೆ, ರಾತ್ರಿ ಎನ್ನದೆ, ಊರಿನ ಹಿರಿಯರು ಎದುರಾದಾಗಲೆಲ್ಲಾ ದೇವಿಯ ಉತ್ಸವ ನಡೆಸು ವಂತೆ ಕೇಳತೊಡಗಿದಾಗ, ಜನರು ಆತನಿಗೆ ಹುಚ್ಚು ಹಿಡಿದಿದೆ ಎನ್ನತೊಡಗಿದರು.

ನರಸಿಂಹನ ಸ್ಥಿತಿಯೂ ಸಹ ಚಿಂತಾಜನಕವಾಗಿತ್ತು. ನೀತಿಗೆ–ನ್ಯಾಯಕ್ಕೆ ಕಟ್ಟುಬಿದ್ದು, ಬಂದ ಧಾನ್ಯದಲ್ಲಿ ಗೇಣಿ ಕೊಟ್ಟಾದ ಮೇಲೆ ಉಳಿದ ಧಾನ್ಯ ಆಗಲೇ ಮುಗಿಯಲು ಬಂದಿತ್ತು. ಮಕ್ಕಳಿಂದ ತುಂಬಿದ ಮನೆಯನ್ನು ಹೇಗೆ ನಿಭಾಯಿಸಿಕೊಂಡು ಹೋಗ ಬೇಕೆಂಬುದು ಅವನ ಗಂಭೀರ ಸಮಸ್ಯೆಯಾಗಿತ್ತು. ತನ್ನ ಸಂಸಾರದ ಈ ಚಿಂತೆಯನ್ನು ಮರೆಯಲು ಅವನಿಗೆ, ಮಲ್ಲೇಶಿ ಒಂದು ಸಾಧನವಾಗಿದ್ದ ಅವನೊಡನೆ ಆಡುತ್ತಾ– ಮುದ್ದಾಡುತ್ತಾ ಕುಳಿತಾಗ, ನರಸಿಂಹ ತನ್ನ ಸಂಸಾರದ ಗೋಳನ್ನು ಕೆಲ ನಿಮಿಷ ಗಳಿಗಾದರೂ ಮರೆಯುತ್ತಿದ್ದ. ಮಲ್ಲೇಶಿ ನರಸಿಂಹನ ಭುಜ ಏರಿ, ಬೊಚ್ಚುಬಾಯಿ ಯಿಂದ ತಾತನೊಡನೆ ಲಲ್ಲೆಗೆರೆಯುತ್ತಿದ್ದ. ಸಿಟ್ಟು ಬಂದಾಗ ಆತನ ಕೂದಲು, ಮೀಸೆ ಹಿಡಿದೆಳೆಯುತ್ತಿದ್ದ.

ಶಿವರಾತ್ರಿ ಬಂತು. ಊರಲ್ಲಿನ ಶಿವನ ಆರಾಧಕರು ಉತ್ಸವ ನಡೆಸಿದರು. ಉತ್ಸವ ದಲ್ಲಿ, ಕೊರಳಿಗೆ ತಮಟೆ ಹಾಕಿಕೊಂಡು, ಇತರ ಜಾತಿಯವರು ಕುಣಿಯುವುದು ಆ ಊರಿನ ವಾಡಿಕೆಯಾಗಿತ್ತು. ಪ್ರತಿಸಲದಂತೆ ಈ ಸಲವೂ ಕೂಡ, ಪುಲ್ಲಯ್ಯ ತಮಟೆ ಕಟ್ಟಿಕೊಂಡು ಕುಣಿಯತೊಡಗಿದಾಗ, ಮಲ್ಲೇಶಿ ಅವನನ್ನು ಅನುಕರಿಸಿದ. ನರಸಿಂಹ ಕೂಡ, ಸ್ವಲ್ಪ ಹೊತ್ತು ಕುಣಿದ. ಆದರೆ, ಸ್ವಲ್ಪ ಹೊತ್ತಿನಲ್ಲೇ ಕಾಲು ನೋವೆಂದು ಪಕ್ಕಕ್ಕೆ ಸರಿದ. ಹಿಂದಿನ ರಾತ್ರಿ ಬರೀ ಒಂದು ಲೋಟ ನೀರನ್ನು ಕುಡಿದು ಮಲಗಿದ್ದ ನರಸಿಂಹ ಹಸಿವಿನಿಂದ ಕಂಗಾಲಾಗಿದ್ದ. ಉತ್ಸವ ಮುಗಿದು ಪ್ರಸಾದ ಹಂಚಲಾಯಿತು. ನರಸಿಂಹ ತನಗೆ ಬಂದ ಪ್ರಸಾದದಲ್ಲೆ ಸ್ವಲ್ಪ ಬಾಯಿಗೆ ಹಾಕಿಕೊಂಡು, ಉಳಿದದ್ದನ್ನು ಮನೆಗೆ ಒಯ್ದ.

ಪುಲ್ಲಯ್ಯನಿಗೆ, ಮಗನನ್ನು ಬಿಟ್ಟು, ಮತ್ತಾವುದರ ಮೇಲೂ ಆಸಕ್ತಿ ಉಳಿದಿರಲಿಲ್ಲ. ನೀಲಿ ಮಾಡಿಹಾಕಿದ್ದನ್ನು ಉಣ್ಣುವುದು, ಹೊಲದ ಕೆಲಸವೇನಾದರೂ ಇದ್ದಲ್ಲಿ ಮುಗಿಸಿಕೊಂಡು ಮನೆ ಸೇರುವುದು, ಅವನ ಅಭ್ಯಾಸವಾಗಿಹೋಗಿತ್ತು. ಮಲ್ಲೇಶಿಗೆ ಈಗ ಎರಡೂವರೆ ವರ್ಷ ತುಂಬಿತ್ತು. ಈಗ ಅವನು ತಂದೆಯ ಹಿಂದೆ ಕೆಲಸಕ್ಕೂ ಸಹ ಹೋಗಿಬರಲು ಪ್ರಾರಂಭಿಸಿದ್ದ. ತಂದೆಯನ್ನೆ ಹೆಚ್ಚಾಗಿ ಹಚ್ಚಿಕೊಂಡಿದ್ದ ಮಲ್ಲೇಶಿಗೆ

ತಾಯಿಯ ಅವಶ್ಯಕತೆಯೋ ಇರಲಿಲ್ಲ. ಏನು ತಿಂದರೂ, ಏನು ಮಾಡಿದರೂ ತಂದೆಯ ಜೊತೆಯೇ ಆಗಬೇಕು.

ಪುಲ್ಲಯ್ಯ, ಹೆಸರುಬೇಳೆ ಬೆಳೆದಿದ್ದ. ಅದರಲ್ಲಿ ಧಣಿಯ ಪಾಲನ್ನು ಕೊಟ್ಟು, ಮನೆಗೆ ಮತ್ತು ಬಿತ್ತನೆಗೆ ಬೇಕಾದಷ್ಟು ಕಾಳನ್ನು ತೆಗೆದಿಟ್ಟುಕೊಂಡು ಉಳಿದದ್ದನ್ನು ಮಾರಿಬಿಟ್ಟ.

ಒಂದು ದಿನ ರಾತ್ರಿ—ಮುದುಕಿ ಆಗಲೇ ಊಟ ಮಾಡಿ, ಮನೆಯ ಮುಂದಿನ ಜಗುಲಿಯ ಮೇಲೆ, ಮೊಮ್ಮಗಳ ಜೊತೆ ಕುಳಿತಿದ್ದಳು. ಪುಲ್ಲಯ್ಯ ಮಗನನ್ನು ಕರೆದು ಕೊಂಡು ಎಲ್ಲಿಗೊ ಹೋಗಿದ್ದ. ಆ ಕತ್ತಲಿನಲ್ಲಿ, ಆ ಅವೇಳೆಯಲ್ಲಿ ರಾಮದಾಸು ಏನೇನೋ ಕೂಗುತ್ತಾ, ಗೊಣಗುತ್ತಾ ಹೊರಟಿದ್ದ. ಹಸಿವಿನಿಂದ ಹುಚ್ಚನಂತಾಗಿದ್ದ ರಾಮದಾಸು, ದೇವಿಯ ಗುಡಿಗೆ ಹೋಗಿ, ದೀಪ ಹಚ್ಚುವ ತವಕದಿಂದ, ತೂರಾಡುತ್ತಾ ಹೊರಟಿದ್ದ. ಅವನನ್ನು ನೋಡಿದವರು, ಅವನು ಕುಡಕನೊ, ಹುಚ್ಚನೊ ಆಗಿರ ಬಹುದೆಂದು ಹೇಳಬಹುದಾಗಿತ್ತು. ರಾಮದಾಸು ಪುಲ್ಲಯ್ಯನ ಮನೆಯ ಕಡೆ ನೋಡಿದ. ಮಂದವಾದ ದೀಪದ ಬೆಳಕಿನಲ್ಲಿ, ನೀಲಿ ಮತ್ತು ಅವಳ ಅಜ್ಜಿ ಜಗುಲಿಯ ಮೇಲೆ ಕುಳಿತಿದ್ದು ಕಣ್ಣಿಗೆ ಬಿದ್ದಾಗ, ರಾಮದಾಸುವಿಗೆ ಹೋದ ಉಸಿರು ಬಂದಂತಾಯಿತು. "ಅಪ್ಪಾ...... ಪುಲ್ಲಯ್ಯ"—ಎಂದು ಕೂಗಿದ.

"ಮನ್ಯಾಗಿಲ್ಲ. ಎಲ್ಲೊ ಹೊರಗ ಹೋಗ್ಯಾನ"—ಎಂದು ನೀಲಿ ಹೇಳಿದಳಾದರೂ, ಅದು ಬಹುಶಃ ಆತನಿಗೆ ಕೇಳಿಸಲಿಲ್ಲ. ಮುದಿತನದ ಜೊತೆಗೆ ಬಡತನ ಆವರಿಸಿಕೊಂಡಿದ್ದ ರಿಂದ, ಆತನ ನಾಲಿಗೆ ತೊದಲುತ್ತಿತ್ತು...... "ಆ ತಾಯಿಗೆ...... ಸಿಟ್ಟುಬಂದರ...... ಎಲ್ಲಾರಿಗೂ ಮಣ್ಣುಮುಕ್ಕಿಸ್ತಾಳ...... ಈ ಭೂಚಕ್ರ ಭಗ......ಭಗ...... ಉರಿದು ಹೋಗ್ತದ...... ಯಾಕಿದ್ದೀತು...... ಇವರನ್ನೆಲ್ಲ ರಕ್ಷಿಸು ತಾಯಿ—ಅಂತ ಆ ದೇವಿಯ ಕಾಲು ಹಿಡಿದುಕೊಂಡು...... ದೀಪ ಹಚ್ಚಿ......" ಆಯಾಸದಿಂದ ಮುಂದೆ ಮಾತನಾಡದಾದ. ಹೊಟ್ಟೆಯ ಹಸಿವು ಹೆಚ್ಚಾಗಿ, ಮೂರ್ಛೆ ಬಂದಂತಾದಾಗ, ರಾಮದಾಸು, ಸಾವು–ಜೀವದ ಹೋರಾಟ ಪ್ರಾರಂಭಿಸಿದ. ಆದರೂ ಪ್ರಯಾಸದಿಂದ, "ತಾಯಿ...... ಎಲ್ಲಾ ನಿನ್ನ ಮಾಯೆ...... ಸಾವು ನನ್ನನ್ನು ಕೈಬೀಸಿ ಕರೆಯುತ್ತಿದೆ. ......ಮಹಾತಾಯಿ...... ಎಲ್ಲಾ......" ಎಂದು ಗೊಣಗಿದ.

ಇದನ್ನು ಕೇಳಿಸಿಕೊಂಡ ನೀಲಿ, ಒಳಗೆ ಓಡಿಹೋಗಿ, ಕೈಯಲ್ಲಿ ಲಾಂಟೀನು ಹಿಡಿದು ಕೊಂಡು ಬಂದಳು. ರಾಮದಾಸು, ಆಗಲೆ—ಅಲ್ಲಿಯೇ ಪ್ರಾಣ ಬಿಡುವವನಂತೆ ಕಣ್ಣು ಬಿಡತೊಡಗಿದ್ದ. ನೀಲಿಗೆ ಪರಿಸ್ಥಿತಿಯ ಅರಿವಾಯಿತು. ಅವಳು, ಕೂಡಲೇ ಒಂದು ಬಟ್ಟಲಲ್ಲಿ ಅನ್ನ ತಂದು, ರಾಮದಾಸುವಿನ ಬಾಯಿಗೆ ಹಾಕಿದಳು. ಜಠರಾಗ್ನಿಗೆ ಆಹಾರ ಬಿದ್ದ ಕೂಡಲೇ, ರಾಮದಾಸು ಸ್ವಲ್ಪ ಚೇತರಿಸಿಕೊಂಡು, ಕಣ್ಣುಬಿಟ್ಟು ಸುತ್ತಲೂ ನೋಡಿದ. ಅವನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯಹತ್ತಿತು. ಎಡಗೈ

ಯಿಂದ ಕಣ್ಣೀರನ್ನು ಒರೆಸಿಕೊಳ್ಳುತ್ತಾ, ಬಲಗೈಯಿಂದ ಬಾಯಿಗೆ ತುತ್ತು ಹಾಕಿ ಕೊಳ್ಳುತ್ತಾ ಕುಳಿತಿದ್ದ ರಾಮದಾಸುವನ್ನು ನೋಡಿ ನೀಲಿಗೆ ಕನಿಕರವಾಯಿತು. ಆತನ ಆ ಸ್ಥಿತಿಯನ್ನು ನೋಡಿ ಅವಳ ಕಣ್ಣುಗಳಲ್ಲೂ ಸಹ ನೀರು ಹರಿಯಿತು. ಉಕ್ಕಿ ಹರಿಯು ತ್ತಿದ್ದ ಕಣ್ಣೀರನ್ನು ಸೀರೆಯ ಸೆರಗಿನಿಂದ ಒತ್ತಿ ತಡೆಹಿಡಿಯಲು ನೀಲಿ ವ್ಯಥಾ ಪ್ರಯತ್ನಿ ಸಿದಳು.

ರಾಮದಾಸು ಅನ್ನ ಉಂಡು ನೀರು ಕುಡಿದು, ಹಾಗೆಯೆ ಸ್ವಲ್ಪ ಹೊತ್ತು ಗೋಡೆಗೆ ಒರಗಿ ಕುಳಿತ. ಎಲ್ಲೆಡೆಯಲ್ಲೂ ಮೌನ ಆವರಿಸಿತ್ತು. ಸ್ವಲ್ಪ ಹೊತ್ತಾದ ಮೇಲೆ ನಿಧಾನ ವಾಗಿ ಮೇಲೆದ್ದ ರಾಮದಾಸು, ನೀಲಿಯತ್ತ ನೋಡಿದ. ಅವಳನ್ನು ನೋಡಿ, ಮನಸ್ಸಿ ನಲ್ಲಿ ಹುಟ್ಟಿದ ಅಭಿಮಾನ, ಕಣ್ಣಲ್ಲಿ ನೀರಾಗಿ ಹರಿದಾಗ, "ಅಮ್ಮಾ ತಾಯಿ— ನೀಲಮ್ಮ, ಈ ದಾಸನಿಗೆ ಕೊನೆಗೂ ದರ್ಶನ ನೀಡಿದೆಯಲ್ಲಮ್ಮ......" ಎಂದು ಹೇಳುತ್ತ, ಮುಂದಡಿಯಿಟ್ಟ.

## [ 18 ]

ರಾಮದಾಸು ಹೋದ ಮೇಲೆ, ಪುಲ್ಲಯ್ಯ, ಮಗನನ್ನು ಎತ್ತಿಕೊಂಡು ಮನೆಗೆ ಬಂದ. ನೀಲಿ, ಇನ್ನೂ ರಾಮದಾಸುವಿನ ಬಗ್ಗೆಯೇ ಯೋಚಿಸುತ್ತಿದ್ದಳು. ಪಾಪ, ರಾಮದಾಸು ವಿನ ಹೆಂಡತಿ ಹರೆಯದಲ್ಲೆ ಹೋಗಿದ್ದಳು. ಇದ್ದ ಒಬ್ಬ ಮಗ, ಮಹಾ ಕುಡಕನಾಗಿದ್ದ. ಸೊಸೆಯೊ ಗಯ್ಯಾಳಿ. ಅವನಿಗಿದ್ದ ಆಸ್ತಿ ಎಂದರೆ, ಅವನ ಹಡಪ ಒಂದೇಯಾಗಿತ್ತು. ರಾಮದಾಸು ಅದನ್ನೆ ನಂಬಿದ್ದಲ್ಲಿ, ಈಗ ಹಾಯಾಗಿರುತ್ತಿದ್ದನೊ–ಏನೊ. ಆದರೆ, ಈಗ, ಈ ಮುದಿ ವಯಸ್ಸಿನಲ್ಲಿ, ತುತ್ತು ಅನ್ನಕ್ಕಾಗಿ ಸಂಕಟಪಡುವ ಸ್ಥಿತಿ ಅವನದಾಗಿದೆ. —ಎಂದೆಲ್ಲ, ನೀಲಿ ಯೋಚಿಸುತ್ತ ಕುಳಿತಿದ್ದಳು.

ಮಲ್ಲೇಶಿ, ತಾಯಿಯ ಮುಂದೆ ಕುಣಿಯುತ್ತಾ, "ಧಿನಕ......ಧಿನಕ್‌ಸಾ"...ಎಂದು ಕೇಕೆ ಹಾಕುತ್ತಿದ್ದ. ಬಸುರಿಯಾಗಿದ್ದ ನೀಲಿ, ಮುಸಿಮುಸಿ ನಕ್ಕಳು. ಪುಲ್ಲಯ್ಯ, ಬಹಳ ದಿನಗಳ ನಂತರ ಗರಡಿಗೆ ಹೋಗಿ ಸಾಮು ಮಾಡಿ ಬಂದಿದ್ದನೊ ಏನೊ, ನೀಲಿ ಹಾಕಿ ದಷ್ಟು ಅನ್ನ ಉಂಡು ತೇಗಿದ. ಮಾಡಿದ ಅನ್ನವೆಲ್ಲಾ ಖಾಲಿಯಾಗಿತ್ತು. ಮಲ್ಲೇಶಿ ತಟ್ಟೆಯಲ್ಲಿನ ಅನ್ನ ಮುಗಿಸಿ, ತಾಯಿ ಖಾಲಿಯಾದ ತನ್ನ ತಟ್ಟೆಯನ್ನು ನೋಡಲಿಲ್ಲ ವೇನೊ ಎಂದುಕೊಂಡು ಅವಳ ಗಮನ ಸೆಳೆಯಲು ಪ್ರಯತ್ನಿಸಿದ. ಅಷ್ಟರಲ್ಲಿ ಪುಲ್ಲಯ್ಯ, ಹೆಂಡತಿಯನ್ನು ಒಂದು ತೆರನಾಗಿ ನೋಡಿ ಎದ್ದುಹೋದ. ಮಲ್ಲೇಶಿ ಕೂಡ, ತಂದೆಯನ್ನು ಅನುಸರಿಸಿದ.

ಮುದುಕಿ ಮರಿಮೊಮ್ಮಗನನ್ನು ಮಂಚದ ಮೇಲೆ ಮಲಗಿಸಿ, ಯಾವುದೊ ಹಾಡು

ಹಾಡುತ್ತಿದ್ದಳು. ಪುಲ್ಲಯ್ಯ ಅಲ್ಲಿಯೇ ಕುಳಿತು ಮಗನ ಬೆನ್ನು ತಟ್ಟಿದಾಗ, ಅವನು ಹಾಯಾಗಿ ನಿದ್ರೆಹೋದ. ಪುಲ್ಲಯ್ಯ, ಕುಳಿತಲ್ಲಿಂದಲೇ ಹೆಂಡತಿಯ ಚಲನವಲನ ಗಳನ್ನು ಗಮನಿಸುತ್ತಿದ್ದ.

ನೀಲಿ, ಅಡಿಗೆಮನೆಯ ಎಲ್ಲಾ ಕೆಲಸಗಳನ್ನೂ ಮುಗಿಸಿಕೊಂಡು ಬಂದಳು. ಆ ವೇಳೆಗೆ ಮುದುಕಿ ಕೊಠಡಿಯ ಒಂದು ಮೂಲೆಯಲ್ಲಿ ಮುದುಡಿ ಮಲಗಿ ಯಾವುದೊ ಹಾಡು ಗುಣಗುಣಿಸುತ್ತಿದ್ದಳು. ಪುಲ್ಲಯ್ಯ, ಎತ್ತುಗಳಿಗೆ ಮೇವು ಹಾಕಲು ಎದ್ದುಹೋದ. ನೀಲಿ ಅವನ ಹಿಂದೆಯೇ ಬಂದು ಜಗುಲಿಯ ಮೇಲೆ ನಿಂತಳು. ಎಲ್ಲೆಡೆಯೂ ಕತ್ತಲು ಆವರಿಸಿತ್ತು. ಆಕಾಶ ಮಾತ್ರ, ನಕ್ಷತ್ರಗಳಿಂದ ತುಂಬಿತ್ತು.

ಎತ್ತುಗಳು ಮೇವು ತಿನ್ನುತ್ತಾ ನಿಂತಿದ್ದವು. ಅವುಗಳ ಬಳಿ ನಿಂತಿದ್ದ ಪುಲ್ಲಯ್ಯ, ನೀಲಿಯನ್ನು ನೋಡಿದ. ಹೆಂಡತಿಗೆ ಒಂದು ತುತ್ತು ಅನ್ನವನ್ನೂ ಉಳಿಸದೆ ಎಲ್ಲವನ್ನೂ ಉಂಡದ್ದಕ್ಕಾಗಿ, ಅವನಿಗೆ ಆಗಲೇ ವ್ಯಸನವಾಗಿತ್ತು. ಅದರೊಡನೆ, ಮನೆಯಲ್ಲಿ ಒಂದು ಹಿಡಿ ಧಾನ್ಯವೂ ಇಲ್ಲವೆಂಬುದು ನೆನಪಾಯಿತು. ಇದ್ದ ಭೂಮಿಯ ಮೇಲೆ ಸಾಲ ತಂದು ತಿಂದಲ್ಲಿ, ವರ್ಷ ಕಳೆಯುವುದರೊಳಗಾಗಿ, ಭೂಮಿ ಕೈಬಿಟ್ಟು ಹೋಗಬಹುದು. ಆ ಮೇಲೆ...... ಆಮೇಲೆ......?

ಪುಲ್ಲಯ್ಯ, ಹೆಂಡತಿಯ ಬಳಿ ಬಂದು ನಿಂತ. ಅವಳನ್ನು ನೋಡಿದಾಗ, ಅವಳನ್ನು ಹಾಗೆಯೇ ನೋಡುತ್ತಲೇ ಇರಬೇಕೆಂದೆನಿಸಿತು. ಅವಳ ಬಗ್ಗೆ ಎಲ್ಲಿಲ್ಲದ ಅಭಿಮಾನ ಮೂಡಿತು. ಬಸುರಿಯಾದ ಹೆಂಡತಿಗೆ ಒಂದು ತುತ್ತು ಅನ್ನವನ್ನೂ ಉಳಿಸದೆ, ಎಲ್ಲ ವನ್ನೂ ನುಂಗಿ ಕುಳಿತೆನಲ್ಲ—ಎಂಬ ಕೊರಗು. ಪುಲ್ಲಯ್ಯನನ್ನು ಕಾಡುತ್ತಿತ್ತು. ಊಟ ಏಕೆ ಮಾಡಲಿಲ್ಲ—ಎಂದು ಹೆಂಡತಿಯನ್ನು ಕೇಳಲು ಅವನಿಗೆ ನಾಚಿಕೆಯಾಯಿತು. ಆದರೆ, ಯಾವುದಾದರೊಂದು ರೀತಿಯಲ್ಲಿ ಅದನ್ನು ಕೇಳದೆ ಅವನಿಗೆ ಸಮಾಧಾನ ವಾಗುವಂತಿರಲಿಲ್ಲ. ಅವನು, ಹೆಂಡತಿಯ ಬಳಿಸಾರಿ, ಅವಳ ಭುಜದ ಮೇಲೆ ಕೈಹಾಕಿ ದಾಗ ಅವಳು ತಲೆ ಎತ್ತಿ ಅವನ ಮುಖ ನೋಡಿದಳು. ಪುಲ್ಲಯ್ಯ, ಅವಳ ಬೆನ್ನಿನ ಮೇಲೆ ಕೈಯಾಡಿಸುತ್ತಾ...... "ಅಕ್ಕಿ ಮುಗಿತೇನು?"—ಎಂದು ಕೇಳಿದ.

"ಹುಂ, ಇವತ್ತಿಗೆ ಎಲ್ಲಾ ಸರಿಹೋಯಿತು."

"ನನ್ನ ಮನಸ್ಸಿಗೆ ಸಮಾಧಾನ ಇಲ್ಲ ಆಗ್ಯದ. ಕಾಲಮಾನ ನೋಡಿ, ನನಗಂತೂ ಮುಂದೇನಾಗತದೊ ಅಂತ ಅಂಜಿಕಿ ಆಗ್ತದ. ಮುಂದ, ಒಂದು ಬಟ್ಟಲು ಗಂಜಿ ಯಾದರೂ ಸಿಗ್ತದೊ-ಇಲ್ಲೊ?"

"ಯಾಕ ಹಾಂಗ ಅಂತೀದಿ. ದೇವರು ಕೊಟ್ಟ ಎರಡು ಕೈಗಳಿರುವಾಗ, ಎಲ್ಲಾದರೂ ಚಾಕರಿ ಮಾಡಿ ಹೊಟ್ಟಿ ತುಂಬಿಕೊಳ್ಳಬಹುದು"—ನೀಲಿ ಸಮಾಧಾನದಿಂದಲೇ ಹೇಳಿ ದಳು.

ಪುಲ್ಲಯ್ಯನಿಗೆ, ಈ ಚಾಕರಿ—ಎಂಬ ಪದ ನೆಚ್ಚಲಿಲ್ಲ. ತನ್ನ ತಾತ-ಮುತ್ತಾತರ

ಕಾಲದಿಂದ ನಡೆದುಕೊಂಡ ಘನತೆ ಗೌರವ, ಮಾನ–ಮರ್ಯಾದೆಗಳನ್ನು ಬಿಟ್ಟುಕೊಟ್ಟು, ಇತರರ ಮುಂದೆ ಕೈಕಟ್ಟಿ ನಿಂತುಕೊಳ್ಳಲು, ಅವನ ಅಭಿಮಾನ ಅವನಿಗೆ ಅಡ್ಡಿಯಾಗಿತ್ತು.

"ನಾಳೆಯಿಂದ, ಮತ್ತs ಆ ರಾಜಣ್ಣನೇ ಗತಿ ಏನು?"

—ಎಂದು ಹೆಂಡತಿಯನ್ನು ಕೇಳಿದ.

ಗಂಡನ ಧ್ವನಿಯಲ್ಲಿನ ನಿರಾಶೆಯನ್ನು ಮನಗಂಡ ನೀಲಿ, ಮಂದಹಾಸದಿಂದಲೇ ಆತನನ್ನು ನೋಡಿದಳು. ಹಾಗೆಯೇ ಅವನ ಎದೆಯ ಮೇಲೆ ತಲೆಯಿಟ್ಟು, ಅವನ ಗಿರಿಜಾಮೀಸೆಗಳನ್ನು ತಿರುವುತ್ತಾ, "ನೋಡು, ಧೈರ್ಯವೇ ಲಕ್ಷ್ಮಿ ಅಂತಾರ. ಹೆಸರು ಬ್ಯಾಳಿ ಮಾರಿದ ದುಡ್ಡಿನ್ಯಾಗ ಧಾನ್ಯ ಕೊಳ್ಳೋಣ. ಭತ್ತ ಕುಟ್ಟಿ ಬರುವ ಅಕ್ಕಿಯನ್ನು ಮಾರೋಣ. ಭತ್ತದ ಹೊಟ್ಟು ದನಕ್ಕ ಆಗ್ತದ. ನುಚ್ಚು ನಮಗಾಗ್ತದ. ಏನಾದರೂ ಚೂರೂ–ಪಾರು ಅಕ್ಕಿ ಉಳಿದರ, ಅದನ್ನ ಇಟ್ಟುಕೊಳ್ಳೋಣ"—ಎಂದು ಹೇಳಿದಳು.

"ಆದರ—ನಮ್ಮ ವಂಶದಾಗ, ಯಾರೇ ಆಗಲಿ, ಈ ಮೊದಲು ಇಂತಹ ಕೆಲಸ ಮಾಡಿಲ್ಲ" ಪುಲ್ಲಯ್ಯ ಸೆಟೆದು ಹೇಳಿದ.

"ನಾವೇನು ಭಿಕ್ಷಾ ಬೇಡ್ತೀವೇನು? ಬ್ಯಾಸಿಗಿ ಫಸಲು ಕೈಗೆ ಬರೋವರೆಗೂ, ಹಾಗೂ–ಹೀಗೂ ಸರಿದೂಗಿಸಿಕೊಂಡರಾತು. ಅಲ್ಲಿಯ ವರೆಗೂ, ನೀನು ಹೋಗಿ ಹೀರೆಕಾಯಿ ಬೀಜ ಕೊಂಡುತಾ. ಹೊಲದ ಒಡ್ಡಿನ ಮ್ಯಾಲೆ ಅವನ್ನು ಹಾಕೋಣಂತ. ಹೀರೆಕಾಯಿ ಆದಮ್ಯಾಲ, ಸಂತೆಗೆ ಹೋಗಿ ಮಾರಿದರ ಬೇಕಾದಷ್ಟು ದುಡ್ಡು ಬರ್ತದ"—ನೀಲಿ ಶಾಂತವಾಗಿಯೇ ಹೇಳಿದಳು.

ಪುಲ್ಲಯ್ಯನಿಗೆ ಈ ಎಲ್ಲ ವ್ಯವಹಾರಗಳು, ಈ ಎಲ್ಲ ಮಾತುಗಳು ಹೊಸತಾಗಿದ್ದವು. ತನ್ನ ವಂಶಕ್ಕೆ, ತನ್ನ ಕುಟುಂಬಕ್ಕೆ ಈ ಎಲ್ಲ ಕೆಲಸಗಳು ತಕ್ಕುವಲ್ಲವೆಂಬುದು ಅವನ ಅಭಿಪ್ರಾಯವಾಗಿತ್ತು.

"ನೀ ಏನs ಹೇಳು, ನನಗಂತೂ ಸಮಾಧಾನಿಲ್ಲ"—ಎಂದ.

ನೀಲಿ, ತಲೆ ಎತ್ತಿ ಗಂಡನ ಮುಖ ನೋಡಿದಳು. ಆಗ ಪುಲ್ಲಯ್ಯ—"ಈ ರಾಜಣ್ಣ, ನಮ್ಮ ಭೂಮಿ ನುಂಗಿ ನೀರು ಕುಡಿಬೇಕೂಂತ ಕಾದುಕೂತಾನ. ನಮಗೊ, ಮಕ್ಕಳು–ಮರಿ ಆದವು. ನಾಳೆ ಅವರಿಗೆ ನಾವೇನು ಕೊಡಬೇಕು? ಏನು ಮಾಡಬೇಕು? ......ಊರಿಗೆ ಊರೇ ಅನ್ಯಾಯದೊಳಗ ಮುಳುಗ್ಯದ. ಅನ್ಯಾಯ–ಅತ್ಯಾಚಾರದೊಳಗ ತೊಡಗಿರೊ ಈ ಊರಿನ ಹಿಡಿದು ಸರ್ಕಾರ ಬಂದೀಖಾನೆದೊಳಗ ಇಟ್ಟರ. . . ."

ನೀಲಿ ಸರಕ್ಕನೆ ಗಂಡನ ಬಾಯಿಯ ಮೇಲೆ ಕೈಯಿಟ್ಟು—"ಇನ್ನೊಬ್ಬರನ್ನು ಕೆಟ್ಟವರು—ಎಂದು ದೂಷಿಸುವ ಮೊದಲು, ನಾವು ನಮ್ಮಲ್ಲಿರುವ ಕೆಟ್ಟತನ ತಿಳಿದುಕೊಳ್ಳೋದು ಒಳ್ಳೇದು. ಹಾಂಗ ನೋಡಿದರ, ನಮಗೂ ದುಡ್ಡಿನ ಮ್ಯಾಲೆ ಆಶಾ ಅದ. ದುಡ್ಡಿನ ಆಸೆಗೆ ಕೆಲವರು ಕೆಟ್ಟತನಕ್ಕ ಇಳೀಬಹುದು. ಆದರ, ಅವರಿಗೆ ಸಾವು ಬರಲಿ, ಇವರಿಗೆ ಜೇಲಾಗಲೀ—ಅಂತ ನಾವು ಯಾಕ ಬಯಸಬೇಕು. ನನ್ನ ಬದುಕು—ನಾನು ಕಷ್ಟಪಟ್ಟು

ಬದುಕತೀನಿ—ಅಂಬೊ ಛಲ ನಮ್ಮಲ್ಲಿದ್ದರ, ಯಾರೇನು ಮಾಡಬಲ್ಲರು"—ನೀಲಿ ಬುದ್ಧಿ ಹೇಳಿದಳು.

"ಹೌದು, ನಾವೇನೊ, ನಮ್ಮಷ್ಟಕ್ಕ ನಾವು ಇರ್ರೀವಿ—ಅಂತ ತೀರ್ಮಾನಿಸಬಹುದು. ಆದರ, ಇವರು ಬಿಡಬೇಕಲ್ಲ?"

"ಯಾರ ಪಾಪ ಅವರಿಗಂತ. ನಾವ್ಯಾಕ ಇನ್ನೊಬ್ಬರಿಗೆ ಅಂದು ಪಾಪ ಕಟ್ಟಿಕೊಬೇಕು. ಕೈಕಾಲು ಗಟ್ಟಿಯಾಗಿರುವಾಗ ದುಡದು ತಿನ್ನಲಿಕ್ಕೆ ಯಾಕ ಹಿಂಜರಿಬೇಕು. ಅಂಗವಿಕಲ ನಾಗಿರುವ ಆ ಕುಷ್ಠರೋಗಿಯೂ ಬದುಕಿಕೊಂಡಿದ್ದಾನ. ಅಂದಮ್ಯಾಲೆ, ಧೃಡಕಾಯ ರಾದ ನಮಗ ಬಾಳುವೆ ನಡಸೋದು ಕಷ್ಟ ಆಗ್ತದs? ಎಲ್ಲಾರೂ ಮನುಷ್ಯರೇ. ಮಹಾತಾಯಿ ಭೂದೇವಿ, ಎಲ್ಲರಿಗೂ ಅನ್ನ ಕೊಡ್ತಾಳ. ಒಂದೇ ಗಿಡದ ಕಾಯಿ ಗಳಾದರೂ, ಒಂದೇ ರೀತಿ ಇರಾಣಿಲ್ಲ...... ಎಲ್ಲಾನೂ ನನ್ನ ಕೈಯಾಗ ಅದ ಅಂತ ತಿಳಿದು, ಎಲ್ಲಾದಕ್ಕೂ ನಾನೇ ದೊಡ್ಡವ, ನಾನೇ ಒಳ್ಳೆಯಂವ ಅಂದುಕೊಂಡು ನೀನು ಹೀಗಾಗೀದಿ. ಒಬ್ಬರ ಬಗ್ಗೆ ಸೇಡು, ಮತ್ಸರ ಇಟ್ಟುಕೊಂಡರ ಏನು ಬಂತು. ಎಲ್ಲಾರೂ ಒಳ್ಳೆಯವರs...... ನನ್ನಿಂದ ನಿನ್ನ ಒಳ್ಳೆಯತನ, ನಿನ್ನಿಂದ ನನ್ನ ಒಳ್ಳೆಯತನ ವ್ಯಕ್ತ ವಾಗಬೇಕೆ ಹೊರತು, ಒಬ್ಬರನ್ನು ಕೆಟ್ಟವರು—ಅಂತ ತೀರ್ಮಾನಿಸಿ ಕೂತರ, ಅವರು ಒಳ್ಳೆದು ಮಾಡಿದರೂ ಕೂಡ, ಕೆಟ್ಟದಾಗಿ ಕಾಣಸ್ತದ."

ನೀಲಿ ಈ ಮಾತುಗಳನ್ನು ಹೇಳುತ್ತಿದ್ದಾಗ, ಪುಲ್ಲಯ್ಯನ ಬಾಯಿ ಕಟ್ಟಿಹೋಯಿತು. ನೀಲಿಯನ್ನು ಒರಗಿಕೊಂಡು ನಿಂತಿದ್ದ ಪುಲ್ಲಯ್ಯ, ಹಾಗೆಯೆ ತಲೆ ಎತ್ತಿ ಆಕಾಶದತ್ತ ನೋಡಿದ. ಶುಭ್ರವಾದ ಆಕಾಶದಲ್ಲಿ, ಸಾವಿರಾರು ಚುಕ್ಕೆಗಳು...... ಫಳಫಳನೆ ಹೊಳೆ ಯುತ್ತಿದ್ದವು...... ಆ ಕತ್ತಲಿನಲ್ಲೂ ಸಹ ತಮ್ಮ ತೇಜಸ್ಸನ್ನು ಬೀರುತ್ತಿದ್ದವು...... ಮನಸ್ಸನ್ನು ಮುದಗೊಳಿಸುತ್ತಿದ್ದವು. ತಂಗಾಳಿ ಬೀಸಿ, ಎಲ್ಲವೂ ರಮ್ಯವಾಗಿ ಕಾಣು ತ್ತಿತ್ತು. ಪುಲ್ಲಯ್ಯ, ಒಂದು ಕ್ಷಣ, ಪ್ರಾಪಂಚಿಕ ವಿಷಯಗಳನ್ನೆಲ್ಲ ಮರೆತ. ತನ್ನ ಹೃದಯ ದಲ್ಲಿ ಅದುವರೆಗೆ ಮನೆಮಾಡಿಕೊಂಡಿದ್ದ ದ್ವೇಷ, ಮತ್ಸರ ಕರಗಿಹೋದಂತೆ ಪುಲ್ಲಯ್ಯ ನಿಗೆ ಭಾಸವಾಯಿತು. ಅದೇ ಭಾವೋದ್ರೇಕದಲ್ಲಿ ಹೆಂಡತಿಯನ್ನು ನೋಡಿದ. ಅವಳ ಮುಖದ ಮೇಲೆ ದಿವ್ಯವಾದ ಮೆರಗು ಲಾಸ್ಯವಾಡುತ್ತಿರುವಂತೆ ಪುಲ್ಲಯ್ಯನಿಗೆ ಭಾಸ ವಾಯಿತು. ಅವನು, ಹಾಗೆಯೇ ಹೆಂಡತಿಯನ್ನು ಅಪ್ಪಿಕೊಂಡು, ಅವಳ ತಲೆಯನ್ನು ನೇವರಿಸಹತ್ತಿದ. ಅವನ ಕಣ್ಣುಗಳಿಂದ, ಹೆಂಡತಿಯ ಬಗ್ಗೆ ಅವನಲ್ಲಿ ಮೂಡಿದ್ದ ಅಭಿಮಾನ ತುಂಬಿತುಳುಕಿತು.

ನಿದ್ದೆಯಿಂದ ಎಚ್ಚತ್ತ ಮಲ್ಲೇಶಿ, ತಂದೆ ಪಕ್ಕದಲ್ಲಿರದಿದ್ದುದನ್ನು ನೋಡಿ ಅಳಹತ್ತಿದ. ತಂದೆ ಪಕ್ಕದಲ್ಲಿ ಮಲಗಿ ಬೆನ್ನು ತಡವದ ಹೊರತು ಅವನು ಮತ್ತೆ ಮಲಗಲಿಲ್ಲ. ನೀಲಿ, ನೆಲದ ಮೇಲೆ ಒಂದು ಜಮಖಾನೆ ಹಾಸಿ ಮಲಗಿಕೊಂಡಳು. ಪುಲ್ಲಯ್ಯನಿಗೆ ಮಾತ್ರ ನಿದ್ದೆ ಬರಲಿಲ್ಲ. ಸಾವಿರ ಆಲೋಚನೆಗಳು ಅವನನ್ನು ಕಾಡಹತ್ತಿದ್ದವು. ಇದು

ವರೆಗೆ ನಿರ್ಯೋಚನೆಯಿಂದ ಬಾಳು ಸಾಗಿಸಿದ ಪುಲ್ಲಯ್ಯ, ಎಂದೇ ಆಗಲಿ, ಯಾವುದಕ್ಕೇ ಆಗಲೀ ನೊಂದುಕೊಂಡಿರಲಿಲ್ಲ. ಆದರೆ, ಈಗ, ದಿನಬೆಳಗಾದರೆ ಒಂದಲ್ಲ ಒಂದು ಚಿಂತೆ ಅವನನ್ನು ಕಾಡುತ್ತಿತ್ತು. ಮನೆಯ ಖರ್ಚು ದಿನದಿನಕ್ಕೆ ಹೆಚ್ಚಾಗುತ್ತಿತ್ತು. ಅದರಲ್ಲಿ ಮುದುಕಿ, ಹಬ್ಬ ಹುಣ್ಣಿಮೆ ಬಂದರೆ ನಾಲ್ಕು ಜನರನ್ನು ಕರೆಯಬೇಕೆಂಬ ಹಳೆಯ ಸಂಪ್ರದಾಯದವಳು. ಈ ಸತ್–ಸಂಪ್ರದಾಯಗಳಿಗಾಗಿ ವಾರದಲ್ಲಿ ಒಂದು ದಿನ ವಾದರೂ ಸಾಕಷ್ಟು ಖರ್ಚು.

ಮಗ ತಿಂದುಂಡು ಹಾಯಾಗಿರುವ ಕಾಲಕ್ಕೆ ಸರಿಯಾಗಿ, ಈ ದುಸ್ಥಿತಿ ಬಂದಿತಲ್ಲಾ—ಎಂದು, ಪುಲ್ಲಯ್ಯ ತುಂಬ ವ್ಯಸನಪಡುತ್ತಿದ್ದ. ಇಷ್ಟು ದಿನ ಹೊಲವನ್ನು ಆಧಾರ ವಾಗಿಟ್ಟು ಹೊಟ್ಟೆತುಂಬಿಕೊಂಡದ್ದಾಯಿತು. ಇನ್ನು ಹೆಚ್ಚಿನ ಸಾಲ ಪಡೆದರೆ, ಹೊಲ ಕೈಬಿಟ್ಟುಹೋಗುವ ಪರಿಸ್ಥಿತಿ ಬಂದಿತ್ತು. ಸಾಲ ಕೊಟ್ಟ ಆ ರಾಜಣ್ಣ, ಹೊಲ ನುಂಗಿ ನೀರು ಕುಡಿಯಲು ಕಾದಿದ್ದ. ಇನ್ನು ಗೇಣಿ ಹಿಡಿದ ಜಮೀನಿನ ಮೇಲೆ ಸಂಸಾರ ನಿರ್ವಹಿಸುವುದು ಕಷ್ಟ. ಅದರಲ್ಲಿ, ಆ ಸೀತಾರಾಮಸ್ವಾಮಿ, ಮಹಾ ಅನಿಶ್ಚಿತ ವ್ಯಕ್ತಿ. ಭೂಮಿ ಮಾರಿದಲ್ಲಿ ಹೆಚ್ಚು ದುಡ್ಡು ಬರಬಹುದೆಂದು, ಮಾರಿದರೂ ಮಾರಿಬಿಡ ಬಹುದು. ತಾತ–ಮುತ್ತಾತನ ಕಾಲದಿಂದ ಸಾಗುವಳಿ ಮಾಡಿಕೊಂಡು ಬಂದ ಭೂಮಿ ......ಆ ಧಣಿ ಏನಾದರೂ ಬಂಗಾರದ ಈ ಭೂಮಿ ಮಾರಿದರ...... ಅದನ್ನು ಕೊಳ್ಳಲು ಮಡ್ಡಿದ್ದರ ಎಷ್ಟು ಒಳ್ಳೇದಾಗ್ತಿತ್ತು. ಆ ಭೂಮಿಯಿಂದ ಬರೊ ಧಾನ್ಯ ವರ್ಷವಿಡೀ ಕೂತು ತಿಂದರೂ ಸವೆಯೋದಿಲ್ಲ. ಆದರ...... ಆದರ,...... ದುಡ್ಡೆ ಲ್ಲದ? ಅದೂ ಅಲ್ಲದ, ಬಂಗಾರದಂತಹ ಭೂಮಿ ಮಾರಲಿಕ್ಕೆ ಆ ಧಣಿಯಾದರೂ ಒಪ್ಪಬೇಕಲ್ಲ.—ಪುಲ್ಲಯ್ಯ, ಇದನ್ನೆಲ್ಲ ಯೋಚಿಸಿ, ನೀಲಿ ಹೇಳಿದ್ದೆ ಸರಿ—ಎಂಬ ತೀರ್ಮಾನಕ್ಕೆ ಬಂದ. ಆ ತೀರ್ಮಾನ ಮಾಡಿದ ಮೇಲೆ, ಮನಸ್ಸಿಗೆ ಸಮಾಧಾನ ವಾದಂತಾಗಿ, ಪುಲ್ಲಯ್ಯನಿಗೆ ನಿದ್ದೆ ಬಂದುಬಿಟ್ಟಿತು. ಬೆಳಗಿನ ಜಾವವೇ ಎದ್ದ ಪುಲ್ಲಯ್ಯ, ಮಲ್ಲೇಶಿ ಇನ್ನೂ ಮಲಗಿರುವಾಗಲೇ, ಹೆಂಡತಿಗೆ ಹೇಳಿ ಹೀರೆಕಾಯಿ ಬೀಜ ತರಲು ಕೊಮಾರ್ತಿ ಗ್ರಾಮಕ್ಕೆ ಹೊರಟ.

ಮಲ್ಲೇಶಿ, ಎದ್ದ ಕೂಡಲೇ, ತಂದೆಗಾಗಿ ಮನೆಯೆಲ್ಲಾ ಹುಡುಕಿದ. ಗೋಶಾಲೆಗೆ ಹೋಗಿ ನೋಡಿದ. ಅಲ್ಲಿಂದಲೇ "ಅಪ್ಪಾ......" ಎಂದು ಕೂಗಿದ. ಅಲ್ಲಿದ್ದ ಎತ್ತು ಗಳು ತಲೆ ಆಡಿಸಿದವೇ ಹೊರತಾಗಿ, ಅವನಿಗೆ ಯಾರೂ ಉತ್ತರ ಕೊಡಲಿಲ್ಲ. ಅಲ್ಲಿಂದ ಬಂದು, ಮನೆಯ ಜಗುಲಿಯ ಮೇಲೆ, ಅಕ್ಕಪಕ್ಕದ ಬೀದಿಗಳಲ್ಲಿ ತಂದೆಗಾಗಿ ಹುಡು ಕಾಡಿದ. ಅದೇ ಎದ್ದು ಮುಖ ತೊಳೆಯುತ್ತಾ ಕುಳಿತಿದ್ದ ಮುದುಕಿಯ ಕೂದಲು ಹಿಡಿದು, "ಅಪ್ಪ ಎಲ್ಲಿ?" ಅಂತ ಕೇಳಿದ. ಮುದುಕಿ ಯಾವ ಉತ್ತರವನ್ನೂ ಕೊಡದೆ, "ಊಂ...... ಹೂಂ......" ಎಂದಾಗ, ಅವಳಿಗೆ ಅಣಗಿಸಿದ. ನೀಲಿ ಎದುರಾದಾಗ, "ಅಮ್ಮಾ, ಅಪ್ಪಾ ಎಲ್ಲಿ"—ಎಂದು ಕೇಳಿದ. "ಕೊಮಾರ್ತಿಗೆ ಹೋಗ್ಯಾರ, ಈಗ

ಬರ್ತ್ತಾರ. ನೀನು ಹೋಗಿ ಅಜ್ಜಿ ಕೈಲಿ ಮುಖ ತೊಳಸಿಕೊಂಡು ಬಾ"—ಎಂದು ಹೇಳಿ ಕಳುಹಿಸಿದಳು ನೀಲಿ.

ಮಲ್ಲೇಶಿ, "ಅಪ್ಪಾ ಬರಲಿ"—ಎಂದು ಹಠದಿಂದ ಬಾಗಿಲ ಬಳಿ ಕಾಯುತ್ತಾ ಕುಳಿತ. ಬಿಸಿಲೇರಿತಾದರೂ ಪುಲ್ಲಯ್ಯ ಬರಲಿಲ್ಲ. ಮಲ್ಲೇಶಿಯ ಕಣ್ಣುಗಳು ಕೆಂಪಾಗಿ, ಕೊನೆಗೆ ಕಣ್ಣಲ್ಲಿ ನೀರೂರಿತು. ದುಃಖ ಉಮ್ಮಳಿಸಿ ಬಂದು, ಗಂಟಲು ಗೊರಗೊರ ಮಾಡ ಹತ್ತಿತು.—ಅಷ್ಟರಲ್ಲಿ ಪುಲ್ಲಯ್ಯ ಬಂದ. ತಂದೆ ಕಣ್ಣಿಗೆ ಬಿದ್ದೊಡನೆ, ಮಲ್ಲೇಶಿ, ಕುಳಿತಲ್ಲಿಂದ ಜಿಗಿದು ಅವನ ಬಳಿ ಓಡಿಹೋದ. ತಂದೆಯನ್ನು ತಬ್ಬಿಕೊಂಡು, ಸಂತೋಷದಿಂದ ಕೇಕೆ ಹಾಕಿದ. ಪುಲ್ಲಯ್ಯ ಮಗನನ್ನು ಎತ್ತಿಕೊಂಡು ಬರುತ್ತಿದ್ದಾಗ, "ಯಾರ ಮಗನೊ ನೀನು, ಅಪ್ಪನ ಮಗನೊ, ಅಮ್ಮನ ಮಗನೊ"—ಎಂದು ಮುದುಕಿ ಛೇಡಿಸಿದಳು.

ಮಲ್ಲೇಶಿ, "ನಾನು ಅಪ್ಪನ ಮಗ"—ಎಂದು, ತಂದೆಯ ಭುಜದ ಮೇಲೆ ತಲೆಯಿಟ್ಟು ಕೂಗಿದ.

ಪುಲ್ಲಯ್ಯ ಭತ್ತ ಕೊಂಡ. ಪುಲ್ಲಯ್ಯ ಭತ್ತ ಕೊಂಡ ಸುದ್ದಿ ಊರೆಲ್ಲಾ ಹರಡಿದಾಗ, ಅದೇಕೋ ಆತನಿಗೆ ನಾಚಿಕೆಯಾಯಿತು. ಆದರೂ, ಹೆಂಡತಿಯ ಮಾತಿನಂತೆ, ಭತ್ತ ಕುಟ್ಟಿ ಅಕ್ಕಿ ಮಾರುವುದರಲ್ಲಿ ತಕ್ಕ ಮಟ್ಟಿನ ಲಾಭ ಬಂದಾಗ ಆತನಿಗೆ ಸಮಾಧಾನ ವಾಯಿತು. ಎರಡೊಪ್ಪತ್ತಿನ ಊಟಕ್ಕೆ ಸಂಸಾರ ನಿರ್ವಹಣೆಗೆ ಯಾವ ತೊಂದರೆಯೂ ಆಗಲಿಲ್ಲ. ಹೀಗೆಯೇ ದಿನಗಳುರುಳಿ ಬೇಸಿಗೆ ಬಂದಿತು. ಊರಲ್ಲಿ, ಅಲ್ಲಲ್ಲಿ ಕಳ್ಳರ ಉಪದ್ರವ ಪ್ರಾರಂಭವಾಗಿತ್ತು. ಎಲ್ಲರೂ ಅಲ್ಲಿ ಕಳುವಾಯಿತು, ಇಲ್ಲಿ ಕಳುವಾ ಯಿತು—ಎಂದು ಹೇಳುತ್ತಿದ್ದರೆ ಹೊರತಾಗಿ, ಕಳ್ಳರನ್ನು ಹಿಡಿಯಲು ಊರಿನ ಹಿರಿ ಯರು ಕೂಡ ಮುಂದಾಗಲಿಲ್ಲ—ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ನೀಲಿ ಮತ್ತು ಮಲ್ಲೇಶಿ ಬಿತ್ತಿದ್ದ ಹೀರೇಕಾಯಿಯ ಬೀಜಗಳು ಮೊಳಕೆಯೊಡೆದು ಹೂವು ಬಿಟ್ಟವು. ಅವರ ಜೊತೆಗೆ, ಇತರ ಕೆಲವು ತರಕಾರಿಗಳನ್ನೂ ಸಹ ಬೆಳೆಯಲು ನೀಲಿ ನಿರ್ಧರಿಸಿದ್ದಳು. ಈಗ ಪುಲ್ಲಯ್ಯನಿಗೆ ಬಿಡುವಿಲ್ಲದ ಕೆಲಸಕಾರ್ಯಗಳಿದ್ದದರಿಂದ, ಅಲ್ಲಸಲ್ಲದ ಯೋಚ ಗಳು ಅವನಿಂದ ದೂರವಾಗಿದ್ದವು.

ನೀಲಿ, ಇತರ ಮನೆಗೆ ಹೋಗಿ ಕುಟ್ಟುವುದು, ಬೀಸುವುದು ಇದೇ ಮುಂತಾದ ಕೂಲಿ ಕೆಲಸ ಮಾಡುವುದು ಪುಲ್ಲಯ್ಯನಿಗೆ ಇಷ್ಟವಿರಲಿಲ್ಲ. ನೋಡಿದವರು ತಮ್ಮನ್ನು ಹಂಗಿಸಿ ಹೀನಾಯವಾಗಿ ಕಾಣಬಹುದೆಂದೂ, ಆದ್ದರಿಂದ ಇತರರ ಮನೆಗೆ ಕೆಲಸಕ್ಕೆ ಹೋಗಬಾರ ದೆಂದೂ ಪುಲ್ಲಯ್ಯ, ಪರಿಪರಿಯಾಗಿ ನೀಲಿಗೆ ಹೇಳಿದ. "ಕಷ್ಟಪಟ್ಟು ಹೊಟ್ಟೆ ತುಂಬಿ ಕೊಳ್ಳುವುದು ತಪ್ಪೇನಲ್ಲ. ಸ್ವಂತಕ್ಕಾಗಿ ದುಡೀಲಿಕ್ಕೆ ನಾಚಿಕೆಪಡಬೇಕಾಗಿಲ್ಲ"—ಎಂದು ನೀಲಿ ಗಂಡನಿಗೆ ಸಮಾಧಾನ ಹೇಳಿದಳು. ಅಂತೂ–ಇಂತೂ, ರಾಜಣ್ಣನ ಮುಂದೆ ಮತ್ತೆ ಕೈಯೊಡ್ಡುವ ಪರಿಸ್ಥಿತಿ ಮಾತ್ರ ತಪ್ಪಿತ್ತು. ಆದರೆ, ಬಿತ್ತನೆ ಬೀಜಕ್ಕಾಗಿ, ಹೊಲದ ಕೆಲಸ

ಕಾರ್ಯಗಳಿಗಾಗಿ ದುಡ್ಡು ಬೇಕಾದಾಗ ಮಾತ್ರ, ಸಾಲಕ್ಕಾಗಿ ಪರದಾಡುವುದು ತೀರ ಅನಿವಾರ್ಯವಾಯಿತು. ಆಗಲೇ ಮೂರು ವರ್ಷದವನಾಗಿದ್ದ ಮಲ್ಲೇಶಿ, ಪುಟ್ಟದಾದ ಪಂಚೆ ಉಟ್ಟು, ಕೈಯಲ್ಲಿ ಚಿಕ್ಕದಾದ ಒಂದು ಕೋಲನ್ನು ಹಿಡಿದುಕೊಂಡು, ಮೂಗಿನಲ್ಲಿ ಬಂಗಾರದ ಮುರುವು, ಕುತ್ತಿಗೆಯಲ್ಲಿ ಸರ ಹಾಕಿಕೊಂಡು, ತಾನೂ ಸಹ ಮಹಾ ಕೆಲಸ ಮಾಡುವವನಂತೆ ತಂದೆಯ ಹಿಂದೆ ಹಿಂದೆ ಹೋಗುತ್ತಿದ್ದ. ಆಗಲೇ ಸಲಿಕೆ, ಹಾರಿ ಹಿಡಿದುಕೊಂಡು ಮಡಿ ಕಟ್ಟುವುದನ್ನು ಕಲಿತಿದ್ದ. ಹೆಣ್ಣುಮಕ್ಕಳ ಜೊತೆ ಸೇರಿ, ಅವರು ಹಾಡುತ್ತಿದ್ದಾಗ, ತಾನೂ ಸಹ ಹಾಡುತ್ತಿದ್ದ. ಎತ್ತುಗಳನ್ನು, "ಹಲೆ...... ಹಲೆ"—ಎಂದು ಕೂಗುತ್ತಾ ಹೊಡೆದುಕೊಂಡು ಹೋಗುವುದನ್ನೂ ಸಹ ಕಲಿತಿದ್ದ. ಆಗಾಗ, ತಂದೆಯ ಕೈ ಹಿಡಿದು ಹುಣಿಸೆ ಮರದ ಕೆಳಗೆ ಎಳೆದುಕೊಂಡು ಹೋಗಿ, ತನ್ನೊಡನೆ ಆಡುವಂತೆ ಪೀಡಿಸುತ್ತಿದ್ದ. ಪುಲ್ಲಯ್ಯ ಗರಡಿಯಲ್ಲಿ ಗದೆ ತಿರುವುದನ್ನು ನೋಡಿದ್ದ ಮಲ್ಲೇಶಿ, ತಾನೂ ಸಹ ಕೈಯಲ್ಲಿ ಒಂದು ಪುಟ್ಟ ಕೋಲನ್ನು ಹಿಡಿದು ತಿರುವುತ್ತಿದ್ದ. ಮಗನ ಈ ತುಂಟತನಗಳನ್ನು ನೋಡಿ, ಪುಲ್ಲಯ್ಯ ಸಂತೋಷದಿಂದ ಅವನನ್ನು ಮೇಲೆತ್ತಿ ತೂರುತ್ತಿದ್ದ. ತನ್ನ ಕೈಗಳ ಮೇಲೆ ನಿಲ್ಲಿಸಿಕೊಂಡು ಗಾಳಿಯಲ್ಲಿ ತೂಗಿದಾಗ ಮೊದ ಮೊದಲು ಅಂಜುತ್ತಿದ್ದ ಮಲ್ಲೇಶಿ, ಈಗ ಯಾವ ಭಯವೂ ಇಲ್ಲದೆ ಕೇಕೆ ಹಾಕುತ್ತಿದ್ದ. ಪುಲ್ಲಯ್ಯನೂ, "ಭಲೆ–ಭಲೆ"—ಎಂದು ಕೂಗಿದಾಗ, ಅವನೂ ಸಹ ಸಂತೋಷದಿಂದ ಕೂಗುತ್ತಿದ್ದ.

ಮಳೆಗಾಲ ಪ್ರಾರಂಭವಾಯಿತು. ನದಿಯಲ್ಲಿನ ನೀರಿನ ಮಟ್ಟ ಏರುತ್ತಾ ಏರುತ್ತಾ ದಂಡೆಯನ್ನು ದಾಟಿ ಹರಿಯಹತ್ತಿತು. ನೀರಿನಲ್ಲಿ ಹರಿದುಬರುತ್ತಿದ್ದ ಕಟ್ಟಿಗೆ–ದಿಮ್ಮಿಗಳನ್ನು ಪುಲ್ಲಯ್ಯ ಎಳೆದುತಂದು ದಡದ ಮೇಲೆ ಹಾಕುತ್ತಿದ್ದ. ನೀಲಿ, ಅವನ್ನು ಮನೆಗೆ ಹೊತ್ತು ಹಾಕುತ್ತಿದ್ದಳು. ಮಲ್ಲೇಶಿ, ತಂದೆಯ ಜೊತೆ ನೀರಿಗಿಳಿಯಲು ಹಠಹಿಡಿದ. ಮಕ್ಕಳು ಪ್ರವಾಹ ನೋಡಿ ಹೆದರುವುದು ಸಹಜ. ಆದರೆ, ಮಲ್ಲೇಶಿ ಹೆದರದೆ ತಂದೆಯ ಜೊತೆ ನೀರಿಗೆ ಇಳಿಯಲು ಹಠಮಾಡುತ್ತಿದ್ದುದನ್ನು ನೋಡಿ, ಊರಿನ ಜನರು ಬೆರಗಾದರು. ಈ ಮಧ್ಯೆ, ಅಕ್ಕಿ ಬೇಳೆಗಳ ಬೆಲೆಗಳು, ಲಂಗು–ಲಗಾಮಿಲ್ಲದೆ ಏರಿದ್ದವು. ಇತರ ವಸ್ತುಗಳ ಬೆಲೆಗಳೂ ಸಹ ಗಗನಕ್ಕೇರಿದ್ದವು. ಪುಲ್ಲಯ್ಯ ಒಬ್ಬನೆ, ಒಪ್ಪೊತ್ತಿಗೆ ಅರ್ಧಸೇರು ಅನ್ನ ಉಣ್ಣುವಂಥವನಾಗಿದ್ದ. ಆದರೆ, ಈಗ ಅಷ್ಟೇ ಅನ್ನವನ್ನು ಮನೆಯವರೆಲ್ಲರೂ ಸರಿಹೊಂದಿಸಿಕೊಳ್ಳುತ್ತಿದ್ದರು.

ದಿನವೂ ಪುಲ್ಲಯ್ಯನ ಮನೆಗೆ ಬರುತ್ತಿದ್ದ ನರಸಿಂಹ, ನಾಲ್ಕು ದಿನಗಳಾದರೂ ಹಣಕಿ ಹಾಕಿರಲಿಲ್ಲ. ಐದನೆಯ ದಿನ ಅವನು ಬಾಗಿಲ ಬಳಿ ಕಾಣಿಸಿಕೊಂಡಾಗ, ಮಲ್ಲೇಶಿ "ತಾತ–ತಾತ"—ಎನ್ನುತ್ತಾ ಓಡಿಹೋಗಿ ಅವನ ಕೊರಳಿಗೆ ಜೋತುಬಿದ್ದ. ನರಸಿಂಹ ಅವನನ್ನು ಎತ್ತಿಕೊಂಡು ಕುತ್ತಿಗೆಯ ಮೇಲೆ ಕೂಡಿಸಿಕೊಂಡು, ಕುದುರೆಯಂತೆ ಕೆನೆಯ ಹತ್ತಿದಾಗ ಮಲ್ಲೇಶಿ ಸಂತೋಷದಿಂದ ನಕ್ಕ.

"ಕೈಲಾಗದವನಲೇ ನೀನು"—ಎನ್ನುತ್ತಾ, ಪುಲ್ಲಯ್ಯ ಒಳಬಂದಾಗ, ನರಸಿಂಹ, ಮಲ್ಲೇಶಿಯನ್ನು ಕೆಳಗಿಳಿಸಿ ಜಗುಲಿಯ ಮೇಲೆ ಕೂಡಿಸಿದ. ಅಲ್ಲಿಯೇ ಇದ್ದ ನೀಲಿಯನ್ನು ಉದ್ದೇಶಿಸಿ, "ನೋಡು ಮಗಳೆ, ನನ್ನ ಧಣಿ ಬೆಲೆಗಳು ಏರಿರುವ ಈ ಕಾಲದಲ್ಲೆ, ತನ್ನ ಮಗಳ ಮದುವೆ ಮಾಡಲು ನಿಶ್ಚಯಿಸಿ ಕೂತಾನ. ಅವನು, ತನ್ನ ಈ ಭೂಮಿಯನ್ನು ಮಾರದೆ, ಮಗಳ ಮದುವೆ ಮಾಡಲಾರ. ಅಂದಮ್ಯಾಲೆ, ನಾವು ಹ್ಯಾಂಗ ಅಡ್ಡಿ ಮಾಡಬೇಕು"—ಎಂದು ಕೇಳಿದ.

"ನಿಮ್ಮ ತಾತನ ಕಾಲದಿಂದಲೂ ಆ ಭೂಮಿ ಗೇಣಿಗೆ ತೊಗೊಂಡು, ಅದರಲ್ಲಿ ಬೆಳೆ ಬೆಳಲಿಕ್ಕೆ ಬೆವರು ಸುರಿಸಿದಿ—ಅಂದಮ್ಯಾಲೆ, ಆ ಭೂಮಿ ಮ್ಯಾಲೆ ನಿನ್ನದೂ ಹಕ್ಕದ. ನಾನು ಗೇಣಿಗೆ ತೊಗೊಂಡ ಭೂಮಿ ಮ್ಯಾಲೆ ಮತ್ತ ಯಾರಾದರೂ ಕಾಲಿಡಲಿ. ನೋಡು, ಹ್ಯಾಂಗ ಮಾಡ್ತೀನಿ ಅಂತ"—ಪುಲ್ಲಯ್ಯ ತನ್ನ ಪೌರುಷ ವ್ಯಕ್ತಪಡಿಸಿದ.

ನೀಲಿ, ಅವನ ಪೌರುಷ ನೋಡಿ ನಕ್ಕಾಗ, ಪುಲ್ಲಯ್ಯನ ಆತ್ಮಾಭಿಮಾನ ಕೆರಳಿ—"ನೋಡ್ತಿರು. ಈಸರೆ, ಅವರು ಕರೆಸಿದರೂ ನಾನು ಹೋಗುವುದಿಲ್ಲ"—ಎಂದು ಮೀಸೆ ಹುರಿಮಾಡಿದ. ನರಸಿಂಹ ನೀಲಿಯನ್ನು ಸಂಬೋಧಿಸಿ, "ಅವರ ಭೂಮಿ, ಅವರು ಮಾರಲು ನಿರ್ಧರಿಸಿದರ, ಬ್ಯಾಡಾಂತ ಹೇಳಲಿಕ್ಕೆ ನಮಗಾಗ್ತದೇನು? ಹುಟ್ಟಿಸಿದ ದೇವರು, ಹೊಟ್ಟಿಗೆ ಹಾಕೇ ಹಾಕ್ತಾನ. ನಮ್ಮನ್ನು ನಂಬಿ, ಆ ಧಣಿ ತನ್ನ ಭೂಮಿ ನಮ್ಮ ವಶಕ್ಕೆ ಕೊಟ್ಟ. ಈಗ ಏನೊ ದುಡ್ಡಿನ ಅಗತ್ಯ–ಅವಸರ ಅದ. ಮಾರಬೇಕಂತ ಮಾಡ್ಯಾರ. ನಮ್ಮನ್ನು ನಂಬಿದವರಿಗೆ ನಾವು ಮೋಸಮಾಡಬಾರದು. ಆಯ್ತು ನಮ್ಮ ಭಾಗ್ಯದಾಗ ಇದ್ದಾಂಗ ಆಗ್ತದ. ಹೌದಂತಿಯೊ ಇಲ್ಲೊ"—ಎಂದು ಕೇಳಿದ.

ನೀಲಿ ನೇರವಾಗಿ ಯಾವ ಉತ್ತರವನ್ನೂ ನೀಡಲಿಲ್ಲ. ಆದರೆ, ಅವಳ ಮುಖದ ಮೇಲಿನ ಭಾವ ಅವನ ಮಾತಿಗೆ ಇಂಬು ನೀಡಿತ್ತು. ನರಸಿಂಹ, ಅದು–ಇದು ಮಾತನಾಡುತ್ತಾ, "ಊರಿನ್ಯಾಗ ಕಳ್ಳತನ ಬಹಳ ಆಗ್ಯದ. ಮಕ್ಕಳವಂದಿಗ, ದುಡಿದು ಮಕ್ಕಳಿಗೆ ಕೂಳು ಹಾಕೊ ಶಕ್ತಿ ಇಲ್ಲದ, ನಾನೇ ಕಳ್ಳತನಕ್ಕ ಇಳಿದೀನಿ ಅಂತ ಜನರು ಆಡಿಕೊಳ್ತಾರ. ನಾನು ಕಳ್ಳಾಗಿದ್ದರ, ಎರಡು ದಿನಕ್ಕ ಒಂದು ತುತ್ತು ಅನ್ನ ಉಂಡೊ, ಗಂಜಿ ಕುಡಿದೊ ಇರ್ತಿದ್ನೆ. ನನಗೇನೊ ಮಕ್ಕಳು ಬಹಳ. ಆದರ, ದುಡಿದು ಹಾಕಲಿಕ್ಕೆ ನಾನು ಇನ್ನೂ ಗಟ್ಟಿ ಇದ್ದೀನಿ. ನನ್ನ ಸರ್ಕಾರ, ನನಗ ಯಾವುದಾದರೊಂದು ಭೂಮಿ ಕಾಣಿ ಕೊಟ್ಟು ಇಲ್ಲವೆ ಕೆಲಸ ಕೊಟ್ಟು ನನ್ನ—ನನ್ನ ಸಂಸಾರವನ್ನ ಸಲಹುತದ—ಅಂತ ನಂಬೀನಿ. ಈಗಿನ ದಿನಗಳು ಕಷ್ಟದ ದಿನಗಳಾದರೂ, ಮುಂದೆ ಒಳ್ಳೆಯ ಕಾಲ ಬಂದೇ ಬರ್ತದ"—ಎಂದು ಹೇಳಿದ.

ಅದೇ ವಿಶ್ವಾಸದಿಂದ ಜೀವಿಸುತ್ತಿದ್ದ ನರಸಿಂಹ, ತನ್ನ ಮೊಮ್ಮಗನಂತಿದ್ದ ಮಲ್ಲೇಶಿಯ ಜೊತೆ ಆಡಿ–ಮುದ್ದಾಡಿ ಹೊರಟುಹೋದ.

## [ 19 ]

ನೀಲಿ ಹೆಣ್ಣು ಹಡೆದಳು. ಮಗ ಹುಟ್ಟಿದಾಗಿದ್ದ ಉತ್ಸಾಹವಾಗಲೀ, ಪರಿಸ್ಥಿತಿಯಾಗಲೀ ಈಗ ಇರಲಿಲ್ಲ. "ಹುಡುಗಿ ಅಂದವಾಗಿದ್ದಾಳೆ. ಚೆಲುವೆಯಾಗ್ತಾಳ"—ಎಂದೆಲ್ಲ ನೋಡಿದವರು ಆಡಿಕೊಂಡರು. ಪುಲ್ಲಯ್ಯ, ಒಂದು ಸಲ ಮಗಳನ್ನು ನೋಡಿ, "ಇವಳಿಗೆ ಸರಿಯಾದ ಗಂಡು ನೋಡಬೇಕು"—ಅಂದುಕೊಂಡ. ಮುದುಕಿಗೆ ಮಾತ್ರ, ಎಲ್ಲರಿಗಿಂತ ಹೆಚ್ಚು ಸಂತೋಷವಾಗಿತ್ತು. "ಮನೆಯ ಕೀರ್ತಿ ಉಳಿಸಿಕೊಂಡು ಬರುವುದು–ಬಿಡುವುದು ಹೆಣ್ಣೆ. ಇಂತಹವರ ಮನೆಯ ಹುಡುಗಿ, ಇಂತಹವರ ಮಗಳು—ಒಳ್ಳೆಯವಳು—ನೀತಿವಂತಳು ಅಂದರ, ಯಾವ ತಾಯಿ–ತಂದೆಗೆ ಸಂತೋಷ ಆಗಾಣೆಲ್ಲ"—ಎಂಬುದು ಮುದುಕಿಯ ಅಭಿಪ್ರಾಯವಾಗಿತ್ತು. ಮಗುವನ್ನು ನೋಡಲು ಬಂದವರು, "ನಿನ್ನ ತಂಗೀನ್ನ ಕರಕೊಂಡು ಹೋಗ್ತೀವಿ"—ಅಂದಲ್ಲಿ, ಮಲ್ಲೇಶಿ ಕೈಯಲ್ಲಿ ಕೋಲು ಹಿಡಿದುಕೊಂಡು ಮನೆಯ ಬಾಗಿಲಿಗೆ ಕಾವಲು ಕೂಡುತ್ತಿದ್ದ.

ಕುಯ್ಲಿನ ಕೆಲಸ ಇನ್ನೂ ಪ್ರಾರಂಭವಾಗಿರಲಿಲ್ಲ. ಊರಲ್ಲಿನ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತ್ತು. ಕಳ್ಳಕಾಕರ ಕಾಟ ಹೆಚ್ಚಿದೆ ಎಂದು ಊರಿನ ಹಿರಿಯರು ಹೇಳುತ್ತಿದ್ದರಾದರೂ ಕಳ್ಳರನ್ನು ಹಿಡಿಯಲು ಯಾರೂ ಪ್ರಯತ್ನಿಸಲಿಲ್ಲ. ತೋಟಗಳಲ್ಲಿ ಹಣ್ಣು–ಕಾಯಿಗಳ ಜೊತೆಗೆ, ಗಿಡಗಳೇ ಮಾಯವಾಗತೊಡಗಿದ್ದವು. ಯಾರದೊ ಮನೆಯಲ್ಲಿ, ಮಾಡಿಟ್ಟ ಅಡಿಗೆಯನ್ನೇ ಹೊತ್ತುಕೊಂಡು ಹೋಗಿದ್ದರು. ಇನ್ನೊಬ್ಬರ ಮನೆಯಲ್ಲಿ ಉಗ್ರಾಣದ ಬೀಗ ಹಾಗೆಯೇ ಇತ್ತಾದರೂ, ಒಳಗಿಡಲಾಗಿದ್ದ ಬೇಳೆಕಾಳುಗಳು ಅರ್ಧಕ್ಕೆ ಅರ್ಧ ಖಾಲಿಯಾಗಿದ್ದವು. ಕಳುವಾದ ಕೋಳಿ ಮತ್ತು ಹುಂಜಗಳ ಲೆಕ್ಕವೇ ಇರಲಿಲ್ಲ. ಊರಿನ ಪೋಲೀಸ್ ಪಟೇಲ, ಕಳ್ಳತನವನ್ನು ತಡೆಗಟ್ಟಲು ಸರಿಯಾದ ವ್ಯವಸ್ಥೆ ಮಾಡಲಿಲ್ಲವೆಂದು ಕೆಲವರು ದೂರಿದರು. ಊರಲ್ಲಿದ್ದ ಮೂವರು ವಾಲೀಕಾರರು, ಊರಲ್ಲೆಲ್ಲಾ ಗಸ್ತು ತಿರುಗಬೇಕೆಂದು ಪೋಲೀಸ ಪಟೇಲನ ಹೆಂಡತಿ ಆಜ್ಞೆ ನೀಡಿದಳು. ಇಬ್ಬರು ವಾಲೀಕಾರರು ಆಕೆಯ ಆಜ್ಞೆಗೆ ತಲೆಬಾಗಿಸಿದರೂ, ಮೂರನೆಯವನಾದ ರಾಮಯ್ಯ, ಗಸ್ತು ತಿರುಗಲು ತನಗಾಗದೆಂದು ಸ್ಪಷ್ಟವಾಗಿ ಹೇಳಿಬಿಟ್ಟ. ರಾಮಯ್ಯ ಎತ್ತರವಾದ ಭಾರೀ ಆಸಾಮಿ. ಊರಿನಲ್ಲಿನ ಮಕ್ಕಳು, ಅವನ ಹೆಸರು ಕೇಳಿದರೆ ಸಾಕು—ಥರಥರನೆ ನಡುಗುತ್ತಿದ್ದವು. ಯಾವುದಕ್ಕೂ ಹೆದರದ, ಇದ್ದುದನ್ನು ಇದ್ದಂತೆ, ಮುಖದ ಮೇಲೆ ಹೇಳುವ ಪ್ರಚಂಡನಾಗಿದ್ದ ರಾಮಯ್ಯ, ಪೋಲೀಸ ಪಟೇಲನಿಗೆ, ಅಮಲ್ದಾರರಿಗೆ ಎದುರಾಡುವ ತಾಕತ್ತು ಪಡೆದಿದ್ದ. ಊರಿನ ಒಂದು ಕೊನೆಯಲ್ಲಿ ನಿಂತು ಕೂಗುಹಾಕಿದರೆ, ಆಚೆಯ ಮೂಲೆಗೂ ಸಹ ಕೇಳುವಂತಹ ಕಂಚಿನ ಧ್ವನಿ ಪಡೆದಿದ್ದ. ಅವನ ಮಗ ಬೇಸಾಯ ಮಾಡುತ್ತಿದ್ದನಾದರೂ, ಮೊಮ್ಮಗನನ್ನು ಸರ್ಕಾರಿ ಚಾಕರಿಗೆ ಸೇರಿಸಬೇಕೆಂಬ ಹಂಬಲದಿಂದ ಓದಿಸುತ್ತಿದ್ದ. ಯಾರ ಮುಂದೆಯೋ

ಆಗಲಿ, ಒಂದು ಬಿಡಿ ಕಾಸಿಗೂ ಸಹ ಕೈಯೊಡ್ಡುತ್ತಿರಲಿಲ್ಲ. ಯಾರಾದರೂ ಬಂದು ಕೇಳಿದಲ್ಲಿ ಮಾತ್ರ, ತನ್ನಲ್ಲಿದ್ದುದನ್ನೆ ಉದಾರವಾಗಿ ಕೊಡುತ್ತಿದ್ದ—ರಾಮಯ್ಯ. ಆದರೆ, ರಾಮಯ್ಯನ ಈ ಉದಾರತೆ, ಅವನ ಹೆಂಡತಿ ಮತ್ತು ಮಗನಿಗೆ ಸರಿಹೋಗುತ್ತಿರಲಿಲ್ಲ. ಹೆಂಡತಿ, ಚುಚ್ಚುವ ಮಾತನಾಡಿದಾಗಲೂ ಕೂಡ, ರಾಮಯ್ಯ ನಕ್ಕುಬಿಡುತ್ತಿದ್ದ.

ಪೋಲೀಸ ಪಟೇಲನ ಹೆಂಡತಿ, ರಾತ್ರಿ ಗಸ್ತು ತಿರುಗಿ ಕಳ್ಳರನ್ನು ಹಿಡಿಯಬೇಕೆಂದು ಆಜ್ಞಾಪಿಸಿದಾಗ, ರಾಮಯ್ಯ, "ಕಳ್ಳರನ್ನು ಹಿಡಿದು ಏನು ಮಾಡಬೇಕು ತಾಯಿ"—ಎಂದು ಕೇಳಿದ.

"ಏನು ಮಾಡಬೇಕು ಅಂದರ—ಪಂಚಾಯಿತಿ ಕರೆಸಿ, ಶಿಕ್ಷೆ ವಿಧಿಸಬೇಕು. ಮತ್ತs ಕಳವು ಮಾಡದ್ಹಾಂಗ ಬುದ್ಧಿ ಕಲಿಸಬೇಕು."

"ಒಟ್ಟಿನ ಮ್ಯಾಲೆ, ಕಳ್ಳನ್ನ ಹಿಡಿದು ಬಾರಕೋಲಿನಿಂದ ನಾಲ್ಕು ಬಿಗೀಬೇಕು—ಅಂತೀರಿ. ತಾಯಿ, ಈ ಹೊಟ್ಟೆಯೊಂದದಲ್ಲ—ಇದು—ಮನುಷ್ಯನ ಕೈಲೆ, ಯಾವ ಹೊತ್ತಿನ್ಯಾಗ ಏನು ಮಾಡಸ್ತದೊ ಹೇಳಾಕ ಬರಾಣಿಲ್ಲ. ಹೊಟ್ಟೆ ತಣ್ಣಗಿರೋವರೆಗೂ, ನೀತಿ ನಿಯಮ ಎಲ್ಲಾನೂ ಸರಿಯಾಗಿಯೇ ಇರ್ತದ. ಅದs, ಹೊಟ್ಟೆ ಕಾದರ, ಮನುಷ್ಯ ಪಶು ಆಗ್ತಾನ. ಹೊಟ್ಟೆಗೆ ಗಂಜಿ ಕೂಡ ಇಲ್ಲದವನು, ಹಸಿವಿ ತಾಳಲಾಗದ ಕಳವು ಮಾಡಿದರ, ಅದು ಅವನ ತಪ್ಪಲ್ಲ. ಅವನನ್ನು ಶಿಕ್ಷಿಸುವ ಹಕ್ಕೂ ನಮಗಿಲ್ಲ"—ಎಂದು ಖಡಾಖಂಡಿತವಾಗಿ ಹೇಳಿದ ರಾಮಯ್ಯ. ಅವನು, ಪೋಲೀಸು ಪಟೇಲನ ಹೆಂಡತಿಯ ಮುಂದೆ ಹೀಗೆ ಮಾತನಾಡಿದರೂ ರಾತ್ರಿ ಗಸ್ತು ತಿರುಗುವುದನ್ನು ಪೂರ್ತಿಯಾಗಿ ಬಿಡಲಿಲ್ಲ. ಉಳಿದ ಇಬ್ಬರು ವಾಲೀಕಾರರು ಯಾರನ್ನಾದರೂ ಹಿಡಿದಲ್ಲಿ, ಅವರನ್ನು ಬಿಡಿಸುವುದಕ್ಕಾಗಿಯೇ ಅವನು ಗಸ್ತು ತಿರುಗಹತ್ತಿದ.

ಒಂದು ವಾರದ ಒಳಗಾಗಿ, ಊರಿನಲ್ಲಿ ಕಳ್ಳರ ಹಾವಳಿ ತಪ್ಪಿತು. ಆದರೆ, ಹೊಲಗದ್ದೆಗಳಲ್ಲಿ, ತರಕಾರಿ ತೋಟಗಳಲ್ಲಿ ಅವರ ಉಪದ್ರವ ಪ್ರಾರಂಭವಾಯಿತು. ಈ ಮಧ್ಯೆ ವಾಲೀಕಾರರು, ಗಸ್ತು ತಿರುಗಿ ಸುಸ್ತಾದರು. ಬೇಸತ್ತು ಮನೆಯಲ್ಲಿ ಕುಳಿತರು. ಹೀಗೆಯೇ ಒಂದು ತಿಂಗಳು ಕಳೆಯಿತು. ಊರಿನಲ್ಲಿನ ಕೂಲಿ ಜನರು, ಕುಯ್ಲು ಯಾವಾಗ ಪ್ರಾರಂಭವಾಗುವುದೊ—ಎಂದು ಎದುರುನೋಡುತ್ತಿದ್ದರು. ಕುಡ್ಡ ವೆಂಕಣ್ಣಾ ಮತ್ತು ಗೌರಮ್ಮಳಂತಹ ಅನಾಥ ಜನರ ಪರಿಸ್ಥಿತಿ ತೀರ ವಿಷಮಿಸಿತ್ತು. ನೀಲಿಯ ಮುಂದೆ ನಿಂತು ಭಿಕ್ಷೆ ಬೇಡಲು ವೆಂಕಣ್ಣನಿಗೆ ಮನಸ್ಸು ಒಪ್ಪಲಿಲ್ಲ. ಅಮ್ಮಾ ಎಂದು ಕೈಯೊಡ್ಡಿ ನಿಂತಲ್ಲಿ, ಅವಳು ಹಿಂದೆ ಮುಂದೆ ಯೋಚಿಸದೆ, ಮನೆಯಲ್ಲಿ ಇದ್ದುದನ್ನೆ ಹಾಕುವಳೆಂಬ ಧೈರ್ಯವಿತ್ತು. ನೀಲಿ, ನಿರ್ಮಲವಾದ ಮನಸ್ಸಿನಿಂದ ಹಾಕಿದ ಒಂದು ತುತ್ತು ಅನ್ನದಿಂದ ಒಂದು ಬಟ್ಟಲು ಗಂಜಿಯಿಂದ ಹೊಟ್ಟೆ ತುಂಬುತ್ತಿತ್ತು. ಆದರೆ ಕಷ್ಟದ ಈ ದಿನಗಳಲ್ಲಿ ಅವಳನ್ನು ಬೇಡುವುದು ವೆಂಕಣ್ಣನಿಗೆ ಸರಿತೋರಲಿಲ್ಲ. ಗೌರಮ್ಮ ಮಾತ್ರ, ಇದಾವು

ದನ್ನೂ ಯೋಚಿಸುತ್ತಿರಲಿಲ್ಲ. ಗೌರಮ್ಮ ಬಂದಾಗಲೆಲ್ಲಾ, ನೀಲಿ ಒಮ್ಮೆಯೂ ಬೇಸರಿಸದೆ, ಇದ್ದುದನ್ನೆ ಕೊಟ್ಟು ಕಳುಹಿಸುತ್ತಿದ್ದಳು. ರಾಜಣ್ಣನ ಹೆಂಡತಿಯು ಕೂಡ, ಬಾಗಿಲಿಗೆ ಬಂದವರಿಗೆ ಇಲ್ಲ ಎನ್ನದೆ ಗಂಜಿ ಹಾಕುವಳೆಂದು ವೆಂಕಣ್ಣ ಕೇಳಿದ್ದ. ಆದರೆ, ಆ ಮನೆಗೆ "ದೇಹಿ"—ಎಂದು ಹೋಗಲು ವೆಂಕಣ್ಣನ ಮನಸ್ಸು ಒಪ್ಪಲಿಲ್ಲ. ಆ ಮನೆಗೆ ಹೋದರ, ತನ್ನ ಗತಜೀವನದ ಸ್ಮೃತಿ ಮರುಕಳಿಸಿ, ಅಲ್ಲಿ ನಡೆದ, ಅಲ್ಲಿ ತಾನು ಕಳೆದ ದಿನಗಳು ಕಣ್ಣುಮುಂದೆ ಬಂದು, ದುಃಖ ಉಮ್ಮಳಿಸಿ, ಅದರೊಡನೆ ಪೌರುಷ ಬರುವ ದೆಂಬ ಭೀತಿ ವೆಂಕಣ್ಣನಿಗಿತ್ತು.

ಒಂದು ದಿನ ರಾತ್ರಿ, ಹಸಿವಿನಿಂದ ಕಂಗಾಲಾಗಿದ್ದ ವೆಂಕಣ್ಣ ಮತ್ತು ಗೌರಮ್ಮ ನೀಲಮ್ಮನ ಗುಡಿಯ ಹತ್ತಿರವಿದ್ದ ಹಾಸುಕಲ್ಲಿನ ಮೇಲೆ ಕುಳಿತಿದ್ದರು. ಅಷ್ಟರಲ್ಲೆ ರಾಮದಾಸು ಅಲ್ಲಿಗೆ ಬಂದು ದೇವಿಯ ಮುಂದೆ ದೀಪ ಹಚ್ಚಿದ. ಅನಂತರ ಹಾಗೆಯೇ ಸ್ವಲ್ಪ ಹೊತ್ತು ದೇವಿಯ ಮುಂದೆ, ಕಣ್ಣು ಮುಚ್ಚಿ ಮೌನವಾಗಿ ಕುಳಿತ. ಆತ ಅಲ್ಲಿಂದ ಎದ್ದು ಹೊರಟಾಗ, ಗೌರಮ್ಮ ಆತನನ್ನು ತಡೆದು, "ಈ ಅಭಾವ, ಈ ಕ್ಷಾಮ ಎಂದಿಗೆ ಹೋಗ್ತದ"—ಎಂದು ಕೇಳಿದಳು. "ಏನು ಹೇಳಲಿ. ಈಗ ಕಾಲ ಕೆಟ್ಟುಹೋಗ್ಯದ. ಅದಕ್ಕs ಒಳ್ಳೆಯವರಿಗೂ ಕೂಡ ದುರ್ಬುದ್ಧಿ ಬಂದದ ನೋಡು. ಒಂದು ಕಾಲದಾಗ ನೀನು ರಾಜಾರೋಷವಾಗಿ ಬದುಕಿದಿ. ನಿನ್ನ ಹಣೆಬರಹ ಸರಿಯಾಗಿರಲಿಲ್ಲ. ಅದಕ್ಕ ಈಗ ಭಿಕ್ಷೆಬೇಡ್ತಾ ತಿರುಗ್ತೀದಿ"—ಎಂದು ಹೇಳಿ ಅಲ್ಲಿಂದ ಹೊರಟುಹೋದ ರಾಮ ದಾಸು.

ಗೌರಮ್ಮ ಒಂದು ಕಾಲದಲ್ಲಿ ಎಲ್ಲಾ ಭೋಗಭಾಗ್ಯಗಳಿಂದ ಸುಖವಾಗಿಯೇ ಇದ್ದಳು. ಗೊಡ್ಡು ಸಂಸಾರ. ಗಂಡನೊ ಮಹಾ ಪಿಕನಾಸಿ. ಗೌರಮ್ಮ ಈ ವಿಷಯದಲ್ಲಿ ಗಂಡನಿಗಿಂತ ಒಂದು ಕೈ ಮೇಲಾಗಿದ್ದಳು. ಗೌರಮ್ಮ ಮೈತುಂಬ ಬಂಗಾರ ಹೇರಿಕೊಂಡು ತಿರುಗುತ್ತಿದ್ದಳು. ಮನೆಯಲ್ಲಿ ಕಾಳು–ಕಡ್ಡಿ ಯಾವುದಕ್ಕೂ ಕೊರತೆ ಇರಲಿಲ್ಲವಾದರೂ, ಎಂಜಲು ಕೈಯಿಂದ ಕಾಗೆಯನ್ನೂ ಸಹ ಹೊಡೆಯಬಾರದೆಂಬಷ್ಟು ಜಿಪುಣತನ. ಅಕ್ಕ ಪಕ್ಕದವರು, ನೆಂಟರು ಯಾರೇ ಆಗಲಿ ತನ್ನ ಮನೆಗೆ ಬರಬಾರದು. ಒಂದು ವೇಳೆ ಬಂದರೂ, ಊಟಕ್ಕೆ ಮೂಲವಾಗದೆ ಹೊರಟುಹೋಗಬೇಕು. ದುಡ್ಡಿಗೂ—ಅವಳಿಗೂ ಬಿಡದ ನೆಂಟು. ದುಡ್ಡನ್ನೆ ವರಿಸಿ, ದುಡ್ಡಿಗಾಗಿಯೇ ಜೀವಿಸುತ್ತಿದ್ದಳು. ಹೀಗಿರುವಾಗ ಗಂಡನಿಗೆ ಅದಾವುದೊ ರೋಗ ತಟ್ಟಿಕೊಂಡಿತು. ತನ್ನಷ್ಟಕ್ಕೆ ತಾನೇ ವಾಸಿಯಾಗುವು ದೆಂದು ಸುಮ್ಮನಿದ್ದಾಗ, ರೋಗ ಉಲ್ಬಣಗೊಂಡಿತು. ವೈದ್ಯರನ್ನು ಕರೆಸಿ ದುಡ್ಡು ಖರ್ಚು ಮಾಡಲು ಮನಸ್ಸು ಬಾರದೆ, ಗೌರಮ್ಮ, ತಾನೇ ಸ್ವತಃ, ತನಗೆ ತಿಳಿದ ಕಷಾಯ ಕುಡಿಸಿದಳು. ಗಂಡ ಹಾಸಿಗೆ ಹಿಡಿದಾಗ, ಪೊರಗೂರಿನ ನಾಟಿ ವೈದ್ಯನನ್ನು ಕರೆಸಿದಳು. ಆದರೆ, ಅವನು ದುಡ್ಡು ಎಳೆಯಲು ಪ್ರಯತ್ನಿಸುತ್ತಿದ್ದಾನೆಂಬ ಅನುಮಾನ ಬಂದಾಗ, ಅವನನ್ನು ಬಿಡಿಸಿ, ಬೈರಾಗಿಗಳು ಕೊಟ್ಟ ಭಸ್ಮ–ವಿಭೂತಿಗಳಿಂದಲೇ ಗಂಡನ ರೋಗ

ನಿವಾರಿಸಲು ಹಂಬಲಿಸಿದಳು. ದಿನದಿನಕ್ಕೆ ರೋಗ ಉಲ್ಬಣಿಸಿದಾಗ ಮಾತ್ರ, ಬೇರೊಬ್ಬ ನಾಟಿ ವೈದ್ಯನನ್ನು ಕರೆಸಿದಳು. ದೊಡ್ಡೂರಿನ ಹಿರಿಯ ಡಾಕ್ಟರನ್ನು ಕರೆಸಿದಲ್ಲಿ ಗುಣ ವಾಗಬಹುದೆಂದು ನಾಲ್ಕು ಜನರು ಬುದ್ಧಿ ಹೇಳಿದರು. ಆದರೆ ಗೌರಮ್ಮ ಯಾರ ಮಾತನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ. ಕೊನೆಗೆ ಗಂಡನೇ ಸ್ವತಃ ದೊಡ್ಡೂರಿನ ಹಿರಿಯ ಡಾಕ್ಟರ್‌ರನ್ನು ಕರೆಸಲು ಹೇಳಿದಾಗ, —"ಇವರೆಲ್ಲ, ನೀನು ನಾಲ್ಕು ದಿನ ಬದುಕಬೇಕೂ ಅಂತ ಬಯಸ್ತಾರೇನು? ಸುಮ್ಮನೆ, ದುಡ್ಡು ಖರ್ಚು ಮಾಡಿಸಬೇಕೂ ಅಂತ, ಇಲ್ಲದ್ದೊಂದು ಹೇಳ್ತಾರ—ಆತು"—ಎಂದು ಗಂಡನ ಬಾಯಿ ಮುಚ್ಚಿಸಿದಳು. ನಾಲ್ಕು ಜನರು ನಾಲ್ಕು ರೀತಿ ಆಡಿಕೊಳ್ಳಲು ಪ್ರಾರಂಭಿಸಿದಾಗ, "ಇವರೆಲ್ಲ ವೈದ್ಯರೇನು? ಈಗ ಔಷಧಿ ಕೊಟ್ಟು ಉಪಚಾರ ಮಾಡ್ತಿರೋನೂ ವೈದ್ಯನs. ಅವನಿಗೆ ಗೊತ್ತಿರಲಾರದ್ದು—ಇವರಿಗೇನು ಗೊತ್ತಿರ್ತದ ಮಹಾ. ನನ್ನ ಗಂಡಗ ಗುಣ ಆಗ್ತದಂತ ಆ ವೈದ್ಯನ ಹೇಳ್ಯಾನ. ಆತಗೂ ಆ ಧೈರ್ಯ ಅದ, ನನಗೂ ಅದ. ಇವರಿಗೆ ಇದನ್ನೆಲ್ಲಾ ಕಟ್ಟಿಕೊಂಡು ಏನು ಮಾಡಬೇಕಾಗ್ಯದ"—ಎಂದು ಗದರಿಕೊಳ್ಳುತ್ತಿದ್ದಳು. ನಾಟಿ ವೈದ್ಯ, ಅವಳ ಗಂಡನಿಗೆ ವಾರದೊಳಗಾಗಿ ಗುಣವಾಗುವುದೆಂದು ಹೇಳಿದ. ಆದರೆ, ವಾರದ ಒಳಗಾಗಿ, ಗೌರ ಮ್ಮಳ ಗಂಡ ಸ್ವರ್ಗ ಕಂಡ.

ಊರಿನವರು ಏಕಕಂಠದಿಂದ, ವಿಧವೆಯಾದ ಗೌರಮ್ಮನನ್ನು ಶಪಿಸಿದರು. ಆಗ ಗೌರಮ್ಮ, "ನನ್ನ ಯಾಕ ಸುಮ್ಮನೆ ಬಯ್ತೀರಿ. ಆಯುಷ್ಯ ಮುಗೀತು, ಆತ ಹೋದ. ನಿಮ್ಮ ಆಯುಷ್ಯ ಮುಗಿದರ, ನಾಳೆ ನೀವೂ ನೆಗದುಬೀಳ್ತೀರಿ"—ಎಂದು ಹೇಳಿದಳು. ಅವಳನ್ನು ಎದುರುಹಾಕಿಕೊಳ್ಳುವುದು ನಿರರ್ಥಕವೆಂದೂ, ಅವಳಿಗೇ ಇಂದಿಲ್ಲ-ನಾಳೆ ಬುದ್ಧಿ ಬರುವದೆಂದೂ ಎಲ್ಲರೂ ಸುಮ್ಮನಾದರು. ಗಂಡ ಹೋದರೂ, ಬಂಗಾರದ ಮೇಲಿನ ಗೌರಮ್ಮನ ವ್ಯಾಮೋಹ ಹೋಗಲಿಲ್ಲ. ಬಂಗಾರದ ಕಾಸುಗಳನ್ನು ಕೂಡಿಡು ವುದನ್ನು ಅವಳು ಬಿಡಲಿಲ್ಲ. ಇನ್ನೂ ಗಳಿಸಿಕೊಳ್ಳಬೇಕು, ಮತ್ತಷ್ಟು ಕೂಡಿಡಬೇಕೆಂಬ ಅವಳ ಆಸೆಗೆ ಕೊನೆಮೊದಲಿರಲಿಲ್ಲ. ಅದೇ ಹೊತ್ತಿಗೆ ಅವಳ ದೂರದ ನೆಂಟನೊಬ್ಬ ಬಂದು, ಅವಳಿಗೆ ಗಂಟುಬಿದ್ದ. ಬಂದವನು ಅವಳ ಆಸೆಗೆ ನೀರೆರೆದು, ಅದು ಹೆಮ್ಮರವಾಗುವಂತೆ ಮಾಡಿದ. ತನ್ನ ಮಾತಿನ ಚಮತ್ಕಾರದಿಂದ ಅವಳನ್ನು ಮರುಳಮಾಡಿ, ವ್ಯಾಪಾರದಲ್ಲಿ ದುಡ್ಡು ತೊಡಗಿಸುವಂತೆ ಅವಳನ್ನು ಪ್ರೇರೇಪಿಸಿದ. ವ್ಯಾಪಾರದಲ್ಲಿ ಹೆಚ್ಚಿನ ಲಾಭ ಗಳಿಸಬಹುದೆಂಬ ಲಾಲಸೆಯನ್ನು ತೋರಿಸಿ ಅವಳ ಬಾಯಲ್ಲಿ ನೀರೂರುವಂತೆ ಮಾಡಿದ. ಕೊನೆಗೆ ಗೌರಮ್ಮ ನೂರು ರೂಪಾಯಿ ಅವನ ಕೈಗೆ ಹಾಕಿ ಅದು ತನ್ನ ಬಂಡವಾಳ—ಎಂದು ತಿಳಿಸಿದಳು. ಅವಳ ನೆಂಟ ಮಹಾ ಚಾಣಾಕ್ಷ. ನೂರು ರೂಪಾಯಿ ಪಡೆದ ತಿಂಗಳೊಪ್ಪತ್ತಿನಲ್ಲಿ ನೂರೈವತ್ತು ತಂದುಕೊಟ್ಟು, ಅದು ಅವಳ ಲಾಭವೆಂದು ತಿಳಿಸಿದ. ತಿಂಗಳು ಕಳೆಯುವುದರೊಳಗಾಗಿ, ನೂರು ರೂಪಾಯಿಗೆ ಐವತ್ತು ರೂಪಾಯಿ ಲಾಭ ಬಂದದ್ದು ನೋಡಿ, ಗೌರಮ್ಮಳ ಕಣ್ಣು ತಿರುಗಿದವು. ಈ ಸಲ, ಅವನು ಕೇಳುವುದಕ್ಕೆ

ಮುಂಚೆ, ಅವಳೇ ತಾನಾಗಿ ಐದು ನೂರು ರೂಪಾಯಿ ಕೊಟ್ಟಳು. ಅದಕ್ಕೂ ಸಹ ಆತ ಲಾಭ ಗಳಿಸಿ ಕೊಟ್ಟ. ಇದರಿಂದ ಅವಳ ಕಣ್ಣಿನಲ್ಲಿ, ಅವಳ ಆ ನೆಂಟ ದೇವರಿಗೆ ಸಮಾನನಾದ. ಬರುಬರುತ್ತಾ ಅವರ ವ್ಯಾಪಾರ ಕುದುರಿ ದೊಡ್ಡದಾಯಿತು. ಅವರ ವ್ಯಾಪಾರ, ಹಳ್ಳಿಗೆ ಸೀಮಿತವಾಗಿರದೆ ಪಟ್ಟಣದ ವರೆಗೂ ಹರಡಿತು. ಆ ನೆಂಟನ ಬಗ್ಗೆ ಊರಿನಲ್ಲಿನ ಜನರು, ತಮ್ಮತಮ್ಮಲ್ಲೆ ಮಾತನಾಡಿಕೊಳ್ಳಲು ಪ್ರಾರಂಭಿಸಿದ್ದರಾದರೂ, ಗೌರಮ್ಮ, ಅವನನ್ನು ಪೂರ್ತಿಯಾಗಿ ನಂಬಿದಳು. ಅವನು, "ನಿನ್ನ ಹೆಸರಲ್ಲೇ ಲಾರಿ ಕೊಳ್ತೀನಿ. ಲಾರಿ ಓಡಿಸಿದರ ನೂರಕ್ಕೆ ನೂರು ರೂಪಾಯಿ ಲಾಭ ಬರ್‍ತದ"—ಎಂದು ಪುಸಲಾಯಿಸಿದಾಗ, ಗೌರಮ್ಮ ಅದಕ್ಕೂ ಒಪ್ಪಿದಳು. ಮನೆಯಲ್ಲಿ ಮತ್ತು ಮೈಮೇಲಿದ್ದ ಎಲ್ಲಾ ಚಿನ್ನವನ್ನೂ, ಚಿನ್ನದ ಆಭರಣಗಳನ್ನೂ ಮಾರಿದಳು. ಮನೆಯಲ್ಲಿದ್ದ ಧಾನ್ಯ ವನ್ನೂ ಮಾರಿದಳು. ದುಡ್ಡು ಸಾಲದೆ ಬಂದಾಗ ಇದ್ದ ಭೂಮಿಯನ್ನು ಅಡವು ಇಟ್ಟಳು. ಆ ಭೂಮಿಯನ್ನು ಬೇರೆ ಊರಿನವನ ಬಳಿ ಅಡವಿಟ್ಟು ದುಡ್ಡು ತಂದು ಕೊಟ್ಟುದು, ಅವಳ ಆ ನೆಂಟನೆ. ಎಲ್ಲಾ ದುಡ್ಡು ಒಯ್ದು ಲಾರಿ ಕೊಂಡದ್ದರ ರಸೀದಿ—ಎಂದು ಒಂದು ಕಾಗದದ ತುಂಡನ್ನು ತಂದುಕೊಟ್ಟಾಗ, ಗೌರಮ್ಮ ಅದನ್ನು ಯಾರಿಗೂ ತೋರಿಸದೆ ಪೆಟ್ಟಿಗೆಯಲ್ಲಿ ಬಚ್ಚಿಟ್ಟಳು. ಅವನು ತಂದ ಲಾರಿಯಲ್ಲಿ ಕುಳಿತು ಪಟ್ಟಣಕ್ಕೂ ಹೋಗಿ ಬಂದಳು. ಸಿನಿಮಾ ನೋಡಿ, ಹೋಟಲುಗಳಲ್ಲಿ ತಿಂಡಿ ತಿಂದು, ಕಾಫಿ ಕುಡಿದು ಮೋಜುಮಾಡಿದಳು ಗೌರಮ್ಮ. ಆ ದಿನಗಳಲ್ಲಿ ಸಿನೆಮಾ ನೋಡುವುದು, ಹೋಟಲು ಗಳಿಗೆ ಹೋಗುವುದು, ದೊಡ್ಡ ದೊಡ್ಡ ಜಮೀನುದಾರರಿಗೆ ಮಾತ್ರ ಸಾಧ್ಯವಿತ್ತು. ಅಂತಹುದರಲ್ಲಿ ತನ್ನ ನೆಂಟ ತನಗೆ ಇವುಗಳೆಲ್ಲದರ ಸುಖ ನೀಡಿದನಲ್ಲ—ಎಂಬ ಅಭಿಮಾನವೂ ಇತ್ತು ಗೌರಮ್ಮಳಿಗೆ. ದಿನದಿನಕ್ಕೆ, ಲಾಭ ಬರುತ್ತಿದೆ ಎಂದು ಹೇಳಿದಾಗ, ಇನ್ನೂ ಹೆಚ್ಚಿನ ಲಾಭ ಗಳಿಸಬಹುದೆಂಬ ಆಶೆ ಹುಟ್ಟಿ, ಗೌರಮ್ಮ ಇದ್ದಬಿದ್ದ ಭೂಮಿ ಗಳನ್ನೆಲ್ಲ ಮಾರಿಬಿಟ್ಟಳು. ಈ ಸಲ ದುಡ್ಡು ಬಾರದಿದ್ದಾಗ, ಗೌರಮ್ಮ ನೆಂಟನನ್ನು ಕೇಳಿಯೇ ಬಿಟ್ಟಳು. ಅವನು ಅವಳನ್ನು ಕರೆದೊಯ್ದು, ಸರಕುಗಳಿಂದ ತುಂಬಿದ ಒಂದು ಉಗ್ರಾಣ ತೋರಿಸಿ, ಅದೆಲ್ಲ ಅವಳದೆಂದೇ ಹೇಳಿದ. ಬೇಕಾದರೆ, ಅಲ್ಲಿಯೇ ಒಂದು ಮನೆ ಕಟ್ಟಿಸಿಕೊಡುವುದಾಗಿ ತಿಳಿಸಿದ. ನಂಬಿಕಸ್ಥನಾದ ನೆಂಟನಿರುವಾಗ ತಾನೇಕೆ ಊರು ಬಿಡಬೇಕೆಂದುಕೊಂಡು ಗೌರಮ್ಮ ಸುಮ್ಮನಾಗಿಬಿಟ್ಟಳು.

ಒಂದು ದಿನ ಬೆಳಗಿನ ಜಾವ...... ಗೌರಮ್ಮಳ ನೆಂಟ ಅವಳ ಕೈಗೆ ಚಿಪ್ಪು ಕೊಟ್ಟು ಕಳುಹಿಸಿದ. ಗೌರಮ್ಮ ಗೋಳಾಡಿದಳು. ಊರಿನವರಿಗೆಲ್ಲ ತನ್ನ ಬಳಿಯಿದ್ದ ಕಾಗದ ಪತ್ರಗಳನ್ನು ತೋರಿಸಿದಳು. ಬಾಯಿಗೆ ಬಂದಂತೆ ನೆಂಟನನ್ನು ಶಪಿಸಿದಳು. ತಲೆ ಜಜ್ಜಿ ಕೊಂಡಳು.—ಊರಿನ ಜನರು ತಲಾ ಒಂದು ಮಾತು ಆಡಿದರು. ಗಂಡನನ್ನು ಕೈಯಾರೆ ಕೊಂದವಳಿಗೆ ಈ ದುರ್ಗತಿ ಬಾರದೆ ಮತ್ತ್ಯಾರಿಗೆ ಬಂದೀತೆಂದು ತಮ್ಮತಮ್ಮಲ್ಲೆ ಪಿಸುಗುಟ್ಟಿದರು.

ಮನೆಯನ್ನು ಅಡವಿಟ್ಟು ಸಾಲ ಪಡೆದು ಹೊಟ್ಟೆ ತುಂಬಿಕೊಳ್ಳುತ್ತಿದ್ದ ಗೌರಮ್ಮ, ಕೊನೆಗೆ ಮನೆಯನ್ನು ಬಿಟ್ಟು ರಸ್ತೆಗೆ ಇಳಿಯಬೇಕಾಯಿತು. ವಯಸ್ಸಾದ ಗೌರಮ್ಮ, ಎಲ್ಲರಿಗೂ ಅಸಹ್ಯವಾಗಿದ್ದಳು. ಯಾರೇ ಆಗಲಿ, ಅವಳನ್ನು ಸೇರಿಸಿಕೊಳ್ಳಲಿಲ್ಲ. ತನ್ನ ಬಳಿ ಸಕಲ ಸೌಭಾಗ್ಯಗಳಿದ್ದಾಗ ಒಬ್ಬರಿಗೆ ಕೈ ಎತ್ತಿ ಕೊಟ್ಟಿದ್ದಲ್ಲಿ, ಇಂದು ಅವರು ಅವಳಿಗೆ ನೆರವಾಗುತ್ತಿದ್ದರೇನೊ—ಅವಳ ಬಗ್ಗೆ ಕನಿಕರ ತೋರುತ್ತಿದ್ದರೇನೊ. ಆದರೆ, ಈಗ, ಯಾರೂ ಅವಳ ಬಗ್ಗೆ ಕನಿಕರ ವ್ಯಕ್ತಪಡಿಸಲಿಲ್ಲ. ಆದರೂ, ಅವಳ ನಡುವು ಬಗ್ಗಿದ್ದರೂ, ಅವಳಲ್ಲಿನ ರೋಷ ಹೋಗಿರಲಿಲ್ಲ. ಅವಳಲ್ಲಿ ಮಮಕಾರ ಹುಟ್ಟಿರಲಿಲ್ಲ. ಕಂಡವರನ್ನು ದೂಷಿಸುತ್ತಾ, ಎಲ್ಲರೊಡನೆಯೂ ಜಗಳವಾಡುತ್ತಾ, ಅದು ಹೇಗೋ ಬದುಕಿಕೊಂಡಿದ್ದಳು.

*   *   *   *

ಕುಯ್ಲಿನ ಕೆಲಸ ಪ್ರಾರಂಭವಾಯಿತು. ಊರಿನ ರೈತರು, ತೆನೆಗಳನ್ನು ಬಿಡಿಸಿ, ಧಾನ್ಯ ವನ್ನು ಮನೆಗೆ ತಂದುಹಾಕಿಕೊಳ್ಳತೊಡಗಿದರು. ಪುಲ್ಲಯ್ಯ, ಧಾನ್ಯ ಮನೆಗೆ ತರುವುದಕ್ಕೆ ಮುಂಚೆಯೇ ಧಣಿಯ ಪಾಲು ಕೊಟ್ಟುಬಿಟ್ಟ. ಹಾಗೆ ಧಾನ್ಯ ಅಳೆದು ಕೊಟ್ಟನಂತರ, ಅವನ ಮನಸ್ಸೆ ಸರಿಯಾಗಿರಲಿಲ್ಲ. ಮಲ್ಲೇಶಿ ಗರಡಿಗೆ ಹೋಗಲು ಹಠಮಾಡಿ ಕೈಹಿಡಿದು ಎಳೆದಾಗಲೂ ಪುಲ್ಲಯ್ಯ ಮುಂದಡಿ ಇಡಲಿಲ್ಲ. ರಾಜಣ್ಣನಿಂದ ಪಡೆದ ಸಾಲಕ್ಕೆ ಬಡ್ಡಿಯಾಗಿ ಧಾನ್ಯ ಅಳೆದುಕೊಟ್ಟ ನಂತರ ಉಳಿದದ್ದು, ಒಂದು ತಿಂಗಳಿಗೂ ಸಹ ಸಾಲು ವಂತಿರಲಿಲ್ಲ. ನೀಲಿ, ಬಡ್ಡಿಯನ್ನು ಹಣದ ರೂಪದಲ್ಲಿ ಪಡೆಯುವಂತೆ, ರಾಜಣ್ಣನ ಹೆಂಡತಿಯನ್ನು ಪರಿಪರಿಯಾಗಿ ಬೇಡಿಕೊಂಡಳು. ಆದರೆ, ಧಾನ್ಯಗಳ ಬೆಲೆಗಳು ಏರು ತ್ತಿದ್ದರಿಂದ, ಬಡ್ಡಿಯನ್ನು ಧಾನ್ಯದ ರೂಪದಲ್ಲೆ ಪಡೆಯಲು, ರಾಜಣ್ಣ ನಿರ್ಧರಿಸಿದ್ದ. ನೀಲಿ, "ಇಷ್ಟು ಉಪಕಾರ ಮಾಡದಿದ್ದರ, ಮಕ್ಕಳು ಹೊಟ್ಟೆಗಿಲ್ಲದ ಸೊರಗಿಹೋ ಗ್ತಾರ"—ಎಂದು ಅಂಗಲಾಚಿದಳು. ಕೊನೆಗೆ ಭೂಮಿಯನ್ನು ಸ್ವಾಧೀನಪಡಿಸುವ ಕಾಗದ ಬರೆದುಕೊಟ್ಟಲ್ಲಿ ಮಾತ್ರ ಬಡ್ಡಿಯನ್ನು ಸಧ್ಯಕ್ಕೆ ಬಿಟ್ಟುಕೊಡಲು ರಾಜಣ್ಣ ಒಪ್ಪಿದ. ಅಷ್ಟೇ ಅಲ್ಲದೆ, ಧಾನ್ಯಗಳ ದರಗಳು ಏರಿರುವುದರಿಂದ, ಬಡ್ಡಿಯನ್ನು ನೂರಕ್ಕೆ ಎರಡು ಪುಟ್ಟಿಯಿಂದ ಸ್ವಲ್ಪ ತಗ್ಗಿಸುವುದಾಗಿಯೂ, ಉಳಿದ ಧಾನ್ಯ ಮುಂದಿನ ಸುಗ್ಗಿಗೆ ನಾನೇ ನಿಮಗೆ ಕೊಡುವುದಾಗಿಯೂ, ತನಗೆ ಬರೆದುಕೊಡಲಾಗುವ ಭೂಮಿಯ ಮೇಲೆ, ಪುಲ್ಲಯ್ಯ ತನಗೆ ಬೇಕಾದ ಧಾನ್ಯವನ್ನು ಬೆಳೆಯಬಹುದೆಂದೂ ರಾಜಣ್ಣ ಹೇಳಿದಾಗ, ನೀಲಿ ಅದನ್ನು ಒಪ್ಪಿಕೊಂಡಳು. ಆದರೆ ಪುಲ್ಲಯ್ಯನಿಗೆ ಇದು ಒಪ್ಪಿಗೆಯಾಗಲಿಲ್ಲ. "ಅವನು, ಹ್ಯಾಂಗಾದರೂ ಮಾಡಿ ನಮ್ಮ ಮಾಗಾಣಿ ಭೂಮಿನ್ನ ಹೊಡಕೊಬೇಕೂ ಅಂತ ಹೊಂಚುಹಾಕ್ತ್ಯಾನ. ಈಗ ನಾವು ಸ್ವಾಧೀನಪತ್ರ ಬರೆದು ಕೊಟ್ಟರ, ಇನ್ನೊಂದು ವರ್ಷದಲ್ಲಿ ಈ ಭೂಮಿ ಅವನದs ಆಗ್ತದ"—ಎಂದು

ಪುಲ್ಲಯ್ಯ ವ್ಯಸನಪಟ್ಟ. ಕೊನೆಗೆ ನೀಲಿಯ ಬಲವಂತಕ್ಕೆ, ಭೂಮಿಯನ್ನು ರಾಜಣ್ಣನ ಹೆಸರಿನಲ್ಲಿ ಬರೆದುಕೊಟ್ಟ.

ಬೇಸಿಗೆ ಬಂತು. ಒಂದು ದಿನ ಸಂಜೆ, ಮಲ್ಲೇಶಿ ತನ್ನ ಈಡುಜೋಡಿನ ಹುಡುಗರನ್ನು ಸೇರಿಸಿಕೊಂಡು, ಅವರಿಗೆ, ತಮಟೆಯ ನಾದಕ್ಕೆ ತಕ್ಕಂತೆ ಕುಣಿಯುವುದನ್ನು ಕಲಿಸುತ್ತಿದ್ದ. "ಧಿನಕ್–ಧಿನಕ್–ಧಿನ್......" ಎಂದು ಬಾಯಿಯಿಂದ ಹೇಳುತ್ತಾ ಹೆಜ್ಜೆ ಇಡುತ್ತಿದ್ದ ಮಗನನ್ನು ಪುಲ್ಲಯ್ಯ ದೂರದಿಂದಲೇ ನೋಡಿದ. ಹುಲಿಯ "ಪಂಜಾ"—ದಂತೆ ಕೈಗಳನ್ನು ಆಡಿಸುತ್ತಾ ಸರಿಯಾಗಿ ಹೆಜ್ಜೆ ಇಡುತ್ತಾ, ಗಟ್ಟಿಮುಟ್ಟಾದ ದೇಹವನ್ನು ಹಾವಭಾವಗಳಿಗೆ ತಕ್ಕಂತೆ ಮಣಿಸುತ್ತಾ ಕುಣಿಯುತ್ತಿದ್ದ ಮಗನನ್ನು ಕಂಡು ಪುಲ್ಲಯ್ಯ, ಗರ್ವಪಟ್ಟ. ಈಗ ತಮಟೆಗಳಿದ್ದಲ್ಲಿ ಎಷ್ಟು ಚೆನ್ನಾಗಿರುತ್ತಿತ್ತೆಂದು ಮನಸ್ಸಿನಲ್ಲೆ ಅಂದುಕೊಂಡ. ಹಾಗೆಯೇ ಹೋಗಿ ಹುಲಿಯಂತೆ ಪುಟಿದು, ತಲೆ ಕೆಳಗೆ ಮಾಡಿ ಕೈಗಳ ಮೇಲೆ ನಿಂತಾಗ, ಮಗ ಬಂದು ಸರಸರನೆ ತನ್ನ ಕಾಲುಗಳ ಮೇಲೆ ನಿಂತಾಗ...... ಆ ಕೆಳಗಿನವನ ಮಗನೇ ಮೇಲಿನವನು...... ಎಂದು ಯಾರೋ ಹೇಳಿದಂತಾಗಿ...... ಪುಲ್ಲಯ್ಯನಿಗೆ ಹಳೆಯ ಘಟನೆ ಮರುಕಳಿಸಿತು. ವಯಸ್ಸಿನಲ್ಲಿ ಮುದುಕನಾದರೂ, ಉತ್ಸಾಹದಲ್ಲಿ ಹುಡುಗನಂತಿದ್ದ ಆ ವ್ಯಕ್ತಿ...... ಬೊಚ್ಚುಬಾಯಿ ತೆಗೆದು ದೊಡ್ಡದಾಗಿ ನಗುತ್ತ ಹೇಳಿದ ಎರಡೇ ಎರಡು ಮಾತುಗಳು...... ತನ್ನನ್ನು ಮದುವೆಯಾಗುವಂತೆ ಪ್ರೇರೇಪಿಸಿದ್ದವು. ಆ ಪ್ರೇರಣೆಯ ಫಲವಾಗಿ, ಈಗ ನನ್ನ ಮಗ, ನನ್ನನ್ನೂ ಮೀರಿಸು ವಂತಹ ದಾರಿಯಲ್ಲಿ ನಡೆಯುತ್ತಿದ್ದಾನೆ...... ಆ ಮುದುಕ ಎಲ್ಲಿದ್ದಾನೊ...... ಏನಾದನೊ?

"ಈಗ ನಾನು ತಲೆಕೆಳಗೆ ಮಾಡಿ, ಕಾಲು ಮೇಲೆ ಮಾಡಿ ನಿಂತಲ್ಲಿ...... ನನ್ನ ಮಗ, ನನ್ನ ಮೈ ಏರಿ, ನನ್ನ ಕಾಲುಗಳ ಮೇಲೆ ನಿಲ್ಲಬಹುದೇ? ಅವನು ನಿಂತರೂ, ಅವನ ಭಾರವನ್ನು ನಾನು ತಡೆದುಕೊಳ್ಳಬಹುದೆ...... ತಡೆದುಕೊಳ್ಳಲು ಆಗದಿದ್ದಲ್ಲಿ...... ನನ್ನ ಮಗ ಅಷ್ಟು ಎತ್ತರದಿಂದ ಕೆಳಗೆ ಬಿದ್ದಲ್ಲಿ...... ಕಾಲಾಗಲೀ, ಕೈಯಾಗಲೀ ಮುರಿದರೇನು ಗತಿ...... ಅಬ್ಬಾ, ಯಾಕಿದ್ದೀತು"—ಎಂದುಕೊಂಡು, ಪುಲ್ಲಯ್ಯ ಮಗನ ಹತ್ತಿರ ಹೋದ. ಮಲ್ಲೇಶಿ, ಆಟದಲ್ಲಿ ತಲ್ಲೀನನಾಗಿದ್ದ. ಪುಲ್ಲಯ್ಯನಂತೆ, ಆ ರಸ್ತೆಯಲ್ಲಿ ಹೋಗುತ್ತಿದ್ದ ಜನರೂ ಸಹ, ಆ ಮಕ್ಕಳ ಆಟ ನೋಡುತ್ತಾ ನಿಂತಿದ್ದರು. ನದಿಯಿಂದ ನೀರು ತರುತ್ತಿದ್ದ ಹೆಣ್ಣುಮಗಳೊಬ್ಬಳು, ಮಲ್ಲೇಶಿಯ ಕುಣಿತ ನೋಡಿ, "ಇಂತಹವನು, ಒಬ್ಬ ಮಗನಿದ್ದರೆ ಸಾಕು"—ಎಂದು ಮೆಚ್ಚಿಗೆ ವ್ಯಕ್ತಪಡಿಸಿದಾಗ, ಪುಲ್ಲಯ್ಯ ಸಂತೋಷದಿಂದ ಉಬ್ಬಿಹೋದ. ಮಲ್ಲೇಶಿ ತಂದೆಯನ್ನು ನೋಡಿ ಓಡಿ ಬಂದು, ಅವನ ಭುಜ ಏರಿ ಕುಳಿತ. ಹಾಗೆಯೇ ಮನೆಯ ಕಡೆಗೆ ಹೆಜ್ಜೆ ಇಡು ತ್ತಿದ್ದಾಗ, "ಅಪ್ಪಾ, ಆಜ್ಜಿಗೆ ಜ್ವರ ಬಂದಾವ.—ಆಕಿ ಸತ್ತುಹೊಗ್ತಾಳೇನು?"—ಎಂದು ಕೇಳಿದ.

ಅದುವರೆಗೆ ಸಂತೋಷದಿಂದ ಉಬ್ಬಿಹೋಗಿದ್ದ ಪುಲ್ಲಯ್ಯನ ಮನಸ್ಸು, ಆ ಮಾತನ್ನು ಕೇಳಿ, ಗಾಳಿ ತೆಗೆದ ಬಲೂನಿನರೀತಿ ನಿಸ್ಸತ್ವವಾಯಿತು.

"ಶಿವಪ್ಪನ ಅಮ್ಮ ಹೇಳಿದಲಂತ—ಯಾರೋ ಕೋಣದ ಮ್ಯಾಲೆ ಬಂದು, ಜೀವ ತೊಗೊಂಡು ಹೋಗ್ತಾನಂತ. ಅವನು ಯಾವಾಗ ಬರ್ತಾನ ಹೇಳು. ಕೋಲು ಹಿಡ ಕೊಂಡು ಬಾಗಿಲಿಗೆ ಕೂತು, ಅವನು ಅಜ್ಜಿ ಹತ್ತಿರ ಬರಲಾರದ್ಹಾಂಗ ಮಾಡ್ತೀನಿ"—ಮಲ್ಲೇಶಿ ಹೇಳುತ್ತಲೇ ಇದ್ದ.

ಪುಲ್ಲಯ್ಯ, ಮಗನ ಈ ಮಾತು ಕೇಳಿ, "ಅವನು ಬರೀ ಸುಳ್ಳು ಹೇಳ್ಯಾನೇಳು"—ಎಂದು ಮುಗುಳ್ನಕ್ಕ.

ತಂದೆಯ ಮುಖವನ್ನೆ ನೋಡುತ್ತಿದ್ದ ಮಲ್ಲೇಶಿ, "ಸುಳ್ಳು ಹೇಳಿದವರ ಕಣ್ಣು ಕಳೀತಾನು—ಆ ದೇವರು"—ಎಂದು ಎಚ್ಚರಿಕೆ ನೀಡಿದ.

ಪ್ಲೀಡರ್ ಸೀತಾರಾಮ ಸ್ವಾಮಿ, ಮಗನ ಮದುವೆಗೆ ದುಡ್ಡು ಬೇಕಾದಾಗ ಊರಿಗೆ ಬಂದವನು, ಮತ್ತೆ ಅತ್ತಕಡೆ ತಲೆಹಾಕಿರಲಿಲ್ಲ. ಈಗ ಇದ್ದಕ್ಕಿದ್ದಂತೆ ಅವನು ಊರಿಗೆ ಬಂದಾಗ ಅದೊಂದು ದೊಡ್ಡ ಸುದ್ದಿಯೇ ಆಯಿತು. ಸೀತಾರಾಮಸ್ವಾಮಿ ಹಾಗೆ ಹಳ್ಳಿಗೆ ಬರುವುದಕ್ಕೂ ಕಾರಣಗಳಿದ್ದವು. ಚುನಾವಣೆಗಳು ಸಮೀಪಿಸಿದ್ದರಿಂದ, ಚುನಾವಣಾ ಪ್ರಚಾರ ಭರದಿಂದ ಸಾಗಿತ್ತು. ಹಳ್ಳಿಗಳಲ್ಲಿನ ಮತದಾರರ ಸಂಖ್ಯೆ ಹೆಚ್ಚಾಗಿದ್ದರಿಂದ, ಹಳ್ಳಿಗಳಲ್ಲಿ, ಬಿರುಸಿನ ಪ್ರಚಾರ ನಡೆದಿತ್ತು. ಹಳ್ಳಿಗಳಲ್ಲಿನ ಮುಗ್ಧ ಜನರನ್ನು ಆಕರ್ಷಿಸುವುದಕ್ಕಾಗಿ, ವಿಭಿನ್ನ ರಾಜಕೀಯ ಪಕ್ಷಗಳು ವಿವಿಧ ರೀತಿಯ ಪ್ರಚಾರ ಕೈಗೊಂಡಿದ್ದವು. ಉಳುವವನದೇ ಭೂಮಿ—ಭೂಮಿಯ ಮೇಲಿನ ಸ್ವಾಮ್ಯ ಉಳುವವನಿಗೇ ಸೇರಿದ್ದು—ಎಂದೆಲ್ಲ ಗುಲ್ಲು ಎಬ್ಬಿಸಿದ್ದರು. ವಿಭಿನ್ನ ಪಕ್ಷಗಳು, ಒಂದಲ್ಲ ಒಂದು ರೀತಿಯಲ್ಲಿ, ಈ ವಾದವನ್ನೇ ಸಮರ್ಥಿಸಿದವು. ಈ ವಾದದಿಂದ ತಮ್ಮ ಗುರಿಯನ್ನು, ಅಂದರೆ, ಚುನಾವಣೆಯಲ್ಲಿ ಗೆಲ್ಲುವ ಗುರಿಯನ್ನು ಸಿದ್ಧಿಸಿಕೊಳ್ಳ ಬಹುದೆಂಬುದು ರಾಜಕೀಯ ಪಕ್ಷಗಳ ದೃಢ ನಂಬಿಕೆಯಾಗಿತ್ತು. ಉಳುವವನದೆ ಭೂಮಿ—ಎಂಬ ವಾದವನ್ನು ಸಮರ್ಥಿಸಲು, ಆಗಲೇ ಕೆಲವೊಂದು ಚಲನಚಿತ್ರಗಳನ್ನು ತಯಾರಿಸಲಾಗಿತ್ತು. ಕೆಲವು ಪಕ್ಷಗಳು, ಈ ವಾದವನ್ನೇ ಮುಂದಿಟ್ಟುಕೊಂಡು, ನಾಟಕಗಳನ್ನು ಬರೆಯಿಸಿ, ಹಳ್ಳಿಗಳಲ್ಲಿ ಆಡಿಸಿದರು. ಇವುಗಳ ಪರಿಣಾಮವಾಗಿ ಅಮಾಯಕರಾಗಿದ್ದ ಹಳ್ಳಿ ಜನರಲ್ಲಿ, ಭೂಮಿ–ಕಾಣಿಯನ್ನು ಹೊಂದಿರುವವರ ಬಗ್ಗೆ ಅಸೂಯೆ ಮೂಡಿತು. ಭೂಮಿಯನ್ನು ಹೊಂದಿರುವವರು, ತಮ್ಮ ಪಿತ್ರಾರ್ಜಿತ ಆಸ್ತಿ ಎಲ್ಲಿ ಕೈಬಿಟ್ಟು ಹೋಗುವುದೊ ಎಂದು ಹೆದರಿ, ರೈತರನ್ನು ಬಿಡಿಸಿ, ಸ್ವಂತ ಸಾಗುವಳಿ ನಡೆಸಹತ್ತಿದರು. ಇದರಿಂದಾಗಿ, ಅನೇಕ ರೈತರು, ಕೃಷಿ ಕಾರ್ಮಿಕರು, ಮಾಡಲು ಕೆಲಸವಿಲ್ಲದೆ, ಹೊಟ್ಟೆಗೆ ಹಿಟ್ಟಿಲ್ಲದೆ ಗೋಳಾಡಹತ್ತಿದರು. ಹಸಿವಿನಿಂದ ಕಂಗಾಲಾದ ನೇಗಿಲಯೋಗಿಗಳು, ಬದುಕುವ ಆಶೆಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳ

ಲಾಗದೆ, ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಳ್ಳತೊಡಗಿದರು. ಧಾನ್ಯಗಳ ಬೆಲೆಗಳು ವಿಪರೀತವಾಗಿ ಏರಿದ್ದರಿಂದ, ಊರಿನಲ್ಲಿನ ಹಿರಿಯ ರೈತರಿಗೆ—ಒಂದು ರೀತಿಯಲ್ಲಿ ಅನುಕೂಲವೇ ಆಗಿತ್ತು. ಧಾನ್ಯಗಳ ಬೆಲೆ ಏರಿದಂತೆ, ಅವರ ಕೈಯಲ್ಲಿ ಹಣ ಓಡಾಡ ತೊಡಗಿತು. ಲಕ್ಷ್ಮೀದೇವಿ, ಅವರ ಮನೆಗಳಲ್ಲಿ ಕಾಲುಮುರಿದುಕೊಂಡು ಕುಳಿತಳು. ಕೈಗೆ ಬಂದ ದುಡ್ಡನ್ನು ಹೇಗೆ ಖರ್ಚುಮಾಡಬೇಕೆಂದು ತೋಚದೆ, ಅನುಕೂಲಸ್ಥರಾಗಿದ್ದ ರೈತರು, ಇನ್ನಷ್ಟು ಮತ್ತಷ್ಟು ಭೂಮಿ ಕೊಳ್ಳತೊಡಗಿದರು. ಆ ರೀತಿ ಕೊಂಡ ಭೂಮಿ ಯಲ್ಲಿ, ಕೂಲಿ ಜನರನ್ನು ಇಡಿಸಿ, ಸಾಗುವಳಿ ಪ್ರಾರಂಭಿಸಿದರು. ಇದರಿಂದ ಭೂಮಿಯನ್ನು ಗೇಣಿಗೆ ತೆಗೆದುಕೊಂಡು ಜೀವಿಸುತ್ತಿದ್ದ ಸಾವಿರಾರು ರೈತರು, ನಿರ್ಗತಿಕರಾಗಿ ರೊಚ್ಚಿ ಗೆದ್ದರು. ಅಲ್ಲಲ್ಲಿ, ಸಲ್ಲದ ಮನಸ್ತಾಪಗಳು ಹುಟ್ಟಿಕೊಂಡು, ರಕ್ತಪಾತವಾಗತೊಡ ಗಿತು. ಹಳ್ಳಿಗಳಲ್ಲಿ, ಈಗ ಭೂಮಿಯನ್ನು ಕೊಳ್ಳುವವರ—ಅಂದರೆ—ಧನಿಕರ ಪಕ್ಷ ಮತ್ತು ಭೂಮಿಯನ್ನು ಉಳುವವರ—ಅಂದರೆ—ಬಡ ರೈತರ ಪಕ್ಷಗಳು ಹುಟ್ಟಿ ಕೊಂಡವು. ದುಡ್ಡಿದ್ದವನೇ ದೊಡ್ಡಪ್ಪ. ದುಡ್ಡಿದ್ದವನಿಗೆ ಜಯಲಕ್ಷ್ಮಿ ಒಲಿಯುವುದು. ಅಂತಲೇ ಧನಿಕರ ಪಕ್ಷದ ಪ್ರಾಬಲ್ಯ ಹೆಚ್ಚಾದುದರಲ್ಲಿ ಆಶ್ಚರ್ಯವಿರಲಿಲ್ಲ.

ಸೀತಾರಾಮಸ್ವಾಮಿ, ಇಂತಹ ಪರಿಸ್ಥಿತಿ ಉದ್ಭವಿಸುವದೆಂದು, ಎಂದೋ ಊಹಿಸಿದ್ದ. ಆದರೆ, ನಂಬಿಗಸ್ತನಾದ ಪುಲ್ಲಯ್ಯ ತಪ್ಪದೇ ಧಾನ್ಯ ತಂದುಕೊಡುತ್ತಿರುವಾಗ, ಇದ್ದ ಭೂಮಿ ಮಾರುವುದು ಸರಿಯಲ್ಲವೆಂದು ಹೆಂಡತಿ ವಾದಿಸಿದ್ದರಿಂದ, ಸೀತಾರಾಮ ಸ್ವಾಮಿ, ಭೂಮಿಯನ್ನು ಮಾರಿರಲಿಲ್ಲ. ಆದರೆ, ಈಗ ಪರಿಸ್ಥಿತಿ ಬದಲಾಯಿಸಿತ್ತು. ಈಗ ಅಧಿಕಾರಕ್ಕೆ ಬರುವ ಯಾವ ಸರ್ಕಾರವೇ ಆಗಲೀ, ಉಳುವವನದೇ ಭೂಮಿ—ಎಂಬ ಶಾಸನ ಜಾರಿಗೆ ತರಬಹುದೆಂದು ಸೀತಾರಾಮಸ್ವಾಮಿ ಊಹಿಸಿದ. ಅಂತಲೇ, "ಹಳ್ಳಿ ಯಲ್ಲಿನ ಆಸ್ತಿಪಾಸ್ತಿ ಮಾರಿ, ಪಟ್ಟಣದಾಗ ಮನಿ ಕಟ್ಟಿಸಿದರ, ತಿಂಗಳ ತಿಂಗಳ ಬಾಡಿಗೆ ಬರ್ತದ. ನಮ್ಮ ಜಿಲ್ಲೆಯಷ್ಟು ದೊಡ್ಡ ಜಿಲ್ಲೆ ಬೇರೊಂದಿಲ್ಲ. ನಮ್ಮ ಸರ್ಕಾರ ಅಧಿಕಾರ ವಹಿಸಿಕೊಂಡ ಮ್ಯಾಲೆ, ಈ ಜಿಲ್ಲೆಯನ್ನು ವಿಭಜಿಸಿ, ಈ ಪಟ್ಟಣವನ್ನು ಒಂದು ಜಿಲ್ಲೆಯ ಮುಖ್ಯ ನಗರವನ್ನಾಗಿ ಮಾಡ್ತದ. ಆಗ, ಮನಿ ಬಾಡಿಗೆ, ಈಗಿಗಿಂತ ಎರಡು ಪಟ್ಟು ಹೆಚ್ಚಾಗ್ತದ"—ಎಂದೆಲ್ಲಾ ಹೆಂಡತಿಗೆ ಉಪದೇಶಿಸಿದ. ಗಂಡನ ಈ ಮಾತು ಕೇಳಿ, ಹೆಂಡತಿಯ ಬಾಯಲ್ಲೂ ನೀರೂರಿತು. ಪುಲ್ಲಯ್ಯನಿಗೆ ಗೇಣಿಯ ಮೇಲೆ ಕೊಟ್ಟ ಎರಡು ಎಕರೆ ಭೂಮಿಯನ್ನು ಮಾರಲು, ಆ ಭೂಮಿಯನ್ನು ಮಾರಿದ ದುಡ್ಡಿ ನಿಂದ ಪಟ್ಟಣದಲ್ಲಿ ಒಂದು ನಿವೇಶನ ಕೊಂಡು ಮನೆ ಕಟ್ಟಿಸಲು ಅವಳು ಒಪ್ಪಿಗೆ ನೀಡಿದಳು.

ಪುಲ್ಲಯ್ಯ ಸಾಗುವಳಿ ಮಾಡುತ್ತಿದ್ದ ಎರಡು ಎಕರೆ ಹೊಲದಲ್ಲಿ, ಒಂದು ಎಕರೆ ರಾಜಣ್ಣನಿಗೂ, ಒಂದು ಎಕರೆ ಅದೇ ಊರಿನ ಮತ್ತೊಬ್ಬ ರೈತನಿಗೂ ಮಾರಲು, ಸೀತಾರಾಮಸ್ವಾಮಿ ನಿಶ್ಚಯಿಸಿದ್ದ. ಅಂತೆಯೇ, ಪುಲ್ಲಯ್ಯನನ್ನು ಕರೆಸಿ, "ನನಗ

ದುಡ್ಡಿನ ಅಡಚಣೆ ಅದ. ಈಗ ಭೂಮಿಯನ್ನು ಮಾರದs ನನಗ ಅನ್ಯ ಮಾರ್ಗವೇ ಇಲ್ಲವಾಗಿದೆ"—ಎಂದು ಹೇಳಿದ. ಪುಲ್ಲಯ್ಯ, ಇದನ್ನು ಕೇಳಿ ತತ್ತರಿಸಿಹೋದ. "ನಮ್ಮ ತಾತ–ಮುತ್ತಾತರ ಕಾಲದಿಂದ ನಿಮ್ಮ ಭೂಮಿ ಸಾಗುವಳಿ ಮಾಡಿಕೊಂಡು ಬಂದೀವಿ. ಎಂದಾದರೂ ಒಂದು ಹಿಡಿ ಧಾನ್ಯ ಕೂಡ ಬಚ್ಚಿಟ್ಟುಕೊಳ್ಳದ, ಬಂದದ್ದು ಬಂದಹಾಂಗ ತಂದುಕೊಟ್ಟೀನಿ. ನಿಮ್ಮ ಆಕಳು–ಕರುಗಳಿಗೆ ಬೇಕಾದ ಮೇವೂ ಕೂಡ ತಂದುಕೊಟ್ಟೀವಿ. ನಮ್ಮ ತಾತ–ಮುತ್ತಾತರ ಕಾಲದಿಂದಲೂ ಹೀಂಗs ನಡೆದುಕೊಂಡು ಬಂದದ. ಈಗ ನೀವು ಹೀಂಗ ಹೇಳಿದರ, ನಾವು ಗಂಗಿಗೆ ಬೀಳಬೇಕಾಗ್ತದ"—ಪುಲ್ಲಯ್ಯ ನಮ್ರವಾಗಿ ಹೇಳಿದ.

ಪ್ಲೀಡರ್ ಸೀತಾರಾಮಸ್ವಾಮಿ, ಭೂಮಿಯನ್ನು ಕೊಳ್ಳುವವರಿಂದ ಆಗಲೇ ಮುಂಗಡ ಪಡೆದಿದ್ದರಿಂದ, ಪುಲ್ಲಯ್ಯ ಎಷ್ಟು ಬೇಡಿಕೊಂಡರೂ, ಕೋಣದ ಮುಂದೆ ಕಿನ್ನರಿ ಬಾರಿಸಿದಂತಾಯಿತು. ಸೀತಾರಾಮಸ್ವಾಮಿ, ಪುಲ್ಲಯ್ಯನಿಗೆ ಅಲ್ಪಸ್ವಲ್ಪ ಸಹಾಯ ಮಾಡುವುದಾಗಿ ಹೇಳಿದನಾದರೂ, ಭೂಮಿಯನ್ನು ಮಾರುವುದು ಖಚಿತವೆಂದು ಸ್ಪಷ್ಟ ವಾಗಿ ತಿಳಿಸಿದ. ಕೊನೆಗೆ, ಪುಲ್ಲಯ್ಯ, "ನಿಮಗ ಈಗ ಕೊಡುತ್ತಿರುವ ಪಾಲನ್ನೆ, ನಿಮ್ಮಿಂದ ಭೂಮಿ ಕೊಳ್ಳುವವರಿಗೆ ಕೊಡ್ತೀನಿ. ಅವರು ಯಾರೇ ಆಗಲಿ, ಅವರಿಗೆ ಒಂದು ಮಾತು ಹೇಳಿ, ಈ ಹೊಲದ ಗೇಣಿ ನನಗ ಕೊಡಸ್ರಿ"—ಎಂದು ಬೇಡಿಕೊಂಡ. ಆದರೆ, ತನ್ನಿಂದ ಭೂಮಿಯನ್ನು ಕೊಂಡವರು ಸ್ವತಃ ರೈತರೇ ಆಗಿದ್ದರಿಂದ, ಇನ್ನೊಬ್ಬ ರಿಗೆ ಗೇಣಿ ಕೊಡಲಾರರೆಂದು ಪ್ಲೀಡರ್ ಸೀತಾರಾಮಯ್ಯ ಹೇಳಿದಾಗ, ಪುಲ್ಲಯ್ಯನಿಗೆ ಸಹಜವಾಗಿಯೇ ರೇಗಿತು.

ಸೀತಾರಾಮಸ್ವಾಮಿ ದೊಡ್ಡದೊಡ್ಡ ಮಾತುಗಳನ್ನು ಆಡಲು ಪ್ರಾರಂಭಿಸಿದಾಗ ಪುಲ್ಲಯ್ಯ ಸರ್‍ರನೆ ಎದ್ದು, "ಆ ಪಾಯಿಂಟು, ಈ ಪಾಯಿಂಟು ಅಂತ ನಮಗ್ಯಾಕ ಹೇಳ್ತೀರಿ ಧಣೇರ, ನಮ್ಮ ತಾತ–ಮುತ್ತಾತನ ಕಾಲದಿಂದ ಆ ಹೊಲ ಮಾಡಿಕೋತ ಬಂದೀವಿ. ಆ ಹೊಲ ಸಾಗುವಳಿ ಮಾಡೊ ಹಕ್ಕು ನನಗಿಲ್ಲ—ಅಂತ ಅದು ಯಾವ ಗಂಡಸು ಹೇಳ್ತಾನೊ ನೋಡ್ತೀನಿ. ನೀವು ಯಾವ ಕೋರ್ಟು ಕಚೇರಿಗೆ ಹೋಗ್ತೀರೊ ಹೋಗ್ರಿ. ನಾನು ಮಾತ್ರ ಆ ಹೊಲ ಬಿಟ್ಟುಕೊಡಾಣೆಲ್ಲ"—ಎಂದು ಹೇಳಿ ಅಲ್ಲಿಂದ ಹೊರಡಲು ಮುಂದಾದ. ಪ್ಲೀಡರ್ ಸೀತಾರಾಮಸ್ವಾಮಿ ಅವನನ್ನು ತಡೆದು, "ಯಾಕ ಸುಮ್ಮನೆ ಒದರ್‍ತಿಯೊ? ಸಾಗುವಳಿ ಹಕ್ಕು ಎಲ್ಲಿಂದ ಬಂದದ ನಿನಗ? ಹೋಗ–ಹೋಗು. ನಿನ್ನಂತಹವರನ್ನು ಅದೆಷ್ಟು ಮಂದೀನ್ನ ನೋಡೀನೊ ಏನೊ? ಸುಮ್ಮನ ನಾನು ಕೊಟ್ಟದ್ದನ್ನ ತೊಗೊಂಡು ಹೋಗು. ಆ ಮ್ಯಾಲ, ಇದು ಕೂಡ ಸಿಗಾಣೆಲ್ಲ"—ಎಂದು ದುಡ್ಡಿನ ಆಸೆ ತೋರಿಸಿದ.

"ಆಗಲಿ ಧಣೇರ. ನೀವು ಬರದ ಕೊಟ್ಟ ಕಾಗದದ ಆಧಾರದ ಮ್ಯಾಲೆ ನನಗ ನ್ಯಾಯ ದೊರಕದಿದ್ದರೂ, ನಮ್ಮ ಊರಿನ ಜನರಂತೂ ಸುಳ್ಳು ಹೇಳಾಣೆಲ್ಲ. ಅವರು ಬಂದು

ಸಾಕ್ಷಿ ಹೇಳಿದರ, ಸಾಗುವಳಿ ಹಕ್ಕು ಅದು ಹ್ಯಾಂಗ ಸಿಗಾಣಲ್ಲೊ ನೋಡ್ತೀನಿ"—ಎಂದು ಹೇಳಿ ಪುಲ್ಲಯ್ಯ ಅಲ್ಲಿಂದ ಎದ್ದು ಹೊರಟ.

ಪುಲ್ಲಯ್ಯ ಅಲ್ಲಿಂದ ಹೊರಟುಹೋದ ಮೇಲೆ, ರಾಜಣ್ಣ ಮತ್ತು ಇನ್ನೊಬ್ಬ ರೈತ ಪ್ಲೀಡರ್‌ನ ಮನೆಯೊಳಗೆ ಕಾಲಿಟ್ಟರು. "ನೀವು ಖರೀದುಪತ್ರ ಬರೆದು ಕೊಡ್ರಿ. ಅವನನ್ನು ಬಿಡಿಸಲು ನಿಮಗಾಗದಿದ್ದರ, ನಾವು ಬಿಡಸ್ತೀವಿ.—ಅವನಿಗೆ ಈಗ ಕೇಡುಗಾಲ ಬಂದದ, ನಾವು ಎಲ್ಲಾ ನೋಡಿಕೊತೀವಿ"—ಎಂದು ರಾಜಣ್ಣ ಹೇಳಿದಾಗ, ಕೋರ್ಟು ಕಚೇರಿ ಏರುವುದು ತಪ್ಪಿತೆಂದು, ಪ್ಲೀಡರ್ ಸೀತಾರಾಮಸ್ವಾಮಿ ತನ್ನ ಭೂಮಿಯನ್ನು ಅವರ ಹೆಸರಿನಲ್ಲಿ ರಜಿಸ್ಟರ್ ಮಾಡಿಸಿಕೊಟ್ಟ.

ನವಿರಿಯ ನಡುಬೀದಿಯಲ್ಲಿ, ನರಸಿಂಹನ ಮನೆಯ ಬಳಿ, ಈ ವಿಷಯ ಚರ್ಚೆಗೆ ಬಂದಿತ್ತು. ಪ್ಲೀಡರ್ ಸೀತಾರಾಮಸ್ವಾಮಿ ಮಾಡಿದ ಮೋಸ ತಿಳಿದ ಕೂಡಲೇ ಪುಲ್ಲಯ್ಯ ಬೆಂಕಿಯಾದ. ನರಸಿಂಹ, "ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಬೇಡ, ದೇವರಿದ್ದಾನ"—ಎಂದು ಹೇಳಿ ಪುಲ್ಲಯ್ಯನನ್ನು ಸಮಾಧಾನ ಮಾಡಲು ಪ್ರಯತ್ನಿಸಿದ.

"ದೇವರು ಯಾಕ? ಹೊಲದಾಗ ಯಾವನು ಕಾಲಿಡ್ತಾನೊ ನೋಡೆಬಿಡ್ತೀನಿ. ಕಾಲಿಟ್ಟವನ ತಲಿ ಒಡೀದಿದ್ದರ ನನ್ನ ಹೆಸರು ಪುಲ್ಲಯ್ಯನೇ ಅಲ್ಲ"—ಎಂದು ಕೂಗಾಡಿದ. ಪುಲ್ಲಯ್ಯ.

"ನೋಡು ತಮ್ಮಾ, ಅವರಿಗೆ ಮನುಷ್ಯರ ಬಲ, ದುಡ್ಡಿನ ಬೆಂಬಲ ಎರಡೂ ಅವ. ದುಡ್ಡಿದ್ದವನು ದಾಸಿಯ ಮಗನಾದರೂ, ರಾಜನೇ ಸರಿ. ನ್ಯಾಯ ನಿನ್ನ ಪರವಾಗಿ ಅದ. ನ್ಯಾಯವೇ ದೇವರು. ದೇವರಿಗೆ ಸಾವಿಲ್ಲ—ಎಂಬೋದು ಸಣ್ಣ ಮಕ್ಕಳಿಗೂ ಸಹ ತಿಳಿದದ......" ಎಂದೆಲ್ಲಾ, ನರಸಿಂಹ ಬುದ್ಧಿ ಹೇಳಲು ಪ್ರಯತ್ನಿಸಿದಾಗ, ಪುಲ್ಲಯ್ಯನಿಗೆ ಮತ್ತಷ್ಟು ರೇಗಿತು. "ಯಾವಾಗಲೂ ದೇವರು–ದಿಂಡರು ಅಂತ ಕೂಡ್ತೀಯೊ ನೀನು. ದೇವರಂತ ದೇವರು. ಇದೇ ಏನು ದೇವರು ಮಾಡೊ ನ್ಯಾಯ. ಅನ್ಯಾಯದಿಂದ ತುಂಬಿಹೋಗ್ಯದ ಈ ಪ್ರಪಂಚ. ಈ ಅನ್ಯಾಯವನ್ನು ಎದುರಿಸಲಾಗದೆ, ಆ ದೇವರೆ ಮೂಲಿ ಹಿಡಿದು ಕೂತಾನ. ಇನ್ನು ಆ ದೇವರು ನಮಗ ನ್ಯಾಯ ದೊರಕಿಸಿ ಕೊಡ್ತಾನಂತ ನಾವು ಸುಮ್ಮನ ಕೂತರ ಆತು......"

ನರಸಿಂಹ, ಪುಲ್ಲಯ್ಯನ, ಆವೇಶಭರಿತವಾದ ಈ ಮಾತುಗಳಿಗೆ ಪ್ರಶಾಂತವಾಗಿಯೇ —"ದೇವರು ಇದ್ದಾನ. ಇಲ್ಲ ಅಂತ ಅನ್ನಬ್ಯಾಡ. ಈ ಪ್ರಪಂಚದಾಗ ಎಲ್ಲರೂ, ಎಲ್ಲಾನೂ ಒಂದೇ ರೀತಿ ಇಲ್ಲ. ನಿನ್ನ ಮುಖ, ನನ್ನ ಮುಖದ್ಹಾಂಗ ಇಲ್ಲ. ನಿನ್ನ ಬದುಕು, ನನ್ನ ಬದುಕಿನ ಹಾಂಗಿಲ್ಲ. ಪ್ರತಿಯೊಬ್ಬನಿಗೂ ಒಂದು ಪ್ರತ್ಯೇಕ ಆಕಾರ, ಒಂದು ಪ್ರತ್ಯೇಕ ಬದುಕು ಇರುವುದಾದರೂ ಯಾತಕ್ಕ?"—ಎಂದು ಏನೇನೊ ಹೇಳ ಹೊರಟ.

ಪುಲ್ಲಯ್ಯ ಅವನನ್ನು ಅರ್ಧದಲ್ಲೆ ತಡೆದು, "ನಾಳೆ ಹೊಲಕ್ಕ ಹೋಗಿ ನೇಗಿಲು

ಹೂಡ್ತೀನಿ. ಮೀಸೆ ಹೊತ್ತ ಯಾವ ಗಂಡಸು ಬಂದು ನನ್ನ ತಡೀತಾನೊ ನೋಡೇ ಬಿಡ್ತೀನಿ"—ಎಂದು ಮೀಸೆ ತಿರುವಿದ. ಅವನ ಪಕ್ಕದಲ್ಲಿ ನಿಂತಿದ್ದ ಮಲ್ಲೇಶಿ ಕೂಡ ತನಗಿಲ್ಲದ ಮೀಸೆಯನ್ನು ತಿರುವಿದ.

ಇದನ್ನೆಲ್ಲಾ ಕೇಳುತ್ತಾ ಅಲ್ಲಿಯೇ ಕುಳಿತಿದ್ದ ಭಿಕ್ಷುಕ ಕುಷ್ಠರೋಗಿ, ಕಾಲೆಳೆದುಕೊಂಡು ಅಲ್ಲಿಂದ ಹೊರಟಾಗ, ರಾಜಣ್ಣ ಎದುರಾದ. ಪುಲ್ಲಯ್ಯನ ತೀರ್ಮಾನ, ಅದು ಹೇಗೊ ಅವನ ಕಿವಿಗೂ ಬಿದ್ದಿತ್ತು. ಅವನು ಸಂಜೀವಿಯ ಜೊತೆ ಮಾತನಾಡುತ್ತಾ, "ಅದು ಹ್ಯಾಂಗ ನೇಗಿಲು ಹೂಡ್ತಾನೊ ನಾನೂ ನೋಡೆ ಬಿಡ್ತೀನಿ"—ಎಂದು ಮೀಸೆ ಮೇಲೆ ಕೈ ಆಡಿಸಿದ್ದನ್ನು ನೋಡಿದ ಕುಷ್ಠರೋಗಿ, ನೇರವಾಗಿ ನೀಲಿಯ ಬಳಿ ಬಂದು, "ಅಮ್ಮಾ, ನಾಳೆ ನಿನ್ನ ಗಂಡ ಹೊಲಕ್ಕ ಹೋದರ ಬದುಕಿ ಬರಲಿಕ್ಕಿಲ್ಲಮ್ಮ ; ಆ ರಾಜಣ್ಣ ಮಹಾ ಕ್ರೂರಿ. ಮಹಾ ಹಠಮಾರಿ. ದುಡ್ಡು ಸುರಿದು ಭೂಮಿ ಕೊಂಡಾನ—ಸುಮ್ಮನ ಬಿಟ್ಟು ಕೊಡ್ತಾನೇನು? ಊರಿನವರು ಅವನ ಪರವಾಗಿಯೇ ಮಾತಾಡ್ತಾರ—ಸರ್ಕಾರನೂ ಅವನ ಪರವಾಗಿ ಅದ. ಆದರ, ದೇವರಿಲ್ಲೇನು? ದೇವರು ಇಂದಿಲ್ಲ ನಾಳೆ ನ್ಯಾಯ ದೊರಕಿಸಿಕೊಡ್ತಾನು"—ಎಂದು ಹೇಳಿದ.

ನೀಲಿ, ಇದನ್ನು ಕೇಳಿ ಕಳವಳಗೊಂಡಳಾದರೂ, ಅದು ಹೇಗೊ ಸಮಾಧಾನ ಮಾಡಿ ಕೊಂಡಳು. ರಾತ್ರಿ ಮಲಗುವ ವರೆಗೂ, ಗಂಡ ಏನನ್ನಾದರೂ ಹೇಳ್ತಾನೇನೊ ಎಂದು ಎದುರುನೋಡಿದಳು. ಆದರೆ, ಪುಲ್ಲಯ್ಯ ಯಾವ ಮಾತೂ ಆಡದೆ ಗಂಭೀರವಾಗಿದ್ದ. ಜ್ವರದಿಂದ ನರಳುತ್ತಿದ್ದ ಮುದುಕಿ, ಒಂದು ಮೂಲೆಯಲ್ಲಿ ಮುದುಡಿಕೊಂಡು ಮಲ ಗಿದ್ದಳು. ಕೈಕೂಸು ಆಗಲೇ ಎದ್ದು ದೊಡ್ಡದಾಗಿ ಅಳಹತ್ತಿತು. ಪಾಪ, ಆ ಹಸಿಗೂಸಿಗೆ, ತಾಯಿಯ ಹಾಲು ಸಾಲುತ್ತಿರಲಿಲ್ಲ. ಆ ಕೂಸಿಗೆ ಹಾಲು ಕೊಂಡು ಹಾಕಲು ಕೈಲಾಗ ದ್ದಕ್ಕಾಗಿ, ಇದ್ದುದರಲ್ಲೆ ಮೆತ್ತನೆಯ ಅನ್ನ ಮಾಡಿ, ನೀಲಿ ಉಣ್ಣಿಸುತ್ತಿದ್ದಳು. ಅಳುತ್ತಿದ್ದ ಕೂಸಿಗೆ ಹೊಟ್ಟೆಗೆ ಕೊಡುತ್ತಾ, ನಿದ್ರೆ ಬಾರದೆ ಹೊರಳಾಡುತ್ತಿದ್ದ ಗಂಡನತ್ತ ನೋಡಿ ದಳು. ಅಂದು...... ಆ ಹುಣ್ಣಿಮೆಯ ರಾತ್ರಿ, ಹುಣಸೆ ಗಿಡದ ಕೆಳಗೆ ತನ್ನನ್ನು ಹಿಡಿದು ಬಲವಂತವಾಗಿ ಅಪ್ಪಿ ಮುದ್ದಿಟ್ಟ ಪುಲ್ಲಯ್ಯ...... ಮದುವೆಯ ದಿನ, ತನ್ನ ಓರೆ ನೋಟಕ್ಕೆ ಮರುಳಾದ ಗಂಡ...... ಸುತ್ತುಮುತ್ತಲ ನಾಲ್ಕು ಹಳ್ಳಿಗಳಲ್ಲಿ 'ಉಸ್ತಾದ' ನೆಂದು ಬಿರುದು ಪಡೆದ ಗಟ್ಟಿಗ...... ಇಂದು ಬಾಧೆಯಿಂದ, ದಿಗಿಲಿನಿಂದ ಕಂಗಾಲಾಗಿದ್ದ ರೈತ ಪುಲ್ಲಯ್ಯನಿಗೂ—ಎಷ್ಟು ಅಂತರ. ನೀಲಿ, ಗಂಡನನ್ನು ನೋಡುತ್ತಿದ್ದಂತೆಯೇ, ಅವನ ಬಗ್ಗೆ ಅವಳಲ್ಲಿ ಸುಪ್ತವಾಗಿದ್ದ ಭಾವನೆಗಳು ಉಕ್ಕಿ ಬಂದವು. ತನ್ನ ಮನಸ್ಸಿನ ದುಗುಡವನ್ನು, ತನ್ನನ್ನು ಕಾಡುತ್ತಿರುವ ಚಿಂತೆಯನ್ನು ತನಗೆ ಏಕೆ ಹೇಳಲಿಲ್ಲವೆಂಬುದು ನೀಲಿಗೆ ಗೊತ್ತಿತ್ತು. ತನ್ನ ಗಂಡ ಗರಡಿಯಲ್ಲಿ ಗಟ್ಟಿಗನಾದರೂ, ಮನಸ್ಸಿನಿಂದ ಬಲು ಮೃದು—ಎಂಬುದನ್ನು ಅವಳು ಎಂದೊ ಕಂಡುಕೊಂಡಿದ್ದಳು.

ಮಲ್ಲೇಶಿ ತಂದೆಯ ಪಕ್ಕದಲ್ಲಿ ಹಾಯಾಗಿ ಮಲಗಿದ್ದ. ಮೂಲೆಯಲ್ಲಿ ಮಲಗಿದ್ದ

ಮುದುಕಿ ನರಳುವುದು ನಡದೇ ಇತ್ತು. ನೀಲಿ, ಕೈಯಲ್ಲಿದ್ದ ಕೂಸನ್ನು ಹಾಸಿಗೆಯ ಮೇಲೆ ಮಲಗಿಸಿ, ಕಂದೀಲಿನ ದೀಪ ಸಣ್ಣದು ಮಾಡಿ, ನಿಧಾನವಾಗಿ ಹೋಗಿ ಗಂಡನ ಪಕ್ಕದಲ್ಲಿ ಕುಳಿತುಕೊಂಡಳು. ನೀಲಿಯ ಕೈ ತನ್ನ ಎದೆಯ ಮೇಲೆ ಬೀಳುವವರೆಗೂ, ಅವಳು ತನ್ನ ಪಕ್ಕದಲ್ಲಿ ಬಂದು ಕುಳಿತದ್ದು ಪುಲ್ಲಯ್ಯನಿಗೆ ತಿಳಿಯಲೇ ಇಲ್ಲ. ಪ್ರೀತಿ ತುಂಬಿದ ಕಣ್ಣುಗಳಿಂದ ನೋಡುತ್ತಾ, ಮಂದಹಾಸ ಬೀರುತ್ತಾ ಕುಳಿತ ಹೆಂಡತಿಯನ್ನು ಒಮ್ಮೆ ನೋಡಿದ ನಂತರ, ಪುನಃ ಅವಳ ಮುಖ ನೋಡುವ ಧೈರ್ಯ ಪುಲ್ಲಯ್ಯನಿಗಾಗ ಲಿಲ್ಲ. ನೀಲಿ, ಅವನ ಎದೆಯನ್ನು ಹಾಗೆಯೇ ಸವರುತ್ತಾ, ಅವನ ಗಿರಿಜಾಮೀಸೆಗಳನ್ನು ಹುರಿಮಾಡಲು ಕೈಚಾಚಿದಳು. ಹಾಗೆಯೇ ತನ್ನ ಮುಖವನ್ನು ಅವನ ಮುಖದ ಮೇಲಿಟ್ಟು, ಪುಲ್ಲಯ್ಯನ ಕಣ್ಣುಗಳಲ್ಲಿ ದೃಷ್ಟಿ ನಾಟಿಸಿದಳು. ಪುಲ್ಲಯ್ಯನ ಶರೀರ ಇದ್ದಕ್ಕಿದ್ದಂತೆ ಕಂಪಿಸಿತು. ಅವಳು ಅವನ ಪಕ್ಕಕ್ಕೆ ಸರಿದು, ಮೃದುವಾದ ಮತ್ತು ತೀರ ಸಹಜವಾದ ಧ್ವನಿಯಲ್ಲಿ, "ಇಷ್ಟೆಲ್ಲ ನಡೆದು ಊರಿನವರಿಗೆಲ್ಲ ಗೊತ್ತಾದರೂ, ನನ್ನ ಹತ್ತಿರ ಒಂದು ಮಾತೂ ಆಡಲಿಲ್ಲ ನೀನು"—ಎಂದು ಆಕ್ಷೇಪಿಸಿದಳು.

ಪುಲ್ಲಯ್ಯ ಕೂಡಲೇ ಮಾತನಾಡಲಿಲ್ಲ. ಯಾವುದೋ ಅಕ್ಷಮ್ಯ ಅಪರಾಧ ಎಸಗಿ ದಂತೆ ಅವನ ಮನಸ್ಸು ತುಯ್ದಾಡತೊಡಗಿತ್ತು. ಆದರೂ ಧೈರ್ಯ ತಂದುಕೊಂಡು "ಊರಿನಲ್ಲಿನ ಯಾರ ಬಗ್ಗೆಯೇ ಆಗಲಿ, ನನಗೆ ಯಾವ ಹೆದರಿಕೆಯೂ ಇಲ್ಲ"—ಎಂದು ಹೇಳಿದ.

ನೀಲಿ, ಗಂಡನ ತಲೆಯನ್ನು ತನ್ನ ವಕ್ಷಸ್ಥಳದ ಮೇಲಿಟ್ಟುಕೊಂಡು ಹಗುರವಾಗಿ ಅದುಮಿದಳು. ಇಬ್ಬರ ಹೃದಯಗಳನ್ನೂ ತುಂಬಿಕೊಂಡಿದ್ದ ಅಭಿಮಾನ–ಅನುರಾಗ ಗಳ ಕಟ್ಟೆಯೊಡೆದು, ಇಬ್ಬರ ಕಣ್ಣುಗಳಲ್ಲೂ, ಕಣ್ಣೀರು ಉಕ್ಕಿತು. ನೀಲಿ ಮೌನವಾಗಿ ಗೋಡೆಗೆ ಒರಗಿ ಕುಳಿತಾಗ, ಪುಲ್ಲಯ್ಯ ಅವಳ ತೊಡೆಯ ಮೇಲೆ ತಲೆ ಇಟ್ಟು ಮಲಗಿದ. ನೀಲಿ, ಗಂಡನ ಕಣ್ಣುಗಳನ್ನೇ ನೋಡುತ್ತಾ, "ನಾಳೆ ಮನಿ ಬಿಟ್ಟು ಹೋಗಬ್ಯಾಡ. ಸಿಟ್ಟು ನೆತ್ತಿಗೆ ಏರಿದರ, ಮನುಷ್ಯ ಪಶು ಆಗ್ತಾನಂತ. ಆಯ್ತು, ನಮ್ಮ ಹಣೆ ಬರಹ ಸರಿಯಿಲ್ಲ, ಯಾರೇನು ಮಾಡಲಿಕ್ಕಾಗ್ತದ...... ನಮ್ಮ ಕೈಕಾಲು ಗಟ್ಟಿಯಾಗಿ ಇರೋವರೆಗೂ, ಜೀವನ ನಡೆಸೋದು ಮಹಾ ಕಷ್ಟ ಏನಲ್ಲ."

ಅವಳಿಗೆ ದುಃಖ ಉಮ್ಮಳಿಸಿ ಬಂದದ್ದರಿಂದ, ಮುಂದೆ ಮಾತನಾಡಲಿಲ್ಲ. ಆದರೆ ಅವಳ ಕಣ್ಣೀರು ಹರಿದು, ಪುಲ್ಲಯ್ಯನ ಮೇಲೆ ಬಿತ್ತು. ಅವಳ ಹೃದಯದ ಕೊರಗನ್ನು ಆಗಲೇ ಅರ್ಥಮಾಡಿಕೊಂಡಿದ್ದ ಪುಲ್ಲಯ್ಯ "ನಮಗ ಅನ್ಯಾಯ ಆಗಿದ್ದು, ನಾಲ್ಕು ಜನರಿಗೆ ಗೊತ್ತಾಗೋದು ಒಳ್ಳೆಯದಲ್ಲೇನs"—ಎಂದು ಹೆಂಡತಿಯನ್ನು ಕೇಳಿದ.

"ನೋಡು, ನನ್ನ ಸಲುವಾಗಿ ಅಲ್ಲದಿದ್ದರೂ, ಈ ಮಕ್ಕಳ ಮುಖ ನೋಡಿ, ನೀನು ನಿನ್ನ ಸಿಟ್ಟು ನುಂಗಿಕೊಂಡರ ಹ್ಯಾಂಗೊ ಬದುಕಿಕೊಳ್ಳಬಹುದು. ಈ ಆಸ್ತಿ, ಯಾರಿಗೆ ಇರ್ತದ–ಯಾರಿಗಿಲ್ಲ. ಈ ಪ್ರಪಂಚದಾಗ ಯಾವುದೂ ಶಾಶ್ವತವಲ್ಲ. ನಮ್ಮ

ಒಳ್ಳೆಯತನ, ನಮ್ಮ ಸತ್ಕಾರ್ಯಗಳು ಮಾತ್ರ ಶಾಶ್ವತವಾಗಿ ಉಳೀತಾವ. ಒಂದು ಕಣ್ಣು ನೀರು ಸುರಿಸುತ್ತಿರುವಾಗಲೇ, ಇನ್ನೊಂದು ಕಣ್ಣಿನಿಂದ ನಗೋದನ್ನ ಕಲೀಬೇಕು. ಆಗ ಮಾತ್ರ, ಈ ಪ್ರಪಂಚದಾಗ ಬದುಕಬಹುದು—ಇದಕ್ಕೂ ಮೀರಿ ನಿನ್ನ ಇಷ್ಟ. ನಿನಗ ಹ್ಯಾಂಗ ಸರಿ ಕಾಣ್ತದೊ ಹಾಂಗ ಮಾಡು"—ಎಂದು ಹೇಳಿ, ನೀಲಿ ಮೌನ ವಹಿಸಿದಳು. ಸ್ವಲ್ಪ ಹೊತ್ತು ಹಾಗೆಯೇ ಕುಳಿತಿದ್ದು, ಆ ಮೇಲೆ ಎದ್ದು ಹೋಗಿ, ಮಂಚದ ಮೇಲೆ ಮಲಗಿದ್ದ ಕೂಸಿನ ಪಕ್ಕದಲ್ಲಿ ಉರುಳಿದಳು.

ಬೆಳಗಾಯಿತು. ಪೂರ್ವದಲ್ಲಿನ ರವಿ, ನಿಧಾನವಾಗಿ ಆಗಸದ ಮೆಟ್ಟಲನ್ನು ಏರ ತೊಡಗಿದ. ಪುಲ್ಲಯ್ಯನಿಗೆ, ರಾತ್ರಿ ನಡೆದುದೆಲ್ಲ ಒಂದು ಕನಸಿನಂತೆ ಭಾಸವಾಯಿತು. ಹೆಂಡತಿ ಕೊಟ್ಟ ಗಂಜಿ ಕುಡಿದ. ತಣ್ಣಗಾದ ಅಂಬಲಿಯನ್ನು ಹೊಟ್ಟೆಗೆ ಸುರಿದುಕೊಂಡ. ಆಗಲೇ, ಪುಲ್ಲಯ್ಯನಿಗೂ, ರಾಜಣ್ಣನಿಗೂ, ಇಂದು ಏನೋ ನಡೆಯಲಿದೆ ಎಂದು ಊರಿನ ತುಂಬ ಸುದ್ದಿ ಹರಡಿತ್ತು. ತಲೆಗಳು ಒಡೆಯುವವೆಂದು ಕೆಲವರು ಆಗಲೇ ಅಂದಾಜು ಮಾಡಿದ್ದರು. ಪುಲ್ಲಯ್ಯ, ಹೊಲಕ್ಕೆ ಹೋಗದಿದ್ದರೆ?—ಎಂದು ಒಂದು ನಿಮಿಷ ಆಲೋಚಿಸಿದ. ಹಾಗಾದಲ್ಲಿ, ಮುಖದ ಮೇಲಿನ ಈ ಮೀಸೆ ಬೋಳಿಸಿಕೊಂಡು ಮನೆಯಲ್ಲೆ ಕೂಡಬೇಕಾಗುತ್ತದೆಂಬ ಯೋಚನೆ ಬಂತು. "ಛೆ, ಸತ್ತರೆ ಸತ್ತೆ. ಹೆಣ್ಣಿನ ಹಾಂಗ ಮನಿ ಒಳಗ ಕುಡೋದು ನನಗ—ಮಲ್ಲಯ್ಯನ ಮಗ ಪುಲ್ಲಯ್ಯಗ—ಶೋಭಾಯಮಾನವಲ್ಲ. ಗಂಡಸಾಗಿ. ಸವಾಲು ಹಾಕೀನಿ. ಹೊಲದಾಗ ನೇಗಿಲು ಹೂಡಿದರ ಯಾರೇನು ಮಾಡ್ತಾರೊ ನೋಡ್ತೀನಿ—ಅಂತ ಪೌರುಷ ಹೇಳಿಕೊಂಡು, ಈಗ ಅಡಿಗಿ ಮನಿ ಒಳಗ ಕೂತರ ನಾಲ್ಕು ಜನರು ಏನು ಅಂದುಕೊಂಡಾರು. ಏನಃ ಆಗಲಿ, ಎಂತಹ ಕಷ್ಟರ ಬರಲಿ, ನಾನು ಮಾತ್ರ ಹೋಗಬೇಕು"—ಎಂದು ಪುಲ್ಲಯ್ಯ ತೀರ್ಮಾನಿಸಿದ.

ಕೊಂಕಳದಲ್ಲಿ ಕೋಲನ್ನು ಇಟ್ಟುಕೊಂಡ. ನೇಗಿಲನ್ನು ಎತ್ತಿ ಭುಜದ ಮೇಲಿಟ್ಟು ಕೊಂಡು, ಎತ್ತುಗಳನ್ನು ಹೊಡೆದುಕೊಂಡು ಮುಂದೆ ಹೊರಟ. ನೀಲಿ, ಮೌನವಾಗಿ ನಿಂತು, ತನ್ನ ಗಂಡನ ಚಲನವಲನಗಳನ್ನು ಗಮನಿಸಿದಳು. ಆದರೆ, ಪುಲ್ಲಯ್ಯ, ಒಂದು ಸಲವೂ ಹೆಂಡತಿಯನ್ನು ಕಣ್ಣೆತ್ತಿ ನೋಡಲಿಲ್ಲ. ಒಳಗೆ ಮಂಚದ ಮೇಲೆ ಮಲಗಿಸಿದ್ದ ಕೈಕೂಸು ಜೋರಾಗಿ ಅಳುತ್ತಿತ್ತು. ಜ್ವರದಿಂದ ತೀರ ಅಶಕ್ತಳಾಗಿದ್ದ ಮುದುಕಿ ಮರಿಮೊಮ್ಮಗನನ್ನು ಹಿಡಿದುಕೊಳ್ಳಲು ಪ್ರಯಾಸಪಡುತ್ತಿದ್ದಳು. ಆದರೆ, ಮಲ್ಲೇಶಿ, ಅವಳ ಕೂದಲು ಹಿಡಿದೆಳೆದು, ಅವಳ ಕೈಯಿಂದ ಜಾರಿಕೊಂಡು, ತಂದೆಯ ಹಿಂದೆ ಹೊರಟ. ನೀಲಿ, ಏನೋ ಹೊಳೆದಂತೆ ಓಡಿಹೋಗಿ, ಗಂಡನ ಕೊಂಕಳದಲ್ಲಿದ್ದ ಕೋಲನ್ನು ಓಡಿದಳು. ಪುಲ್ಲಯ್ಯ, ಸರಕ್ಕನೆ ಹಿಂದಿರುಗಿದಾಗ, ಅವನ ಭುಜದ ಮೇಲಿದ್ದ ನೇಗಿಲು, ನೀಲಿಯ ತಲೆಗೆ ಬಿರುಸಾಗಿ ಬಡಿಯಿತು. ಪುಲ್ಲಯ್ಯ ಒಂದು ಸಲ ಅವಳನ್ನೆ ದೃಷ್ಟಿಸಿ ನೋಡಿದ. ಅವಳು ಹಿಡಿದುಕೊಂಡಿದ್ದ ಕೋಲನ್ನು ಅವಳ ಕೈಯಲ್ಲೆ

ಬಿಟ್ಟು, ಮತ್ತೆ ಮುಂದೆ ಹೊರಟ. ಅವನ ಶರೀರ ಹಾಗೆ ಮುಂದೆ ಮುಂದೆ ಹೋಗು ತ್ತಿತ್ತಾದರೂ, ಅವನ ಒಳಮನಸ್ಸು ಹಿಂದೆ ನೋಡುತ್ತಿತ್ತು. ಅವನ ಹೃದಯ ಹಿಂದೆ ಉಳಿದಿತ್ತು.

ಪುಲ್ಲಯ್ಯ, ಹೊಲದ ಒಡ್ಡನ್ನು ಏರಿದ. ಅವನು ಚಿಕ್ಕವನಾಗಿದ್ದಾಗಿನಿಂದಲೂ, ಈ ಹೊಲ, ಈ ಹೊಲದ ಒಡ್ಡು ನನ್ನದು, ನನಗೆ ಸೇರಿದ್ದು—ಎಂಬ ಭಾವನೆ ಅವನ ಮನಸ್ಸಿನಲ್ಲಿ ಮೂಡಿತ್ತು. ಆದರೆ ಈಗ......

ಎತ್ತುಗಳಿಗೆ ಮತ್ತು ಇತರ ದನಕರುಗಳಿಗೆ, ಇದೇ ಒಡ್ಡಿನ ಮೇಲೆ ಬೆಳೆದ ಹುಲ್ಲನ್ನು ಕುಯ್ದು ಹಾಕಿದ್ದ. ತನ್ನಂತೆ ತನ್ನ ಮಗನೂ ಸಹ, ಈ ಒಡ್ಡಿನ ಮೇಲೆ ಬೆಳೆಯುವ ಹುಲ್ಲನ್ನು ಕೊಯ್ದು, ದನಕರುಗಳಿಗೆ ಮೇವು ಹಾಕುವನೆಂದು ಪುಲ್ಲಯ್ಯ ನಂಬಿದ್ದ. ಆದರೆ, ಈಗ ಪರಿಸ್ಥಿತಿ ಬದಲಾಗಿತ್ತು. ಪುಲ್ಲಯ್ಯನಿಗೆ, ತನ್ನ ತಾಯಿ–ತಂದೆ ಬಗ್ಗೆ ಎಷ್ಟು ಪ್ರೀತಿ—ಮಮಕಾರವಿತ್ತೋ, ಅಷ್ಟೇ ಮಮಕಾರ ಈ ಭೂಮಿಯ ಮೇಲೂ ಇತ್ತು. ತನ್ನ ಮಾತೃಸಮಾನವಾದ ಈ ಭೂಮಿ, ತನ್ನದಲ್ಲವೆಂದು ಒಪ್ಪಿಕೊಳ್ಳಲು ಅವನ ಮನಸ್ಸು ಹಿಂಜರಿದಿತ್ತು. ಅವನ ದೃಷ್ಟಿಯಲ್ಲಿ ಇದೆಲ್ಲವೂ ಅಸಮಂಜಸ ವಾಗಿತ್ತು.

ಪುಲ್ಲಯ್ಯ, ಭುಜದ ಮೇಲಿನ ನೇಗಿಲನ್ನು ಕೆಳಗಿಟ್ಟ. ತಂದೆಯ ಹಿಂದೆ ಓಡಿ ಬಂದಿದ್ದ ಮಲ್ಲೇಶಿ, ಕೈಯಲ್ಲಿ ಒಂದು ಬಿದಿರಿನ ತುಂಡನ್ನು ಹಿಡಿದುಕೊಂಡು, ಎತ್ತುಗಳನ್ನು ನಿಲ್ಲಿಸಿದ. ಪುಲ್ಲಯ್ಯ, ಹೊಲದ ಪೂರ್ವದಿಕ್ಕಿನತ್ತ ಹೋಗಿ, ದೇವರನ್ನು ಸ್ಮರಿಸಿ ನೇಗಿಲು ಹೂಡಿದ. ಅಷ್ಟರಲ್ಲೆ, ಅದೆಲ್ಲಿಂದಲೋ ಓಡಿಬಂದ ನರಸಿಂಹ—"ಲೇ, ಪುಲ್ಲಯ್ಯಾ, ಅವರು ಐದಾರು ಜನ ಕೋಲು ಹಿಡಕೊಂಡು ಇತ್ಲಾಗ ಬರೋದನ್ನ ನೋಡಿದೆ. ನನ್ನ ಮಾತು ಕೇಳು. ಸುಮ್ಮನೆ ಹೊಲ ಬಿಟ್ಟು ಕೊಡು. ಅವರು ಬಂದರ ಇಲ್ಲದ ಅನಾಹುತ ಆದೀತು. ಬಾ, ನನ್ನ ಜತಿ ಬಂದುಬಿಡು...... ಅಗ, ಅವರು ಬಂದೇಬಿಟ್ಟರು...... ಆ ಮಾವಿನ ತೋಪು ದಾಟಿದರಲೇ, ಇನ್ನೇನು ಇಲ್ಲಿಗೆ ಬಂದೇ ಬಿಡ್ತಾರ...... ನಮ್ಮಪ್ಪ ಪುಲ್ಲಯ್ಯ, ನನ ಮಾತು ಕೇಳು; ಬೇಕಾದರ ನಿನ್ನ ಕಾಲು ಹಿಡಕೋತೀನಿ, ನನ್ನ ಜತಿ ಬಂದುಬಿಡು......"

ನರಸಿಂಹ ಭಯಭೀತನಾಗಿ ಅಂಗಲಾಚಿದ. ಆದರೆ, ಪುಲ್ಲಯ್ಯ, ಅವನ ಯಾವ ಮಾತಿಗೂ ಕಿವಿಗೊಡದೆ, ಹೊಲ ಉಳುತ್ತಿದ್ದ. ಅಷ್ಟರಲ್ಲಿ, ರಾಜಣ್ಣ ಮತ್ತು ಅವನ ಸಂಗಡಿಗರು ಅಲ್ಲಿಗೆ ಬಂದರು. ಒಬ್ಬರಲ್ಲ–ಇಬ್ಬರಲ್ಲ; ಎಂಟು ಹತ್ತು ಜನರು ಒಟ್ಟಿಗೆ ಬಂದು, ಹೊಲದ ಸುತ್ತಲೂ ನಿಂತರು. ನರಸಿಂಹ ಅವರನ್ನು ನೋಡಿ, "ಒಬ್ಬನನ್ನು ಹೊಡೀಲಿಕ್ಕೆ ಇಷ್ಟು ಮಂದಿ ಬರಬೇಕs...... ನೀವೆಂತಹ ಗಂಡಸರು...... ಎಂತಹ ಮನುಷ್ಯರು...... ಥೂ ನಿಮ...... ಈ ಊರಿನ್ಯಾಗ ನ್ಯಾಯ—ಅಂಬೋದು ಎಂದೊ ಮಣ್ಣುಪಾಲಾಯಿತು"—ಎಂದೆಲ್ಲಾ ಕೂಗಿಕೊಂಡ.

ರಾಜಣ್ಣ, ಅಹಂಕಾರದಿಂದ ಹೊಲದಲ್ಲಿ ಕಾಲಿಟ್ಟು, ನಿರ್ಲಕ್ಷ್ಯ ಭಾವನೆಯಿಂದ ನರಸಿಂಹನನ್ನು ಹೊರಕ್ಕೆ ತಳ್ಳಲು ಮುಂದೆ ಹೋದ. ನರಸಿಂಹ ಅವನ ಕೈಗೆ ಸಿಗದೆ, ಮಲ್ಲೇಶಿಯನ್ನು ಎತ್ತಿಕೊಂಡು, ತಾನಾಗಿ ಆಚೆಗೆ ಹೊರಟುಹೋದ. ಮಲ್ಲೇಶಿ ಅಳುತ್ತಾ, ಕೊಸರಾಡುತ್ತಾ ನರಸಿಂಹನ ಕೈಯಿಂದ ತಪ್ಪಿಸಿಕೊಂಡು ಮತ್ತೆ ಹೊಲ ದೊಳಗೆ ಓಡಹತ್ತಿದ. ಹಾಗೆ ಓಡುತ್ತಿದ್ದಾಗ ಅವನು ಕಟ್ಟಿಕೊಂಡಿದ್ದ ತುಂಡು ಪಂಚೆ ಬಿಚ್ಚಿತಾದರೂ, ಅದನ್ನು ಹಾಗೆಯೇ ಹಿಡಿದುಕೊಂಡು, ಓಡಿಹೋಗಿ ತಂದೆಯ ಹಿಂದೆ ನಿಂತ. ನರಸಿಂಹ ಅವನನ್ನು ಎತ್ತಿಕೊಳ್ಳಲು ಮತ್ತೆ ಹೊಲದಲ್ಲಿ ಕಾಲಿಟ್ಟಾಗ, ರಾಜಣ್ಣ ಅವನನ್ನು ಹೊರಕ್ಕೆ ತಳ್ಳಿದ. ನರಸಿಂಹ, ಹೊಲದ ಒಡ್ಡಿನ ಮೇಲೆ ನಿಂತುಕೊಂಡೇ, "ಅಪ್ಪಾ—ಪುಲ್ಲಯ್ಯಾ, ನನ ಮಾತು ಕೇಳು, ಹಠಮಾಡಬ್ಯಾಡ......" ಎಂದು ಕೂಗುತ್ತಲೇ ಇದ್ದ.

ರಾಜಣ್ಣ ಎತ್ತುಗಳಿಗೆ ಎದುರಾಗಿ ಹೋಗಿ ಅವನ್ನು ತಡೆದ. ಪುಲ್ಲಯ್ಯ, ಬಾರು ಕೋಲಿನಿಂದ ಎತ್ತುಗಳಿಗೆ ಹೊಡೆದು, ಅವನ್ನು ಮುಂದಕ್ಕೆ ಓಡಿಸಲು ಪ್ರಯತ್ನಿಸಿದ. ಎತ್ತುಗಳು ಮುಂದೆ ಹೊರಟಾಗ, ಕೋಲು ಹಿಡಿದುಕೊಂಡಿದ್ದ ಇನ್ನೂ ಇಬ್ಬರು ಬಂದು, ಎತ್ತುಗಳ ಕುತ್ತಿಗೆಗೆ ಕಟ್ಟಲಾಗಿದ್ದ ನೊಗ ಬಿಚ್ಚಿದರು. ಪುಲ್ಲಯ್ಯ ಅವಡು ಗಚ್ಚಿದ. ತನ್ನನ್ನು ಸುತ್ತುವರಿದು ನಿಂತಿದ್ದ ಜನರು ಅವನ ಕಣ್ಣಿಗೆ ಬೀಳಲೇ ಇಲ್ಲ. ಮೈಯಲ್ಲಿ ಕಾವೇರಿದಂತಾಗಿ ಕಣ್ಣು ಕೆಂಪಾದವು. ರೇಗಿದ ಕಣ್ಣುಗಳಿಂದ, ಮುಂದೆ ನಿಂತಿದ್ದ ರಾಜಣ್ಣನನ್ನು ದುರುಗುಟ್ಟಿ ನೋಡಿದ. ಕಣ್ಣುಗಳೇನಾದರೂ ಮಸುಕು ಗಟ್ಟಿವೆಯೋ ಏನೋ ಎಂದು, ಕಣ್ಣುಗಳನ್ನು ತಿಕ್ಕಿಕೊಂಡು ಮತ್ತೆ ನೋಡಿದ—ಎದುರಿಗೆ ನೀಲಿ ನಿಂತಿದ್ದು ಸ್ಪಷ್ಟವಾಗಿ ಕಂಡಿತು. ಎತ್ತುಗಳನ್ನು ಬಿಡಿಸಿದ್ದು, ರಾಜಣ್ಣನಲ್ಲ ತನ್ನ ಹೆಂಡತಿ—ನೀಲಿ—ನೀಲಮ್ಮ......

ಪುಲ್ಲಯ್ಯನ ಹುಮ್ಮಸ್ಸು, ಕೋಪ, ನಿಮಿಷಾರ್ಧದಲ್ಲಿ ಇಳಿದುಹೋಯಿತು. ಪಕ್ಕ ದಲ್ಲಿ ಬಂದು ನಿಂತಿದ್ದ ಮಗನನ್ನು ನೋಡಿ, ಅವನು ಮತ್ತಷ್ಟು ಅಸಹಾಯಕನಾದ. ಕೈಯಲ್ಲಿ ಕೋಲಿದ್ದ ಪಕ್ಷದಲ್ಲಿ, ಅವನು ಏನು ಮಾಡುತ್ತಿದ್ದನೊ–ಏನೊ? ಆದರೆ, ಈಗ ಮಾತ್ರ ಅವನು ಹತಾಶನಾಗಿದ್ದ.

ರಾಜಣ್ಣ, ಎತ್ತುಗಳನ್ನು ಹೊಲದಿಂದ ಹೊರ ಓಡಿಸಿದ. ಇದನ್ನು ನೋಡಿದ ಮಲ್ಲೇಶಿಗೆ ಎಲ್ಲಿಲ್ಲದ ಸಾಹಸ ಬಂದು, "ಯಾರೆಲೆ ನೀನು, ನಮ್ಮ ಎತ್ತುಗಳಿಗೆ ಹೊಡೆ ಯುವವ"—ಎಂದು ಜೋರಾಗಿ ಕೇಳುತ್ತಾ, ಕೈಯಲ್ಲಿದ್ದ ಬಿದಿರಿನ ತುಂಡಿನಿಂದ, ರಾಜಣ್ಣನಿಗೆ ಒಂದೇಟು ಬಿಗಿದ. ರಾಜಣ್ಣ ಸಿಟ್ಟಿನಿಂದ ಅವನನ್ನು ಹಿಡಿದುಕೊಂಡಾಗ, ಮಲ್ಲೇಶಿ ಅವನ ಕೈ ಕಡಿದು, ಅವನಿಂದ ಬಿಡಿಸಿಕೊಂಡು, ಪುಲ್ಲಯ್ಯನ ಹಿಂದೆ ಹೋಗಿ ನಿಂತ.

ಉಗ್ರನಾದ ರಾಜಣ್ಣ, "ಹೊಲ ಬಿಟ್ಟು ಹೋಗ್ತೀಯೋ ಇಲ್ಲೊ" ಎಂದು ಅರಚಿದ.

ಪುಲ್ಲಯ್ಯನ ನರನರವೂ ಉಬ್ಬಿ, ಅವನು ನಿಂತಲ್ಲಿಂದ ಪುಟಿದು, ರಾಜಣ್ಣನನ್ನು ಹಿಡಿದುಕೊಳ್ಳಲು ಹವಣಿಸಿದ. ಆದರೆ ಕಾಲು ಜಾರಿ ನೆಲಕ್ಕೆ ಬಿದ್ದ. ಕೂಡಲೇ ಸಾವರಿಸಿಕೊಂಡು ಎದ್ದು ರಾಜಣ್ಣನತ್ತ ಧಾವಿಸಿದಾಗ, ಮೂವರು ಮುಂದೆ ಬಂದು ಆತನನ್ನು ತಡೆದು, "ಮುಂದ ಹೆಜ್ಜಿ ಇಟ್ಟರ ನಿನ್ನ ತಲಿ ಎರಡು ಹೋಳಾಗ್ತದ" ಎಂದು ಎಚ್ಚರಿಕೆ ನೀಡಿದರು.

ಪುಲ್ಲಯ್ಯ, ನಿಂತಲ್ಲಿಂದಲೇ, ಆ ಮೂವರು ಹಿಡಿದುಕೊಂಡಿದ್ದ ಕೋಲುಗಳ ಮಧ್ಯದಿಂದ ಆಚೆಯ ವ್ಯಕ್ತಿಯನ್ನು ನೋಡಿದ. ಅಲ್ಲಿ ಎಷ್ಟೋ ಜನರು ನಿಂತಿದ್ದರು. ರಾಜಣ್ಣನೂ ನಿಂತಿದ್ದ. ಆದರೆ ಪುಲ್ಲಯ್ಯನಿಗೆ ಮಾತ್ರ, ನೀಲಿ ಒಬ್ಬಳೆ ಕಾಣಿಸಿದಳು.

ಪುಲ್ಲಯ್ಯನನ್ನು ತಡೆದ ಮೂವರ ಪೈಕಿ ಇಬ್ಬರು, ಪುಲ್ಲಯ್ಯನ ಎರಡೂ ಕೈಗಳನ್ನು ಹಿಡಿದುಕೊಂಡರು. ಮೂರನೆಯವನು, ಮಲ್ಲೇಶಿಯನ್ನು ಹಿಡಿದುಕೊಂಡ. ರಾಜಣ್ಣನ ಆಜ್ಞೆಯ ಮೇರೆಗೆ, ಅವರನ್ನು ಹೊಲದ ಆಚೆ ಕಳುಹಿಸಲು ಅವರು ಮುಂದಾದಾಗ, ಪುಲ್ಲಯ್ಯ, ಆ ಹೊಲದ ಮಣ್ಣನ್ನು ಎತ್ತಿ ಅದಕ್ಕೆ ಮುದ್ದಿಟ್ಟ. ಮಲ್ಲೇಶಿ, ತಂದೆಯನ್ನು ಅನುಸರಿಸಿ, ಹೊಲದ ಮಣ್ಣಿನ ಒಂದು ಹೆಂಟೆಯನ್ನು ಎತ್ತಿಕೊಂಡು ಕಣ್ಣಿಗೆ ಒತ್ತಿಕೊಂಡ. ಅದರೊಡನೆ, ತಾತಮುತ್ತಾತರ ಕಾಲದಿಂದ ಬೆವರು ಸುರಿಸಿ ಬೆಳೆ ತೆಗೆದ ಭೂಮಿಗೂ, ಅವರಿಗೂ ಇದ್ದ ಋಣ ತೀರಿತು. ನರಸಿಂಹ ಮುಂದೆ ಬಂದು, ಪುಲ್ಲಯ್ಯನ ಕಣ್ಣುಗಳಲ್ಲಿ ನೀರಾಡಿದ್ದನ್ನೂ ನೋಡಿ, "ಪುಲ್ಲಯ್ಯ, ಹುಲಿಯಂತಹ ಮನುಷ್ಯ ನೀನು—ಈಗ ಇಲಿ ಆದೆಲ್ಲೊ. ಏನು ಗತಿ ಬಂತಪ್ಪಾ ನಿನಗ......" ಎಂದು ಹಣೆ ಜಜ್ಜಿಕೊಂಡು ಗಟ್ಟಿಯಾಗಿ ಅಳಹತ್ತಿದ.

## [ 20 ]

ಆ ದಿನ ಮಧ್ಯಾಹ್ನವೆಲ್ಲ—ಬಿಸಿಲಿನ ಧಗೆ ತುಂಬ ತೀವ್ರವಾಗಿತ್ತು. ಸಂಜೆಯ ವೇಳೆಗೆ ಆಕಾಶದಲ್ಲೆಲ್ಲಾ ಮೋಡಗಳು ಕವಿದು, ಹನಿ ಉದುರಿದವು. ಆದರೆ, ಹಿಂದೆಯೇ ಬಿರುಸಾದ ಗಾಳಿ ಬಿಟ್ಟಾಗ, ಮೋಡಗಳು ಚದುರಿಕೊಂಡು ದೂರದ ಗುಡ್ಡಗಳತ್ತ ಧಾವಿಸಿದವು. ಅಂದು ರಾತ್ರಿ, ಗುಡ್ಡದ ನೆರಳಿನಲ್ಲಿದ್ದ ಪ್ರದೇಶದಲ್ಲಿ ಮಾತ್ರ ಚೆನ್ನಾಗಿ ಮಳೆಯಾಯಿತು.

ನೀಲಮ್ಮಳ ಗುಡಿಯ ಸಮೀಪದಲ್ಲಿನ ಹಾಸುಕಲ್ಲಿನ ಮೇಲೆ ಕುಳಿತು ಕುಡ್ಡ ವೆಂಕಣ್ಣ, ಏನನ್ನೊ ಯೋಚಿಸುತ್ತಿದ್ದ. ತನ್ನನ್ನು ಗುಡಿಯ ಬಳಿ ಬಿಡುವಂತೆ ಗೌರಮ್ಮಳಿಗೆ ಹೇಳಿದಾಗ, ಅವಳು ಕರೆದುಕೊಂಡು ಬಂದು ಅಲ್ಲಿ ಕೂಡಿಸಿ ತನ್ನ ಪಾಡಿಗೆ ತಾನು

ಹೊರಟುಹೋಗಿದ್ದಳು. ಕೋಲನ್ನು ಮುಂದೆ ಹಾಕಿಕೊಂಡು ಕುಳಿತಿದ್ದ ವೆಂಕಣ್ಣ, ತನ್ನದೇ ಯೋಚನೆಯಲ್ಲಿ ಮಗ್ನನಾಗಿದ್ದ.

ಯಾರದೊ ಕಾಲಿನ ಸಪ್ಪಳವಾದಾಗ, "ಯಾರವರು?"—ಎಂದು ಕೇಳಿದ ವೆಂಕಣ್ಣ. "ಯಾಕಲೇ ಕುಡ್ಡಾ, ಕತ್ತಲಾತು ಇನ್ನೂ ಇಲ್ಲಿ ಯಾಕ ಕೂತೀದಿ"—ಎಂದು ಸಂಜೀವಿ ಕೇಳಿದ.

"ಏನಿಲ್ಲ, ರಾಮದಾಸು ಏನಾದರೂ ಬಂದರ, ದೇವಿ ಪೂಜಾ ಮಾಡ್ತಾನು. ಹಾಂಗs ದೇವರಿಗೆ ನಮಸ್ಕಾರ ಹಾಕ್ಕೊಂಡು ಹೋಗೋಣ ಅಂತ ಕೂತೀನಿ......"

"ಅವನೇನು ಬರ್ತಾನೊ, ಏನಿಲ್ಲೊ? ಹೊಟ್ಟಿಗಿಲ್ಲದ ಮೊದಲs ಅರೆಜೀವ ಆಗ್ಯಾನು; ಈಗಂತೂ ಜ್ವರದಿಂದ ನರಳಿ ಸಾಯೋ ಹಾಂಗ ಆಗ್ಯಾನ—ಬಾ, ಬಾ, ನಿನ್ನ ಅಲ್ಲಿವರೆಗೂ ಕರಕೊಂಡು ಹೋಗಿ ಬಿಡ್ತೀನಿ."

"ಇಲ್ಲ, ಬಿಡು ಸಂಜೀವ. ಆ ರಾಮದಾಸು, ಏನಾದರೂ, ಹ್ಯಾಂಗಿದ್ದರೂ ಇಲ್ಲಿಗೆ ಬಂದೆ ಬರ್ತಾನ"—ಎಂದು ಹೇಳಿ, ಕುಡ್ಡ ವೆಂಕಣ್ಣ ಅಲ್ಲಿಯೇ ಕುಳಿತುಬಿಟ್ಟ.

ನದಿಯ ನೀರು ಬಳಬಳ ಹರಿಯುತ್ತಿರುವುದು ಸ್ಪಷ್ಟವಾಗಿ ಕೇಳಿಸುತ್ತಿತ್ತು. ನದಿಯ ದಂಡೆಯ ಮೇಲೆ ಓಡಿಬರುತ್ತಿದ್ದ ಎತ್ತಿನ ಬಂಡಿಗಳ ಗಡಗಡ ಮತ್ತು ಆ ಎತ್ತಿನ ಕುತ್ತಿಗೆಗಳಿಗೆ ಕಟ್ಟಲಾಗಿದ್ದ ಗಂಟೆಗಳ ಝಣಝಣ—ಎಲ್ಲವೂ ಸ್ಪಷ್ಟವಾಗಿತ್ತು. ರಸ್ತೆಯಲ್ಲಿ ಹೋಗಿಬರುವ ಜನರ ಕೂಗಾಟ...... ಕೇಕೆಗಳು......ಇವೆಲ್ಲವನ್ನೂ ಮೀರಿಸಿ, ರಾಕ್ಷಸನಂತೆ ಮೇಲೆ ಬಿದ್ದು ಎಲ್ಲವನ್ನೂ ನುಂಗಲು ತವಕಿಸುತ್ತಿದ್ದ ಕಾರ್ಗತ್ತಲು......

ಯಾರೊ ತನ್ನತ್ತ ಬರುತ್ತಿರುವಂತೆ ಭಾಸವಾದಾಗ, ಕುಡ್ಡ ವೆಂಕಣ್ಣ, "ಯಾರದು?" ಎಂದು ಕೇಳಿದ.

ಉತ್ತರವಿಲ್ಲ.

"ಯಾರದು, ಹೆಸರು ಹೇಳ್ರಿ."

ಉತ್ತರವಾಗಿ, ಅಲ್ಲಿಗೆ ಬಂದ ವ್ಯಕ್ತಿ ನರಳಿದ.

ವೆಂಕಣ್ಣ, ತನ್ನ ಕಾಲ ಬಳಿ ಬಿದ್ದಿದ್ದ ಕೋಲನ್ನು ಎತ್ತಿ, "ನೀವು ನಿಮ್ಮ ಹೆಸರು ಹೇಳದಿದ್ದರ, ಈ ಕೋಲು ನಿಮ್ಮ ತಲಿ ಒಡೀತದ"—ಎಂದು ಬೆದರಿಸಿದ.

"ನಾನೊ...... ದಾಸು."

"ನೀನs, ಅಯ್ಯೋ ಮಾರಾಯ, ಕೇಳಿದ್ದಕ್ಕ ಉತ್ತರ ಕೊಡದ ತಲಿ ಒಡಿಸಿಕೊಳ್ತಿದ್ದಿ ......ಆ ರಾಜಣ್ಣ—ಬೋಳಣ್ಣ ಇತ್ತಲಾಗ ಬರ್ತಾನಂತ ಕಾದುಕೊಂಡು ಕೂತೀನಿ" ಎಂದು, ಇದ್ದುದನ್ನು ಇದ್ದಂತೆ ಹೇಳಿದ ವೆಂಕಣ್ಣ.

ರಾಮದಾಸು, ಯಾವ ಮಾತೂ ಆಡದೆ, ಗುಡಿಯ ಬಾಗಿಲು ತೆಗೆದ. ಆ ಅವೇಳೆಯಲ್ಲೂ ಸ್ನಾನ ಮಾಡಿ, ಹರಿದು ಹೊಲಸಾದ ಬಟ್ಟೆಯ ತುಂಡೊಂದನ್ನು ಟೊಂಕಕ್ಕೆ

ಸುತ್ತಿಕೊಂಡು ಬಂದ. ಮಧ್ಯಾಹ್ನ, ಆ ಹರಕಲು ಬಟ್ಟೆಗಳಲ್ಲಿಯೇ ಮಗನ ಮನೆಯನ್ನು ಬಿಟ್ಟು ಬಂದಿದ್ದ. ರಾಮದಾಸು, ಜ್ವರದಿಂದ ನರಳುತ್ತಾ ಅರ್ಧ ಪ್ರಜ್ಞಾವಸ್ಥೆಯ ಲ್ಲಿದ್ದಾಗ, ಅವನ ಮಗ, ಊರಿನವರು ಚಂದಾ ಹಾಕಿ ಕೊಟ್ಟಿದ್ದ ನೇರಳೆ ಬಣ್ಣದ ಜರತಾರಿ ಅಂಚಿನ ಮಡಿಯನ್ನು ಕಳವು ಮಾಡಿ, ಶೆಟ್ಟಿಗೆ ಮಾರಿ, ಬಂದ ದುಡ್ಡಿನಲ್ಲಿ ಹೆಂಡ ಕುಡಿದಿದ್ದ. ಮುದಿ ರಾಮದಾಸುವಿಗೆ ಎಚ್ಚರ ಬಂದಾಗ, ತನ್ನ ಜರತಾರಿ ಅಂಚಿನ ಪಂಚೆಯನ್ನು ಯಾರೊ ಲಪಟಾಯಿಸಿದ್ದು ತಿಳಿಯಿತು. ಅದರಿಂದ ಅವನಿಗಾದ ವ್ಯಸನ ಅಷ್ಟಿಷ್ಟಲ್ಲ. ಆ ವ್ಯಸನದಿಂದ ಅವನ ಜ್ವರ ಮತ್ತಷ್ಟು ಹೆಚ್ಚಿತ್ತು. ಏಳಲು ಕೂಡ ಕೈಲಾಗದಷ್ಟು ನಿತ್ರಾಣ ಅವನನ್ನು ಆವರಿಸಿತ್ತಾದರೂ, ಬದುಕಿರುವವರೆಗೆ, ತಾಯಿ ನೀಲಮ್ಮಳಿಗೆ ಕೈಲಾದ ಸೇವೆ ಸಲ್ಲಿಸಬೇಕೆಂಬ ಹಠದಿಂದ, ಇದ್ದಬದ್ದ ಹರಕು ಪಂಚೆಯನ್ನೇ ಉಟ್ಟುಕೊಂಡು ಮನೆಯಿಂದ ಹೊರಟಿದ್ದ. ನಾಲ್ಕು ಹೆಜ್ಜೆ ನಡೆಯು ವುದರೊಳಗಾಗಿ ಆಯಾಸವಾದಾಗ, ರಸ್ತೆಯ ಪಕ್ಕದಲ್ಲಿ ಕುಳಿತು ವಿಶ್ರಾಂತಿ ಪಡೆದಿದ್ದ. ಏಳುತ್ತಾ, ಕೂಡುತ್ತಾ, ಅದು ಹೇಗೊ ಗುಡಿಯ ವರೆಗೆ ಬಂದಿದ್ದ. ಆ ವೇಳೆಗೆ ಆಯಾಸ ಮಿತಿಮೀರಿದ್ದರಿಂದ, ಕುಡ್ಡ ವೆಂಕಣ್ಣನಿಗೆ ಉತ್ತರ ನೀಡಿರಲಿಲ್ಲ.

ರಾಮದಾಸು, ದೇವಿಯ ಮುಂದೆ ದೀಪ ಹಚ್ಚಿ ಹಾಗೆಯೇ ಸ್ವಲ್ಪ ಹೊತ್ತು ಕುಳಿತು ಬಿಟ್ಟ. ಮೊದಲಿನಂತೆ ದೇವಿಯನ್ನು ಸ್ತುತಿಸುವ, ಆರಾಧಿಸುವ ಶಕ್ತಿಯೂ ಸಹ ಅವನಲ್ಲಿ ಉಳಿದಿರಲಿಲ್ಲ. ನೆರೆತ ಕೂದಲು, ಹಣ್ಣಾದ ಗಡ್ಡ—ಅವುಗಳ ನಡುವೆ ಆಯಾಸದಿಂದ ಒಣಗಿದ ಮುಖ—ಬೊಚ್ಚುಬಾಯಿ, ಒಳಕ್ಕೆ ಇಂಗಿಹೋಗಿದ್ದ ಕಣ್ಣು ಗಳು—ಗೋಡೆಗೆ ಒರಗಿ ಕುಳಿತಿದ್ದ ರಾಮದಾಸು, ಹಾಗೆಯೇ ನೆಲದ ಮೇಲೆ ಮಲಗಿದ.

ಕುಡ್ಡ ವೆಂಕಣ್ಣ ತಡವರಿಸಿಕೊಂಡು ಬಂದು, ಗರ್ಭಗುಡಿಯ ಬಾಗಿಲ ಬಳಿ ಕುಳಿತ. ಒಳಗಿನಿಂದ, ರಾಮದಾಸು ನರಳುತ್ತಿರುವುದು ಅವನಿಗೆ ಕೇಳಿಸಿತು.

"ಅಯ್ಯಾ, ರಾಮದಾಸು"—ಎಂದು ವೆಂಕಣ್ಣ ಕರೆದಾಗ, ರಾಮದಾಸು ಸಮಾಧಾನ ದಿಂದಲೇ 'ಹೂಂ'ಗುಟ್ಟಿದ.

"ಆ ಪಿಶಾಚಿ ರಾಜಣ್ಣ, ಹಸಿಕೂಸು ಮಲ್ಲೇಶಿಯನ್ನು ಅಳಿಸಿದ. ಆ ಪುಲ್ಲಯ್ಯನ ಭೂಮಿ ನುಂಗಿ ಕುಳಿತ. ಹೀಂಗs, ಇನ್ನೂ ಎಷ್ಟು ಜನರ ಜೀವನ ಹಾಳು ಮಾಡ್ತಾನೊ– ಏನೊ. ಅವನಿಗೆ, ತನ್ನ ರಕ್ತ ತನ್ನ ಕಣ್ಣಿನಿಂದ ನೋಡದ ಹೊರತು ಬುದ್ಧಿ ಬರಾಣೆಲ್ಲ. ಅದಕ್ಕ ಅವನಿಗಾಗಿ ಕಾದುಕೂತೀನಿ ಇಲ್ಲೆ"—ಕುಡ್ಡ ವೆಂಕಣ್ಣ ಹೇಳಿದ.

"ಹುಲಿ ಆಗಲಿ, ಸಿಂಹ ಆಗಲಿ, ಮನುಷ್ಯನ ರಕ್ತದ ರುಚಿ ನೋಡುವವರೆಗೂ ಒಳ್ಳೆಯವಾಗೆ ಇರ್ತಾವ. ಮನುಷ್ಯನಿಗೂ ಅಷ್ಟೆ......"

"ಏನು ಒಳ್ಳೇದೊ, ಏನು ಕೆಟ್ಟದೊ? ಈ ಊರಾಗಂತೂ ನ್ಯಾಯ ಅಂಬೋದು ಉಳಿದಿಲ್ಲ. ನೀನೇ ಈ ಮಂದೀಗೆ ಎಷ್ಟು ಸರೆ ಬುದ್ಧಿ ಹೇಳಿಲ್ಲ. ಆದರ, ಒಬ್ಬರಾದರೂ ನಿನ್ನ ಮಾತಿಗೆ ಕಿವಿಗೊಟ್ಟರೇನು? ಈ ಊರಾಗ ಎಂತೆಂತಹ ಅನ್ಯಾಯ ನಡೀತಾವ

ಅಂಬೋದು ಕುಡ್ಡನಾದ ನನಗೂ ಸಹ ತಿಳಿದದ. ಕಣ್ಣು ಮುಚ್ಚಿ ನೋಡಿದರೂ ಒಂದs, ಕಣ್ಣು ತೆರೆದು ನೋಡಿದರೂ ಒಂದs."

"ನೋಡು ವೆಂಕಣ್ಣ, ಯಾರ ಹಣೆಯ ಬರಹ ಅವರಿಗೆ. ಎಲ್ಲರೂ ತಮ್ಮ ತಮ್ಮ ಧರ್ಮ–ಕರ್ಮಗಳಿಗೆ ತಕ್ಕ ಹಾಂಗ ಅನುಭವಿಸ್ತಾರ. ಕತ್ತಲು ಇದ್ದದ್ದಕ್ಕs, ಇವತ್ತು ಬೆಳಕಿಗೆ ನಾವು ಹೆಚ್ಚು ಮಹತ್ವ ಕೊಡ್ತೀವಿ. ಕೆಡಕು ಇರದಿದ್ದರ, ಒಳ್ಳೆಯದರ ಮಹತ್ವ ನಮಗ ತಿಳೀತಿರಲಿಲ್ಲ......"

ಇಷ್ಟು ಮಾತನಾಡುವಲ್ಲಿ, ರಾಮದಾಸುವಿನ ನಾಲಿಗೆ ಎಳೆಯಹತ್ತಿತ್ತು. ಮಾತುಗಳು ತೊದಲಹತ್ತಿದ್ದವು. ಆದರೂ, ಇದ್ದಬಿದ್ದ ಶಕ್ತಿಯಿಂದ ನಿಧಾನವಾಗಿ ಮಾತನಾಡಹತ್ತಿದ—

"ಪಶ್ಚಿಮಕ್ಕ ಸೂರ್ಯ ಮುಳುಗಿದರ, ಪೂರ್ವದಾಗ ಮತ್ತ ಹುಟ್ಟೋದಿಲ್ಲೇನು? ಒಂದು ದಿನ ಉರಿ ಬಿಸಿಲು ಇದ್ದರ, ಇನ್ನೊಂದು ದಿನ ತಂಪು ಇದ್ದೇ ಇರ್ತದ. ಸಾವು–ಬದುಕು, ಜೀವನ ಪ್ರತಿಯೊಂದು ಆಗುಹೋಗುಗಳು, ಯಾವುದಕ್ಕೂ ನಿಲ್ಲುವುದಿಲ್ಲ."

ದೂರದಲ್ಲಿ ಎಲ್ಲೊ ಗುಡುಗಿತು. ಆಕಾಶದಲ್ಲಿ ಹರಡಿಕೊಂಡಿದ್ದ ಕಾರ್ಮೋಡಗಳು ವೇಗವಾಗಿ ತೇಲಿಕೊಂಡು ಹೊರಟಿದ್ದವು.

ವೆಂಕಣ್ಣ, ರಾಮದಾಸುವನ್ನು ಕೂಗಿದ. ಆದರೆ, ರಾಮದಾಸು ಉತ್ತರ ಕೊಡದಿದ್ದಾಗ, ಆತನ ಮೈಮೇಲೆ ದೇವಿ ಅವತರಿಸಿರಬಹುದೆಂದುಕೊಂಡು, ತಾನೂ ಮೌನವಾಗಿ ಕುಳಿತ. ಇನ್ನೇನು, ರಾಮದಾಸುವಿನ, "ಎಲಾ ಮಾನವ......" ಎಂಬ ಗಂಭೀರ ಧ್ವನಿ ಕೇಳಿಸುವುದೆಂದು, ಕಿವಿ ನಿಮಿರಿಸಿಕೋಡು ಕೈಕಟ್ಟಿಕೊಂಡು ಕುಳಿತೇ ಇದ್ದ ಕುಡ್ಡ ವೆಂಕಣ್ಣ.

ಪ್ರಣತಿಯಲ್ಲಿ ಸಾಕಷ್ಟು ಎಣ್ಣೆ ಇತ್ತು. ಆದರೆ, ಬತ್ತಿಯನ್ನು ಮುಂದೆ ಚಾಚಿ ಸರಿಪಡಿಸುವವರು ಅಲ್ಲಿ ಯಾರೂ ಇರಲಿಲ್ಲ. ಬತ್ತಿ ಉರಿದು ಕೊನೆಗೆ ನಂದಿಹೋಯಿತು. ಅದರೊಡನೆ, ಇದುವರೆಗೆ ಹೊರಗೆ ಉಳಿದುಕೊಂಡಿದ್ದ ಕತ್ತಲು, ಗುಡಿಯ ಒಳಗೂ ಪ್ರವೇಶಿಸಿತು. ಎಲ್ಲೆಲ್ಲೂ ಕತ್ತಲು ಹರಡಿಕೊಂಡಿತ್ತು. ಆದರೆ ಕುಡ್ಡ ವೆಂಕಣ್ಣನ ಮನಸ್ಸು ಮಾತ್ರ ಸಂತೋಷದಿಂದ ತುಂಬಿತ್ತು. ರಾಮದಾಸುವಿನ ಬಾಯಿಯಿಂದ ತಾಯಿ ನೀಲಮ್ಮಳ ಮಾತು ಕೇಳಲು ಅವನು ಕಾದಿದ್ದ.

ಇದ್ದಕ್ಕಿದ್ದಂತೆ ಗಾಳಿ ಜೋರಾಯಿತು. ಅದರ ಜೊತೆಗೆ, ಮಳೆಯೂ ಸಹ ಬರಹತ್ತಿತು. ದಬದಬ ಸುರಿಯುತ್ತಿದ್ದ ಮಳೆಯಲ್ಲಿ ನೆನೆಯುವುದು ಬೇಡವೆಂದು, ಕುಡ್ಡ ವೆಂಕಣ್ಣ, ಎದ್ದು, ಗರ್ಭಗುಡಿಯ ಒಳಗೆ ಕಾಲಿಟ್ಟ.

ಮಳೆಯ ನೀರು, ಒಳಗೂ ಸಹ ಬೀಳತೊಡಗಿದಾಗ, ಕುಡ್ಡ ವೆಂಕಣ್ಣ ಗುಡಿಯ ಬಾಗಿಲನ್ನು ಮುಂದೆ ಮಾಡಲು ಪ್ರಯತ್ನಿಸಿದ. ಆದರೆ ಗಾಳಿಗೆ ಬಾಗಿಲು ನಿಲ್ಲದಾದಾಗ, ಅಗಳಿಹಾಕಲು ಬಾಗಿಲನ್ನು ಸವರಿದ. ಆದರೆ, ಆ ಬಾಗಿಲುಗಳಿಗೆ ಅಗಳಿ ಇರಲಿಲ್ಲ. ಹೊರಗೆ ಭೋರ್ಗರೆಯುತ್ತಿದ್ದ ಮಳೆ. ಗಾಳಿಗೆ ಗುಡಿಯ ಬಾಗಿಲು

ಬಡಿದುಕೊಳ್ಳಹತ್ತಿದವು. ಮಳೆಯ ನೀರಿನ ಶಬ್ದ, ಗುಡಿಯೊಳಗೆ ಪ್ರತಿಧ್ವನಿಗೊಳ್ಳು ತ್ತಿತ್ತು. ಕುಡ್ಡ ವೆಂಕಣ್ಣ, ದೇವಿಗೆ ಸಾಷ್ಟಾಂಗ ನಮಸ್ಕಾರ ಹಾಕಿದ. ಆಗ ಅವನು ಕೈ ಮುಂದೆ ಚಾಚಿದಾಗ, ಅವನ ಕೈ ಪ್ರಣತಿಯಲ್ಲಿ ಬಿತ್ತು. ತಕ್ಷಣವೆ ಕೈ ಹಿಂದಕ್ಕೆ ಎಳೆದುಕೊಂಡು ಮೇಲೆದ್ದ ಕುಡ್ಡ ವೆಂಕಣ್ಣ. ಮಳೆಯು ಹೆಚ್ಚಾದಂತೆ, ಇರಸಲಿನ ನೀರಿನಿಂದ ಅವನ ಬಟ್ಟೆಗಳು ಆಗಲೆ ತೊಯ್ದುಹೋಗಿದ್ದವು. ಇರಸಲಿನಿಂದ ತಪ್ಪಿಸಿ ಕೊಳ್ಳಲು ಗುಡಿಯ ಒಂದು ಮೂಲೆಗೆ ಹೋಗಿ ಕುಳಿತಿರಲು ನಿರ್ಧರಿಸಿ, ನೆಲದ ಮೇಲೆ ಕೈ ಸವರುತ್ತಾ ಮುಂದೆ ಹೊರಟ. ಹಾಗೆ ಕೈ ಸವರುತ್ತಿದ್ದಾಗ, ಕೈಗೆ ಏನೋ ತಟ್ಟಿತು. ಅದೇನೆಂದು ತಿಳಿದುಕೊಳ್ಳಲು ವೆಂಕಣ್ಣ ತಡವರಿಸಿದಾಗ, ಕೈಗೆ, ತಣ್ಣಗಾದ ದಾಸುವಿನ ಕಾಲು ಸಿಕ್ಕಿತು. ಗಾಬರಿಯಾದ ವೆಂಕಣ್ಣ ಹಾಗೆಯೇ ಮುಂದೆ ಸರಿದು, ದಾಸುವಿನ ಮೈ ತಡವಿದ. ರಾಮದಾಸುವಿನ ಪ್ರಾಣಪಕ್ಷಿ ಹಾರಿಹೋದುದನ್ನು ನಿರ್ಧರಿಸಲು, ಅವನಿಗೆ ಬಹಳ ಹೊತ್ತು ಬೇಕಾಗಲಿಲ್ಲ. ಆ ಶವವನ್ನು...... ನಿರ್ಜೀವವಾದ ರಾಮದಾಸುವಿನ ತಲೆಯನ್ನು ಎರಡು ಕೈಗಳಲ್ಲಿ ಹಿಡಿದು ತನ್ನ ಎದೆಗೆ ಒತ್ತಿಕೊಂಡ ಕುಡ್ಡ ವೆಂಕಣ್ಣ ಗಟ್ಟಿಯಾಗಿ ಅಳಹತ್ತಿದ. ಅವನ ಕಣ್ಣುಗಳಿಂದ ಕೋಡಿಯಾಗಿ ಹರಿದು ಬಂದ ನೀರು, ರಾಮದಾಸುವಿನ ದೇಹದ ಮೇಲೆ ಬೀಳತೊಡಗಿತು. "ನಿನ್ನ ಕೊನೆಗೂ ಉಪವಾಸ ಹಾಕಿ ಕೊಂದರು...... ದಾಸು...... ರಾಮದಾಸು, ನೀನಿಲ್ಲದೆ ಇನ್ನು ಈ ದೇವಿಗೆ ದೀಪ ಹಚ್ಚಿ ಇಡುವವರ್ಯಾರು? ದೇವಿಯನ್ನು ಆಹ್ವಾನಿಸುವವರು ಯಾರು? ಆರಾಧಿಸುವವರು ಯಾರು?"—ಎಂದು ಅಳಹತ್ತಿದ ಕುಡ್ಡ ವೆಂಕಣ್ಣ. ಅವನ ಆ ಗೋಳು, ಹೊರಗೆ ಬೀಳುತ್ತಿದ್ದ ಮಳೆಯ ಭೀಕರ ಸದ್ದಿನಲ್ಲಿ ಲೀನವಾಯಿತು. ಅವನ ಕಣ್ಣಿನಿಂದ ಹರಿದ ನೀರು, ರಾಮದಾಸುವಿನ ದೇಹದ ಮೇಲಿನಿಂದ ಜಾರಿ, ಪ್ರಕೃತಿ ಚೆಲ್ಲಿದ ನೀರಿನಲ್ಲಿ ಸೇರಿಹೋಯಿತು.

## [ 21 ]

ಮರುದಿನ ಬೆಳಿಗ್ಗೆ, ಮಳೆ ನಿಂತು, ಎಲ್ಲವೂ ಪ್ರಶಾಂತವಾಗಿತ್ತು. ರಾತ್ರಿ ಬೀಸಿದ ಗಾಳಿಗೆ ಉರುಳಿಬಿದ್ದ ಗಿಡ–ಮರಗಳು, ಹಾರಿಹೋದ ಗುಡಿಸಲುಗಳು, ಭೀಭತ್ಸ ಅವಶೇಷ ಗಳಂತೆ ಕಾಣಿಸುತ್ತಿದ್ದವು. ನವಿರಿ ಗ್ರಾಮದ ಮಣ್ಣಿನಲ್ಲಿ ಹುಟ್ಟಿ, ಆ ಊರಿನ ಮಣ್ಣನ್ನೆ ನಂಬಿ ಬಾಳು ಬದುಕಿದ ರಾಮದಾಸು ಕೊನೆಗೆ ನದಿ ತೀರದಲ್ಲಿನ ಮಣ್ಣಿನಲ್ಲಿ ಲೀನವಾಗಿ ಹೋದ.

ಮಧ್ಯಾಹ್ನದ ವೇಳೆಗೆ, ನದಿಯಲ್ಲಿ ಮಹಾಪೂರ ಬಂತು. ಭೋರ್ಗರೆಯುತ್ತಿದ್ದ ನೀರಿನ ಸದ್ದು, ಊರಿಗೆಲ್ಲ ಕೇಳಿಸುತ್ತಿತ್ತು. ದಂಡೆಯನ್ನು ಮೀರಿ ಹರಿದ ನೀರು,

ಪಕ್ಕದಲ್ಲಿನ ಭೈರಿಗ್ರಾಮಕ್ಕೆ ನುಗ್ಗಿತ್ತು. ಆ ಊರಿನ ಜನರು, ತಮ್ಮ ಮನೆ–ಮಠಗಳನ್ನು ಬಿಟ್ಟು, ಸಮೀಪದಲ್ಲಿನ ದಿಬ್ಬದ ಮೇಲೆ ಬೀಡುಬಿಟ್ಟಿದ್ದರು. ಆದರೆ ನವಿರಿ ಗ್ರಾಮಕ್ಕೆ ಮಾತ್ರ ಯಾವ ಅಪಾಯವೂ ಇರಲಿಲ್ಲ. ಗ್ರಾಮದ ಸಮೀಪದಲ್ಲಿನ ದಂಡೆಯು ಎತ್ತರವಾಗಿತ್ತಲ್ಲದೆ, ಊರಿನ ದಕ್ಷಿಣಕ್ಕೆ, ಎತ್ತರವಾದ ಉಸುಕಿನ ದಿಬ್ಬಗಳಿದ್ದವು. ನದಿಯ ನೀರು ಆ ದಿಬ್ಬಗಳನ್ನು ಮೆಟ್ಟಿ ಹರಿಯುವ ಸಾಧ್ಯತೆಗಳಿರಲಿಲ್ಲ.

ನದಿಯ ನೀರು, ಕ್ರಮೇಣವಾಗಿ ಇಳಿಯುವ ಬದಲು ಏರುತ್ತಾ ಹೋಯಿತು. ಸಣ್ಣಪುಟ್ಟ ಗಿಡಗಳು, ದನ–ಕರುಗಳು ನೀರಿನಲ್ಲಿ ಹೊಡೆದುಕೊಂಡು ಬಂದವು. ಮಹಾ ತಾಯಿ ಗಂಗೆ, ಬರುಬರುತ್ತಾ ರೌದ್ರಾವತಾರ ತಳೆದಳು. ನದಿಯ ದಂಡೆಗಳನ್ನು ಕೊರೆದು, ಗಿಡ–ಮರಗಳನ್ನು ಬುಡಸಮೇತ ಉರುಳಿಸಿದಳು. ದೋಣಿಯಲ್ಲಿ ಕುಳಿತು ಎತ್ತರದ ಪ್ರದೇಶಕ್ಕೆ ಬರಲು ಪ್ರಯತ್ನಿಸಿದವರನ್ನು, ಗಿರಗಿರನೆ ತಿರುವಿ ನೀರಿನಲ್ಲಿ ಮುಳುಗಿಸಿದಳು—ಗಂಗೆ. ಗಂಗಾದೇವಿ ಇಷ್ಟು ಭೀಭತ್ಸಳಾದುದೇಕೊ? ಈ ಪ್ರಳಯ ರೂಪವನ್ನು ತಳೆದುದೇಕೊ?—ಏನಮ್ಮಾ, ಮೊನ್ನೆ ಮೊನ್ನಿನ ವರೆಗೆ, ಬೆಳದಿಂಗಳಲ್ಲಿ ಹೊನ್ನಿನಂತೆ ಮೆರೆಯುತ್ತಾ ಹರಿಯುತ್ತಿದ್ದವಳು, ಈಗೇಕೆ ಹೀಗಾದೆ? ಝುಳುಝುಳು ಹರಿಯುತ್ತಾ, ನೋಡಿದವರ ಮನಸ್ಸನ್ನು ತಣಿಸುವ ಆ ನಿನ್ನ ಸೊಬಗು, ಆ ಸೊಗಸು ಎಲ್ಲಿ ಹೋಯಿತು. ನಿನ್ನಲ್ಲಿ ಸದಾಸರ್ವದಾ ಆ ಮಂದಹಾಸ, ಆ ಮಾಧುರ್ಯ ತುಂಬಿಕೊಂಡಿದ್ದಲ್ಲಿ, ಕಣ್ಣಿಗೆ ಹಬ್ಬವಾಗುತ್ತದೆ. ನೋಡಿದವರ ಮನಸ್ಸಿನಲ್ಲಿ ಭಾವೋದ್ರೇಕಗಳನ್ನು ಎಬ್ಬಿಸುವ ನಿನ್ನ ಚೆಲುವನ್ನು ಪುನಃ ತೋರಲಾರೆಯಾ? ನಮ್ಮ ಮೇಲೆ ಕರುಣೆ ಬೀರಲಾರೆಯಾ?

ಗಂಗೆ ನಕ್ಕಳು. ಕಣ್ಣು ಕುಕ್ಕುವ ಕತ್ತಲೆಯಲ್ಲಿ ಎಲ್ಲೋ ಬೆಳಕು ಮೂಡಿತು; ನಿರಾಶೆಯಲ್ಲಿ, ಆಶೆಯ ಸೆಲೆಯೊಡೆಯಿತು. ಗತಕಾಲ ಜ್ಞಾಪಕಕ್ಕೆ ಬಂತು. ಒಂದು ಸಲ ಇದೇ ರೀತಿಯ ಮಹಾಪೂರ ಬಂದಿತ್ತು. ಆದರೆ, ಕ್ರಮೇಣ ನೀರಿನ ಮಟ್ಟ ಇಳಿದು ನದಿ ಪ್ರಶಾಂತವಾಗಿ ಹರಿಯತೊಡಗಿತ್ತು. ಬೇಸಿಗೆ ಬಂದಾಗ, ನದಿಯಲ್ಲಿದ್ದ ನೀರು ಇಂಗಿ ಹೋಗಿ, ನದಿಯ ತಳದಲ್ಲಿನ ಉಸುಕು ಗಾಳಿಗೆ ಹಾರಿಹೋಗತೊಡಗಿತ್ತು. ಕುಡಿಯಲು ಒಂದು ಹನಿ ಕೂಡ ನೀರು ಸಿಗದಂತೆ ನದಿ ಬತ್ತಿಹೋಗಿತ್ತು. ಧಾರಾಕಾರವಾಗಿ ಮಳೆ ಸುರಿಯುವ ವರೆಗೆ ಬತ್ತಿದ ನದಿ ಹಾಗೆಯೇ ಇತ್ತು.

ಯಾವುದೇ ದೇಶದ ಚರಿತ್ರೆಗೆ, ಯಾವುದೇ ವ್ಯಕ್ತಿಯ ಜೀವನಕ್ಕೆ ತಾನೇ ಮೂಲವೆಂಬ ಅಹಂಭಾವದಿಂದ ನದಿ ನಕ್ಕಿತು.

ರಾಮದಾಸು, ನಿಜವಾಗಿಯೂ, ತನ್ನ ಜೀವನ ಗಡಿಬಿಡಿಯಲ್ಲಿ ಕಳೆದ. ಸುಖವಾದ, ಸ್ತಬ್ಧವಾದ ಬಾಳಿಗೆ ಯಾವ ಅರ್ಥವೂ ಇಲ್ಲವೆಂಬುದು ಆತನ ಅಭಿಪ್ರಾಯವಾಗಿತ್ತು. ಸ್ಥಿರವಾದ, ನಿರ್ಜೀವವಾದ ಜೀವನದಿಂದ ಏನನ್ನೇ ಆಗಲಿ ಸಾಧಿಸಲಾಗದು. ನಿರ್ಜೀವವಾದ, ಚೈತನ್ಯರಹಿತವಾದ ಜನಾಂಗದಿಂದ ಮಾನವಕುಲ ಬೆಳೆಯಲಾರದು, ವಿಕಸನ

ಕತೆಯ ಪಥದಲ್ಲಿ ಮುನ್ನಡೆಯಲಾರದು—ಎಂಬುದು, ಆತನ ದೃಢ ವಿಶ್ವಾಸಗೊಳ್ಳ ಲಾರದು, ನಾಗರಿವಾಗಿತ್ತು.

ನವಿರಿ ಗ್ರಾಮದಲ್ಲಿ, ಅದೆಷ್ಟೊ ಜನರು ಹುಟ್ಟಿದರು, ಎಷ್ಟೊ ಜನರು ಅಲ್ಲಿನ ಮಣ್ಣಿನೊಡನೆ ಒಂದಾದರು. ಯಾರು ಹುಟ್ಟಿದರೂ, ಯಾರು ಸತ್ತರೂ, ಅಲ್ಲಿನ ಜನಜೀವನದ ಮೇಲೆ ಯಾವ ಪರಿಣಾಮವೂ ಆಗಿರಲಿಲ್ಲ. ಆದರೆ, ರಾಮದಾಸು ಸತ್ತಾಗ, ಆ ಊರಿನ ಜನರು ಏನನ್ನೊ ಕಳೆದುಕೊಂಡಂತೆ, ತಮ್ಮ ಜೀವನದ ಒಂದು ಅಂಕ ಸಮಾಪ್ತಿಗೊಂಡಂತೆ ಮಂಕಾಗಿದ್ದರು. ನೀಲಮ್ಮಳ ಗುಡಿಯಲ್ಲಿ ಈಗ ದೀಪ ಹಚ್ಚುವವರಾರೂ ಇರಲಿಲ್ಲ. ನೊಂದ ಹೃದಯಗಳನ್ನು ಸಿಹಿಯಾದ, ವಿವೇಚನೆಯಿಂದ ಕೂಡಿದ ಮಾತುಗಳಿಂದ ಮುದಗೊಳಿಸುವ ಆ ಹಿರಿಯ ಜೀವ ಇನ್ನಿಲ್ಲವಾಗಿತ್ತು. ಆಪತ್ತಿನಲ್ಲಿರುವವರಿಗೆ ಆಸರೆಯಾಗಿದ್ದ, ನಿರಾಶರಾದವರಿಗೆ ಆಶೆಯ ಬೆಳಕಾಗಿದ್ದ ರಾಮ ದಾಸು, ಕಣ್ಮರೆಯಾಗಿದ್ದ. ಎಲ್ಲರ ಸುಖ ದುಃಖಗಳನ್ನು, ಅಭಿಮಾನದಿಂದ, ಪ್ರೀತ್ಯಾದರ ಗಳಿಂದ ಆಲಿಸುತ್ತಿದ್ದ ಸಹೃದಯ, ನಿರ್ಜೀವವಾಗಿ, ನಿಸ್ತೇಜವಾಗಿ ಭಸ್ಮವಾಗಿ ಮಣ್ಣಿನಲ್ಲಿ ಲೀನವಾಗಿತ್ತು. ರಾಮದಾಸು, ಸತ್ತರೂ ಕೂಡ, ಜೀವಂತವಾಗಿದ್ದ—ಆ ಊರಿನವರ ಹೃದಯದಲ್ಲಿ. ಸೊಸೆಗೆ, ಮಾತುಮಾತಿಗೆ ಸಿಟ್ಟುಮಾಡಿಕೊಂಡು ಶಪಿಸಲು, ಮಾವ ಇರದಾದ. ಮಗನಿಗೆ, ಹರಿದು ತಿನ್ನಲು, ದುಡ್ಡಿಗಾಗಿ ಪೀಡಿಸಲು ತಂದೆ ಇಲ್ಲವಾದ. ಮಗನ ರಾಕ್ಷಸತನವನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಭರಿಸುವ ತಂದೆ ಇರದಾದ. ಈಗ ನೆತ್ತಿಗೇರಿದ ಸಿಟ್ಟು, ಹೃದಯದಲ್ಲಿದ್ದ ರಾಕ್ಷಸ ಪ್ರವೃತ್ತಿಗಳು, ಅವರನ್ನೇ ದಹಿಸು ತ್ತಿದ್ದವು. ಆ ಮುದಿಯ ಎಷ್ಟು ಒಳ್ಳೆಯವನು; ಈಗ ಆ ಮುದುಕನ ನೆನಪು ಬಂದಾಗ ಲೆಲ್ಲಾ ಮಗ ಕಣ್ಣೀರಿಡುತ್ತಿದ್ದ. ಸೊಸೆ ತಾನು ಮಾಡಿದ ಅನ್ಯಾಯ ನೆನೆಸಿಕೊಂಡು ಬಾಧೆಪಡುತ್ತಿದ್ದಳು. ಮನಸ್ಸನ್ನು ನೋಯಿಸುವ ತಂದೆಯ ನೆನಪು ಬಾರದಂತೆ ಮಾಡಿ ಕೊಳ್ಳಲು, ಮಗ ಹವಣಿಸಿದ. ಅದಕ್ಕಾಗಿ, ಮನಸ್ಸನ್ನು ಬೇರೆಡೆಗೆ ತಿರುಗಿಸಲು ನಿರ್ಧರಿಸಿದ. ಅಂತಲೆ, ಕಳ್ಳತನ, ಸುಳ್ಳುತನ, ಕಲಿತ; ಇಸ್ಪೀಟಾಟದಲ್ಲಿ ಮುಳುಗಿದ; ಕಳ್ಳಭಟ್ಟಿ ಸರಾಯಿ ಕುಡಿದು ಮೈಮರೆತು ಬಿದ್ದ. ಸೊಸೆ, ಗಂಡನಿಂದ ಏನೂ ಸಿಗ ದಿದ್ದಾಗ, ಕೂಲಿ–ನಾಲಿ ಮಾಡಿಕೊಂಡು ಹೊಟ್ಟೆ ತುಂಬಿಕೊಂಡಳು. ಮಾಡಲು ಕೂಲಿ ಸಿಗದಿದ್ದಾಗ, ಅವರಿವರನ್ನು ಕಾಡಿ ಬೇಡಿ ಮಕ್ಕಳನ್ನು ಸಾಕಿದಳು.

ಒಂದು ದಿನ ಸಂಜೆ, ನೀಲಿ, ಮನೆಯ ಎಲ್ಲ ಕೆಲಸಗಳನ್ನು ಮುಗಿಸಿಕೊಂಡು, ಮನೆಯ ಮುಂದಿನ ಜಗುಲಿಯ ಮೇಲೆ ಹತ್ತಿ ಬಿಡಿಸುತ್ತಾ ಕುಳಿತಿದ್ದಳು. ಮುದುಕಿ ಒಂದು ಕಡೆ ಕೂಡಲಾಗದೆ, ಒಳಗೆ ಏನೋ ಸವರುತ್ತಿದ್ದಳು.

ವಯಸ್ಸು ಮೀರಿದ ಮುದುಕಿಗೆ, ದಿನ ಬಿಟ್ಟು ದಿನ ಜ್ವರ ಬರುತ್ತಲೇ ಇತ್ತು. ಜ್ವರವಿಲ್ಲದಿದ್ದಾಗ, ಮೊಮ್ಮಗಳ ಕೆಲಸಕಾರ್ಯಗಳಲ್ಲಿ ಕೈಲಾದ ಸಹಾಯ ಮಾಡು ತ್ತಿದ್ದಳು. ಕುಡ್ಡ ವೆಂಕಣ್ಣ, ನೀಲಿ ಹಾಕಿದ ಗಂಜಿಯನ್ನು ಕುಡಿಯುತ್ತಾ ಅಲ್ಲಿಯೇ

ಕುಳಿತಿದ್ದ. ಅಷ್ಟರಲ್ಲಿ, ನರಸಿಂಹ ಯಾರನ್ನೊ ತಡೆದು ಗಟ್ಟಿಯಾಗಿ ಕೂಗುತ್ತಿರುವುದು ಕೇಳಿಸಿತು—"ಶೂದ್ರು ಕೂಡ ಬ್ಯಾಳಿ ತಿನ್ನಬೇಕು ಅಂದರ ಹ್ಯಾಂಗ. ಎಲ್ಲಾ ಹುಳಿ ಅನ್ನ ತಿನ್ನೋದಾದರ, ನಾಳೆ ನಮ್ಮ ಮ್ಯಾಲೆ ಯಾರಾದರೂ ದಾಳಿ ಮಾಡಿದಾಗ, ತುಪಾಕಿ ಹಿಡಿದು ನಿಲ್ಲೊ ಗಂಡಸುತನ ನಮ್ಮ ಹತ್ತಿರ ಇರ್‍ತದೇನು? ಶೂದ್ರು ಬದುಕೋದು ಮಾಂಸದ ಮ್ಯಾಲೆ. ಅವನು ತುಪಾಕಿ ಹಿಡಿದು ನಿಲ್ಲಬೇಕಾದರೆ, ಅವನಿಗೆ ಮಾಂಸ–ಸೆರೆ ಎರಡೂ ಬೇಕು. ಅದಿಲ್ಲದ ಅವನ ಹತ್ತಿರ ಶಕ್ತಿ ಎಲ್ಲಿಂದ ಬರಬೇಕು?"

ನರಸಿಂಹನ ಈ ಮಾತು ಕೇಳಿಸಿಕೊಂಡವರು, ನಗುತ್ತಲೇ ಅವನ ಈ ವಾದವನ್ನು ಒಪ್ಪಿಕೊಂಡರು. ಇದರಿಂದ ಉತ್ತೇಜಿತನಾದ ನರಸಿಂಹ, ಧ್ವನಿಯನ್ನು ಮತ್ತಷ್ಟು ಏರಿಸಿ, "ನಮ್ಮ ಸರ್ಕಾರದವರು ಒಳ್ಳೆಯ ಸರಕನ್ನು ಕಡಿಮೆ ಬೆಲೆಗೆ ಕೊಟ್ಟರ, ಈ ನನ್ನ ಮಕ್ಕಳು ಲಫಂಗರು, ಕೊಳೆತ ಸಾಮಾನುಗಳನ್ನು ಏರಿಸಿದ ಬೆಲೆಗೆ ಮಾರಿ, ನಮ್ಮ ರಕ್ತ ಹೀರತಾರ. ಇದೆಲ್ಲಾ ನನಗ ಗೊತ್ತು. ಇದು, ನನ್ನ–ನಿಮ್ಮ ಸರ್ಕಾರದ ಕೆಲಸ ಅಲ್ಲವೇ ಅಲ್ಲ."

"ಹಂಗಾದರ ಯಾರದು ಈ ಕೆಲಸ—ಒಂದು ಹನಿ ಹೆಂಡ ಕುಡಿಯದ ನೀನೂ ಕೂಡ, ಈಗ ಅದರ ರುಚಿ ನೋಡಿಯೋ ಇಲ್ಲೊ ಹೇಳು? ಊರಾಗಿನವರು ಹುರುಳಿಲ್ಲದ ರೇಷನ್ ಧಾನ್ಯ ತಿಂದು ನಿತ್ರಾಣ ಆಗಿ ಜ್ವರದಿಂದ ಸಾಯಲಿಖತ್ತ್ಯಾರ—ಆ ಪೋಲೀಸ ಪಟೇಲ, ಶಾನುಭೋಗ, ಇವs ಹೊತ್ತು ಅಂತ ದುಡ್ಡು ಮಾಡಿಕೊಂಡು ದೊಡ್ಡದೊಡ್ಡ ಬಂಗಲೆ ಕಟ್ಟಿಕೊಂಡು ಹಾಯಾಗಿದ್ದಾರ. ಇದು ನಿನ್ನ ಸರ್ಕಾರದ ನ್ಯಾಯ ಏನು?"—ಗುಂಪಿನಲ್ಲಿನ ಯಾರೊ ನರಸಿಂಹನನ್ನು ಕೆಣಕಿದರು.

ನರಸಿಂಹ ಪಕಪಕನೆ ನಕ್ಕ. ನಕ್ಕು, "ನನ್ನ ಸರ್ಕಾರದವರ್‍ನ, ನನ್ನ ಯಾಕ ಟೀಕಾ ಮಾಡ್ತೀರಿ. ಮ್ಯಾಲಿನ ಸರ್ಕಾರ ಮತ್ತು ಕೆಳಗಿನನವರಾದ ನಾವು ಒಳ್ಳೆಯವರು ಅಂಬೋದರಲ್ಲಿ ಯಾವ ಅನುಮಾನವೂ ಇಲ್ಲ—ಏನಿದ್ದರೂ ಈ ನಡುವಿನವರು—ದೇವರು ವರ ಕೊಟ್ಟರೂ, ಪೂಜಾರಿ ಕೊಡಲಿಲ್ಲ ಅಂತಾರಲ್ಲಾ—ಹಾಂಗ ನಮ್ಮ ಕೈಗೆ ಒಂದೂ ಸಿಗಲಾರದ್ಹಾಂಗ ಮಾಡ್ಯಾರ. ನಂದೀನ್ನ ಹಂದಿ ಮಾಡಿ, ಹಂದೀನ್ನ ನಂದಿ ಮಾಡೋವರು ಇವರು—ಈ ನಡುವಿನವರು. ಆ ಶಾನುಭೋಗ ಸುಳ್ಳು ಲೆಕ್ಕ ಬರೆದ. ಅದರಿಂದಾಗಿ ಪುಲ್ಲಯ್ಯ ಜೈಲಿಗೆ ಹೋಗಿ ಬಂದ. —ಇರಲಿ. ನಿನ್ನೆ ಇದ್ದ ಹಾಂಗ ಇವತ್ತಿಲ್ಲ, ಇವತ್ತು ಇದ್ದದ್ದು ನಾಳೆ ಇರಾಣೆಲ್ಲ. ನಮಗೂ ಒಳ್ಳೆಯ ದಿನ ಬರ್‍ತಾವ. ನಮ್ಮದೂ ಕಾಲ ಬರ್‍ತದ"—ಎಂದು ಸಾರಿದ.

ನೀಲಿಯ ಮನೆಯ ಮುಂದೆ ಕುಳಿತಿದ್ದ ಕುಡ್ಡ ವೆಂಕಣ್ಣನಿಗೂ ಈ ಮಾತು ಕೇಳಿಸಿತು. ಅವನು ಆವೇಶದಿಂದ ಎದ್ದು ನಿಂತು, "ಬರ್‍ತಾವ, ನಮಗೂ ಒಳ್ಳೆ ದಿನ ಬರ್‍ತಾವ. ಈ ದೊಡ್ಡವರ ಉರದಾಟದಾಗ, ಊರಿಗೆ ಊರೆ ನೋವಿನಿಂದ ಬೆಂದುಹೋಗ್ಯದ. ಆದರೂ, ಇನ್ನೂ ಒಳ್ಳೆ ದಿನ ಬರ್‍ತಾವಂತ ಹೇಳ್ತಾನ ಇಂವ"—ಎಂದು ವ್ಯಂಗ್ಯವಾಗಿ ಹೇಳಿದ.

ನರಸಿಂಹ. ಅವನ ಬಳಿ ಬಂದು, "ಏನಮ್ಮ ನೀನು ಹೇಳು, ಈ ಕುಡ್ಡ ಏನು ಕಡಿಮೆ ಪಾಪ ಮಾಡ್ಯಾನೇನು? ಅವನು ಮಾಡಿದ ಪಾಪ, ಈಗ ಅವನ ಬೆನ್ನೇರಿ ಕೂತದ. ಹಾಂಗs,ಯಾರ ಮಾಡಿದ ಪಾಪ ಅವರಿಗೆ ಇರ್‍ತದ. ಮಾಡಿದ ಕರ್ಮ ಅನುಭೋಗಿಸ ಬೇಕು, ಅದು ಯಾರಿಗೂ ತಪ್ಪಿದ್ದಲ್ಲ"—ಎಂದು ನೀಲಿಗೆ ಹೇಳಿದ.

ಕುಡ್ಡ ವೆಂಕಣ್ಣ, ಅಲ್ಲಿ ನಿಲ್ಲಲಾರದೆ, "ಬರ್‍ತೀನಿ ತಾಯಿ"—ಎಂದು ಹೇಳಿ, ಕೋಲು ಹಿಡಿದುಕೊಂಡು ನಿಧಾನವಾಗಿ ಹೊರಟ. ನಾಲ್ಕು ಹೆಜ್ಜೆ ಮುಂದಿಟ್ಟು ಮತ್ತೆ ನಿಂತು, "ಯಾರ ಪಾಪ ಅವರಿಗೆ—ಅಂತ, ಅಳುವ ಹುಡುಗರನ್ನು ಹಾಂಗs ಬಿಡ್ತೀರೇನು?—ಆ ನಾಯಿಗಳಿಗೆ ಸಲಿಗೆ ಕೊಟ್ಟರ, ಮನಿ ಹೊಕ್ಕು ಹೊಲಸು ಮಾಡದs ಇರ್‍ತಾವೇನು? ಈ ಊರು, ದಾನ–ಧರ್ಮ, ದೇವರು–ದಿಂಡರು ಇಲ್ಲದ ಕೊಂಪೆ ಆಗ್ಯದ. ಕಣ್ಣಿದ್ದವರು ಎಲ್ಲವನ್ನೂ ನೋಡಿಯೂ, ಅನ್ಯಾಯವನ್ನು ಸಹಿಸಿಕೊಂಡು ಕೂತಾರ. ಎಲ್ಲಾರೂ ಸೇರಿ, ಅನ್ಯಾಯ ಮಾಡೋ ಆ ನಾಲ್ಕು ಜನರನ್ನ ಪಂಚಾಯಿತಿ ಮುಂದ ನಿಲ್ಲಿಸ ಬೇಕು......"

ಕುಡ್ಡ ವೆಂಕಣ್ಣ ಇನ್ನೂ ಏನನ್ನೊ ಹೇಳುವವನಿದ್ದ. ಆದರೆ, ಅದೆಲ್ಲಿಗೊ ಹೋಗಿದ್ದ ಫುಲ್ಲಯ್ಯ ಬಂದು, "ಯಾಕಲಾ ಕುಡ್ಡ, ಏನೊ ಬಾಲ ಬಿಚ್ಚಿಯಲ್ಲ" ಎಂದು ಕೇಳಿದ. "ನೋಡು ಫುಲ್ಲಯ್ಯ, ಒಂದು ಕಾಲದಾಗ ನಾನು ಈ ಊರೊಳಗ ಎಲ್ಲರಿಗಿಂತಲೂ ಗಟ್ಟಿಗನೆನಸಿಕೊಂಡಿದ್ದೆ. ಈಗ ಆ ಕೀರ್ತಿ ನಿನಗ ಸೇರ್‍ಯದ. ನಾನೊ ಕಣ್ಣು ಕಳಕೊಂಡು ಕುರುಡಾಗೀನಿ. ನಿನಗ ಕಣ್ಣ ಅವ. ಕೈಕಾಲೂ ಗಟ್ಟಿ ಅವ. ಪ್ರಾಣ ಹೋದರೂ, ನೀತಿಗೆ–ನ್ಯಾಯಕ್ಕ ದುಂಬಾಲು ಬೀಳೊ ಜೀವ ನಿನ್ನದು. ಊರಾಗಿನವರು, ಕೈಲಾಗದ ಹೇಡಿಗಳಾಗಿ ಕೂತಾರ. ತಮಗಾಗ್ತಿರೊ ಅನ್ಯಾಯವನ್ನು, ಉಸಿರೆತ್ತದ ಸಹಿಸಿಕೊಂಡು ತೆಪ್ಪಗಿದ್ದಾರ. ಈ ಹೇಡಿಗಳಿಗೆ ಧೈರ್ಯ ಕೊಟ್ಟು, ಅನ್ಯಾಯದ ವಿರುದ್ಧ ಹೋರಾಡುವ ಹಾಂಗ ಮಾಡು. ನಿಸ್ಸತ್ವವಾಗಿರುವ ಈ ಜನರಾಗ, ಸತ್ವ ತುಂಬಿ ಸನ್ಮಾರ್ಗ ತೋರಿಸು. ಆಗ ಮಾತ್ರ, ಈ ಜನರು ಮನುಷ್ಯರಾಗ್ತಾರ. ಈ ಜನರು, ತಮ್ಮ ಹೇಡಿತನ ಬಿಟ್ಟು ಎಂದು ಮನುಷ್ಯರಾಗ್ತಾರೊ, ಆಗ, ಹೆಣಗಳನ್ನು ಹರಿದು ತಿನ್ನುವ ಈ ರಣಹದ್ದುಗಳು ಹಾರಿಹೋಗ್ತಾವ"—ವೆಂಕಣ್ಣ ಆವೇಶದಿಂದ ಹೇಳಿದ.

ಫುಲ್ಲಯ್ಯ ಯಾವ ಮಾತೂ ಆಡದೆ, ತೆಪ್ಪಗಿದ್ದ. ಮಲ್ಲೇಶಿ, ಅಜ್ಜಿ ಕಲಿಸಿದ ಹಾಡನ್ನು ಹಾಡುತ್ತಾ ಕುಣಿಯುತ್ತಿದ್ದ. "ಸರಿ, ನಾಳೆ ಈ ಬಗ್ಗೆ ವಿಚಾರ ಮಾಡೋಣ"—ಎಂದು ಹೇಳಿದ ಫುಲ್ಲಯ್ಯ, ಮನೆಯ ಒಳಗೆ ಕಾಲಿಟ್ಟನಾದರೂ, ಅಲ್ಲಿಯೇ ಕುಳಿತಿದ್ದ ನರಸಿಂಹ ಒಂದು ಮಾತೂ ಆಡಲಿಲ್ಲ. ಮಲ್ಲೇಶಿ, ನರಸಿಂಹನ ಬಳಿ ಹೋಗಿ, ಅವನ ಕುತ್ತಿಗೆಗೆ ಜೋತುಬಿದ್ದ.

ನರಸಿಂಹ, ಮಲ್ಲೇಶಿಯನ್ನು ಎತ್ತಿಕೊಂಡು ಮುದ್ದಾಡುತ್ತಿದ್ದಾಗ, ನೀಲಿ, "ಮಾವಾ, ಇಂದು ಏನಾದರೂ ಅಮಲಿನ್ಯಾಗಿದ್ದಿ ಏನು?"—ಎಂದು ಕೇಳಿದಳು.

ನೀಲಿಯ ಈ ಪ್ರಶ್ನೆಯಿಂದ ನರಸಿಂಹ ತಬ್ಬಿಬ್ಬಾದ. ಇದುವರೆಗೂ ಮೌನವಾಗಿದ್ದ ನೀಲಿಯಿಂದ ಅವನು ಆ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲ. ಅವಳ ಪ್ರಶ್ನೆಯಿಂದ, ಅವಳು ಆ ಪ್ರಶ್ನೆಯನ್ನು ಕೇಳಿದ ರೀತಿಯಿಂದ, ಅವನ ನೆತ್ತಿಗೆ ಏರಿದ್ದ ಅಮಲು ಸರಕ್ಕನೆ ಇಳಿಯಿತು. ಸ್ವಲ್ಪ ಸಮಯದ ನಂತರ "ಅಮ್ಮಾ......" ಎಂದು ಏನನ್ನೋ ಹೇಳಲು ಬಾಯಿ ತೆರೆದನಾದರೂ, ದುಃಖ ಉಮ್ಮಳಿಸಿ ಬಂದು ಮುಂದೆ ಮಾತು ಹೊರಡಲಿಲ್ಲ. ದುಃಖವನ್ನು ನುಂಗಿಕೊಂಡು, "ಮಕ್ಕಳು ಹೊಟ್ಟೆಗಿಲ್ಲದ ಒಣಗೋದನ್ನ ನೋಡ ಲಾರದ, ಅವರಿಗಾಗಿ ಏನೂ ಮಾಡಲು ಕೈಲಾಗದ...... ಆ ಕ್ಷೌರಿಕ ಕುಡಿಸಲು ಮುಂದೆ ಬಂದಾಗ, ಒಂದು ಛಣವಾದರೂ ಜೀವನದ ಈ ಎಲ್ಲ ಜಂಜಾಟಗಳನ್ನು ಮರೆಯ ಬೇಕೆಂಬ ಆಶೆಯಿಂದ...... ಒಂದು ಕ್ಷಣವಾದರೂ ಸುಖಪಡಬೇಕೆಂಬ ಹಂಬಲದಿಂದ ........." ಮುಂದೆ ಮಾತನಾಡಲಾಗದೆ ಕಣ್ಣೀರು ಸುರಿಸಿದ ನರಸಿಂಹ.

ಸ್ವಲ್ಪ ಹೊತ್ತು ಎಲ್ಲರೂ ಮೌನವಾಗಿ ಕುಳಿತಿದ್ದರು. ಎಲ್ಲವೂ ನಿಶ್ಶಬ್ದವಾಗಿತ್ತು. ಕೊನೆಗೆ, ಪುಲ್ಲಯ್ಯನೇ ಆ ಮೌನವನ್ನು ಮುರಿದು, "ನನಗೂ ಇಂತಹ ದಿನಗಳು ಬಂದಾವು"—ಎಂದು ಹೇಳಲು ಬಾಯಿ ತೆರೆದನಾದರೂ. ಹೆಂಡತಿಯ ಮುಖ ನೋಡಿ, ಯಾವ ಮಾತನ್ನೂ ಆಡದೆ ಸುಮ್ಮನಾಗಿಬಿಟ್ಟ.

## [ 22 ]

ಇದ್ದ ಭೂಮಿ ಕೈಬಿಟ್ಟು ಹೋದ ಮೇಲೆ, ಎತ್ತುಗಳನ್ನು ಇಟ್ಟುಕೊಂಡು ಏನು ಮಾಡ ಬೇಕು? ಮಾರಿದರೆ ಕೊಳ್ಳಲು ಅನೇಕರಿದ್ದರು. ಆದರೆ, ಐದು ವರ್ಷಗಳಿಂದ ದೊಡ್ಡಿ ಯಲ್ಲಿದ್ದ ಎತ್ತುಗಳನ್ನು ಮಾರಲು ಇಷ್ಟವಿಲ್ಲದೆ, ಪುಲ್ಲಯ್ಯ, ಅವುಗಳ ಬೆಲೆಯನ್ನು ದುಬಾರಿಯಾಗಿ ಹೇಳುತ್ತಿದ್ದ. ಎತ್ತುಗಳನ್ನು ಮನೆಯಲ್ಲಿ ಕಟ್ಟಿಕೊಳ್ಳುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು, ನೀಲಿ ತಿಳಿ ಹೇಳಿದಳು. "ಸರಿಯಾಗಿ ಮೇವು ಇಲ್ಲದೆ, ಅವು ಕೂಡ ಸೊರಗಿದವಲ್ಲಿ ಏನು ಬಂತು—ಬಂದ ಧಾರಣೆಗೆ ಮಾರಿಬಿಡೋದಃ ಒಳ್ಳೇದು"—ಎಂದು ಅವಳು ಪದೆ ಪದೆ ಹೇಳಿದಾಗ, ಪುಲ್ಲಯ್ಯ ವಿಧಿಯಿಲ್ಲದೆ ಒಪ್ಪಿಕೊಂಡ.

ಎತ್ತುಗಳನ್ನು ಕೊಂಡ ಪೊರಗೂರಿನ ರೈತ ಅವುಗಳನ್ನು ಹೊಡೆದುಕೊಂಡು ಹೊರ ಟಾಗ, ಮಲ್ಲೇಶಿ ದಾರಿ ಕಟ್ಟಿದ. ಎತ್ತುಗಳು, ಕೈಯಲ್ಲಿ ಬೆತ್ತ ಹಿಡಿದು ನಿಂತ ಕಿರಿಯ ಯಜಮಾನನನ್ನು ನೋಡಿ, ಗಕ್ಕನೆ ನಿಂತುಬಿಟ್ಟವು. ಹಿಂದಿನಿಂದ ಬಾರುಕೋಲಿನ ಪೆಟ್ಟು ಬಿದ್ದಾಗ, ಪುಟಿದೆದ್ದು ಓಡಹತ್ತಿದವು. ಅವುಗಳನ್ನು ಕೊಂಡ ಯಜಮಾನ, ಅವುಗಳ ಹಿಂದೆಯೇ ಓಡಿದ. ಎತ್ತುಗಳು ಧಾವಿಸಿ ಬರುತ್ತಿದ್ದರೂ ಕೂಡ, ಮಲ್ಲೇಶಿ ನಿಂತ

ಸ್ಥಳದಿಂದ ಕದಲಲಿಲ್ಲ. "ಹಲೆ-ಹಲೆ"—ಎನ್ನುತ್ತಾ, ಕೈಯಲ್ಲಿನ ಬೆತ್ತವನ್ನು ಝಳಪಿಸುತ್ತ ದಾರಿ ಕಟ್ಟಿ ನಿಂತಿದ್ದ. ಪುಲ್ಲಯ್ಯ, "ಮಲ್ಲೇಶಿ, ಎತ್ತುಗಳು ತುಳುದಾವು, ಹಾದಿ ಬಿಡು"—ಎಂದು ನಿಂತಲ್ಲಿಂದಲೇ ಕೂಗಿಕೊಂಡ. ಎತ್ತುಗಳನ್ನು ಕೊಂಡ ರೈತ, ಅವು ಮಲ್ಲೇಶಿಯನ್ನು ಎಲ್ಲಿ ತುಳಿದುಹಾಕುವವೊ ಎಂಬ ಭಯದಿಂದ, ಅವುಗಳನ್ನು ತಡೆಯಲು ಪ್ರಯಾಸಪಡುತ್ತಿದ್ದ. ಮಲ್ಲೇಶಿ, ಯಾವುದಕ್ಕೂ ಹೆದರದೆ, ನಿಂತಲ್ಲಿಂದ ಒಂದು ಕೂಗು ಹಾಕಿದಾಗ, ಎತ್ತುಗಳು ಗಕ್ಕನೆ ನಿಂತು ಗೋಣು ಹಾಕಹತ್ತಿದವು. "ಅಪ್ಪಾ, ಎತ್ತುಗಳನ್ನ ಒಳಗ ಕಟ್ಟಿಹಾಕು"—ಮಲ್ಲೇಶಿ ತಂದೆಗೆ ಹೇಳಿದ. ಪುಲ್ಲಯ್ಯ ಯಾವ ಮಾತೂ ಆಡದೆ ಬಂದು ಮಗನನ್ನು ಎತ್ತಿಕೊಂಡು ಪಕ್ಕಕ್ಕೆ ಸರಿದ. ಹಿಂದಿನಿಂದ ಮತ್ತೆ ಬಾರಕೋಲಿನ ಏಟು ಬಿದ್ದಾಗ, ಸುಮ್ಮನೆ ನಿಂತಿದ್ದ ಎತ್ತುಗಳು ಓಡತೊಡಗಿದವು. ಮಲ್ಲೇಶಿ, ಕೈಯಲ್ಲಿನ ಬೆತ್ತ ಆಡಿಸುತ್ತಾ, ಅವುಗಳ ಹಿಂದೆ ಓಡಲು ಹವಣಿಸಿದ. ಪುಲ್ಲಯ್ಯ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡು, ಮನೆಯತ್ತ ಹೆಜ್ಜೆ ಹಾಕಿದಾಗ, ಮಲ್ಲೇಶಿ ಜೋರಾಗಿ ಅಳಹತ್ತಿದ.

ಪುಲ್ಲಯ್ಯ, ಅನ್ಯಮನಸ್ಕನಾಗಿ, ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತ. ಮಲ್ಲೇಶಿ, ಆಗಲೇ ಆತನ ಕೈಯಿಂದ ಕೊಸರಿಕೊಂಡು, ಕೈಕಾಲುಗಳನ್ನು ನೆಲಕ್ಕೆ ಬಡಿಯುತ್ತಾ ದೊಡ್ಡದಾಗಿ ಅಳುತ್ತಿದ್ದ. ಪುಲ್ಲಯ್ಯ ಅವನನ್ನು ಸಮಾಧಾನ ಮಾಡಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಅವನು, ದನಗಳ ದೊಡ್ಡಿಯತ್ತ ನೋಡುತ್ತ ಕುಳಿತಿದ್ದ. ದೊಡ್ಡಿಯಲ್ಲಿ ಈಗಲೂ ಸಹ ಎತ್ತುಗಳು ನಿಂತು ಮೇಯುತ್ತಿರುವಂತೆ ಅವನಿಗೆ ಭಾಸವಾಯಿತು. ಪ್ರಿಯರಾದವರೊಬ್ಬರನ್ನು, ಆತ್ಮೀಯರಾದವರೊಬ್ಬರನ್ನು ಕಳೆದುಕೊಂಡಂತೆ, ಅವನ ಜೀವ ಚಡಪಡಿಸಹತ್ತಿತ್ತು. ತಾನು ಈಗ ರೈತನಾಗಿ, ನೇಗಿಲ ಯೋಗಿಯಾಗಿ ಉಳಿಯಲಿಲ್ಲವೆಂಬ ನೆನಪು ಬಂದಾಗ, ಅವನ ಹೃದಯ ಹಿಂಡಿ ಹೋಯಿತು. ತನ್ನ ದೇಹದಲ್ಲಿ ಹರಿಯುತ್ತಿರುವ ರೈತರ ರಕ್ತ, ನೀರಾದಂತೆ ಅವನು ಮರುಗಿದ. ನೋವಿನಿಂದ, ಭಾರವಾದ ಹೃದಯದಿಂದ ಮಗನನ್ನು ಎತ್ತಿಕೊಂಡು, ಪಂಚೆಯಿಂದ ಅವನ ಮೈಯನ್ನು ಒರೆಸಿದ. "ನಮ್ಮ ಎತ್ತು, ನಾಳೆ ಮತ್ತs ನಮ್ಮ ಮನೀಗೆ ಬರ್‍ತಾವ ಏಳು"—ಎಂದು ಮಗನನು ಸಮಾಧಾನ ಮಾಡಿದ.

ತಂದೆ-ಮಗ, ನದಿಗೆ ಹೋಗಿ ಸ್ನಾನಮಾಡಿ ಬಂದರು. ಅಲ್ಲಿ, ಎತ್ತುಗಳ ಮೈ ತೊಳೆಯುತ್ತ ನಿಂತಿದ್ದ ಒಬ್ಬ ರೈತ, "ಎತ್ತು ಎಷ್ಟಕ್ಕ ಮಾರಿದೆಯೊ?"—ಎಂದು ಕೇಳಿದಾಗ, "ನೂರಾ ಐದು"—ಎಂದು ಪುಲ್ಲಯ್ಯ ಹೇಳಿದ್ದ. ಆಗ ಮಾತ್ರ, ಮಲ್ಲೇಶಿ ಮುಖ ನೋಡಿದನಾದರೂ, ಯಾವ ಮಾತನ್ನೂ ಆಡಿರಲಿಲ್ಲ. ಮನೆಗೆ ಹಿಂದಿರುಗುತ್ತಿದ್ದಾಗ, "ಅಪ್ಪಾ, ಇನ್ನು ನಮ್ಮ ಎತ್ತು ನಮ್ಮ ಮನೀಗೆ ಬರಾಣಿಲ್ಲ...... ನೀನು ಸುಳ್ಳು ಹೇಳಿದಿ...... ಸುಳ್ಳು ಹೇಳಿದರ ಕಣ್ಣು ಹೋಗತಾವ"—ಎಂದು ಮಲ್ಲೇಶಿ

ಹೇಳಿದಾಗ ಪುಲ್ಲಯ್ಯ ಉತ್ತರ ನೀಡದಾದ. ಆದರೆ, ಎತ್ತಿದ್ದ ಅವನ ತಲೆ, ಸ್ವಲ್ಪ ಬಾಗಿತು.

ಹೊಲ ಗದ್ದೆಗಳಲ್ಲಿನ ಕೆಲಸಕಾರ್ಯಗಳು ಪ್ರಾರಂಭವಾದವು. ಈ ಸಲ ಪುಲ್ಲಯ್ಯ, ಇತರರ ಹೊಲಗಳಲ್ಲಿ ಕೆಲಸಕ್ಕೆ ಹೋದ. ಹಾಗೆ, ಬೇರೆಯವರ ಹೊಲ–ಗದ್ದೆಗಳಲ್ಲಿ ಕೆಲಸ ಮಾಡಲು ಅವನಿಗೆ ಸಂಕಟವಾಗುತ್ತಿತ್ತು. ಮಲ್ಲೇಶಿ ಕೂಡ, ತಂದೆಯ ಜೊತೆ ಹೋಗುತ್ತಿದ್ದ. ಆಗಾಗ ಅವನು ಕೇಳುತ್ತಿದ್ದ ಪ್ರಶ್ನೆಗಳಿಂದ ಪುಲ್ಲಯ್ಯನ ಸಂಕಟ ಹೆಚ್ಚಾಗುತ್ತಿತ್ತು. ಕನಿಷ್ಠಪಕ್ಷ ಒಂದು ಎಕರೆಯಾದರೂ ಸ್ವಂತ ಭೂಮಿ ಇದ್ದಿದ್ದಲ್ಲಿ ಬೆವರು ಸುರಿಸಿ ಬೆಳೆ ತೆಗೆಯಬಹುದಾಗಿತ್ತು—ಎಂದುಕೊಳ್ಳುತ್ತಿದ್ದ. ಹೊಲ–ಗದ್ದೆಗಳಲ್ಲಿನ ಕೆಲಸಗಳು ಮುಗಿದಾಗ, ಮುಂದೇನು—ಎಂಬ ಸಮಸ್ಯೆ ಪುಲ್ಲಯ್ಯನನ್ನು ಕಾಡಹತ್ತಿತ್ತು. ಎತ್ತುಗಳನ್ನು ಮಾರಿ ಬಂದ ದುಡ್ಡಿನಿಂದ ಅಕ್ಕಿ ಕೊಂಡದ್ದಾಗಿತ್ತು. ತಾನು ಉಣದಿದ್ದರೆ, ಮಗನೂ ಉಣ್ಣುತ್ತಿರಲಿಲ್ಲ. ತಾನು ಸೊರಗಿದರೂ, ಮಗ ಮಾತ್ರ ಸೊರಗಬಾರದೆಂದು ಪುಲ್ಲಯ್ಯ ಹಂಬಲಿಸುತ್ತಿದ್ದ. ಈ ಸಲ, ಸಾಲ ಕೇಳಲು ಹೋದಾಗ, ರಾಜಣ್ಣ ಸಾಲ ಕೊಡಲು ನಿರಾಕರಿಸಿದ. "ಏನು ಬೇಕಾದರೂ, ಕೂಲಿ ಕೆಲಸ ಮಾಡಿ ತೊಗೊಂಡು ಹೋಗು. ಇಲ್ಲಾ ಅಂದರ ಧಾರಣೆ ಮಾಡಿ ದುಡ್ಡು ಕೊಟ್ಟು ತೊಗೊಂಡು ಹೋಗು"—ಎಂದು, ಅವನು ಖಡಾಖಂಡಿತವಾಗಿ ಹೇಳಿದ್ದ. ಏನಾದರೂ ಸರಿ. ರಾಜಣ್ಣನ ಕೈಕೆಳಗೆ ಕೂಲಿ ಮಾಡಬಾರದೆಂದು ಪುಲ್ಲಯ್ಯ ಮೊದಲೇ ನಿರ್ಧರಿಸಿದ್ದ, ನೀಲಿಯೇ ಹೋಗಿ, ಅಂಗಲಾಚಿ ಬೇಡಿಕೊಂಡು ಹತ್ತು ರೂಪಾಯಿ ತಂದಳು. ಆ ರೂಪಾಯಿಯಿಂದ ಭತ್ತ ಕೊಂಡು, ಕುಟ್ಟಿ, ಅಕ್ಕಿಯ ವ್ಯಾಪಾರ ಪ್ರಾರಂಭಿಸಿದಳು. ಅದರಲ್ಲೆ ಒಂದೊಪ್ಪತ್ತು ಅನ್ನ ಉಣ್ಣಲು, ಒಂದೊಪ್ಪತ್ತು ಗಂಜಿ ಕುಡಿಯಲು ಬೇಕಾಗುವಷ್ಟು ಲಾಭ ಗಿಟ್ಟಿಸಿದಳು. ಕೆಲವರಿಗೆ ಉದ್ದರಿಯ ಮೇಲೆ ಅಕ್ಕಿ ಕೊಟ್ಟಳಾದರೂ, ಹಾಗೆ ಕೊಟ್ಟ ಸರಕಿಗೆ ದುಡ್ಡು ಬರಲೇ ಇಲ್ಲ. ನೀಲಿ ಲಾಭ ಗಳಿಸಿದ್ದನ್ನು ನೋಡಿ, ಅಕ್ಕಪಕ್ಕದವರೂ ಸಹ, ಅಕ್ಕಿಯ ವ್ಯಾಪಾರಕ್ಕೆ ಇಳಿದರು. ಕೆಲವರಂತೂ ಪೊರಗೂರಿನ ವರೆಗೂ ಹೋಗಿ, ಅಕ್ಕಿಯ ವ್ಯಾಪಾರ ಮಾಡತೊಡಗಿದರು. ಈ ವ್ಯಾಪಾರದಲ್ಲಿ ಇನ್ನು ಲಾಭ ಹುಟ್ಟುವುದಿಲ್ಲವೆಂದು ಅರಿತ ನೀಲಿ, ರಾಜಣ್ಣನ ಹೆಂಡತಿಯ ಬಳಿಗೆ ಹೋಗಿ, ಮತ್ತೆ ಇಪ್ಪತ್ತೈದು ರೂಪಾಯಿ ಪಡೆದು ತಂದಳು. ಆ ದುಡ್ಡನ್ನೆ ಬಂಡವಾಳವನ್ನಾಗಿ ಇಟ್ಟುಕೊಂಡು, ಉರವಲು ಕಟ್ಟಿಗೆಯ ವ್ಯಾಪಾರದಲ್ಲಿ ತೊಡಗುವಂತೆ ಗಂಡನನ್ನು ಆಗ್ರಹಪಡಿಸಿದಳು. ದಿನಕ್ಕೆ ಒಂದು ಹೊರೆ ಕಟ್ಟಿಗೆಯನ್ನು ಪೊರಗೂರಿಗೆ ಒಯ್ದು ಮಾರಿದಲ್ಲಿ ಒಂದು ರೂಪಾಯಿಯಾದರೂ ಲಾಭ ಸಿಗುತ್ತಿತ್ತು. ಆದರೆ ಈ ವ್ಯಾಪಾರಕ್ಕಿಳಿಯಲು ಪುಲ್ಲಯ್ಯನಿಗೆ ಮನಸ್ಸಿರಲಿಲ್ಲ. ಒಂದು ಕಾಲದಲ್ಲಿ, ಸುತ್ತಮುತ್ತಲಿನ ಗ್ರಾಮಗಳಲ್ಲಿ ಒಳ್ಳೆಯ ರೈತನೆಂದು ಪ್ರಸಿದ್ಧಿಯಾಗಿದ್ದ ತಾನು, ಈಗ ಕಟ್ಟಿಗೆಯ ಹೊರೆ ಹೊತ್ತು ತಿರುಗುವುದು ಹೀನಾಯವೆಂದೂ, ಅಪಮಾನಕರವೆಂದೂ ನಂಬಿದ್ದ

ಪುಲ್ಲಯ್ಯ. ಆದರೂ ಹೆಂಡತಿಯ ಒತ್ತಾಯಕ್ಕೆ ಕಟ್ಟುಬಿದ್ದು ಒಂದು ದಿನ ಪೊರಗೂರಿಗೆ ಹೋಗಿಬರುವಷ್ಟರಲ್ಲಿ ಅರೆಜೀವವಾಗಿದ್ದ. ಹೆಂಡತಿ–ಮಕ್ಕಳ ಮುಖ ನೋಡಿ, ಮರುದಿನವೂ ಹೋಗಿ ಸೌದೆ ಮಾರಿಕೊಂಡು ಬಂದ. ಬರು–ಬರುತ್ತಾ, ಅದು ಅಭ್ಯಾಸವಾಗಿಹೋಯಿತು.

ಮನೆಯಲ್ಲಿನ ಪರಿಸ್ಥಿತಿ ತಕ್ಕಮಟ್ಟಿಗೆ ಸುಧಾರಿಸಿದಾಗ, ನರಸಿಂಹನಿಗೆ ಬಂದ ಗತಿ ತಮಗೂ ಬರುವುದಿಲ್ಲವೆಂಬ ವಿಶ್ವಾಸದಿಂದ, ಪುಲ್ಲಯ್ಯ ಸಮಾಧಾನ ತಳೆದ. ಹೆಂಡತಿಯ ಮಾತಿನಲ್ಲಿ, ಈಗ ಅವನಿಗೆ ನಂಬಿಕೆ ಹುಟ್ಟಿತ್ತು. ಕಷ್ಟಪಟ್ಟು ಹೊಟ್ಟೆ ತುಂಬಿಕೊಳ್ಳು ತ್ತಿರುವಾಗ, ಇಲ್ಲದ್ದನ್ನು ಮನಸ್ಸಿಗೆ ಹಚ್ಚಿಕೊಂಡು ನೊಂದುಕೊಳ್ಳುವುದರಲ್ಲಿ ಯಾವ ಅರ್ಥವೂ ಇಲ್ಲವೆಂಬುವನ್ನು ಆತ ಮನಗಂಡಿದ್ದ. ದಿನಬಳಕೆಯ ವಸ್ತುಗಳ ಬೆಲೆಗಳು ದಿನದಿನಕ್ಕೆ ಏರುತ್ತಿದ್ದಾಗ್ಯೂ ಕೂಡ, ಅದರ ಕಾವು ಪುಲ್ಲಯ್ಯನಿಗೆ ತಟ್ಟಿರಲಿಲ್ಲ. ಈಗ, ಆತ, ಮೊದಲು ತಾನು ರೂಪಾಯಿಗೆ ಮಾರುತ್ತಿದ್ದ ಹೊರೆಯನ್ನು, ರೂಪಾಯಿ ನಾಲ್ಕಾಣೆಗೆ ಮಾರಲು ಪ್ರಾರಂಭಿಸಿದ್ದ. ನೀಲಿ, ಈಗ ಭತ್ತ ಕುಟ್ಟಿದ ಅಕ್ಕಿಯನ್ನು ರೂಪಾಯಿಗೆ ಅರ್ಧ ಪಡಿಯಂತೆ ಮಾರುತ್ತಿದ್ದಳು. ಪುಲ್ಲಯ್ಯ ಒಮ್ಮೊಮ್ಮೆ ತಾನು ಮಾರುವ ಕಟ್ಟಿಗೆಯನ್ನು, ಕಡಿಮೆ ಬೆಲೆಗೆ ಮಾರಲೂ ಸಹ ಯೋಚಿಸುತ್ತಿದ್ದ. ಆದರೆ, ಎಲ್ಲಾ ಊರುಗಳಲ್ಲಿ ರೂಪಾಯಿ ನಾಲ್ಕಾಣೆಗೆ ಮಾರಲಾಗುತ್ತಿದ್ದ ಹೊರೆಯನ್ನು ಕಡಿಮೆ ಬೆಲೆಗೆ ಮಾರುವುದು ನಿರರ್ಥಕವೆಂದು ಸುಮ್ಮನಿದ್ದ. ಕೆಲವೇ ದಿನಗಳಲ್ಲಿ ಪುಲ್ಲಯ್ಯ ಮಾರುತ್ತಿದ್ದ ಕಟ್ಟಿಗೆಯ ಹೊರೆಯ ಬೆಲೆ ರೂಪಾಯಿ ಎಂಟಾಣೆಗೇರಿತು. ನಿಜವಾಗಿ ನೋಡಿದರೆ, ಪುಲ್ಲಯ್ಯ, ಆ ಕಟ್ಟಿಗೆಯನ್ನು ಹನ್ನೆರಡಾಣೆಗೆ ಕೊಳ್ಳುತ್ತಿದ್ದ. ಅಂದರೆ, ಹೊರೆ ಕಟ್ಟಿಗೆಗೆ ಅವನಿಗೆ ಗಿಟ್ಟುವ ಲಾಭ ಹನ್ನೆರಡಾಣೆಯಾಗಿತ್ತು. ಆ ಕಾಲ ದಲ್ಲಿ ಅಷ್ಟು ಲಾಭ ಗಳಿಸುವುದು ಹೆಚ್ಚೇ ಆಗಿತ್ತು. ಆದರೂ ಪುಲ್ಲಯ್ಯ, ಬೆಲೆಯನ್ನು ತಗ್ಗಿಸಲಿಲ್ಲ. ಈಗ ಅವನಿಗೆ ರಾಜಣ್ಣನ ಮತ್ತು ಊರಿನ ಶೆಟ್ಟಿಯ ವ್ಯವಹಾರಗಳು ನೆನಪಿಗೆ ಬಂದವು. ಇದುವರೆಗೆ, ಅವರು ಮತ್ತು ತನ್ನ ನಡುವೆ, ಬಹಳ ಅಂತರವಿತ್ತು. ಅವರು, ವ್ಯಾಪಾರಿಗಳಾಗಿದ್ದರು.—ತಾನು ಅವರ ಬಳಿ ಹೆಚ್ಚು ದುಡ್ಡು ಕೊಟ್ಟು ಸರಕುಗಳನ್ನು ಕೊಳ್ಳುವ ಸಾಮಾನ್ಯ ವ್ಯಕ್ತಿಯಾಗಿದ್ದ. ಆಗ, ಅವರು ಹೆಚ್ಚು ಲಾಭ ಗಳಿಸುತ್ತಿದ್ದಾರೆಂದು ರೇಗುತ್ತಿದ್ದ. ಆದರೆ, ಈಗ, ಅವರೂ ಸಹ ತನ್ನಂತೆಯೆ ಆಸೆ–ಆಮಿಷಗಳುಳ್ಳ ಮನುಷ್ಯರು—ಎಂಬುದನ್ನು ಪುಲ್ಲಯ್ಯ ಅರಿತುಕೊಂಡಿದ್ದ. ಮನುಷ್ಯ ರೆಲ್ಲರೂ ಮೂಲತಃ ಒಳ್ಳೆಯವರು—ಎಂಬ ರಾಮದಾಸುವಿನ ಮಾತಿನಲ್ಲಿನ ಸತ್ಯಾಂಶ ವನ್ನು ಪುಲ್ಲಯ್ಯ ಈಗ ಗ್ರಹಿಸಿದ್ದ.

ಇದೇ ರೀತಿ ಮೂರು ತಿಂಗಳು ಕಳೆದವು. ಈ ಮಧ್ಯೆ, ಎಲ್ಲಾ ವಸ್ತುಗಳ ಮತ್ತು ಧಾನ್ಯಗಳ ಬೆಲೆಗಳು ವಿಪರೀತವಾಗಿ ಏರಿದ್ದವು. ದೊಡ್ಡ ದೊಡ್ಡ ರೈತರು, ಏರಿದ ಬೆಲೆಗೆ ಧಾನ್ಯ ಮಾರಿ ದುಡ್ಡು ಗಂಟುಮಾಡಿಕೊಂಡರು. ಸಣ್ಣಪುಟ್ಟ ರೈತರು ಮಾತ್ರ

ನಿರ್ನಾಮವಾದರು. ಸಣ್ಣಪುಟ್ಟ ರೈತರನ್ನು ಪುಸಲಾಯಿಸಿ, ದುಡ್ಡಿನ ಆಸೆ ತೋರಿಸಿ, ದೊಡ್ಡ ರೈತರು ಅವರ ಭೂಮಿಯನ್ನು ಕೊಂಡರು. ಇನ್ನೂ ಕೆಲವರು, ತಾವು ಕೊಟ್ಟ ಸಾಲಕ್ಕೆ ಪ್ರತಿಯಾಗಿ, ಬಡ ರೈತನ ಭೂಮಿಯನ್ನೂ ಕಸಿದುಕೊಂಡರು. ಕೊಡಬೇಕಾದ ದುಡ್ಡಿಗೆ ಪ್ರತಿಯಾಗಿ ಧಾನ್ಯ ಅಳೆದುಕೊಟ್ಟರು. ಹಾಗೆ ಧಾನ್ಯ ಅಳೆದುಕೊಡುವಾಗ ಅದರ ಬೆಲೆಯನ್ನು ಕಾಳಸಂತೆಯಲ್ಲಿನ ಬೆಲೆಗೆ ಸಮನಾಗಿ ನಿಗದಿ ಮಾಡಿ, ಅದರಲ್ಲೂ ಲಾಭ ಗಳಿಸಿದರು. ದುಡ್ಡಿದ್ದ ರೈತರು, ಭೂಮಿಗಳು ಸಿಗುವಂತಿದ್ದರೆ, ಇನ್ನಷ್ಟು-ಮತ್ತಷ್ಟು ಜಮೀನು ಕೊಳ್ಳುತ್ತಿದ್ದರೇನೋ. ಆದರೆ, ಹಾಗೆ ಕೊಳ್ಳಲು ಭೂಮಿಗಳೇ ಇರದಿದ್ದರಿಂದ, ತಮ್ಮಲ್ಲಿದ್ದ ದುಡ್ಡನ್ನು ಹೇಗೆ ಖರ್ಚುಮಾಡಬೇಕೆಂಬುದು ಅವರಿಗೆ ಒಂದು ಸಮಸ್ಯೆಯಾಯಿತು. ಅಂತಲೇ ಅವರು ಹೊಸಹೊಸ ಉದ್ಯಮಗಳಿಗೆ ಕೈಹಾಕಿದರು. ಒಬ್ಬ ಹಿರಿಯ ರೈತ, ಊರಿನ ರಸ್ತೆಯ ಪಕ್ಕದಲ್ಲಿ ಅಕ್ಕಿ ಗಿರಣಿ ಸ್ಥಾಪಿಸಿದ. ಅದರೊಡನೆ ಅಕ್ಕಿಯ ವ್ಯಾಪಾರವನ್ನೂ ಪ್ರಾರಂಭಿಸಿದ. ಅಕ್ಕಿ ಗಿರಣಿ ಪ್ರಾರಂಭವಾದ ಒಂದು ತಿಂಗಳೊಳಗಾಗಿ ಊರಿನಲ್ಲಿನ ಹತ್ತು ಕುಟುಂಬಗಳು ತಮ್ಮ ಜೀವನಾಧಾರವನ್ನೇ ಕಳೆದುಕೊಂಡುವು. ಕೂಲಿ ಕೊಟ್ಟು ನೆಲ್ಲು ಕುಟ್ಟಿಸುವುದಕ್ಕಿಂತ ನೆಲ್ಲನ್ನು ಗಿರಣಿಗೆ ಹಾಕುವುದು ಸೋವಿಯಾಗಿತ್ತು. ಅದಲ್ಲದೆ, ಗಿರಣಿಗೆ ದುಡ್ಡು ಕೊಡುವ ಬದಲು, ನೆಲ್ಲಿನ ಹೊಟ್ಟು ಕೊಟ್ಟರೂ ಸಹ ಗಿರಣಿಯವರು ತೆಗೆದುಕೊಳ್ಳುತ್ತಿದ್ದರು. ಇದರಿಂದಾಗಿ, ದೇಸಾಯರಿಂದ ಹಿಡಿದು, ಊರಿನ ಮೂಲೆಯಲ್ಲಿದ್ದ ಮುದುಕಿಯ ವರೆಗೆ ಪ್ರತಿಯೊಬ್ಬರೂ, ನೆಲ್ಲನ್ನು ಗಿರಣಿಗೆ ಹಾಕಿಸುತ್ತಿದ್ದರು. ಇದುವರೆಗೆ ದೇಸಾಯರ ಮನೆಯಲ್ಲಿ ನೆಲ್ಲು ಕುಟ್ಟಿ ಹೊಟ್ಟೆ ತುಂಬಿಕೊಳ್ಳುತ್ತಿದ್ದ ಕೂಲಿ ಜನರು. ಬೇರೆ ಜೀವನೋಪಾಯ ಇಲ್ಲದೆ ನಿರ್ಗತಿಕರಾದರು. ಗಿರಣಿಗೆ ಹಾಕಿಸಿದ ಅಕ್ಕಿಯ ಅನ್ನ ಮಲ್ಲಿಗೆಯಂತೆ ಅರಳುತ್ತದೆಂದು ಊರಿನವರೆಲ್ಲ ಸಂತಸಪಟ್ಟರಾಗಲಿ, ಆ ಗಿರಣಿಯಿಂದ ಎಷ್ಟು ಜನರು ತಮ್ಮ ಜೀವನಾಧಾರವನ್ನು ಕಳೆದುಕೊಂಡು ಹೊಟ್ಟೆಗಿಲ್ಲದೆ ಒದ್ದಾಡುತ್ತಿದ್ದಾರೆಂಬುದನ್ನು ಯಾರೂ ಯೋಚಿಸಲೇ ಇಲ್ಲ. ಈ ಕೋಲಾಹಲದಲ್ಲಿ ದುಡ್ಡಿದ್ದವರು ಮತ್ತಷ್ಟು ಸಿರಿವಂತರಾದರು; ಬಡವರು ನಿರ್ಗತಿಕರಾದರು. ಮೊದಮೊದಲು, ದೇಸಾಯರ ಹೆಂಡತಿ ಮತ್ತು ಅವರ ಕುಟುಂಬದ ಮಹಿಳೆಯರೂ ಕೂಡ, ನೆಲ್ಲು ಕುಟ್ಟುವಲ್ಲಿ ನೆರವಾಗುತ್ತಿದ್ದರು. ಆದರೆ, ಈಗೀಗ, ದೇಸಾಯರ ಕುಟುಂಬದವರೊಬ್ಬರೆ ಅಲ್ಲದೆ, ಅನುಕೂಲಸ್ಥರಾದ ಇತರ ರೈತರ ಹೆಂಗಸರೂ ಸಹ, ಯಾವ ಕೆಲಸವನ್ನೂ ಮಾಡದೆ ಕೈಕಟ್ಟಿ ಕುಳಿತುಕೊಂಡು ದೇಹ ಬೆಳೆಸುತ್ತಿದ್ದರು. ದುಡಿಯದೆ ತಿನ್ನುವವನಿಗೆ ದಶರೋಗಗಳಂತೆ; ಊರಿನಲ್ಲಿನ ಅನುಕೂಲಸ್ಥ ಕುಟುಂಬಗಳಲ್ಲಿ ಒಂದಲ್ಲ ಒಂದು ರೋಗ, ಒಬ್ಬರಲ್ಲ ಒಬ್ಬರು ಅಸ್ವಸ್ಥರಾಗಿರುವುದು ತೀರ ಸಹಜವಾಗಿತ್ತು. ಅವರ ರೋಗಗಳು ಹೆಚ್ಚಾದಂತೆ, ಊರಿನಲ್ಲಿ ಒಬ್ಬ ವೈದ್ಯನಿರುವ ಅಗತ್ಯವೂ ಹೆಚ್ಚಿತ್ತು. ಪೊರಗೂರಿನ ವೈದ್ಯನ ಬಳಿ ಇದ್ದು, ಮದ್ದು ಮಾಡುವುದನ್ನು ಕಲಿತುಕೊಂಡವನೊಬ್ಬ,

ಅದೇ ಊರಿನಲ್ಲಿ ಬೀಡುಬಿಟ್ಟ. ಅವನಿಗೆ ಇಂಜೆಕ್ಷನ್ ಕೊಡುವುದು ತಿಳಿದಿತ್ತು. ಸೂಜಿ ಚುಚ್ಚದ ಹೊರತು ದುಡ್ಡು ಬರುವುದಿಲ್ಲವೆಂಬುದನ್ನು ಬಹುಬೇಗನೆ ಅರಿತು ಕೊಂಡ ಈ ವೈದ್ಯ, ನೆಗಡಿ–ಕೆಮ್ಮುಗಳಿಂದ ಹಿಡಿದು ವಿಷಮಜ್ವರಗಳಿಗೂ ಸಹ ಸೂಜಿ ಮದ್ದು ಕೊಡುವುದನ್ನು ಪ್ರಾರಂಭಿಸಿದ್ದ. ಇಂಜಕ್‌ಷನ್ನಿನ ಅವಶ್ಯಕತೆ ಇರದೇ ಇದ್ದಾಗ್ಯೂ ಕೂಡ, "ಡಿಸ್ಟಿಲ್ಡ್ ವಾಟರ್" ಚುಚ್ಚಿ, ಮೂರು ರೂಪಾಯಿ ಎಳೆಯುತ್ತಿದ್ದ. ಮುಗ್ಧ ರಾದ ಹಳ್ಳಿಯ ಜನರಿಗೆ, ಕಾಜಿನ ಸೀಸೆ ಕೊಯ್ದು (ಆಂಪೊಲ್) ಅದರಲ್ಲಿನ ಔಷಧಿ ಯನ್ನು ದೇಹದೊಳಕ್ಕೆ ಚುಚ್ಚಿಸಿಕೊಳ್ಳುವುದೊಂದೆ ಗೊತ್ತಿತ್ತು. ಆ ಔಷಧಿ ಯಾವುದು, ಏನು—ಎಂಬುದು ಅವರಿಗೆ ತಿಳಿಯುವಂತೆಯೂ ಇರಲಿಲ್ಲ.

ನೀಲಿ ಮತ್ತು ಪುಲ್ಲಯ್ಯ ಕೂಡ ಈ ಸಾಮಾಜಿಕ ಏರುಪೇರುಗಳಿಗೆ ತುತ್ತಾಗಿದ್ದರು. ಅಕ್ಕಿಯ ವ್ಯಾಪಾರವಂತೂ ಹೋಯಿತು; ಇನ್ನು ಕಟ್ಟಿಗೆಯ ವ್ಯಾಪಾರದಲ್ಲೇ ಜೀವನ ಸಾಗಿಸಿದರಾಯಿತೆಂದು ಪುಲ್ಲಯ್ಯ ನಿರ್ಧರಿಸಿದ್ದ. ಆದರೆ, ಅಲ್ಲೂ ಸಹ ಅವನಿಗೆ ನಿರಾಶೆ ಕಾದಿತ್ತು. ಬಂಜೆ ಗಿಡಗಳನ್ನು ಒಂದೊಂದಾಗಿ ಮಾರುವುದನ್ನು ಬಿಟ್ಟು, ಮರಗಳ ಸಾಲನ್ನೇ ಯಾರಾದರೊಬ್ಬರಿಗೆ ಕಾಂಟ್ರಾಕ್ಟ್ ಕೊಡುವ ಪದ್ಧತಿ ಜಾರಿಗೆ ಬಂದಿತ್ತು. ಇದರಿಂದಾಗಿ ದುಡ್ಡಿದ್ದವರೆ ಈ ವ್ಯಾಪಾರಕ್ಕಿಳಿದು ಮತ್ತಷ್ಟು ದುಡ್ಡು ಮಾಡಿ ಕೊಂಡರು. ಪುಲ್ಲಯ್ಯನಂತಹವರಿಗೆ, ಮರ ಕಡಿದು ಹಾಕಿದ ನಂತರ ಉಳಿಯುವ ದಿಮ್ಮಿಗಳು, ಬೊಡ್ಡುಗಳು ಸಿಗುತ್ತಿದ್ದುವು. ಆದರಿಂದ ತಮಗೆ ಬೇಕಾದ ಕಟ್ಟಿಗೆಯನ್ನು ಪಡೆಯಲು ಅವರು ಆ ಮರದ ಬಡ್ಡಿನ ಸುತ್ತಲೂ ತೋಡಬೇಕಾಗಿತ್ತು. ಹಾಗೆ ತೆಗ್ಗು ತೋಡಿ ಮರದ ಬೊಡ್ಡನ್ನು ಹೊರ ತೆಗೆಯಬೇಕಾಗುತ್ತಿತ್ತು. ಇದು ಅಷ್ಟೇನೂ ಸುಲಭ ವಾದ ಕೆಲಸವಾಗಿರಲಿಲ್ಲ. ಕಷ್ಟಪಟ್ಟರೂ ಇದರಲ್ಲಿ ಅಷ್ಟೇನೂ ಲಾಭ ಗಿಟ್ಟುತ್ತಿರಲಿಲ್ಲ. ಹೀಗಾಗಿ ವಾರದ ಒಳಗಾಗಿ ಪುಲ್ಲಯ್ಯ ಬೆವರು ಸುರಿಸುವುದಷ್ಟೇ ಆಯಿತು. ಈ ತೊಳಲಾಟದಲ್ಲಿ ಆತ ಸೊರಗಿಹೋದ.

ಒಂದು ದಿನ ಬೆಳಿಗ್ಗೆ ಹತ್ತು ಗಂಟೆಗೆಲ್ಲಾ, ಕೊಡಲಿ, ಸಲಕಿ ಭುಜದ ಮೇಲೆ ಹೇರಿ ಕೊಂಡು, ಊರಿನ ದಕ್ಷಿಣಕ್ಕಿದ್ದ ತೋಟದತ್ತ ಪುಲ್ಲಯ್ಯ ಹೊರಟ. ಆಗ ಮಲ್ಲೇಶಿ, ಯಾರೊ ದೊಂಬರಾಟದವರು ಬಂದಿದ್ದರಿಂದ, ಇತರ ಹುಡುಗರ ಜೊತೆ ಹೋಗಿದ್ದ.

ಪುಲ್ಲಯ್ಯ, ತೋಟವನ್ನು ತಲುಪಿ, ಭುಜದ ಮೇಲಿನ ಕೊಡಲಿ ಮತ್ತು ಸಲಾಕಿಯನ್ನು ನೆಲದ ಮೇಲೆ ಹಾಕಿ, ಪಂಚೆಯನ್ನು ಮೇಲಕ್ಕೆತ್ತಿ ಬಿಗಿಯಾಗಿ ಕಟ್ಟಿಕೊಂಡ. ಗಿರಿಜಾ ಮೀಸೆಗಳನ್ನು ಒಮ್ಮೆ ತೀಡಿಕೊಂಡು, ಗಿಡದ ಬೊಡ್ಡಿನ ಸುತ್ತಲೂ ಅಗೆಯತೊಡಗಿದ. ಬಿಸಿಲು ಚುರುಕಾದರೂ ಪುಲ್ಲಯ್ಯ ಕೆಲಸದಲ್ಲಿ ಮಗ್ನನಾಗಿದ್ದ. ತೋಟದಲ್ಲಿನ ಗುಬ್ಬಿ ಗಳು ಇನ್ನೂ ಚಿಲಿಪಿಲಿಗುಟ್ಟುತ್ತಿದ್ದವು. ತೋಟದ ಆಚೆಗಿದ್ದ ನಡುಗದ್ದೆಯಲ್ಲಿ ಬೆಳೆದು ನಿಂತ ಪೈರು, ಗಾಳಿಗೆ ತಲೆದೂಗುತ್ತಿತ್ತು. ದೂರದಲ್ಲಿ ಎಲ್ಲಿಯೋ, ಯಾರೊ ಕೇಕೆ

ಹಾಕುತ್ತಿದ್ದರು. ಒಂದು ತೋಳ ಬಿಲದಿಂದ ಬಿಲಕ್ಕೆ ಪಾರಿ ಹೋಗುವುದು—ಹಿಂದಿರುಗಿ ಬರುವುದು ನಡೆದಿತ್ತು.

ಪುಲ್ಲಯ್ಯ ತನ್ನ ಕೆಲಸದಲ್ಲಿ ಸಂಪೂರ್ಣವಾಗಿ ಮಗ್ನನಾಗಿದ್ದ. ತನ್ನ ಸುತ್ತಮುತ್ತ ಏನು ನಡೆಯುತ್ತಿದೆ—ಎಂಬುದು ಅವನ ದೃಷ್ಟಿಗೆ ಬೀಳಲೇ ಇಲ್ಲ.

ಆಳೆತ್ತರದ ತೆಗ್ಗು ತೋಡುವುದರೊಳಗೆ, ಸೂರ್ಯ ನೆತ್ತಿಗೇರಿದ್ದ. ಆ ತೆಗ್ಗಿನಲ್ಲಿ ಮತ್ತೆ ಇಳಿಯುವುದಕ್ಕೂ ಮುಂಚೆ, ಒಮ್ಮೆ ಸುತ್ತಲೂ ನೋಡಿದ. ಒಬ್ಬ ನರಪಿಳ್ಳೆಯೂ ಕಣ್ಣಿಗೆ ಬೀಳಲಿಲ್ಲ. ಕೊಡಲಿಯನ್ನು ಎತ್ತಿ ಭುಜದ ಮೇಲಿಟ್ಟುಕೊಂಡು, ನಿಧಾನವಾಗಿ ತೆಗ್ಗಿನಲ್ಲಿಳಿದ—ಪುಲ್ಲಯ್ಯ. ತೆಗ್ಗಿನಲ್ಲಿ ಇಳಿಯುವುದಕ್ಕೂ ಮುಂಚೆ, ಪುಲ್ಲಯ್ಯ ಮತ್ತೊಮ್ಮೆ ಸುತ್ತಲೂ ದೃಷ್ಟಿ ಬೀರಿದ. ಪ್ರಖರವಾದ ಬಿಸಿಲು, ಕಣ್ಣು ಕುಕ್ಕಿತು. ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ, ಯಾರದೊ ಧ್ವನಿ ಕೇಳಿಸಿದಂತಾಯಿತು. ಯಾರದೊ ಪರಿಚಿತ ಧ್ವನಿ. ಆದರೆ, ಯಾರ ಧ್ವನಿ—ಎಂಬುದನ್ನು ಮಾತ್ರ ಗುರುತಿಸದಾದ. ಆ ಕ್ಷಣದಲ್ಲಿ, ಅದೇಕೊ–ಏನೊ, ಸತ್ತ ಅಪ್ಪಣ್ಣನ ನೆನಪಾಯಿತು. ಆತನ ಜೀವನ, ಆತನ ದುಃಖತಪ್ತವಾದ ಬಾಳು, ಪುಲ್ಲಯ್ಯನ ಸ್ಮೃತಿಪಟಲದ ಮೇಲೆ ಮೂಡಿತು. ತನ್ನ ಬದುಕನ್ನು ಅಪ್ಪಣ್ಣನ ಬದುಕಿನೊಡನೆ ಹೋಲಿಸಿಕೊಂಡ.

ಅಪ್ಪಣ್ಣ ತನ್ನಂತೆಯೇ ಕಷ್ಟಜೀವಿಯಾಗಿದ್ದ. ಗೇಣಿಯ ಮೇಲೆ ಹೊಲ ಮಾಡುತ್ತಿದ್ದ. ಅವನದಾಗಿದ್ದ ಒಂದು ಎಕರೆ ಭೂಮಿ, ಅದು ಹೇಗೊ ದೇಸಾಯರ ತುತ್ತಾಗಿತ್ತು. ಗಂಡ–ಹೆಂಡತಿ, ಮೂರು ಮಕ್ಕಳು. ಹಿರಿಯ ಮಗ ಮಲ್ಲೇಶಿಯಪ್ಪಿದ್ದ. 'ಅಪ್ಪಾ'—ಎಂದು ಕರೆಯುವ ಮಗನನ್ನು ಅಪ್ಪಣ್ಣ, "ಅಪ್ಪಾ"—ಎಂತಲೇ ಕರೆಯುತ್ತಿದ್ದ. ಇದ್ದ ಹೊಲ ಕೈಬಿಟ್ಟು ಹೋದ ಮೇಲೆ, ಅವನೂ ಸಹ ಕಟ್ಟಿಗೆಯ ಹೊರೆ ಮಾರಿ ಹೊಟ್ಟೆ ತುಂಬಿಕೊಳ್ಳಹತ್ತಿದ್ದ. ಕಳೆದ ಬೇಸಿಗೆಯಲ್ಲಿ, ಪಕ್ಕದ ತೋಟದಲ್ಲಿ ಗಿಡದ ಬೊಡ್ಡಿನ ಸುತ್ತಲೂ ತೆಗ್ಗು ತೋಡಿ, ಕೊಡಲಿ ಹಿಡಿದು ತೆಗ್ಗಿನಲ್ಲಿಳಿದಾಗ, ಮೇಲಿನ ಮಣ್ಣು ಕುಸಿದು ಬಿದ್ದು, ಉಸಿರು ಕಟ್ಟಿ, ಒದ್ದಾಡಿ ಅಸು ನೀಗಿದ್ದ—ಅಪ್ಪಣ್ಣ...... ಮೇಲಿನಿಂದ ಮಣ್ಣು ಕುಸಿದು ಬಿದ್ದಾಗ, "ತೆಗ್ಗಿನಾಗ ಬಿದ್ದೀನಿ. ಮ್ಯಾಲೆ ಎತ್ತರೊ"—ಎಂದು ಒದರಿಕೊಂಡಿದ್ದನಂತೆ. ಆದರೆ, ಅವನ ಕೂಗನ್ನು ಕೇಳಿಸಿಕೊಳ್ಳಲು ಆಗ ಅಲ್ಲಿ ಯಾರೂ ಇರಲಿಲ್ಲ. ಈಗ ಅದೇ ಅಪ್ಪಣ್ಣನ ಧ್ವನಿ ಸ್ಪಷ್ಟವಾಗಿ ಕೇಳಿಸಿದಂತಾದಾಗ, ಪುಲ್ಲಯ್ಯ, ಅಪ್ಪಣ್ಣನ ಭೂತವೇನಾದರೂ ಈ ಆಟ ಹೂಡಿರಬಹುದೇ—ಎಂದು ಯೋಚಿಸಿದ. ಆದರೆ, "ನನ್ನ ಜೀವ ತೊಗೊಳ್ಳೊದರಿಂದ ಅಪ್ಪಣ್ಣನಿಗೇನು ಲಾಭ" ಎಂದೂ ಯೋಚಿಸಿದ. "ಈ ಗಂಡುಗಲಿ ಪುಲ್ಲಯ್ಯ, ದೆವ್ವಭೂತಗಳಿಗೆ ಹೆದರುವುದಿಲ್ಲ"—ಎಂದು ಮನಸ್ಸಿನಲ್ಲೆ ಅಂದುಕೊಂಡು, ಹುಮ್ಮಸ್ಸಿನಿಂದ ತೆಗ್ಗಿನಲ್ಲಿಳಿದ. ಕೊಡಲಿ ಎತ್ತಿ ಮರದ ಬೊಡ್ಡಿಗೆ ಎರಡು ಏಟು ಹಾಕಿದಾಗ, ಸಡಿಲವಾಗಿದ್ದ ಮೇಲಿನ ಮಣ್ಣು ತಲೆಯ ಮೇಲೆ ಬಿತ್ತು. ತಲೆ ಝಾಡಿಸಿ ಮಣ್ಣನ್ನು ಕೊಡಹಿಕೊಳ್ಳುತ್ತಿದ್ದಾಗ, ಮತ್ತೆ, ಯಾರೊ ಕೂಗುತ್ತಿರು

ವುದು ಅವನಿಗೆ ಕೇಳಿಸಿತು. ಸತ್ತ ಅಪ್ಪಣ್ಣನ ಪ್ರೇತ ತನ್ನ ಸಮೀಪಕ್ಕೆ ಬಂದಂತೆ ಭಾಸವಾದಾಗ, ತಾನೂ ಸಹ ಅವನಂತೆಯೆ ಮರಣವನ್ನಪ್ಪುವೆನೇನೊ ಎಂದು ಪುಲ್ಲಯ್ಯ ಭಯಪಟ್ಟ. ಅವರೊಡನೆ ತಾನು ಸತ್ತಲ್ಲಿ, ತನ್ನ ಹೆಂಡತಿ–ಮಕ್ಕಳು, ಅಪ್ಪಣ್ಣನ ಹೆಂಡತಿ–ಮಕ್ಕಳಂತೆ, ಬೀದಿಯಲ್ಲಿ ಭಿಕ್ಷೆ ಬೇಡಬೇಕಾಗುತ್ತದೇನೋ—ಎಂಬ ಯೋಚನೆ ಬಂದಾಗ, ಪುಲ್ಲಯ್ಯ ಕಳವಳಗೊಂಡ.

ತಲೆಯಲ್ಲಿ ಈ ಯೋಚನೆಗಳು ಸುಳಿದಾಗ, ಆ ತೆಗ್ಗಿನಲ್ಲಿರಲು ಪುಲ್ಲಯ್ಯನಿಗೆ ಧೈರ್ಯವಾಗಲಿಲ್ಲ. ಆದರೆ, ಕಟ್ಟಿಗೆಯ ಹೊರೆ ಮಾಡಿ ಮಾರಿಕೊಂಡು ಬರದ ಹೊರತು, ರಾತ್ರಿ, ಹೊಟ್ಟೆಗೆ ಹಿಟ್ಟು ಸಿಗುವುದಿಲ್ಲವೆಂಬ ಯೋಚನೆ ಬಂದಾಗ್ಯೂ ಕೂಡ, ಅಲ್ಲಿ ನಿಲ್ಲಲು ಅವನಿಗಾಗಲಿಲ್ಲ. ಈಗಲೂ ಸಹ, ತನ್ನನ್ನು ಯಾರೊ ಕರೆಯುತ್ತಿರುವಂತೆ ಪುಲ್ಲಯ್ಯನಿಗೆ ಅನಿಸಿತು. ಆತ ಮೇಲೇರಿ ಬಂದು, ಸುತ್ತಲೂ ಕಣ್ಣು ಹಾಯಿಸಿದ. ಯಾರೂ ಕಾಣಲಿಲ್ಲ. ಕೊನೆಗೆ, ಸಲಿಕೆ ಮತ್ತು ಕೊಡಲಿಯನ್ನು ಹೊತ್ತು ಮನೆಯತ್ತ ಹೆಜ್ಜೆ ಹಾಕತೊಡಗಿದ. ಅವನು ಮುಂದೆ ಮುಂದೆ ಹೋದಂತೆಲ್ಲಾ, ಆ ಕೂಗು ಸನ್ನಿಹಿತವಾಗುತ್ತಿರುವಂತೆ ಪುಲ್ಲಯ್ಯನಿಗೆ ಭಾಸವಾಯಿತು. ಹತ್ತು ಹೆಜ್ಜೆ ಮುಂದೆಹೋದಾಗ, ಮತ್ತೆ ಆ ಧ್ವನಿ ಕೇಳಿಸಿತು. ಅದನ್ನು ಕೇಳಿ ಪುಲ್ಲಯ್ಯ ಗಕ್ಕನೆ ನಿಂತ. ಈಗ ಆ ಧ್ವನಿಯನ್ನು ಕೇಳಿ ಅವನಲ್ಲಿ ಹೇಳಲಾಗದ ಹುಮ್ಮಸ್ಸು–ಉತ್ಸಾಹ ತಲೆದೋರಿತ್ತು. ಓಡುತ್ತಾ, ಆ ಕೂಗು ಬಂದ ದಿಕ್ಕಿನತ್ತ ಹೋದ. ಎತ್ತರವಾದ ಉಸುಕಿನ ದಿಬ್ಬ. ಆ ಉಸುಕಿನ ದಿಬ್ಬದಲ್ಲಿ ಸಿಕ್ಕಿಹಾಕಿಕೊಂಡಿದ್ದ ಮಲ್ಲೇಶಿ, ತಂದೆಯನ್ನು ಕೂಗುತ್ತಿದ್ದ. ದೊಂಬರಾಟ ನೋಡಿ ಮನೆಗೆ ಹಿಂದಿರುಗಿದಾಗ, ತಂದೆ ಮನೆಯಲ್ಲಿ ಇರದಿದ್ದುದನ್ನು ಗಮನಿಸಿ, ಆತನನ್ನು ಹುಡುಕಿಕೊಂಡು ಹೊರಟ ಮಲ್ಲೇಶಿಯ ಕಾಲುಗಳು, ಬಿಸಿಲಿನಲ್ಲಿ ಕಾದ ಉಸುಕಿನಲ್ಲಿ ಸಿಕ್ಕಿಕೊಂಡಿದ್ದವು. ಅಲ್ಲಿಂದ ಎದ್ದು ಬರಲು ಕೈಲಾಗದೆ ಮಲ್ಲೇಶಿ, ಒಂದೇ ಸಮನೆ, "ಅಪ್ಪಾ–ಅಪ್ಪಾ"—ಎಂದು ಕೂಗಿಕೊಂಡಿದ್ದ. ಪುಲ್ಲಯ್ಯ, ಮಗನನ್ನು ನೋಡಿ, ಒಂದೆ ನೆಗೆತಕ್ಕೆ ಆತನನ್ನು ಸಮೀಪಿಸಿದ. ಸಿಕ್ಕಿಹಾಕಿಕೊಂಡಿದ್ದ ಮಗನನ್ನು ಎತ್ತಿ ಎದೆಗೆ ಒತ್ತಿಕೊಂಡ. ತಂದೆ–ಮಗ, ಇಬ್ಬರ ಕಣ್ಣುಗಳಲ್ಲೂ ನೀರಾಡಿತು. ಪುಲ್ಲಯ್ಯ, ಹಾಗೆಯೇ ಮಗನನ್ನು ಅಪ್ಪಿಕೊಂಡು ಕುಳಿತಿದ್ದ. ತಂದೆ–ಮಗನ ಬೆವರು ಬೆರೆತು ಒಂದಾಗಿತ್ತು.

## [ 23 ]

ಪುಲ್ಲಯ್ಯ, ಈಗ ದಿನದಿನಕ್ಕೆ ಸೊರಗಹತ್ತಿದ. ಎಂದೂ ಇರದಿದ್ದ ಚಿಂತೆ, ಈಗ ಅವನನ್ನು ನೆರಳಾಗಿ ಕಾಡುತ್ತಿತ್ತು. ದುಡಿದು ತಿನ್ನಬೇಕೆಂದರೂ, ಕರೆದು ಕೆಲಸ ಕೊಡುವವರು

ಆ ಊರಿನಲ್ಲಿರಲಿಲ್ಲ. ಕಷ್ಟಪಟ್ಟು ಕಟ್ಟಿಗೆಯ ಹೊರೆಹೊತ್ತು ಊರೂರು ತಿರುಗಿದರೂ ಕೂಡ, ಉದರ ನಿರ್ವಹಣೆ ಆಗುತ್ತಿರಲಿಲ್ಲ. ಸರಿಯಾದ ಆರೈಕೆ ಇಲ್ಲದೆ ಮಕ್ಕಳೂ ಸಹ ಸೊರಗತಹತ್ತಿದವು. ಮುಂದೇನು—ಎಂಬ ಯೋಚನೆಯಿಂದ, ಪುಲ್ಲಯ್ಯ ಮತ್ತಷ್ಟು ಕುಗ್ಗಿದ.

ನೀಲಿ ಮಾತ್ರ, ಎಂದಾದರೂ ಅಪ್ಪಿ–ತಪ್ಪಿ ಇಂತಹ ಯೋಚನೆ ಬಂದರೂ, ಕೂಡಲೇ ಅದನ್ನು ಮರೆಯಲು ಪ್ರಯತ್ನಿಸುತ್ತಿದ್ದಳು. ರಾಟಿ ತಿರುವುವುದು, ಮನೆಯ ಇತರ ಕೆಲಸಕಾರ್ಯಗಳಲ್ಲಿ ತೊಡಗುವುದು—ಇವುಗಳಲ್ಲೆ ಮನಸ್ಸನ್ನು ನಾಟಿ, ಚಿಂತೆಯ ಹುಳುವನ್ನು ದೂರವಿಟ್ಟಿದ್ದಳು.

ಸಮಯಕ್ಕೆ–ಸಂದರ್ಭಕ್ಕೆ, ಪುಡಿಕಾಸನ್ನಾದರೂ ಸಾಲ ಕೊಡುವವರು ಆ ಊರಿನಲ್ಲಿ ಉಳಿದಿರಲಿಲ್ಲ. ಇದುವರೆಗೆ ಅವರ ಬಳಿ ಸಾಲ ತೆಗೆದುಕೊಂಡು ಹೋದವರು ಕೂಡ, ಏನನ್ನೂ ಹಿಂದಿರುಗಿಸಿರಲಿಲ್ಲ. ಸಾಲ ಕೇಳಲು ಹೋದಾಗ, "ಕೊಟ್ಟ ಸಾಲ ಹಿಂದಿರು ಗಿಸ್ತೀರಿ ಅನ್ನಲಿಕ್ಕೆ ಏನದ ನಿಮ್ಮ ಹತ್ತಿರ"—ಎಂದು ಪ್ರಕಟವಾಗಿ ಕೇಳಲಿಲ್ಲವಾದರೂ, ಇಲ್ಲವೆಂದು ಕೈಯಾಡಿಸಿ ಕಳುಹಿಸುತ್ತಿದ್ದರು. "ಎರಡು ಸೇರು ಅಕ್ಕಿ ಕಡ ಕೊಡು"—ಎಂದು ಪುಲ್ಲಯ್ಯ ಶೆಟ್ಟಿಯನ್ನು ಕೇಳಿದಾಗ, "ಮನ್ಯಾಗ ಇದ್ದೂ ಇಲ್ಲಂತ ಹೇಳುವಷ್ಟು ನೀಚ—ಅಂತ ತಿಳಿದಿದೇನು ನನ್ನ"—ಎಂದು ರೇಗಿದ. ಪುಲ್ಲಯ್ಯನಿಗೂ ರೇಗಿತು. ಹಿಂದೆ ಮುಂದೆ ಯೋಚಿಸದೆ, "ಬರಿ ನೀಚನಷ್ಟೆ ಅಲ್ಲ, ಮಹಾ ನೀಚ ನೀನು"—ಎಂದು ಬಿಟ್ಟ. ಶೆಟ್ಟಿ, ಈ ಪ್ರಕರಣವನ್ನೇ ಮುಂದಿಟ್ಟುಕೊಂಡು, ಊರಿನ ಹಿರಿಯರ ಮುಂದೆ, ಪುಲ್ಲಯ್ಯನ ವಿರುದ್ಧ ಏನೆಲ್ಲ ಹೇಳಿದ. ಪುಲ್ಲಯ್ಯನಿಗೆ, ದಿನದಿನಕ್ಕೆ ಮಗ ಮಲ್ಲೇಶಿ ಸೊರಗುತ್ತಿರುವುದನ್ನು ನೋಡಲಾಗಲಿಲ್ಲ. ಒಂದು ದಿನ ಮಲ್ಲೇಶಿ ಊಟಕ್ಕೆ ಕುಳಿತಾಗ ಹಠಮಾಡಿದ. ಪುಲ್ಲಯ್ಯ, "ನನ್ನ ಮಗ ತಿಂದುಂಡು ಇರಬೇಕಾದ ಕಾಲದಾಗ ನನಗ ಈ ಗತಿ ಬರಬೇಕs"—ಎಂದು ಸಂಕಟಪಟ್ಟ.

ಪುಲ್ಲಯ್ಯನಿಗೆ, ಊರಿನಲ್ಲಿ ಈ ಮೊದಲಿದ್ದ ಗೌರವ ಈಗ ಉಳಿದಿರಲಿಲ್ಲ. ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ, ಊರಿನಲ್ಲಿ ನಡೆಯುವ ಉತ್ಸವಗಳಲ್ಲಿ, ಹಬ್ಬ–ಹುಣ್ಣಿಮೆಯ ದಿನಗಳಲ್ಲಿ ಮುಂದಾಗಿ ನಿಂತು ಕೆಲಸಮಾಡುತ್ತಿದ್ದ ಪುಲ್ಲಯ್ಯನನ್ನು ಈಗ ಕೇಳುವವರಾರೂ ಇರಲಿಲ್ಲ. ಒಂಟಿಯಾಗಿದ್ದಾಗ, ತಾನು ತಿಂದುಂಡು ಉಳಿಯು ತ್ತಿದ್ದ ರಾಸಿ–ರಾಸಿ ಧಾನ್ಯವನ್ನು, ಆಗಾಗ ಊರಿನಲ್ಲಿ ನಡೆಯುತ್ತಿದ್ದ ಸಂತೋಷಕೂಟ ಗಳಿಗೆ, ಜಾತ್ರೆಗೆ ಕೊಟ್ಟುಬಿಡುತ್ತಿದ್ದ. ಅವನ ಈ ಉದಾರತನದಿಂದಲೇ, ಅವನು ತನ್ನ ಮದುವೆಗಾಗಿ ಬೇರೆಯವರಿಂದ ಸಾಲ ಪಡೆಯಬೇಕಾಯಿತು. ಆದರೆ, ಈಗ, ಅವನು ಒಬ್ಬ ಸಾಮಾನ್ಯ ಕೂಲಿ. ನಾಲ್ಕು ಜನರ ಹೊಲಗದ್ದೆಗಳಲ್ಲಿ, ಅವರು ಹೇಳಿದಷ್ಟು ಕೆಲಸ ಮಾಡಿ, ಸಂಜೆಗೆ ಅವರು ಕೊಡುತ್ತಿದ್ದ ಧಾನ್ಯ ಅಳೆಸಿಕೊಂಡು ಬಂದು ಹೊಟ್ಟೆ ತುಂಬಿಕೊಳ್ಳುವ ಬಡ ಕೃಷಿ ಕಾರ್ಮಿಕನಾಗಿದ್ದ. ತನ್ನ ಹಣೆಯ ಬರಹವೇ ಹೀಗಿರುವಾಗ,

ತನ್ನ ಮಗನೂ ಸಹ ತನ್ನಂತೆಯೇ ಕೂಲಿ–ನಾಲಿ ಮಾಡಿ ಹೊಟ್ಟೆ ತುಂಬಿಕೊಳ್ಳಬೇಕೆ ಹೊರತಾಗಿ, ಊರಿಗೆ ಕೀರ್ತಿ ತರುವಂತಹ ಯಾವ ಮಹಾಕಾರ್ಯ ಮಾಡಬಲ್ಲ?—ಈ ಎಲ್ಲ ಯೋಚನೆಗಳಿಂದ ನರಳುತ್ತಿದ್ದ ಪುಲ್ಲಯ್ಯ, ರಾತ್ರಿ ಸರಿಯಾಗಿ ನಿದ್ದೆ ಕೂಡ ಮಾಡುತ್ತಿರಲಿಲ್ಲ. ಏನು ಮಾಡಿದಲ್ಲಿ ನನ್ನ ಮಗನನ್ನು ನಾನು ಸುಖವಾಗಿಡಬಹುದು? ಕಳ್ಳತನಕ್ಕೆ ಇಳಿಯಬಹುದು. ಆದರೆ, ಆ ದುಡ್ಡು ಎಷ್ಟು ಕಾಲ ಬಂದೀತು? ಉಪವಾಸ ಸತ್ತರೂ ಚಿಂತೆಯಿಲ್ಲ; ಕೆಟ್ಟ ಕೆಲಸಕ್ಕೆ ಕೈಹಾಕಬಾರದೆಂದು ಪ್ರತಿಜ್ಞೆ ಮಾಡಿದ ಪುಲ್ಲಯ್ಯ.

ಈಚೀಚೆಗೆ, ಪುಲ್ಲಯ್ಯ ತನ್ನ ಮನಸ್ಸಿನ ಸ್ಥಿಮಿತ ಕಳೆದುಕೊಳ್ಳತೊಡಗಿದ. ಊರಿನ ಹಿರಿಯರನ್ನು ತರಹೆತರಹವಾಗಿ ಪೀಡಿಸಹತ್ತಿದ. ತನ್ನ ಹೊಲದ ಮೇಲೆ ಇನ್ನೇನೂ ಕೊಡಲು ಸಾಧ್ಯವಿಲ್ಲವೆಂದು ರಾಜಣ್ಣ ಎಷ್ಟು ಹೇಳಿದರೂ ಕೇಳದೆ, ಅವನ ಮೇಲೆ ರೇಗಾಡಿದ. ಊರಿನಲ್ಲಿನ ಬಡವರು, ಸಣ್ಣಪುಟ್ಟ ಜನರಂತೂ ಪುಲ್ಲಯ್ಯನಿಗೆ ಸಹಾಯ ಮಾಡುವ ಸ್ಥಿತಿಯಲ್ಲಿರಲಿಲ್ಲ. ಇನ್ನು ಊರಿನ ದೊಡ್ಡವರು, ಇವನ ಕೂಗಾಟ–ರೇಗಾಟವನ್ನು ಸಹಿಸಿಕೊಳ್ಳಲಾಗದೆ, ಹೇಗಾದರೂ ಮಾಡಿ ಅವನ ಕೈಗೆ ಚಿಪ್ಪು ಕೊಡಲು ಸನ್ನಾಹ ನಡೆಸಿದರು.

ಒಂದು ದಿನ, ನರಸಿಂಹನ ಮನೆಯ ಅಂಗಳದಲ್ಲಿ ದೊಡ್ಡ ವಾಗ್ವಾದ ನಡೆದಿತ್ತು. ಕುಡ್ಡ ವೆಂಕಣ್ಣ, "ಈ ಊರು ಸುಟ್ಟು ಭಸ್ಮವಾಗದ ಹೊರತು, ಒಳ್ಳೆಯ ದಿನಗಳು ಬರುವುದಿಲ್ಲ. ನಾಲ್ಕು ಖೂನಿಗಳಾಗದ ಹೊರತು, ಬಡ ಜನರ ಹೊಟ್ಟೆ ತಣ್ಣಗಾಗದು"—ಎಂದೆಲ್ಲ ಕೂಗಾಡಿದಾಗ, ಪುಲ್ಲಯ್ಯ ಅವನನ್ನು ಸಮರ್ಥಿಸಿ ಮಾತನಾಡಿದ.

ನರಸಿಂಹನಿಗೆ ಮಾತ್ರ, ಈ ಮಾತು ಏಕೊ ಒಪ್ಪಿಗೆಯಾಗಲಿಲ್ಲ. "ಯಾರೂ ಬಂದು ನಮ್ಮ ಮಕ್ಕಳನ್ನ ಎತ್ತಿಕೊಂಡು ಹೋಗಿಲ್ಲ. ಯಾರೂ ಬಂದು ನಮ್ಮ ಮನಿ ಹೊಕ್ಕಿಲ್ಲ. ಅಂದ ಮ್ಯಾಲೆ ಖೂನಿ ಮಾಡೊ ಮಾತು ಯಾಕ? ಊರಾಗಿನ ಹತ್ತು ಜನರಿಗೆ, ಆಕಾಶದೆತ್ತರಕ್ಕ ಹಾರಬೇಕೆಂಬ ಹಂಬಲ. ಸುಖದ ಸುಪ್ಪತ್ತಿಗೆಯ ಮೇಲೆ ಕುಳಿತು, ಚಂದಿರನನ್ನು ಮುಟ್ಟುವ ಆಸೆ. ಈ ಆಸೆಗೆ ಅಂತ್ಯವಿಲ್ಲ. ಆಸೆಯ ಏಣಿ ಒಮ್ಮೆ ಮುರಿದುಬಿದ್ದರ, ಮೈ ತಾನೇ ಹಣ್ಣಾಗ್ತದ—ಸ್ವಲ್ಪ ಸಹನೆ ತಾಳ್ರಿ. ಸಹನೆಯೇ ಶಕ್ತಿ ಅಂತಾರ—ತಾಳಿದವನೆ ಬಾಳಿಯಾನು"—ಎಂದೆಲ್ಲ ಆತ ಬುದ್ಧಿ ಹೇಳಿದ.

ಆದರೆ, ಪುಲ್ಲಯ್ಯನಿಗೆ ಮತ್ತು ವೆಂಕಣ್ಣನಿಗೆ ನರಸಿಂಹನ ಈ ಮಾತು ಸರಿಬರಲಿಲ್ಲ. "ಊರು, ಊರಾಗಿನ ಜನರು ಸುಖ–ಸಂತೋಷದಿಂದ ಇರಬೇಕಾದರ, ಈಗಿರುವ ಬೆಲೆಗಳು ಅರ್ಧಕ್ಕೆ ಅರ್ಧದಷ್ಟು ಇಳಿಬೇಕು. ಆದರ, ಒಳ್ಳೆ ಮಾತಿನಿಂದ ಇದು ಆಗಾಣಿಲ್ಲ"—ಎಂದು ಅವರು ವಾದಿಸಿದರು.

ಕುಡ್ಡ ವೆಂಕಣ್ಣ ಮನೆಮನೆಗೂ ಹೋಗಿ ಇದೇ ಮಾತನ್ನು ಹೇಳಿದ. "ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಳ್ಳುವ ನಿನಗ್ಯಾಕಲಾ ಇಲ್ಲದ ಉಸಾಬರಿ. ಕಣ್ಣು ಕೀಳಿಸಿಕೊಂಡು ಕುಡ್ಡ ಆಗೀದಿ. ಸುಮಾಕ ಒಂದು ಮೂಲಿ ಹಿಡಿದು ಕೂಡಬಾರದ"—ಎಂದು ಅವನನ್ನು

ಗದರಹತ್ತಿದರು ಊರ ಜನರು. ಆಗ ವೆಂಕಣ್ಣ, "ಕತ್ತಿಗಳು. ಬಿಸಿ ರಕ್ತ ಇಲ್ಲದ ನಪುಂಸಕರು. ಕೈಲಾಗದ ಹೇಡಿಗಳು"—ಎಂದು ಗೊಣಗುತ್ತಿದ್ದ.

ಪುಲ್ಲಯ್ಯ ಆ ದಿನ ಮನೆಗೆ ಹಿಂದಿರುಗಿದಾಗ ಮನೆಯಲ್ಲಿ ಒಲೆ ಹೊತ್ತಿರದಿದ್ದುದನ್ನು ಗಮನಿಸಿದ. ಸಂಕಟಗೊಂಡ ಪುಲ್ಲಯ್ಯ, ಮಗನನ್ನು ಕೂಡಿಸಿಕೊಂಡು, ರಾಜಣ್ಣನನ್ನು ಊರಿನಲ್ಲಿನ ಹಿರಿಯರನ್ನು ಶಪಿಸತೊಡಗಿದ. ಇದನ್ನು ಕೇಳಿಸಿಕೊಂಡ ಮುದುಕಿ, "ಯಾಕಪ್ಪ ಮಂದೀನ್ನ ಶಪಿಸಿ, ಬಾಯಿ ಹಾಳುಮಾಡಿಕೊಳ್ತೀದಿ. ಮಗನ ಮುಂದ ಕೂತು ಹಿಂಗೆಲ್ಲಾ ರೇಗಾಡಿದರ, ಆ ಎಳೆ ಮನಸ್ಸು ಹಾಳಾಗ್ತದ...... ನಿನಗಿದ್ದ ಬುದ್ಧಿ, ತಿಳಿವಳಿಕೆ ಅವರಿಗಿಲ್ಲ. ಇದ್ದಿದ್ದರ ಈ ರೀತಿ ಆಗ್ತಿರಲಿಲ್ಲ. ಎಲ್ಲಾರೂ ನನ್ನ ಅಣ್ಣಂದಿರು, ತಮ್ಮಂದಿರು ಅಂತ ತಿಳಕೊಂಡು, ಅವರ ಮ್ಯಾಲೆ ಕನಿಕರ ತೋರಿಸು. ಆಗ ನಿನ್ನ ಹೊಟ್ಟೆ ಒಳಗಿನ ಸಂಕಟ ತಾನೇ ಕಡಿಮೆಯಾಗಿ, ಮೃಷ್ಟಾನ್ನ ಉಂಡ ಸಮಾಧಾನ ಸಿಗ್ತದ"—ಎಂದು ಬುದ್ಧಿ ಹೇಳಿದಳು.

ಪುಲ್ಲಯ್ಯನಿಗೆ ಮುದುಕಿಯ ಈ ಉಪದೇಶ ಸರಿಹೋಗಲಿಲ್ಲ. "ನೀ ಇದರೊಳಗ ತಲಿ ಹಾಕಬ್ಯಾಡ. ಒಂದು ಮೂಲಿ ಹಿಡಿದು ಸುಮ್ಮನೆ ಕೂತುಕೊ"—ಎಂದು ಗದರಿದ.

ಮುದುಕಿ ಇನ್ನೂ ಶಾಂತವಾಗಿ, "ಅಪ್ಪಾ, ಮನಸ್ಸು ಕೆಡಿಸಿಕೊ ಬ್ಯಾಡ. ಮನಸ್ಸು ಕೆಟ್ಟರ, ಮನುಷ್ಯ ಮನುಷ್ಯನಾಗಿ ಉಳಿಯೋದಿಲ್ಲ. ಅದೂ ಅಲ್ಲದ, ವಿಧಿ ನಿಯಮವನ್ನ, ಹಣೆಯ ಬರಹವನ್ನ ಬಲ್ಲವರಾರು. ಆಗಬೇಕಾದ್ದು ಆಗೇ ಆಗ್ತದ. ಬಂದದ್ದನ್ನು ಅನುಭವಿಸಲೇಬೇಕಾಗ್ತದ. ಈ ಜನ್ಮದಾಗ ಮಾಡಿದ ಪಾಪ, ಎಷ್ಟು ಜನ್ಮದಾಗ ಕಾಡಿ ತಿನ್ನುತ್ತದೊ ಯಾರಿಗ್ಗೊತ್ತು—ಮನುಷ್ಯನಿಗೆ ಅಭಿಮಾನ ಮುಖ್ಯ—ಅಭಿಮಾನಕ್ಕಿಂತ ದೊಡ್ಡದು ಮತ್ತೊಂದಿಲ್ಲ........."

ಪುಲ್ಲಯ್ಯ, ಈ ಯಾವ ಮಾತನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ. "ನಿನಗೇನು, ಹೊತ್ತು ಹೊತ್ತಿಗೆ ಅನ್ನ, ಇಲ್ಲದಿದ್ದರ ಗಂಜಿ ಹೊಂದಿಸಿ ಹಾಕ್ತಾಳ ಮೊಮ್ಮಗಳು, ತಿಂದು ಮೂಲಿಗೆ ಕೂತುಕೊತಿದಿ. ನಿನಗೇನು ಗೊತ್ತು ನನ್ನ ಸಂಕಟ. ನನ್ನ ಕುತ್ತಿಗೆಗೆ ನೀನೊಬ್ಬಳು ಗಂಟುಬಿದ್ದಿ ಆತು"—ಎನ್ನುತ್ತಾ ಮನೆಯಿಂದ ಹೊರ ಹೋದ ಪುಲ್ಲಯ್ಯ.

ಅಲ್ಲಿಯೇ ನಿಂತಿದ್ದ ನೀಲಿ, ಒಂದು ಮಾತನ್ನೂ ಆಡಲಿಲ್ಲ. ಪುಲ್ಲಯ್ಯ ಹೊರ ಹೋದಮೇಲೆ, ಮುದಿ ಅಜ್ಜಿಯ ಮುಖ ನೋಡಿದಳು. ಮುದುಕಿ, ಬೊಚ್ಚುಬಾಯಿ ತೆರೆದು ನಗುತ್ತಿದ್ದಳಾದರೂ, ಅವಳ ಹಣ್ಣಾದ ಹೃದಯಕ್ಕಾದ ಆಘಾತದ ಪ್ರಮಾಣವನ್ನು ನೀಲಿ ಅರಿತಿದ್ದಳು. ನಿಜವಾಗಿ ನೋಡಿದರೆ, ಎರಡು ತಿಂಗಳಿನಿಂದ ಮುದುಕಿ ಸರಿಯಾಗಿ ಊಟವನ್ನೆ ಮಾಡಿರಲಿಲ್ಲ. ಎರಡು ದಿನಕ್ಕೊಮ್ಮೆ ಜ್ವರ ಬಂದಾಗ, ಒಂದು ಹನಿ ನೀರನ್ನೂ ಸಹ ಮುಟ್ಟದೆ, ಮೂಲೆಯಲ್ಲಿ ಬಿದ್ದಿರುತ್ತಿದ್ದಳು. ತನ್ನ ಗಂಡನ ಆರೋಪ ಸಂಪೂರ್ಣವಾಗಿ ನಿರಾಧಾರವೆಂಬುದು ನೀಲಿಗೆ ತಿಳಿದಿತ್ತು. ಅಂತಲೇ ಗಂಡನ ಪರವಾಗಿ ಕ್ಷಮೆ ಕೇಳುವ ಒತ್ತಾಸೆಯಿಂದ ಅವಳು, ಅಜ್ಜಿಯ ಬಳಿ ಹೋಗಿ ಕುಳಿತಳು.

ಕುಳಿತವಳು ಸೌಮ್ಯವಾಗಿ, ದೀನವಾಗಿ, ಭಯಭೀತಳಾಗಿ, "ಏನೊ ಸಿಟ್ಟಿನ ಕೈಯಾಗ ಬುದ್ಧಿ ಕೊಟ್ಟು ಬಾಯಿಗೆ ಬಂದದ್ದು ಒದರಿದ...... ನೀನು ಮನಸ್ಸಿಗೆ ಹಚ್ಚಿಕೊ ಬ್ಯಾಡ"—ಎಂದಳು.

ಮುದುಕಿ, ಮೊಮ್ಮಗಳತ್ತ ಮುಖ ತಿರುಗುವ ವೇಳೆಗೆ, ನೀಲಿಯ ಕಣ್ಣುಗಳಿಂದ ಕೋಡಿ ಹರಿದಿತ್ತು. ಮೊಮ್ಮಗಳ ಕಣ್ಣುಗಳಲ್ಲಿ ನೀರು ಉಕ್ಕಿದ್ದನ್ನು ನೋಡಿ, ಮುದುಕಿಯ ಕಣ್ಣುಗಳೂ ಸಹ ತೇವಗೊಂಡವು. ಮೊಮ್ಮಗಳ ತಲೆಯ ಮೇಲೆ ಕೈಯಿಟ್ಟು ನೇವರಿಸುತ್ತಾ, ನಿಧಾನವಾಗಿ ಮಾತನಾಡತೊಡಗಿದಳು, "ಅಮ್ಮಾ...... ನನಗ ಕೆಡುಕು ಮಾಡಿದವರ ಬಗ್ಗೆ, ನನಗ ಕೇಡು ಬಯಸಿದವರ ಬಗ್ಗೆ ಹೇಳಿಕೊಳ್ಳಬೇಕಂದರ ಬೇಕಾದಷ್ಟದ. ಆದರೂ, ಒಬ್ಬರಿಗೂ ನಾನು ಕೆಡಕು ಬಯಸಲಿಲ್ಲ. ಆಗಾಗ ನಿಮ್ಮ ತಾತನನ್ನೆ ಗದರಿಕೊಳ್ಳುತ್ತಿದ್ದೆನಾದರೂ, ನಮಗ ಕೆಟ್ಟದು ಬಯಸಿದವರಿಗೆ ಒಳ್ಳೆಯದಾಗಲೆಂದೇ ಹರಿಸಿದೆ—ನಾಲಗೆಯ ತುದಿಯಿಂದ ಮಾತ್ರವಲ್ಲದೆ—ಹೃದಯದಾಳದಿಂದಲೂ ಒಳ್ಳೆಯದನ್ನೆ ಬಯಸಿದೆ. ಆಗ, ಏನೆಲ್ಲ ಕಷ್ಟ–ನಿಷ್ಠುರಗಳನ್ನು ಅನುಭವಿಸಿದೆನಾದರೂ, ಈಗ ನನಗಿರುವ ತೃಪ್ತಿ—ಆತ್ಮಸಂತೋಷ ಯಾರಿಗಿದೆ—ಯಾರಿಗಿಲ್ಲ. ಜೀವನದಲ್ಲಿ ನನ್ನಷ್ಟು ಕಷ್ಟಪಟ್ಟವರು ಇರಬಹುದಾದರೂ, ನನ್ನಷ್ಟು ಸುಖವಾಗಿರುವವರು ಯಾರಿದ್ದಾರ ಹೇಳು? ಮಣ್ಣಿನ ಗಡಿಗೆಯಲ್ಲಿ ಅನ್ನ ಕುಚ್ಚಿ, ಹೊಟ್ಟೆ—ಎಂಬೊ ಚರ್ಮದ ಗಡಿಗಿ ತುಂಬಿಕೊಂಡು, ಇಷ್ಟು ದಿನ ಬದುಕಿದೆ–ಬಾಳಿದೆ. ಇನ್ನೆಷ್ಟು ದಿನ ಹೀಗೆ ಇರಲಿಕ್ಕೆ ಸಾಧ್ಯ?"—ಎಂದು ಮುದುಕಿ ಹೇಳಿದಾಗ, ನೀಲಿಗೆ ಹೃದಯವೇ ಬಾಯಿಗೆ ಬಂದಂತಾಯಿತು. ಅವಳು ಯಾವ ಮಾತೂ ಆಡದೆ, ಮುದುಕಿಯನ್ನು ಗಟ್ಟಿಯಾಗಿ ಅಪ್ಪಿಕೊಂಡು, ಅವಳ ಒಡಲಿನಲ್ಲಿ ಮುಖ ಮುಚ್ಚಿ ಬಿಕ್ಕಳಿಸಿದಳು.

ಎಲ್ಲಿಗೊ ಹೋಗಿದ್ದ ಪುಲ್ಲಯ್ಯ, ಸ್ವಲ್ಪ ಹೊತ್ತಿನ ನಂತರ ಕೈಯಲ್ಲಿ ಹಿಟ್ಟು ಹಿಡಿದುಕೊಂಡು ಬಂದ. ನೀಲಿ, ಅವನು ತಂದ ಹಿಟ್ಟನ್ನು ಕಲೆಸಿ, ರೊಟ್ಟಿ ಮಾಡಿ ಕುಳಿತಳು. ಮುದುಕಿ, ಪುಲ್ಲಯ್ಯನನ್ನು ನೋಡಿ ಮುಗುಳುನಗುತ್ತಾ, "ನೀನು ಒಳ್ಳೆಯವನಾಗಿರದಿದ್ದರ, ಎರಡೂ ಖರ್ಚು ವಹಿಸಿಕೊಂಡು, ಅನಾಥಳಾದ ನನ್ನ ಮೊಮ್ಮಗಳನ್ನ ಮದುವಿ ಆಗ್ತಿದ್ದೇನು? ಅಷ್ಟೆ ಅಲ್ಲ, ಆಕಿ ಜೊತೆಗೆ ನನ್ನ ಭಾರಾನೂ ಹೊತ್ತುಕೊಂಡು, ಇಷ್ಟು ದಿನ ಸಲುಹಿದಿ. ನಾನು ಸತ್ತು, ಮತ್ತ ನಿನ್ನ ಹೆಣ್ತಿ ಹೊಟ್ಟ್ಯಾಗ ಗಂಡಾಗಿ ಹುಟ್ಟಿ, ನಿನ್ನ ಈ ಋಣ ತೀರಿಸ್ತೀನಿ"—ಎಂದಾಗ ಪುಲ್ಲಯ್ಯನಿಗೆ ನಾಚಿಕೆಯಾಗಿ, ಅವನು ಅಲ್ಲಿಂದ ಜಾರಿಕೊಂಡ.

ಪುಲ್ಲಯ್ಯ ಕಟ್ಟಿಗೆಯ ಹೊರೆ ಮಾರಿಕೊಂಡು ಮನೆಗೆ ಹಿಂದಿರುಗಿದಾಗ, ಆಗಲೇ ಕತ್ತಲಾಗಿತ್ತು. ನರಸಿಂಹ, ಆಗಲೇ ಬಂದು, ತನ್ನ ಸುಖ–ದುಃಖಗಳನ್ನು ತೋಡಿಕೊಳ್ಳುತ್ತಾ ಕುಳಿತಿದ್ದ. ಮನೆಯಲ್ಲಿನ ಹೀನ ಪರಿಸ್ಥಿತಿಯನ್ನು ಹೇಳಿಕೊಂಡನೆ ಹೊರತಾಗಿ, ಒಂದು ಬಟ್ಟಲು ಗಂಜಿ ಕೊಡು—ಎಂದು ನೀಲಿಯನ್ನು ಕೇಳಲು ಅವನ

ನಾಲಿಗೆ ಏಳಲಿಲ್ಲ. ಪುಲ್ಲಯ್ಯನ ಮನೆಯ ಪರಿಸ್ಥಿತಿಯೂ ಕೂಡ ಅಷ್ಟಕ್ಕಷ್ಟೆ ಎಂಬುವನ್ನು ಆತ ಅರಿತಿದ್ದ. ಅದೂ–ಇದೂ ಮಾತನಾಡುತ್ತಾ ಕುಳಿತಿದ್ದ ನರಸಿಂಪ, "ಪುಲ್ಲಯ್ಯಾ, ನಾವು ರಾತ್ರಿ ಮಲಗಿದಾಗ ಮನಿ ಕುಸಿದು ಬಿದ್ದು ಅಥವಾ ಭೂಮಿ ಬಿರುಕುಬಿಟ್ಟು, ಮನೆ ಅವರೆಲ್ಲಾ ಒಟ್ಟಿಗೆ ಸತ್ತರ ಎಷ್ಟು ಛಲೋ ಆಗ್ತದ"—ಎಂದು ಮೇಲೆದ್ದ.

ನರಸಿಂಪನ ಈ ಮಾತುಗಳನ್ನು ಕೇಳಿ, ನೀಲಿ, ತಟ್ಟನೆ ಅವನನ್ನು ಕರೆದು, "ಮಾಪ, ಈ ನಾಲ್ಕಾಣೆದು ಏನಾರ ಕಾಳು ತಗೊಂಡು ಹೋಗಿ, ಅಂಬಲಿ ಆದರೂ ಮಾಡಿಕೊಂಡು ಕುಡೀರಿ"—ಎಂದು ಕೊಡುತ್ತಿದ್ದಾಗ, ಪುಲ್ಲಯ್ಯ, ಪೆಂಡತಿಯನ್ನೇ ದುರುಗುಟ್ಟಿ ನೋಡಿದ. ನರಸಿಂಹ ಮರದಗಲ ಮುಖ ಮಾಡಿಕೊಂಡು, ನಾಲ್ಕಾಣೆ ಪಡೆದು ಹೋದ. ನೀಲಿ, ಅವನು ಹೋದ ಮೇಲೆ ಗಂಡನನ್ನು ಎದುರಿಸಿ, "ಇಬ್ಬರು ಮಕ್ಕಳನ್ನ ಯಾರ ಮನ್ಯಾಗಾದರೂ ಕೆಲಸಕ್ಕ ಹಚ್ಚು ಅಂತ ಎಂದೊ ಹೇಳಿದ್ದೆ. ಹೊಟ್ಟೆ ಸುಡುವಾಗ, ಮನೆ–ಮರ್ಯಾದಿ—ಅಂತ ಕೂತರ ಹ್ಯಾಂಗ? ಕಷ್ಟಪಡದಿದ್ದರ ಈ ಕಾಲದಾಗ ಯಾರು ಕೊಡ್ತಾರ"—ಎಂದು ಹೇಳಿದಳು.

ಪುಲ್ಲಯ್ಯ, ಹೆಂಡತಿಯ ಈ ಮಾತು ಕೇಳಿ, ಅಭಿಮಾನದಿಂದ ಮೌನ ವಹಿಸಿದ. ನೀಲಿ, ಗಂಡ ತಂದ ದುಡ್ಡು ಕೈಯಲ್ಲಿ ಹಿಡಿದು, ಶೆಟ್ಟಿಯ ಅಂಗಡಿಗೆ ಹೋದಳು. ಇದಾದ ಮರುದಿನ, ಮುದುಕಿ ಬೆಳಗಾಗುತ್ತಲೇ ಎದ್ದು, "ರಾಮ–ಕೃಷ್ಣ, ರಾಮ–ಕೃಷ್ಣ ರಾಮ ರಾಮ ಹರೆ ಹರೆ......" ಎನ್ನುತ್ತಾ, ದೇವರ ನಾಮಗಳನ್ನು ಹಾಡುತ್ತಾ ಕುಳಿತಿದ್ದಳು. ಮರಿಮೊಮ್ಮಗ ಮಲ್ಲೇಶಿ ಅವಳ ಬಳಿ ಕುಳಿತು, ಅವಳು ಹಾಡಿದ್ದನ್ನೇ ತಾನೂ ಹಾಡುತ್ತಿದ್ದ. ಮೂರನೆಯ ದಿನ ಬೆಳಗಾಗುವುದರೊಳಗಾಗಿ ಎದ್ದು ನಡುವನ್ನು ಬಗ್ಗಿಸಿಕೊಂಡು ಅಕ್ಕಪಕ್ಕದವರ ಮನೆಗೆ ಹೋಗಿ, ಎಲ್ಲರನ್ನೂ ಮಾತನಾಡಿಸಿಕೊಂಡು ಬಂದಳು. "ಮತ್ತೆ ನನ್ನ ಮೊಮ್ಮಗಳ ಹೊಟ್ಟೆಯಲ್ಲಿ ಹುಟ್ಟಿ ನಿಮ್ಮೆಲ್ಲರನ್ನು ನೋಡ್ತೀನಿ"—ಎಂದು ಎಲ್ಲರಿಗೂ ಹೇಳಿ ಬಂದಳು. ಮುದುಕಿ, ಹಾಗೆಯೇ ರಾಜಣ್ಣನ ಮನೆಗೂ ಸಹ ಹೋದಳು. ರಾಜಣ್ಣ, ಅವನ ಹೆಂಡತಿ, ಮುದುಕಿಯನ್ನು ಆದರಾಭಿಮಾನಗಳಿಂದ ಬರಮಾಡಿಕೊಂಡರು. ರಾಜಣ್ಣ ಮುದುಕಿಯೊಡನೆ ಮಾತನಾಡುತ್ತಾ, "ನಿನ್ನ ಅಳಿಯ ಪುಲ್ಲಯ್ಯ, ಸುಮ್ಮಸುಮ್ಮನೆ ನನ್ನ ಮೇಲೆ ಕೆಂಡಕಾರ್‍ತಾನ. ಆ ಕುಡ್ಡ ವೆಂಕಣ್ಣ ನನ್ನ ತಂದಿ ಅಂತ, ನನಗ ಮಾನ–ಮರ್ಯಾದಿ ಒಂದೂ ಇಲ್ಲಂತ—ನಾನು ಅವನಿಗೇನು ಅಂತಹ ಅಪಕಾರ ಮಾಡೀನಿ ನೀನೇ ಹೇಳು. ಅವನ್ನ ಜೈಲಿನಲ್ಲಿಟ್ಟಾಗ, ಬಿಡಿಸಿಕೊಂಡು ಬರಲು ನಾನs ದುಡ್ಡು ಕೊಟ್ಟೆ. ಹೊಟ್ಟೆಗಿಲ್ಲದ ಸಾಯ್ತಿದ್ದಾಗ, ನಾನs ಅಕ್ಕಿ ಕೊಟ್ಟೆ. ನನ್ನ ಹತ್ತರ ಏನದ. ಇರೋದೆಲ್ಲ ಈ ನಾಲ್ಕು ಮಕ್ಕಳಿಗೆ ಹಂಚಿದರ, ಒಬ್ಬೊಬ್ಬರಿಗೆ ಎಷ್ಟು ಬಂದೀತು—ನೀನs ಹೇಳು. ಅವನ ಆ ಹೊಲ, ಮನ್ಯಾಗ ಅವಯಸ್ಕ (ಮೈನರ್) ಹುಡುಗ ಇದ್ದಾನs ಅಂತ ಯಾರೂ ತೊಗೊಳ್ಳದಿದ್ದಾಗ, ನಾನು ಮುಂದೆ ಬಂದೆ. ನ್ಯಾಯವಾಗಿ ಅವನಿಗೆ ಕೊಡಬೇಕಾದ್ದನ್ನು ಕೊಟ್ಟೆ"—ಎಂದು ಹೇಳಿದ.

"ನೋಡು ರಾಜಣ್ಣ, ಯಾರ ಒಳ್ಳೆಯತನ–ಕೆಟ್ಟತನ, ಅವರಿಗೆ ಇರ್ತದ. ನಾವು ಒಬ್ಬರ ಹೊಟ್ಟಿ ಮ್ಯಾಲೆ ಹೊಡೆದರ, ಇನ್ನೊಬ್ಬರು ನಮ್ಮ ಹೊಟ್ಟೆಮ್ಯಾಲೆ ಹೊಡೀತಾರ. ನಾವು, ತುಂಡು ರೊಟ್ಟಿಗಾಗಿ ಕಚ್ಚಾಡೊ ಇಲಿಗಳ ಹಾಂಗ ಬದುಕು ನಡಸೀವಿ. ಪ್ರಣತಿಯಲ್ಲಿನ ಬತ್ತಿಗೆ ಒಳ್ಳೆಣ್ಣೆ ಹಾಕಿದರನs ಅದು ಬೆಳಕು ಕೊಡ್ತದ—ಅದs ರೀತಿ, ಅಭಿಮಾನ, ಆತ್ಮಗೌರವ ಒಂದಿದ್ದರ, ಜೀವನದಾಗ ಎಲ್ಲಾನೂ ಇದ್ದಾಂಗ. ನನ್ನ ದೃಷ್ಟಿಯಲ್ಲಿ ನೀನೂ—ಪುಲ್ಲಯ್ಯ ಇಬ್ಬರೂ ಒಂದೇ. ಇಬ್ಬರೂ ಒಳ್ಳೆಯವರು"—ಎಂದು ಮುದುಕಿ ಹೇಳಿದಳು.

ಮುದುಕಿ ಹೊರಟಾಗ, ರಾಜಣ್ಣ ಅವಳ ಜೊತೆ ಹೊರಟ. ಸ್ವಲ್ಪ ದೂರ ಹೋದ ಮೇಲೆ, "ನೋಡು ರಾಜಣ್ಣ, ನಾನೇನೂ ಬಹಳ ದಿನ ಉಳಿಯೋದಿಲ್ಲ. ಇಂದೋ–ನಾಳೆಯೊ ಸಾಯ್ತೀನಿ. ನಾನು ಸತ್ತರ, ನೀನು ಭುಜ ಕೊಡಂಗಿಲ್ಲೆನಪಾ"—ಎಂದು ಮುದುಕಿ ಕೇಳಿದಾಗ, "ಅಂತಹ ಮಾತು ಯಾಕ ಆಡ್ತೀ. ನಿನಗೇನಾದರೂ ಆದರ, ಎಲ್ಲಾ ಹೊಣೇನೂ ನಾನs ಹೊರ್ತೀನಿ"—ಎಂದು ರಾಜಣ್ಣ ಹೇಳಿದ. ಮುದುಕಿ ತನ್ನ ಬೊಚ್ಚು ಬಾಯಿ ತೆಗೆದು ನಕ್ಕಳು.

ಇದಾದ ಮರುದಿನ, ಮುದುಕಿ, ನೀಲಮ್ಮಳ ಗುಡಿಗೆ ಹೋಗಿ ದೇವಿಗೆ ನಮಸ್ಕರಿಸಿದಳು. ಗುಡಿಯ ಅಂಗಳದಲ್ಲಿ ನಿಂತು, ನದಿಯನ್ನು, ಸುತ್ತಮುತ್ತಲಿನ ಗಿಡ–ಗಂಟೆಗಳನ್ನು, ಕೊನೆಯ ಸಲವೋ ಎಂಬಂತೆ ನೋಡಿದಳು. ಮನೆಗೆ ಹಿಂದಿರುಗಿ, ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತು, ರಸ್ತೆಯಲ್ಲಿ ಹೋಗಿ–ಬರುವವರನ್ನೆಲ್ಲ ಕೂಗಿ ಕರೆದು ನಾಲ್ಕು ಒಳ್ಳೆಯ ಮಾತುಗಳನ್ನು ಹೇಳಿದಳು. ಹೀಗೆಯೇ ಆತ್ಮಸಂತೃಪ್ತಿಯಿಂದ ಒಂದು ವಾರ ಕಳೆದಳು. ರಾತ್ರಿ ಬಹಳ ಹೊತ್ತಿನ ವರೆಗೆ ದೇವರನ್ನು ಸ್ಮರಿಸುತ್ತಾ ಕೂತಿರುತ್ತಿದ್ದಳು. ಬೆಳಗಿನ ಜಾವ, ತನಗೆ ಬಂದ ದೇವರ ನಾಮಗಳನ್ನು ಹಾಡಿಕೊಳ್ಳುತ್ತಿದ್ದಳು. "ನಾನು ಹುಟ್ಟಿದಾಗಲೂ ನೀನಿದ್ದೆ—ನಾನು ದೊಡ್ಡವಳಾದಾಗಲೂ ನೀನಿದ್ದೆ—ಈಗಲೂ ನೀನಿರುವಿ. ನಾಳೆ, ನಾನು ಸತ್ತರೂ ನೀನಿರುವಿ. ಈ ಪರಪಂಚದಾಗ ಹುಟ್ಟಿ, ನಾನು ಮಾಡಬೇಕಾದ ಕೆಲಸಕಾರ್ಯಗಳನ್ನು, ನೀನು ಹೇಳಿದಂತೆ, ನೀನು ತೋರಿಸಿಕೊಟ್ಟಂತೆ ಮಾಡಿದೆನು ದೇವ"—ಎಂದು ಬೆಳಗ್ಗೆದ್ದು ಸೂರ್ಯನಿಗೆ ಕೈಮುಗಿಯುತ್ತಿದ್ದಳು.

ಅಂದು ಆಕಾಶದ ತುಂಬೆಲ್ಲ ಕರಿಯ ಮೋಡಗಳು ಹರಡಿಕೊಂಡಿದ್ದವು. ಸಂಜೆಯ ವರೆಗೆ, ಆಗಾಗ ಮಳೆಯ ಹನಿಗಳು ಉದುರುತ್ತಲೇ ಇದ್ದವು. ರಾತ್ರಿ ಮಾತ್ರ ಗಾಳಿ ಬಿಟ್ಟು, ಮೋಡಗಳು ಚದುರಿ ಅಲ್ಲಲ್ಲಿ ನಕ್ಷತ್ರಗಳು ಮೂಡಿದವು. ಜ್ವರದಿಂದ ಮೂಲೆಯಲ್ಲಿ ಮಲಗಿದ್ದ ಮುದುಕಿ, ನಡು ರಾತ್ರಿಯ ಸಮಯಕ್ಕೆ ಎದ್ದಳು. ಎಲ್ಲವೂ ಶಾಂತವಾಗಿತ್ತು. ಎಲ್ಲರೂ ಮಲಗಿದ್ದರು. ಮುದುಕಿ ಮುಂಬಾಗಿಲನ್ನು ತೆರೆದು ಹೊರಗೆ ಬಂದಳು. ಆಕಾಶದಲ್ಲಿ ನಕ್ಷತ್ರಗಳು ಹೊಳೆಯುತ್ತಿದ್ದವು. ಅಲ್ಲಲ್ಲಿ, ಪುಟ್ಟಪುಟ್ಟ

ಮೋಡಗಳು ತೇಲಿಕೊಂಡು ಹೊರಟಿದ್ದವು. ರಾತ್ರಿಯ ಆ ಮೌನದಲ್ಲಿ—ಒಂಟಿಯಾಗಿ ......ಮನೆಯ ಹೊರಗೋಡೆಗೆ ಬೆನ್ನು ಆನಿಸಿಕೊಂಡು, ಕಾಲು ಚಾಚಿ ಕುಳಿತಳು. ಹಾಗೆ ಕುಳಿತ ಕೆಲವೇ ಕೆಲವು ನಿಮಿಷಗಳಲ್ಲಿ, ನಿದ್ದೆ ಬಂದಂತಾಗಿ ಕಣ್ಣುಗಳು ಮುಚ್ಚಿ ಕೊಂಡವು.—ಏನೊ ಕನಸುಗಳು...... ಆ ಕನಸಿನಲ್ಲಿ, ತನ್ನವರೆಲ್ಲರೂ ಸುಳಿದು ಹೋದರು...... ತನ್ನ ಗಂಡ...... ಹೋದ ಸಂತಾನಗಳು...... ಅವರು–ಇವರು ......ಎಲ್ಲರೂ ತನ್ನನ್ನು ಕೈಮಾಡಿ ಕರೆಯುತ್ತಿದ್ದಾರೆ—ಹೂವಿನ ರಥ...... ಬಿಳಿಯ ಕುದುರೆಗಳು...... ಆಕಾಶದಿಂದ ಇಳಿಯುತ್ತಿರುವಂತೆ ಕಾಣಿಸಿದುವು. ಇವೆಲ್ಲವೂ ನಿನಗಾಗಿಯೇ ಎನ್ನುವಂತೆ, ಅವೆಲ್ಲವೂ ಸಜ್ಜುಗೊಂಡು ಕಾದಿದ್ದವು.

ಅಷ್ಟರಲ್ಲಿ ಅವಳಿಗೆ ಎಚ್ಚರವಾಯಿತು...... ಸ್ಮರಣೆ ಸ್ವಲ್ಪ ತಿಳಿಯಾದಾಗ, ಎದುರಿಗಿದ್ದ ದೀಪ ಕಾಣಿಸಿತು. ಆ ದೀಪದ ಬೆಳಕಿನಲ್ಲಿ, ನಾಲ್ವರು ತನ್ನನ್ನು ಸುತ್ತುಗಟ್ಟಿ ಸಂತಿದ್ದನ್ನು ಅವಳು ಕಂಡಳು. ಮೊಮ್ಮಗಳು, ಅಲ್ಲಿಯೇ ಅಳುತ್ತಾ ಕುಳಿತಿದ್ದಳು...... ಮರಿಮೊಮ್ಮಗ ಮಲ್ಲೇಶಿ, ಅಜ್ಜಿ–ಅಜ್ಜಿ—ಎನ್ನುತ್ತಾ, ಒಂದೇ ಸಮನೆ ಅಳುತ್ತಿದ್ದ. ಮುದುಕಿ ಕಣ್ಣು ತೆರೆದದ್ದನ್ನು ನೋಡಿ ಮೊಮ್ಮಗಳು ಮುಂದೆ ಸರಿದು, ಅವಳ ತಲೆ ಹಿಡಿದುಕೊಂಡಳು. ಮುದುಕಿ, ಒಮ್ಮೆ ನಕ್ಕಂತಾಯಿತು. ಹಾಗೆಯೇ ಮೊಮ್ಮಗಳ ತಲೆಯ ಮೇಲೆ ಕೈ ಆಡಿಸುತ್ತಾ, "ಅಮ್ಮಾ...... ತಾಯಿ...... ನೀಲಮ್ಮ"—ಎಂದು ಕರೆದಳು. ಹಾಗೆ ಅಭಿಮಾನದಿಂದ ಮೊಮ್ಮಗಳ ಮೈ ಸವರುತ್ತಿದ್ದಾಗಲೇ, ಕಣ್ಣುಗಳು ಆನಂದಬಾಷ್ಪಗಳಿಂದ ಮಸುಕಾದವು. "ನನ್ನಮ್ಮ......" ಮೆಲ್ಲಗೆ ಹೇಳಲು ಪ್ರಾರಂಭಿ ಸಿದಳು. "ನನ್ನಮ್ಮ...... ಕೈ ಸುಟ್ಟರ, ಗಡಿಗಿ ಹಾಗs ಎತ್ತಿ ಹಾಕ್ತಾನು...... ಸಹನೆ—ಎಂಬೋದು ಆತಗಿಲ್ಲ...... ಅವನ ಕೈಲೆ ಆಗಾಣೆಲ್ಲ...... ಪುಲ್ಲಯ್ಯ...... ಆ ಗಡಿಗಿ ಬೀಳಲಾರದ್ಹಾಂಗ...... ತಾಯಿ ನನ್ನನ್ನು...... ಇನ್ನೇನು ಕೊಡಬಲ್ಲೆ......" ಮುದುಕಿ ಈ ಮಾತುಗಳನ್ನು ಹೇಳುತ್ತಲೇ, ಕೊನೆಯ ಸಲ ಕಣ್ಣು ಅಗಲಿಸಿ ಸುತ್ತಲೂ ನೋಡಿದಳು. ಪುಲ್ಲಯ್ಯ, ಮಲ್ಲೇಶಿ, ಅಲ್ಲಿ ಸೇರಿದ್ದ ಎಲ್ಲರನ್ನೂ ನೋಡಿದಳು. ಅವರಲ್ಲಿ ರಾಜಣ್ಣನೂ ಇದ್ದ. ಆತನನ್ನು ನೋಡಿ ಮುದುಕಿ ನಕ್ಕಳು. ಹಾಗೆ ಸಣ್ಣದಾಗಿ ನಗುತ್ತ, ಎಲ್ಲರನ್ನೂ ನೋಡನೋಡುತ್ತಲೇ ಮುದುಕಿಯ ಪ್ರಾಣಪಕ್ಷಿ, ಮಾಂಸಖಂಡ ಗಳ ಆ ಪಂಜರದಿಂದ ಪಾರಾಗಿ ಹಾರಿಹೋಯಿತು.

## [ 24 ]

ಚಳಿಗಾಲ ಇನ್ನೂ ಬಂದಿರಲಿಲ್ಲವಾದರೂ, ರಾತ್ರಿ, ಚಳಿ ಆಗುತ್ತಿತ್ತು. ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಕರಿಯ ಮೋಡಗಳು ಕವಿದು, ಮಳೆ ಬರುತ್ತಿತ್ತು.

ಒಂದು ದಿನ ರಾತ್ರಿ—ದಟ್ಟವಾಗಿ ಕತ್ತಲು ಕವಿದಿತ್ತು. ಆಕಾಶವು ಮೋಡಗಳಿಂದ ತುಂಬಿತ್ತು. ಇದ್ದಕ್ಕಿದ್ದಂತೆ, ಸಂಜೀವಿಯ ಮನೆಯ ಹಿತ್ತಲಿನಲ್ಲಿ ಏನೊ ಗಲಾಟೆ ಪ್ರಾರಂಭವಾಯಿತು. ಆ ಕತ್ತಲಿನಲ್ಲಿ ಮನೆಹೊಕ್ಕಿದ್ದ ಕಳ್ಳನನ್ನು ಹಿಡಿದು, ಸಂಜೀವಿ ನಾಲ್ಕು ತಗಲಿಸಿದ್ದ. ಸಂಜೀವಿಯ ಕೈಯಲ್ಲಿ ಸಿಕ್ಕಿಬಿದ್ದ ಕಳ್ಳ, ಒಂದು ಮಾತೂ ಆಡದೆ, ತಲೆ ಕೆಳಗೆ ಹಾಕಿಕೊಂಡು ನಿಂತಿದ್ದ. ಸಂಜೀವಿಯ ಹೆಂಡತಿ, ದೀಪ ತರುತ್ತಿದ್ದಾಗ ಅದು ಗಾಳಿಗೆ ನಿಲ್ಲಲಾರದೆ ಆರಿಹೋಯಿತು. ಆ ವೇಳೆಗಾಗಲೇ, ಸುತ್ತಮುತ್ತಲಿನ ಮನೆಯವರು ಅಲ್ಲಿ ಬಂದು ಸೇರಿದ್ದರು. ಪುಲ್ಲಯ್ಯ ಮತ್ತು ಮಲ್ಲೇಶಿ ಕೂಡ, ಏನಾಯಿತೆಂಬುದನ್ನು ನೋಡಲು ಧಾವಿಸಿ ಬಂದಿದ್ದರು.

ಸಿಕ್ಕಿಬಿದ್ದ ಕಳ್ಳನಿಗೆ ಶಿಕ್ಷೆ ನೀಡುವ ಬಗ್ಗೆ ಪ್ರತಿಯೊಬ್ಬರೂ, ತಮ್ಮದೇ ಆದ ಸೂಚನೆ ಆದೇಶ ನೀಡಹತ್ತಿದರು. "ಅವನ್ನ ಒದ್ದು ಬುದ್ಧಿ ಕಲಿಸಿರಿ"; "ನಮ್ಮ ಮನ್ಯಾಗಿನ ಹೆಸರುಬ್ಯಾಳಿ ಕಳವು ಮಾಡಿದ್ದೂ ಇವನೇ"; "ನಮ್ಮ ಮನಿ ಒಳಗಿನ ಕೋಳಿ ತತ್ತಿ ಮತ್ತು ಮರಿಗಳನ್ನು ತುಡುಗಮಾಡಿದವನು ಇವನss......" "ದುಡದು ತಿನ್ನಲಿಕ್ಕೆ ಕೈಲಾಗದಿದ್ದರ, ಭಿಕ್ಷೆ ಬೇಡಿ ಆದರೂ ಹೊಟ್ಟೆ ತುಂಬಿಕೊಬೇಕು......"—ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಕೂಗಾಡತೊಡಗಿದರು.

ಗಂಡಸರ ಈ ಕೂಗಾಟದಲ್ಲಿ, ಹೆಣ್ಣುಮಕ್ಕಳೂ ಸಹ ಧ್ವನಿ ಸೇರಿಸಿದರು. ಆ ಕಳ್ಳ, ಮೂರು ದಿನಗಳಿಂದ ಹೊಟ್ಟೆಗೆ ಹಿಡಿ ಹಿಟ್ಟೂ ಇಲ್ಲದೆ, ಹಸಿವಿನಿಂದ ಕಂಗಾಲಾಗಿದ್ದ. ಅವನೊಬ್ಬನೇ ಅಲ್ಲದೆ ಅವನ ಹೆಂಡತಿ ಮಕ್ಕಳು ಕೂಡ ಮೂರು ದಿನಗಳಿಂದ ಉಪವಾಸವಿದ್ದರು. ಹಸಿವನ್ನು ತಾಳಲಾಗದೆ, ಹೆಂಡತಿ ಮಕ್ಕಳ ಬಳಲಿದ ಮುಖವನ್ನು ನೋಡಲಾಗದೆ, ಅರ್ಧರಾತ್ರಿ ಕಳೆದ ನಂತರ, ಕಳವು ಮಾಡಲು ಹೊರಟಿದ್ದ. ಸಂಜೀವಿಯ ಅಡಿಗೆಮನೆಗೆ, ಹಿತ್ತಲಿನಿಂದ ನುಗ್ಗುವುದು ತುಂಬ ಸುಲಭವಾಗಿತ್ತು. ಅಂತಲೇ, ಆ ಕಳ್ಳ, ಸಂಜೀವಿಯ ಅಡಿಗೆಮನೆಗೆ ನುಗ್ಗಿದ್ದ. ಅಲ್ಲಿದ್ದ ತಂಗಳು ಅನ್ನ ಉಂಡು, ಗಂಜಿ ಕುಡಿದು, ಉಳಿದ ಅನ್ನವನ್ನು ಹಾಗೆಯೆ ಮನೆಗೆ ಒಯ್ದಲ್ಲಿ, ಮಕ್ಕಳು ಎರಡು ದಿನ ಉಣ್ಣಬಹುದೆಂಬ ಆಶೆಯಿಂದ ಹೊರಟಿದ್ದಾಗ, ಸಂಜೀವಿ ಅವನನ್ನು ಹಿಡಿದಿದ್ದ.

ಸಂಜೀವಿಯ ಏಟುಗಳಾಗಲೀ, ಅಲ್ಲಿ ಸೇರಿದ್ದ ಜನರ ಚುಚ್ಚು ಮಾತುಗಳಾಗಲೀ ತನಗೆ ತಟ್ಟಲೇ ಇಲ್ಲವೆಂಬಂತೆ ನಿಂತಿದ್ದ ಕಳ್ಳ. ಅವನಿಗೆ, ಎಲ್ಲವೂ ಕನಸಿನಲ್ಲಿ ನಡೆದಂತೆ ಭಾಸವಾಗಿತ್ತು. ಹೊಟ್ಟೆಗಿಲ್ಲದೆ ಬಡವಾಗಿದ್ದ ಅವನ ದೇಹ, ಹಾಗೆಯೇ ಕುಸಿದು ಬಿತ್ತು. ಹಾಗೆ ಬೀಳುತ್ತಿರುವಾಗಲೇ, ಅವನು ಆಯಾಸದಿಂದ "ಹಸಿವು–ಹಸಿವು"—ಎಂದು ಕೂಗಿಕೊಂಡ. ಸಂಜೀವಿ, ಆ ಕಳ್ಳನ ಹಸಿವನ್ನು ಇಂಗಿಸಲು, ಇನ್ನೂ ಎರಡು ಏಟು ಹಾಕಿ, "ಹೀಂಗ ಹಸಿವು ಹಸಿವು ಅಂತ ಕುಸಿದು ಬಿದ್ದರ ಬಿಟ್ಟುಬಿಡ್ತೀವಿ ಅಂತ ತಿಳಿದಿ ಏನು"—ಎಂದು ಹಂಗಿಸಿ, ಕಾಲಿನಿಂದ ಒದ್ದ. ಕಳ್ಳ, "ಅಮ್ಮಾ–ಸತ್ತೆ"—ಎಂದು ಕೂಗಿ

ಕೊಳ್ಳುತ್ತಾ, ಮುದುಡಿಕೊಂಡು ಬಿದ್ದ. ಪಕ್ಕದಲ್ಲಿದ್ದ ರಾಜಣ್ಣನ ಮನೆಯಿಂದ ಕಂದೀಲು ತಂದು ಕಳ್ಳನ ಮುಖಕ್ಕೆ ಹಿಡಿಯಲಾಯಿತು. ಕಂದೀಲಿನ ಆ ಬೆಳಕಿನಲ್ಲಿ ನರಸಿಂಹನ ಮುಖ ನೋಡಿ, ಅಲ್ಲಿ ಸೇರಿದ್ದವರೆಲ್ಲರ ಉಸಿರು ಕಟ್ಟಿದಂತಾಯಿತು. ಯುದ್ಧದಲ್ಲಿ ಪೆಟ್ಟು ತಿಂದ ಯೋಧನಂತೆ ಕಂಡ—ನರಸಿಂಹ. ಹಸಿವಿನೊಡನೆ ಹೋರಾಡಲು ಆಗದೆ, ಮಾಡಬಾರದ ಕೆಲಸಕ್ಕೆ ಕೈಹಾಕಿ, ನಾಲ್ಕು ಜನರ ಮುಂದೆ ಮಾನ–ಮರ್ಯಾದೆ—ಎಲ್ಲವನ್ನೂ ಕಳೆದುಕೊಂಡಿದ್ದ—ಆ ಬಡಪಾಯಿ. ಆದರೂ, ಹೊಟ್ಟೆಯ ಕೂಗನ್ನು ನಿರ್ಲಕ್ಷಿಸಲಾಗದೆ, ಕೈಗಳನ್ನು ಮೇಲೆತ್ತಿ, ಆಯಾಸದಿಂದ, "ಹಸಿವು...... ಹಸಿವು ತಾಯಿ"—ಎಂದು ಅಂಗಲಾಚಿದ.

ಸಂಜೀವಿಯ ಹೆಂಡತಿ, ಅಡಿಗೆ ಮನೆಗೆ ಹೋಗಿ, ಒಂದು ಬಟ್ಟಲಿನಲ್ಲಿ ಸ್ವಲ್ಪ ಅನ್ನ ಹಾಕಿ, ಅದರ ಮೇಲೆ ಗಂಜಿ ಸುರಿದು ತಂದಳು. ಅವಸರದಲ್ಲಿ ಅದಕ್ಕೆ ಉಪ್ಪು ಹಾಕುವುದನ್ನೆ ಮರೆತಿದ್ದಳು. ಆದರೂ ನರಸಿಂಹ ಒಂದೇ ಗುಟುಕಿನಲ್ಲಿ ಆ ಗಂಜಿ ಕುಡಿದುಬಿಟ್ಟ. ಬಟ್ಟಲಿನಲ್ಲಿ ಉಳಿದಿದ್ದ ನಾಲ್ಕು ಅಗಳುಗಳನ್ನೂ ಸಹ ನೆಕ್ಕಿದ. ಆ ಮೇಲೆ, ತಲೆ ಎತ್ತಿ ಒಮ್ಮೆ ಸುತ್ತಲೂ ನೋಡಿದ. ಪಕ್ಕದಲ್ಲಿ ಅದು ಯಾವಾಗಲೊ ಬಂದು ಕುಳಿತಿದ್ದ ಮಲ್ಲೇಶಿಯನ್ನು ನೋಡಿದ. ಎದುರಿಗೆ ನಿಂತಿದ್ದ ಪುಲ್ಲಯ್ಯನನ್ನು, ಸಂಜೀವಿ, ರಾಜಣ್ಣ...... ಊರಿಗೆ ಊರೆ ಅಲ್ಲಿ ಸೇರಿದ್ದನ್ನು ನೋಡಿದ. ಅದರೊಡನೆ ಉಕ್ಕಿಬಂದ ದುಃಖದಿಂದ. ಬಿಕ್ಕಿ, ಬಿಕ್ಕಿ ಅಳಹತ್ತಿದ. ತನಗಾದ ಗತಿಯನ್ನು ನೆನೆಸಿ ಕೊಂಡು, ಅಲ್ಲಿಯೇ ಬಿದ್ದು ಉರುಳಾಡಬೇಕೆಂದು ಬಯಸಿದ. ಅಷ್ಟೊತ್ತಿಗೆ ಕೆದರಿದ ತಲೆ, ಮಾಸಿದ ಹರಕು ಸೀರೆಯುಟ್ಟು ಗೋಳಿಡುತ್ತಾ ಬರುತ್ತಿದ್ದ ಹೆಂಡತಿಯನ್ನು ನೋಡಿದ.

ಹೆಂಡತಿಯ ಮುಖ ಕಣ್ಣಿಗೆ ಬಿದ್ದ ಕೂಡಲೇ ಹಸಿದು ಕಂಗಾಲಾದ ಮಕ್ಕಳ ನೆನಪಾ ಯಿತು. ಅದರೊಡನೆ, ತಾನು ತಿಂದದ್ದನ್ನು ಅಲ್ಲಿಯೇ ವಾಂತಿಮಾಡಿಕೊಳ್ಳಬೇಕೆನಿಸಿತು. ಹಾಗೆಯೇ ಮೇಲೇಳಲು ಪ್ರಯತ್ನಿಸಿದ. ಹೊಟ್ಟೆಗೆ ಅನ್ನ ಬಿದ್ದದ್ದರಿಂದ ಸ್ವಲ್ಪ ಶಕ್ತಿ ಬಂದಿತ್ತಾದರೂ. ಜೋಲಿಹೋಯಿತು. ಹಣ್ಣುಹಣ್ಣಾದ ಮುದುಕರಿಗಿಂತ ಅಧ್ವಾನ ವಾಗಿದ್ದ ನರಸಿಂಹ, ಸುತ್ತಲೂ ನಿಂತಿದ್ದವರನ್ನು ನೋಡಿದ. "ನಾನು ಕಳ್ಳ, ಕಳ್ಳನನ್ನು ಶಿಕ್ಷಿಸದೆ ಹೋಗಗೊಡುವುದು ಸರಿಯಲ್ಲ. ತಪ್ಪು ಮಾಡಿದವನಿಗೆ ಶಿಕ್ಷೆ ಸಿಗದಿದ್ದರೆ ಈ ಜಗತ್ತಿನಲ್ಲಿ ನ್ಯಾಯವೇ ಉಳಿಯುವುದಿಲ್ಲ"—ಎಂದು ಯೋಚಿಸಿದ ನರಸಿಂಹ, "ಸಂಜೀವಿ"—ಎಂದು ಕರೆದ.

ನೋವಿನಿಂದ ನರಳುತ್ತಾ, ಕಣ್ಣೀರು ಸುರಿಸುತ್ತಾ ನಿಂತಿದ್ದ ನರಸಿಂಹನನ್ನು ಎಲ್ಲರೂ ನೋಡಿದರು.

"ಸಂಜೀವಿ, ಪಂಚಾಯಿತಿ ಕರೆಸು. ಕಳ್ಳನಿಗೆ ಏನು ಶಿಕ್ಷೆ ಆಗಬೇಕೊ ಆಗಲಿ"—ಎಂದ.

"ಇರಲಿ ಹೋಗು ನರಸಿಂಹ. ಈಗ ಯಾಕ ಆ ಮಾತು"—ಸಂಜೀವಿ ಹೇಳಿದ.

"ಹಾಂಗ ಆಗಾಣಿಲ್ಲ. ಈಗ ನನಗ ಶಿಕ್ಷೆ ಆಗದಿದ್ದರ ಯಮ ದೇವರು, ನನಗ ಇನ್ನೂ ಹೆಚ್ಚಿನ ಶಿಕ್ಷೆ ಕೊಡ್ತಾನ"—ಎಂದ ನರಸಿಂಹ.

ಅಲ್ಲಿದ್ದವರ ಪೈಕಿ ಯಾರೇ ಆಗಲಿ, ನರಸಿಂಹನಿಗೆ ಶಿಕ್ಷೆ ಆಗಬೇಕೆಂದು ಹೇಳಲಿಲ್ಲ. ನರಸಿಂಹ, ಪಕ್ಕದಲ್ಲಿದ್ದ ಎತ್ತುಗಳಿಗೆ ಕಟ್ಟುವ ಬಿರುಸಾದ ಹಗ್ಗವನ್ನು ಬಿಚ್ಚಿ, ಸಂಜೀವಿಯ ಕೈಗೆ ಕೊಟ್ಟ. ಹಗ ಬಿಚ್ಚಿಸಿಕೊಂಡ ಆಕಳು, ನರಸಿಂಹನನ್ನೇ ನೋಡುತ್ತಾ, ಅಲ್ಲಿಯೇ ನಿಂತಿತ್ತು. ನರಸಿಂಹ ಸಂಜೀವಿಯ ಮುಂದೆ ನಿಂತು, "ಸಂಜೀವಿ, ನಾನು ಮಾಡಿದ್ದಕ್ಕ ಶಿಕ್ಷೆ ಕೊಡು—ನಾಲ್ಕು ಬಾರಿಸು."

ಸಂಜೀವಿ, ಆ ಹಗ್ಗವನ್ನು ಅತ್ತ ಬಿಸಾಕಿದಾಗ, "ಸಂಜೀವಿ, ನನ್ನ ನೀನು ಹೊಡಿ ತಿಯೊ–ಇಲ್ಲೊ"—ಎಂದು ಕೂಗಿದ. ಸಂಜೀವಿ, ಇನ್ನು ಲಾಭವಿಲ್ಲವೆಂದು ತಿಳಿದು ಹಗ್ಗ ಎತ್ತಿಕೊಂಡು, ನೆಪ ಮಾತ್ರಕ್ಕೆ ಎರಡು ಏಟು ಹೊಡೆದನೊ ಇಲ್ಲವೊ, ಮಲ್ಲೇಶಿ ಓಡಿಹೋಗಿ ಸಂಜೀವಿಯ ಕಾಲುಗಳನ್ನು ತಬ್ಬಿಕೊಂಡು, ಅವನ ತೊಡೆಯನ್ನು ಬಲವಾಗಿ ಕಚ್ಚಿದ. ನರಸಿಂಹ, ತಾನೇ ಮುಂದಾಗಿ, ಸಂಜೀವಿಯ ಕೈಯಲ್ಲಿನ ಹಗ್ಗ ಕಸಿದುಕೊಂಡು, ತನ್ನಷ್ಟಕ್ಕೆ ತಾನೇ ಚರ್ಮ ಸುಲಿದುಹೋಗುವವರೆಗೂ ಹೊಡೆದುಕೊಂಡ. ಆಮೇಲೆ, ಹಗ್ಗ ಒಯ್ದು, ಆಕಳ ಕುತ್ತಿಗೆಗೆ ಕಟ್ಟಿ, ಮನೆಯತ್ತ ಹೆಜ್ಜೆ ಹಾಕಿದ.

ಬೆಳಗಾಯಿತು. ಪುಲ್ಲಯ್ಯನಿಗೆ, ಆ ದಿನವೆಲ್ಲ ಮನಸ್ಸು ಮಂಕಾಗಿತ್ತು. ಕಟ್ಟಿಗೆ ತರಲು ಹೋದಾಗ, ಅಲ್ಲಿಯೂ ಅವನಿಗೆ ನಿರಾಶೆಯಾಯಿತು. "ಮೊದಲು ದುಡ್ಡು ಕೊಟ್ಟು, ಕಟ್ಟಿಗೆ ಒಡೆದುಕೊಂಡು ಹೋಗು"—ಎಂದು, ತೋಟದವನು ಖಡಾಖಂಡಿತ ವಾಗಿ ಹೇಳಿದ. "ಹೀಗೇಕೆ"—ಎಂದು ಕೇಳಿದಾಗ, ಯಾರೊ ತನಗೆ ಮೋಸ ಮಾಡಿರು ವುದಾಗಿಯೂ, ಅದರಿಂದ ತನಗೆ ನಷ್ಟವಾಗಿದೆ—ಎಂದು ಹೇಳಿ, ಇನ್ನು ಮೇಲೆ ಯಾರಿಗೇ ಆಗಲಿ, ದುಡ್ಡಿಲ್ಲದೆ ಕಟ್ಟಿಗೆ ಒಡೆಯಲು ಅವಕಾಶ ಕೊಡುವುದಿಲ್ಲವೆಂಬ ತನ್ನ ತೀರ್ಮಾನ ಪ್ರಕಟಿಸಿದ. ಕೊಡಲು ದುಡ್ಡಿಲ್ಲದೆ, ಮಾಡಲು ಕೆಲಸವಿಲ್ಲದೆ, ಪುಲ್ಲಯ್ಯ, ಊರ ಹೊರಗಿನ ಬೇವಿನ ಗಿಡದ ಕೆಳಗೆ, ಮಗನನ್ನು ಕೂಡಿಸಿಕೊಂಡು ಕುಳಿತ. ಮನೆಗೆ ಹೋಗಬೇಕೆಂದುಕೊಂಡ. ಆದರೆ ಏಕೊ ಮನಸ್ಸು ಬರಲಿಲ್ಲ. ಪದೆಪದೆ, ರಾತ್ರಿ ನಡೆದ ಘಟನೆ, ನರಸಿಂಹನ ಗತಿ ನೆನಪಿಗೆ ಬರುತ್ತಿತ್ತು.

ಆ ರಾತ್ರಿ, ನೀಲಿ, "ಯಾಕೊ ಮಂಕಾಗಿದ್ದೀರಿ, ಯಾಕ ಏನಾಯಿತು"—ಎಂದು ಕೇಳಿದಳು.

"ಏನೂ ಇಲ್ಲೇಳು"—ಎಂದಷ್ಟೇ ಹೇಳಿದ ಪುಲ್ಲಯ್ಯ.

ನೀಲಿ, ಅದಾದ ಮೇಲೆ ಯಾವ ಪ್ರಶ್ನೆಯನ್ನೂ ಹಾಕಲಿಲ್ಲ. ಮುದುಕಿ ಹೋದಾಗಿ ನಿಂದ, ಮನೆ ಎಲ್ಲ ಭಣಭಣವಾಗಿದೆ ಎಂದು, ಪುಲ್ಲಯ್ಯ ಒಂದೆರಡು ಸಾರಿ ಅಂದಿದ್ದ. ಹಾಗೆಯೇ ಯೋಚಿಸುತ್ತಾ ಮಲಗಿದ್ದಾಗ, ಪಕ್ಕದಲ್ಲಿ ಮಲಗಿದ್ದ ಮಗನ ಮುಖ ನೋಡಿ, ಪುಲ್ಲಯ್ಯನಿಗೆ ತನ್ನ ಗತ ಜೀವನದ ಘಟನೆಗಳು ಮರುಕಳಿಸಿದುವು. ಆ ರಾತ್ರಿ,

ನೀಲಮ್ಮದೇವಿಯ ಉತ್ಸವದಲ್ಲಿ ತಾನು ಕುಣಿದದ್ದು, ಗರಡಿ ಸಾಮು ಹಾಕಿದ್ದು—ಮುದುಕನಂತೆ ಕಂಡರೂ ಹರೆಯದವನಂತಿದ್ದ ಆ ದಾರಿಹೋಕ ಹೇಳಿದ್ದು—ಎಲ್ಲಾ ಜ್ಞಾಪಕಕ್ಕೆ ಬಂತು. "ನನ್ನ ಮಗ, ಮುದ್ದುಮಗ, ನನ್ನ ಹಾಗೆ ಗಿರಿಜಾಮೀಸೆ ಬಿಟ್ಟು, ನಾಲ್ಕು ಜನರ ನಡುವೆ ಮೆರೀತಾನ; ಯಾವುದಕ್ಕೂ ಹೆದರದ ನನ್ನ ಮಗ, ನನ್ನಂತೆಯೇ ಗಟ್ಟಿಮುಟ್ಟಾಗಿ ಬೆಳೀತಾನ......"

ಪಕ್ಕದಲ್ಲಿ ಮಲಗಿದ್ದ ಮಲ್ಲೇಶಿ ಹೊರಳಿದ. ಅವನ ಎಳೆಯ ಮುಖ, ಮಂದವಾದ ದೀಪದ ಬೆಳಕಿನಲ್ಲಿ ಹೊಳೆಯುತ್ತಿತ್ತು. "ನನ್ನ ಈ ಮಗನ್ನ ಗರಡಿಯ ಉಸ್ತಾದ್ ಮಾಡಬೇಕಂತ ಅಂದುಕೊಂಡಿದ್ದೆ; ಕಳ್ಳರನ್ನು ಹಿಡಿಯುವ ಸರದಾರ ಮಾಡಬೇಕಂತ ಅಂದುಕೊಂಡಿದ್ದೆ. ಭೂದೇವಿಯನ್ನ ನಂಬಿ ಬೆವರು ಸುರಿಸಿ, ನಮ್ಮ ಮನೆತನದ ಗೌರವ ಕಾಪಾಡ್ತಾನೆಂದುಕೊಂಡಿದ್ದೆ...... ಆಶೆಯ ಗೋಪುರ ಕಟ್ಟಿ ಆಕಾಶ ದೆತ್ತರಕ್ಕ ಹಾರಲು ಹಂಬಲಿಸಿದ್ದೆ...... ಆದರೆ ಈಗ —ನನ್ನ ಮಗನಿಗಾಗಿ ನಾನು ಏನೂ ಉಳಿಸಲಿಲ್ಲ. ಮೈಮೇಲೆ ಒಂದು ತುಂಡು ಬಟ್ಟೆ ಇಲ್ಲ—ಹೊಟ್ಟೆಗೆ ಹಿಟ್ಟೂ ಇಲ್ಲ. ಅನ್ನ–ಅನ್ನ ಅಂತ ಅತ್ತೂ–ಅತ್ತೂ ಮಲಗಿದ ನನ್ನ ಮಗ......"—ಹೀಗೆ ಯೋಚಿಸು ತ್ತಿರುವಾಗಲೇ ಪುಲ್ಲಯ್ಯನಿಗೆ ದುಃಖ ಉಮ್ಮಳಿಸಿ ಬಂದು, ಅವನು ಮಗನನ್ನು ಅಪ್ಪಿಕೊಂಡು ಮಲಗಿದ.

ನೀಲಿ, ಮಗಳನ್ನು ಮಂಚದ ಮೇಲೆ ಮಲಗಿಸಿ, ಗಂಡನ ಬಳಿ ಬಂದು ಕುಳಿತಳು. ಹಾಗೆಯೇ, "ಯಾಕ ಒಂದು ತರಹ ಇದ್ದೀಯಲ್ಲಾ"—ಎಂದು ಕೇಳಿದಳು.

ಜವಾಬು ಬರಲಿಲ್ಲ.

"ನನ್ನ ಹಾಂಗ ಇರಲಿಕ್ಕೆ ನಿನಗ ಬರಾಣಿಲ್ಲ. ನೀನು ಎಂದೇ ಆಗಲಿ, ಕಷ್ಟಪಟ್ಟವನಲ್ಲ. ಸುಖದಲ್ಲಿ ಹುಟ್ಟಿ ಸುಖದಲ್ಲಿ ಬೆಳೆದ ನೀನು, ಅಲ್ಪಸ್ವಲ್ಪ ಮಾತಿಗೆಲ್ಲ ಗಾಬರಿಯಾಗ್ತೀದಿ. ನಾಲ್ಕು ದಿನ ಬಂದದ್ದನ್ನು ಬಂದಂತೆಯೇ ಎದುರಿಸಿದಲ್ಲಿ ಎಲ್ಲಾ ಸರಿಹೋಗ್ತದ. ಅಷ್ಟಕ್ಕೂ, ಈಗ ನಮಗಿಂತ ಯಾರು ಸುಖ ಪಡ್ತಾ ಇದ್ದಾರ ಹೇಳು? ಎಲ್ಲಾರ ಮನೆ ದೋಸೇನೂ ತೂತೆ......"

ಹೆಂಡತಿಯ ಈ ಕೊನೆಯ ಮಾತು ಕೇಳಿ, ಪುಲ್ಲಯ್ಯ ಅವಳತ್ತ ತಿರುಗಿದ. ನೀಲಿ, ಮಂದಹಾಸ ಬೀರುತ್ತಾ, "ಎಲ್ಲಾರಿಗೂ ಒಂದಿಲ್ಲ ಒಂದು ಕಷ್ಟ ಇದ್ದೇ ಇರ್‍ತದ. ಹೊಲ ಹೋಯ್ತು, ಗದ್ದೆ ಹೋಯ್ತು, ಒಂದೊಪ್ಪತ್ತು ಇದ್ದರ ಒಪ್ಪತ್ತು ಇಲ್ಲ. ಅದೇ, ಆ ಗಂಗವ್ವಗ, ತಿನಬೇಕು–ಉಣಬೇಕು—ಅಂದರ ಏನು ಕಡಿಮಿ ಅದ. ಆದರ, ಹಾಳಾದ ಆ ಹೊಟ್ಟೆನೋವು ಬಂದಾಗನಿಂದ ಒಂದು ಬಟ್ಟಲು ಗಂಜಿ ಕುಡಿಯಲೂ ಸಹ ಅವಳಿಗೆ ಆಗಾಣಿಲ್ಲ. ಎಂತಹ ಕಷ್ಟ ಬಂದರೂ, ಎಷ್ಟು ಕಾಲ ಇರ್‍ತಾವು. ಇಂದಿದ್ದರ–ನಾಳಿಲ್ಲ. ಇನ್ನೇನು ಕುಯ್ಲಿನ ಕೆಲಸ ಆರಂಭ ಆಗ್ತದ. ನಮ್ಮ ಕೈಕಾಲು ಗಟ್ಟಿಯಾಗಿರು ವಾಗ ನಮಗ್ಯಾಕ ಇಲ್ಲದ ಅಂಜಿಕಿ."

ಪುಲ್ಲಯ್ಯ, ಆಗಲೂ ಮಾತನಾಡಲಿಲ್ಲ. ನೀಲಿ ಗಂಡನ ಹೃದಯದ ನೋವನ್ನು ಅರ್ಥಮಾಡಿಕೊಂಡು, ಅವನ ಬಳಿಸಾರಿ—"ಅಜ್ಜಿ ಹೇಳಿದ್ದು ಖರೆ ಆದ್ಹಾಂಗಾಯಿತು—ಕೈಸುಟ್ಟರ,—ಗಡಿಗಿ ಎತ್ತಿಹಾಕ್ತೀದಿ ಅಂತ. ನನ್ನ ಗಂಡ ಅಷ್ಟು ಧೈರ್ಯಗೇಡಿ ಅಲ್ಲ .........ನಾಲ್ಕು ಜನರಲ್ಲಿನ ಒಳ್ಳೆಯತನವನ್ನು, ನಾಲ್ಕು ಜನರ ಒಳ್ಳೆಯ ಮನಸ್ಸನ್ನ ನೀನು ಗುರುತಿಸಿದರ, ನಿನಗೂ ಧೈರ್ಯ ಬರ್‍ತದ. ಮನುಷ್ಯ ಅಂದ ಮ್ಯಾಲೆ, ಒಳ್ಳೇದು–ಕೆಟ್ಟದು ಇದ್ದೇ ಇರ್‍ತಾವ. ಇಲ್ಲಿವರೆಗೂ, ನೀನು ಒಬ್ಬರಲ್ಲಿನ ಕೆಡುಕುತನವನ್ನು ಕಡೆಗಂಡು, ಒಳ್ಳೆಯತನವನ್ನು ಮಾತ್ರ ನೋಡತಿದ್ದಿ. ಈಗ ಇನ್ನೊಬ್ಬರಲ್ಲಿರಬಹುದಾದ ಒಳ್ಳೆಯತನ ಕಡೆಗಂಡು, ಬರೀ ಕೆಟ್ಟುದನ್ನೇ ನೋಡುತೀದಿ. ಆಗ, ಗರಡಿಮನಿ ಒಳಗ ಸಾಮುಹಾಕಿ ಕಸರತ್ತು ಮಾಡೊ ಹುಮ್ಮಸ್ಸಿನ್ಯಾಗ, ಊಟ ನಿದ್ರೆಬಿಟ್ಟು ಕುಣೀತಿದ್ದಿ. ಈಗ, ಒಂದೊಪ್ಪತ್ತು ಊಟ ಸಿಗಲಿಲ್ಲಾ ಅಂದರ, ವಿಲಿವಿಲಿ ಒದ್ದಾಡತ್ತಿದಿ. ನಮ್ಮ ಬದುಕು ಕೊನೆಯವರೆಗೂ ಹೀಗೆ ಇರಲಿಕ್ಕಿಲ್ಲ. ನಾಳೆ, ನಮಗೂ ಒಳ್ಳೆಯ ದಿನ ಬರಬಹುದು."

ಪುಲ್ಲಯ್ಯ, ಮೃದುವಾಗಿ ಮಾತನಾಡುತ್ತಾ ಕುಳಿತಿದ್ದ ಹೆಂಡತಿಯ ಮುಖವನ್ನು ನೋಡುತ್ತಾ—"ನರಸಿಂಹನಂತಹವರು ಕಳ್ಳತನಕ್ಕ ಇಳಿದ ಮ್ಯಾಲೆ......"

ಅವನು, ಮುಂದೆ ಇನ್ನೇನೊ ಹೇಳುವುದರಲ್ಲಿದ್ದ. ಅಷ್ಟರಲ್ಲಿ ನೀಲಿ, ಫಕ್ಕನೆ ನಕ್ಕು—"ಅದರಲ್ಲಿ ನರಸಿಂಹನದೇ ತಪ್ಪು—ನನ್ನ ಸರ್ಕಾರ ದೊಡ್ಡದು, ನನ್ನ ಸರ್ಕಾರ, ನನ್ನ ಮಕ್ಕಳನ್ನ ನೋಡಿಕೊಳ್ತದ ಅಂದು—ಹಿರಿಯ ಮಗನನ್ನ ಅರ್ಧಕ್ಕೆ ಓದು ಬಿಡಿಸಿ, ಕೆಲಸಕ್ಕ ಬಾರದ ಹಾಂಗ ಮಾಡಿದ. ಇನ್ನು ಅಂವ ಕಲೆಕ್ಟರ್ ಯಾವಾಗ ಆಗ್ತಾನೊ–ಏನೋ? ಹೋಗಲಿ, ಕಿರಿಯರನ್ನಾದರೂ ಯಾರ ಮನೆಯಲ್ಲಾದರೂ ಕೆಲಸಕ್ಕೆ ಇಟ್ಟಿದ್ದಲ್ಲಿ ವರ್ಷಕ್ಕೆ ಹತ್ತು ಬುಟ್ಟಿ ಧಾನ್ಯನಾದರೂ ಬರ್‍ತಿದ್ದವು......"

"ಅದೆಂತಹ ಮಾತು ಹೇಳ್ತೀಯ. ಅಭಿಮಾನದಿಂದ ಬದುಕಿದ ಜೀವ ಅದು. ಮಕ್ಕಳನ್ನ ಕಂಡವರ ಮನ್ಯಾಗ ಕೆಲಸಕ್ಕಿಡಲು ಮನಸ್ಸು ಹ್ಯಾಂಗಾದೀತು......"

"ಹೌದು, ಅಭಿಮಾನಕ್ಕ ಗಂಟುಬಿದ್ದು ಈಗ ಉಪವಾಸ ಸಾಯೋದು, ಕಳ್ಳತನಕ್ಕ ಇಳಿಯೋದು ಒಳ್ಳೆಯದೇನೊ? ಇನ್ನೊಂದು ವರ್ಷ ಒಪ್ಪತ್ತಿನಲ್ಲಿ, ನಮ್ಮ ಮಲ್ಲೇಶಿ ನಾಲ್ಕು ಮನೆಗಳ ದನ ಕಾಯಬಹುದು. ನೀನು, ಹಿರಿಯ ರೈತನ ಮನ್ಯಾಗ ಕೆಲಸಕ್ಕೆ ಸೇರಿಕೊಂಡರ ಇಪ್ಪತ್ತು ಪುಟ್ಟಿ ಧಾನ್ಯಾನಾದರೂ ಕೊಡ್ತಾರ......"

ಹೆಂಡತಿಯ ಈ ಮಾತು ಕೇಳಿ ಪುಲ್ಲಯ್ಯನಿಗೆ ಎಲ್ಲಿಲ್ಲದ ಪೌರುಷ ಬಂದು, "ಪೊನ್ನೂರಿಗೆ ಹೋಗಿ ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೋತಿನಿ. ಆದರ ಈ ಊರಾಗ ಇದ್ದುಕೊಂಡು, ಇನ್ನೊಬ್ಬರ ಮನ್ಯಾಗ ಚಾಕರಿ ಮಾಡಾಣಿಲ್ಲ"—ಎಂದ.

"ಹಾಂಗಾದರ ಹ್ಯಾಂಗಾದೀತು"—ಎಂದು ನೀಲಿ ಕೇಳಿದಾಗ, ಅದುವರೆಗೆ ಮಲಗಿಕೊಂಡು ಮಾತನಾಡುತ್ತಿದ್ದ ಪುಲ್ಲಯ್ಯ ಸರಕ್ಕನೆ ಮೇಲೆದ್ದು—"ನಾನು ದೊಡ್ಡ

ಮನೆತನಕ್ಕ ಸೇರಿದವನು. ಘನವಾಗಿ ಜೀವಿಸಿದವನು—ಈ ಊರಾಗ ಇರೋವರೆಗೂ ನಾನು ನನ್ನ ಪ್ರತಿಷ್ಠೆ ಉಳಿಸಿಕೊಳ್ಳತೀನಿ. ನಿಜವಾಗಿ ಹೇಳಬೇಕಾದರ, ನಿನಗಾಗಿಯೇ ನಾನು ಮಾಡಬಾರದ ಕೆಲಸ ಮಾಡಲು ಒಪ್ಪಿಕೊಂಡದ್ದು...... ನನಗ ಈ ಕೂಲಿನಾಲಿ ಮಾಡುವುದು ಸರಿ ಬರವಲ್ಲದು. ನಾನು ಕೂಲಿ ಕೆಲಸ ಮಾಡಿದರ, ನಾಳೆ ನನ್ನ ಮಗನೂ ಅದೇ ಕೆಲಸ ಮಾಡಬೇಕಾಗ್ತದ—ನನ್ನ ಮಗನ್ನ, ದನ ಕಾಯೊ ಹುಡುಗನ್ನ ಮಾಡ ಬೇಕಂತಿ ಏನು ನೀನು? ಅವನು ಕಳ್ಳರನ್ನು ಹಿಡಿಯುವ ಸರದಾರನಾಗಬೇಕು—ನನಗೂ ಈ ಊರಿಗೂ ಕೀರ್ತಿ ತರಬೇಕು"—ಎಂದೆಲ್ಲ ಆವೇಶದಿಂದ ಹೇಳಿದ.

"ಹೌದು, ನೀವು ಹೇಳೋದೆಲ್ಲ ಖರೇನs. ಆದರ, ಮೊದಲು ತಿಂದುಂಡು ಬದುಕ ಬೇಕಲ್ಲ. ಗಿಡ ದೊಡ್ಡದಾಗಿ ಬೆಳೆದು, ಹೂವು ಬಿಟ್ಟು, ಕಾಯಿಯಾಗಿ ಹಣ್ಣಾಗಬೇಕಾದರ, ಅದಕ್ಕ ಗೊಬ್ಬರ ಹಾಕಿ, ನೀರು ಉಣಿಸಬೇಕಾಗ್ತದ. ನಿಮಗ ಇಷ್ಟು ಪೌರುಷ ಇರೋದು ಸರಿಯಲ್ಲ"—ಎಂದು ನೀಲಿ ಹೇಳಿದಾಗ, ಪುಲ್ಲಯ್ಯ ಕುಳಿತವನು ಸರಕ್ಕನೆ ಎದ್ದು ನಿಂತ.

"ನಮ್ಮ ವಂಶ ಘನವಾದ ವಂಶ. ಪೌರುಷವುಳ್ಳ ವಂಶ. ನಾನು ಪೌರುಷವನ್ನು ಮೈಗೂಡಿಸಿಕೊಂಡು ಹುಟ್ಟಿದವನು. ಪೌರುಷದಿಂದಲೇ ಸಾಯ್ತೀನಿ—ಆಗಲಿ, ಕಳ್ಳ ತನಕ್ಕ ಇಳಿಯುವುದಿಲ್ಲ...... ಬೇಡಿಕೊಂಡು......"

ಪುಲ್ಲಯ್ಯ ಆವೇಶದಿಂದ ಮಾತನಾಡುತ್ತಿದ್ದಾಗಲೇ ಮಲ್ಲೇಶಿ, "ಹಸಿವಿ......" ಎಂದು ಅಳುತ್ತ ಎದ್ದು ಕುಳಿತ. ಪುಲ್ಲಯ್ಯ ಅಲ್ಲಿಯೇ ಕುಳಿತು ಮಗನನ್ನು ಸಮಾಧಾನ ಮಾಡಲು ಪ್ರಯತ್ನಿಸಿದ. ಆದರೆ ಮಲ್ಲೇಶಿ, "ಅಮ್ಮಾ ಹಸಿವಿ......" ಎಂದು ಅಳುತ್ತಲೇ ಇದ್ದ.

ನೀಲಿಯು ವಾದಕ್ಕೆ ಗೆಲುವಾಗಿತ್ತು. ಮಗ ಎರಡು ವರ್ಷ ಚಿಕ್ಕವನಾಗಿದ್ದಲ್ಲಿ, ನೀಲಿ, ಅವನ ಹಸಿವನ್ನು ಇಂಗಿಸಬಹುದಾಗಿತ್ತು. ಆದರೆ, ಈಗ...... ಪುಲ್ಲಯ್ಯ ಮುಖ ತಿರುಗಿಸಿಕೊಂಡು ಕುಳಿತ. ಹಾಗೂ –ಹೀಗೂ ಮಲ್ಲೇಶಿಯನ್ನು ಮಲಗಿಸಿದ್ದಾಯಿತು. ಅವನು ಮಲಗಿದ ಮೇಲೂ, ಗಂಡ–ಹೆಂಡತಿ ಒಬ್ಬರ ಮುಖ ಒಬ್ಬರು ನೋಡುತ್ತಾ ಕುಳಿತರು. ಕೊನೆಗೆ ಪುಲ್ಲಯ್ಯನೇ ಮೌನ ಮುರಿದು, "ಇನ್ನು ಉಳಿದಿರೋದು ಅದೊಂದು ತಾಟು...... ನಾಳೆ ಮುಂಜಾನೆ ಅದನ್ನೂ ಒಯ್ದು......" ನೀಲಿ ಗಂಡನ ಮಾತಿಗೆ ಮೌನವಾಗಿಯೇ ಸಮ್ಮತಿ ನೀಡಿದಳು.

## [ 25 ]

ನಾಲ್ಕು ದಿನ ಕಳೆದವು. ಐದನೆಯ ದಿನ, ಗಂಗವ್ವನ ಮನೆಯ ಮುಂದೆ ಜನರು ಗುಂಪು ಕಟ್ಟಿಕೊಂಡು ನಿಂತಿದ್ದರು. ಒಳಗೆ, ಗಂಗವ್ವ ತನ್ನ ಹೊಟ್ಟೆಯನ್ನು ಹಿಚುಕಿಕೊಳ್ಳುತ್ತಾ,

"ಸಾವಾದರೂ ಬರವಲ್ಲದು, ಹಾಳಾದ್ದು ಈ ಹೊಟ್ಟೆನೋವು ಎಷ್ಟೂ ಅಂತ ಸಹಿಸಲಿ"—ಎಂದು ಕೂಗಿಕೊಳ್ಳುತ್ತಿದ್ದಳು. ಅಲ್ಲಿ ಸೇರಿದವರು, ತಲಾ ಒಂದು ಸಲಹೆ ನೀಡುತ್ತಿದ್ದರು. ಗಂಗವ್ವನ ಅಳಿಯ, ಅವರೆಲ್ಲರ ಸಲಹೆಗಳನ್ನು ಕೇಳಿ ರೇಗಿದ್ದ. ಆ ಗದ್ದಲದಲ್ಲಿ ನರಸಿಂಹ ಕೂಡ ಸೇರಿಕೊಂಡಿದ್ದ. ಎಲ್ಲರಿಗಿಂತ ಅವನೇ ಮುಂದಾಗಿ—"ನೋಡಿದೆಯಾ, ಯಾರನ್ನೊ ಕರಕೊಂಡು ಬಂದು ಮಗಳ್ನ ಕೊಟ್ಟು ಮನ್ಯಾಗ ಇಟ್ಟುಕೊಂಡರೂ, ನಿನ್ನ ಗೋಳು ತಪ್ಪಲಿಲ್ಲ. ದುಡ್ಡಿನ ಮಾರಿ ನೋಡಿದರ ಹ್ಯಾಂಗ"—ಎಂದು ಕೇಳಿದ.

"ಅರಗಲಾರದ ತಿಂಡಿ, ಆಗದ ಮಾತು—ನನ್ನ ಹಣೆಬರಹ ಹೀಂಗಾತು"—ಗಂಗವ್ವ ತಲೆ ಚಚ್ಚಿಕೊಂಡಳು.

"ನಿನ್ನ ಹಣೆಬರಹಕ್ಕ ಏನಾಗ್ಯದ. ಮೂರು ದಿನದಾಗ ಮುನ್ನೂರು ರೂಪಾಯಿ ಖರ್ಚುಮಾಡು. ನಿನಗೆ ಎಂತಹ ವೈದ್ಯ ಬೇಕೊ, ಅಂತಹವನ ಹತ್ತಿರ ಹೋಗಿ ಏನು ಚಿಕಿತ್ಸೆ ಬೇಕೊ ಮಾಡಿಸಿಕೊ. ಆ ಪುಲ್ಲಯ್ಯ ಇದ್ದಾನಲ್ಲ. ಅವನ್ನ ಜತಿ ಕರಕೊಂಡು ಹೋಗು—ಅವನ ಮಾರಿ ನೋಡಿದರ, ಯಾವ ಡಾಕ್ಟರಾದರೂ ನಿನ್ನ ಆಸ್ಪತ್ರೆಗೆ ಸೇರಿಸಿಕೋತಾನ. ಇಷ್ಟಕ್ಕೂ ತಡಮಾಡದಿ ಅಂದರ—ಸಾಯ್ತೀದಿ. ಒಂದು ಸರೆ ಹೊಟ್ಟಿ ಕುಯ್ದರ, ಎಲ್ಲಾ ನೋವು ಮಂಗಮಾಯ ಆಗ್ತಾವ."

"ಅವ್ವಯ್ಯಾ, ಹೊಟ್ಟಿ ಕೊಯ್ಸಿಕೊಳ್ಳಬೇಕs?"

"ಏ ಹುಚ್ಚಿ, ನಿನ್ನ ಹೊಟ್ಟಿ ಕೊಯ್ದರೂ, ನಿನಗ ಅದು ತಿಳಿಯಾಣಿಲ್ಲ. ನಿನಗ ಯಾವ ರೀತಿಯ ನೋವು ಆಗಾಣಿಲ್ಲ. ಆ ದೊಡ್ಡ ಆಸ್ಪತ್ರಿ, ಇಲ್ಲಿಂದ ಹಿಡಿದು ದಿಲ್ಲಿವರಿಗೂ ಪ್ರಖ್ಯಾತಿ ಆಗ್ಯದ. ಅಲ್ಲಿ ದುಡ್ಡು ಕೊಡದ ಹೊರತು, ಬಾಗಿಲಾ ತೆಗೆಯೂದಿಲ್ಲ. ಅಲ್ಲಿನ ಡಾಕ್ಟರರು, ಎಲುಬುಗಳು ಮುರಿದು ತುಂಡಾಗಿದ್ದರೂ ಕೂಡ ಜೋಡಿಸಿ ಬಿಡ್ತಾರ. ಕಣ್ಣು ಹೋಗಿದ್ದರ, ಕುರಿಕಣ್ಣು ಜೋಡಿಸಿ, ಮತ್ತs ಎಲ್ಲಾನೂ ಕಾಣಿಸೊ ಹಾಂಗ ಮಾಡ್ತಾರ. ವಿಶಾಖಪಟ್ಟಣ ಅಂದರ ಏನಂತ ತಿಳಿದೀದಿ. ಅಲ್ಲಿ ಸಿಂಡಿಯಾ ಕಂಪನಿ ಅದ. ದೊಡ್ಡ ಆಸ್ಪತ್ರಿ ಅದ. ಹುಚ್ಚರ ಆಸ್ಪತ್ರೀನೂ ಅದ. ಆಕಾಶದೆತ್ತರಕ್ಕ ಬಂಗಲೆಗಳು ಕಟ್ಟ್ಯಾರ. ಒಂದು ಒಪ್ಪತ್ತು ನಿನ್ನ ಆಯುಷ್ಯ ಮುಗಿದು ನೀನು ಸತ್ತರೂ, ಅವನ್ನೆಲ್ಲ ನೋಡಿದ್ಹಾಂಗ ಆಗ್ತದ. ನನ್ನ ಮಾತು ಕೇಳಿ ನಾಳೆ ನೀನು ಹೊಂಟುಬಿಡು. ನಿನ್ನ ಹೊಟ್ಟಿ ನೋವು ಮೂರು ದಿನದಾಗ ಸರಿ ಆಗ್ತದ—ಊರನ್ನೂ ನೋಡಿದ್ಹಾಂಗ ಆಗ್ತದ"—ನರಸಿಂಹ ಒತ್ತಾಯಪಡಿಸಿದ.

ಗಂಗವ್ವ ಅಳಿಯನ ಮುಖ ನೋಡಿದಳು. ಅವನು ಮುಖ ತಿರುವಿಕೊಂಡು ನಿಂತ. ಇದನ್ನು ಗಮನಿಸಿದ ನರಸಿಂಹ—"ಆ ಕಟ್ಟೀಮನಿ ಶೆಟ್ಟಿ, ನಿನ್ನ ಹಾಂಗs ಹೊಟ್ಟಿಹೊಟ್ಟಿ ಅಂತ ಬಡಕೋತಿದ್ದ. ಸುತ್ತಮುತ್ತಲಿನ ಹಳ್ಳಿಗಳ ಎಲ್ಲಾ ವೈದ್ಯರು ಅವನಿಗೆ ಔಷಧಿ ಕೊಟ್ಟರು. ಆದರೂ ಅವನ ಹೊಟ್ಟೆನೋವು ಕಡಿಮಿ ಆಗಲಿಲ್ಲ. ಕಡೀಗೆ ಆ ವಿಶಾಖ ಪಟ್ಟಣಕ್ಕ ಹೋಗಿ ಒಂದು ಹತ್ತು ದಿನ ಇದ್ದಬಂದ. ಈಗ ನೋಡು, ಕುದುರೆ ಮಾಂಸ

ಹಾಕಿದರೂ ತಿಂದು ತೇಗತಾನ. ಮೂರೊಪ್ಪತ್ತು ಊಟ ಮಾಡಿ ಹಾಯಾಗಿದ್ದಾನ. ಆಸೆಪಟ್ಟು, ಮುದ್ದಿನ ಮುಖ ನೋಡಿ, ಆ ಗೌರಮ್ಮ ತನ್ನ ಗಂಡನ್ನ ಕೊಂದಹಾಂಗ, ನಿನ್ನ ಅಳಿಯ ನಿನ್ನ ಕೊಲ್ತಾನ ಅಷ್ಟ"—ಎಂದು ಚುಚ್ಚಿದ.

ಗಂಗವ್ವನ ಅಳಿಯನಿಗೆ ಎಲ್ಲಿಲ್ಲದ ಆವೇಶ ಬಂತು. "ಲೇ, ನರಸಿಂಹ, ಹಾಂಗೆಲ್ಲ ನಾಲಗಿ ಹರಿಬಿಡಬ್ಯಾಡ. ನಾನ್ನೂರು ಯಾಕ ಬೇಕಾದರ ಐದುನೂರು ತೊಗೊಂಡು ಹೋಗಂತ ಹೇಳು. ಇಲ್ಲಿವರೆಗೂ ಅದೆಷ್ಟು ನೂರು ಖರ್ಚು ಆಗ್ಯಾವೊ–ಏನೊ? ಈಗ ಇನ್ನೊಂದಿಷ್ಟು ಖರ್ಚಾಗಲಿ"—ಎಂದ.

"ಗಂಗವ್ವ, ನಿನ್ನ ಅಳಿಯ ಅಂತೂ ಒಪ್ಪಿಕೊಂಡ. ನನ್ನ ಮಾತು ಕೇಳಿ ನಾಳೆ ಹೊರಟು ಬಿಡು. ನೀನು ಕರದರ, ಪುಲ್ಲಯ್ಯ ಬಂದೇ ಬರ್‍ತಾನು. ಹೋಗಿ–ಬರೋ ಖರ್ಚು ಕೊಡು, ಊಟಕ್ಕ ಹಾಕು ಆತು. ಅಲ್ಲಿ ಎಲ್ಲಾದರೂ ಛತ್ರದಾಗ ಇಳದು ಡಾಕ್ಟರರನ್ನು ನೋಡಿಕೊಂಡು ಬರ್‍ರಿ ಆತು. ನೀನೆ ಮುಂದ ನಿಂತು ಲಗ್ನ ಮಾಡಿದಿ ಅಂದಮ್ಯಾಲೆ, ನಿನಗ ಹೊತ್ತಿಗೆ ನೆರವು ಆಗದ ಇರ್‍ತಾನೇನು ಪುಲ್ಲಯ್ಯ. ಹಿಂದಿರುಗಿ ಬರುವಾಗ ಸಿಂಹಾದ್ರಿಯಲ್ಲಿರುವ ದೇವರ ದರ್ಶನ ತೊಗೊಂಡು ಬರ್‍ರಿ ಆತು"—ನರಸಿಂಹ ಉತ್ಸಾಹದಿಂದ ಹೇಳಿದ.

ನರಸಿಂಹ, ಅಲ್ಲಿಂದ ನೇರವಾಗಿ, ಪುಲ್ಲಯ್ಯನ ಮನೆಗೆ ಬಂದು, ಪ್ರಯಾಣದ ವಿಷಯ ಹೇಳಿದ. ಪುಲ್ಲಯ್ಯ ಗಂಗವ್ವನ ಜೊತೆ ಹೋಗಲು ಸಿದ್ಧನಾಗಿದ್ದರೂ, ತನ್ನನ್ನು ಬಿಟ್ಟು ಮಗ ಹೇಗಿರುತ್ತಾನೊ ಎಂಬ ಚಿಂತೆ ಅವನನ್ನು ಕಾಡುತ್ತಿತ್ತು. "ಪುಲ್ಲಯ್ಯ, ಪಟ್ಟಣದ ವರೆಗೂ ಹೋಗಲಿಕ್ಕೆ ಇದೊಂದು ಒಳ್ಳೆಯ ಅವಕಾಶ ಸಿಕ್ಕದ. ಅಲ್ಲಿ ಹೋದಾಗ ನಾಲ್ಕು ಕಡೆ ಸುತ್ತಾಡಿ, ಸಿಂಡಿಯಾ ಕಂಪೆನಿ, ಆ ಕಂಪೆನಿ–ಈ ಕಂಪೆನಿ ಅಂತ ಹೋಗಿ ತಿಂಗಳಸಂಬಳದ ಮ್ಯಾಲೆ ಕೆಲಸ ಹುಡುಕಿಕೊಂಡು ಬಾ. ನೀನು ಹೋಗಿ ಅಲ್ಲಿ ನೌಕರಿ ಹಿಡಿದು ಮನಿಮಾಡಿದಿ ಅಂದರ, ನಾನೂ ಬರ್‍ತೀನಿ"—ನರಸಿಂಹ ತನ್ನ ದೂರಾಲೋಚನೆಯನ್ನು ವ್ಯಕ್ತಪಡಿಸಿದ.

ಪುಲ್ಲಯ್ಯ, ಪಟ್ಟಣಕ್ಕೆ ಹೋಗಲು ಒಪ್ಪಿಕೊಂಡ. ಪಕ್ಕದ ಮನೆಗೆ ಹೋಗಿದ್ದ ನೀಲಿ ಬಂದ ಕೂಡಲೆ, ಪುಲ್ಲಯ್ಯ ತನ್ನ ಪ್ರಯಾಣದ ವಿಷಯ ತಿಳಿಸಿದ. ನೀಲಿ ಯಾವ ಮಾತನ್ನೂ ಆಡದೆ ಮೌನವಾಗಿ ನಿಂತಿದ್ದಳು. ನರಸಿಂಹನೆ ಮೊದಲು ಮಾತನಾಡಿ, "ಮಗಳೆ, ನೀನು ಹೇಳಿದ ಬುದ್ಧಿಮಾತು ಮೊದಲೇ ಕೇಳಿದ್ದರ, ಹಸಿವಿನಿಂದ ನಾವು ಕಂಗಾಲಾಗತಿರಲಿಲ್ಲ. ಧರ್ಮರಾಜ ಸುಳ್ಳುಹೇಳಿದ್ಹಾಂಗ, ನಾನೂ ಕಳ್ಳತನಕ್ಕ ಇಳಿದಿದ್ದೆ. ಆಯ್ತು, ಈಗಂತೂ ನೀನು ಹೇಳಿದ್ಹಾಂಗ, ಕಿರಿಯರಿಬ್ಬರನ್ನು ದನಕಾಯಲಿಕ್ಕೆ ಹಚ್ಚೀನಿ. ಹಿರೆ ಮಗನ್ನ, ದೊಡ್ಡೂರಾಗಿನ ವಕೀಲರ ಕಾಲು ಹಿಡಕೊಂಡು ಅವರ ಮನ್ಯಾಗ ಕೆಲಸಕ್ಕ ಇಟ್ಟೀನಿ. ಅಲ್ಲೇ ಇದ್ದು ನಾಲ್ಕು ಅಕ್ಷರ ಕಲಿತನಂದರ ನಮ್ಮ ಈ ಘನ ಸರ್ಕಾರ ಒಂದಲ್ಲ ಒಂದು ಚಾಕರಿ ಕೊಡ್ತದ"—ಎಂದು ಹೇಳಿದ.

"ಒಳ್ಳೆದಾಯ್ತು ನೋಡು ಮಾವ. ಕಷ್ಟ ಪಡತಾರ, ತಮ್ಮ ಹೊಟ್ಟೆ ತಾವು ತುಂಬಿ ಕೋತಾರ. ಮಡದು ಹೊಟ್ಟೆ ತುಂಬಿಕೊಳ್ಳೋದು ತಪ್ಪೇನಲ್ಲ. ಅದರೊಳಗ ನಾಚಿಕಿಪಡುವಂತಹುದು ಏನೂ ಇಲ್ಲ. ಅದಲ್ಲದ ಒಣ ಡೌಲು ಬಡಿದರ, ಬದುಕು ಸಾಗಾಣಿಲ್ಲ. ಪೌರುಷದಿಂದ, ಇಲ್ಲದ ಡಂಭಾಚಾರದಿಂದ ನೀರಿನ್ಯಾಗಿಂದ ಬೆಣ್ಣೆ ತೆಗೀಲಿಕ್ಕೆ ಆಗಾಣಿಲ್ಲ—ಅದು ಸಾಧ್ಯನೂ ಇಲ್ಲ. ನಡು ಬಗ್ಗಿಸಿ ಕೆಲಸ ಮಾಡಲು ಹಿಂಜರಿಯುವವರಿಗೆ, ಸರ್ಕಾರ ಒಂದ್ಸ ಯಾಕ, ದೇವರೂ ಕೂಡ ಸಹಾಯ ಮಾಡ ಲಾರ. ಕಷ್ಟಪಟ್ಟರ ಫಲ ಸಿಗ್ತದ. ಇಲ್ಲದಿದ್ದರ ಏನೂ ಇಲ್ಲ"—ನೀಲಿ ಸಂತೋಷ ದಿಂದಲೇ ಹೇಳಿದಳು.

ಪುಲ್ಲಯ್ಯ, ಪಿಳಿಪಿಳಿ ಕಣ್ಣುಬಿಡುತ್ತಾ, ಹೆಂಡತಿಯ ಮುಖ ನೋಡುತ್ತಾ ಕುಳಿತಿದ್ದ. ನರಸಿಂಹ, "ಅಮ್ಮಾ, ಮಹಾತಾಯಿ, ಆ ಮುದುಕಿ, ತನ್ನಲ್ಲಿದ್ದ ಎಲ್ಲಾ ಒಳ್ಳೆತನ, ವಿವಚನೆ ನಿನಗ ಧಾರೆ ಎರೆದು ಕೊಟ್ಟಾಳ ನೋಡು. ಎಷ್ಟಾದರೂ ಕುದುರಿ ಹೊಟ್ಟೆ ಒಳಗ ಕುದುರೆ ಹುಟ್ಟದ, ಕತ್ತಿ ಹುಟ್ಟತದೇನು? ನನ್ನ ಅನುಭವದಿಂದ ಹೇಳ್ತೀನಿ. ನನ್ನ ಒಳ್ಳೆಯತನ, ನಿನ್ನನ್ನ ಎಲ್ಲಿ ಹೋದರೂ ಕಾಪಾಡ್ತದ. ಸುತ್ತಮುತ್ತಿನ ಹಳ್ಳಿ ಒಳಗ ನಿನ್ನ ಹೆಸರು ಎತ್ತಿದರೂ ಸಾಕು, ಕೆಟ್ಟವರು ಕೂಡ ಒಳ್ಳೆಯುವರಾಗ್ತಾರ ತಾಯಿ"—ಎಂದು ಅಭಿಮಾನದಿಂದ ಹೇಳಿ ಹೊರಟುಹೋದ.

ಪುಲ್ಲಯ್ಯ, ಗಂಗವ್ವನ ಜೊತೆಗೆ ಪಟ್ಟಣಕ್ಕೆ ಹೋಗುವುದು ಖಚಿತವಾಯಿತು. ಮಲ್ಲೇಶಿ, ತಾನೂ ಕೂಡ ಪುಲ್ಲಯ್ಯನ ಜೊತೆ ಹೊರಡುವುದಾಗಿ ಹಠಹಿಡಿದ. ಮಗನನ್ನು ಕರೆದುಕೊಂಡು ಹೋಗಬೇಕೆಂದರೆ, ಕೈಯಲ್ಲಿ ದುಡ್ಡಿರಲಿಲ್ಲ. ಅದೂ ಅಲ್ಲದೆ— "ರೇಷನ್ನು, ಅದು-ಇದು ಅಂತ ಅಲ್ಲಿ ಮಂದೀನ್ಸ ಒದ್ದಾಡತಿರೋವಾಗ ಮಗನ್ನ ಕರಕೊಂಡು ಹೋಗಿ ಏನು ಮಾಡ್ತಿ"—ಎಂದು ಗಂಗವ್ವನ ಅಳಿಯ ಮೊದಲೇ ಹೇಳಿ ಬಿಟ್ಟಿದ್ದ. ನೀಲಿ, ಊರಿನ ಹಿರಿಯ ರೈತನ ಮನೆಯಲ್ಲಿ ಏನಾದರೂ ಕೆಲಸ ಇದ್ದಲ್ಲಿ ಮಾಡಿಬರುತ್ತಿದ್ದಳು. ಉಳಿದ ಸಮಯದಲ್ಲಿ ನೂಲು ತೆಗೆಯುತ್ತಿದ್ದಳು. ಒಂದೊಪ್ಪತ್ತು ಇದ್ದರೆ, ಒಂದೊಪ್ಪತ್ತು ಇರುತ್ತಿರಲಿಲ್ಲ. ಇಂತಹುದರಲ್ಲಿ, ಪುಲ್ಲಯ್ಯ ಮಗನನ್ನು ಬಿಟ್ಟುಹೋಗಬೇಕಾಗಿತ್ತು. ಎಂಟು ದಿನಗಳ ಒಳಗಾಗಿ ಹಿಂದಿರುಗಿ ಬರುವುದಾಗಿ, ಅಲ್ಲಿಂದ ಬರುವಾಗ ಗೊಂಬೆ, ಬಟ್ಟೆ-ಬರೆಗಳನ್ನು ತರುವುದಾಗಿ ಸಮಜಾಯಿಸಿದ. ನೀಲಿಯ ಕಿವಿಗೆ ಬೀಳದಂತೆ, ಅಲ್ಲಿಂದ ಹಿಂದಿರುಗಿ ಬಂದ ನಂತರ ಎಲ್ಲರನ್ನೂ ಕರೆದು ಕೊಂಡು ಹೋಗುವುದಾಗಿ ಹೇಳಿದ. ಪಟ್ಟಣದಲ್ಲಿ ನೌಕರಿ-ಚಾಕರಿ ಮಾಡಿಕೊಂಡು ಎಲ್ಲರೂ ಹಾಯಾಗಿರಬಹುದೆಂದು ಮಗನನ್ನು ಪುಸಲಾಯಿಸಿದ.

ಪುಲ್ಲಯ್ಯ ಊರಿಗೆ ಹೋದಾಗಿನಿಂದ, ಮಲ್ಲೇಶಿ ಮಂಕಾಗಿಯೇ ಇದ್ದ. ಹೊತ್ತು ಹೊತ್ತಿಗೆ ಸರಿಯಾಗಿ ಊಟ ಕೂಡ ಮಾಡದೆ, ಮೂಲೆಹಿಡಿದು ಕುಳಿತಿರುತ್ತಿದ್ದ. ಹಸಿವೆ ಆದಾಗ, ನೇರವಾಗಿ ಅಡಿಗೆಮನೆಗೆ ಹೋಗಿ, ಇದ್ದ ಗಂಜಿಯನ್ನೆಲ್ಲ ಹಾಕಿಕೊಂಡು ಕುಡಿದು

ಬಿಡುತ್ತಿದ್ದ. ಹೀಗೆಯೇ ವಾರ ಕಳೆಯಿತು. ಪುಲ್ಲಯ್ಯ ಹಿಂದಿರುಗಲಿಲ್ಲ. ಮಲ್ಲೇಶಿ, ಆತನ ನಿರೀಕ್ಷೆಯಲ್ಲಿ ಕಾಲಕಳೆಯತೊಡಗಿದ. ನಿಂತಲ್ಲಿ–ಕೂತಲ್ಲಿ ತಂದೆಯನ್ನು ನೆನಸುತ್ತಿದ್ದ. ಮಲಗಿದಾಗ, "ಅಪ್ಪಾ–ಅಪ್ಪಾ"—ಎಂದು ಕನವರಿಸುತ್ತಿದ್ದ. ವಾರ ಹೋಗಿ ಹದಿನೈದು ದಿನಗಳು ಕಳೆದುವು. ಮಲ್ಲೇಶಿಯ ಒದ್ದಾಟ ಹೆಚ್ಚಿತು. ತಂದೆ ಯನ್ನು ನೆನೆದು ಅವನು ಅಳತೊಡಗಿದ. ಆಗಾಗ ಪಟ್ಟಣಕ್ಕೆ ಹೋಗುವ ರಸ್ತೆಯ ವರೆಗೂ ಹೋಗಿ, ಬಹಳ ಹೊತ್ತಿನ ವರೆಗೆ ಕೂತು ಬರುತ್ತಿದ್ದ. ಒಮ್ಮೊಮ್ಮೆ ಕತ್ತಲು ಕವಿದರೂ ಮಗ ಮನೆಗೆ ಹಿಂದಿರುಗದಿದ್ದಾಗ, ನೀಲಿ ಹೋಗಿ, ಅವನನ್ನು ಎತ್ತಿಕೊಂಡು ಬರುತ್ತಿದ್ದಳು. ಆಗ, ತಾಯಿಯ ಭುಜದ ಮೇಲೆ ತಲೆ ಇಟ್ಟು, "ಅಪ್ಪಾ–ಅಪ್ಪಾ"—ಎಂದು ರೋದಿಸುತ್ತಿದ್ದ. ಹದಿನೈದು ದಿನಗಳಲ್ಲಿ, ಮಲ್ಲೇಶಿ ಕೊರಗಿ–ಸೊರಗಿ ಕಡ್ಡಿಯಂತಾಗಿದ್ದ.

ಹದಿನೈದು ದಿನಗಳ ನಂತರ, ಪುಲ್ಲಯ್ಯ ಮತ್ತು ಗಂಗವ್ವ ಊರಿಗೆ ಹಿಂದಿರುಗಿದರು. ಶಸ್ತ್ರಚಿಕಿತ್ಸೆ ಇಲ್ಲದೆ, ಬರೀ ಔಷಧಿಗಳನ್ನು ಕೊಟ್ಟು ಗಂಗವ್ವನ ರೋಗವನ್ನು ಗುಣ ಪಡಿಸಲಾಗಿತ್ತು. ಆದರೆ, ನರಸಿಂಹನಿಗೆ ಇದು ಸರಿದೋರಲಿಲ್ಲ. "ಒಮ್ಮೆ ಹೊಟ್ಟೆ ಕುಯ್ದಿದ್ದರ, ಮತ್ತ ಯಾವ ತಂಟೇನೂ ಉಳೀತಿರಲಿಲ್ಲ. ಬರೀ ಔಷಧದಿಂದ ಏನಾ ದೀತು. ಮತ್ತs ಹೊಟ್ಟೆಸೂಲಿ ಕಾಣಿಸಿಕೊಂಡರೂ ಕಾಣಿಸಿಕೊಳ್ಳಬಹುದು. ಅಲ್ಲೊ ಪುಲ್ಲಯ್ಯ, ಆ ಡಾಕ್ಟರರ ಮಾರಿಗೆ ಒಂದು ನೂರು ರೂಪಾಯಿ ಒಗದಿದ್ದರ ನಿನ್ನದೇನು ಗಂಟು ಹೋಗ್ತಿತ್ತು—ಹಾಂ, ಹಣ ಅಂದರ ಹೆಣಾನೂ ಬಾಯಿಬಿಡ್ತಾವ. ದುಡ್ಡಿಲ್ಲ ದವರನ್ನ ದಡ್ಡರೂ ಮಾತಾಡಿಸೋದಿಲ್ಲಂತ—ಈಗಿನ ಕಾಲದಾಗ. ನೀನು ದುಡ್ಡು ಬಿಚ್ಚಲಿಲ್ಲ ಅವರು ಶಾಣೇರು, ತಮಗ ತಿಳಿದ ಮದ್ದು ಮಾಡಿ ಕಳಿಸಿದ್ರು ಆತು"— ಎಂದೆಲ್ಲ ಅಸಮಾಧಾನ ವ್ಯಕ್ತಪಡಿಸಿದ ನರಸಿಂಹ. ಪುಲ್ಲಯ್ಯ, ಯಾವುದನ್ನೂ ಕಿವಿಗೆ ಹಾಕಿಕೊಳ್ಳದೆ ಮನೆಗೆ ಬಂದ. ಮಲ್ಲೇಶಿ ತಂದೆಯನ್ನು ನೋಡಿದೊಡನೆ, ಹಿತ್ತಲಿಗೆ ಓಡಿಹೋದ. ಮಗನಿಗೆ ಮುಖ ತೋರಿಸಲು, ಪುಲ್ಲಯ್ಯನಿಗೂ ಸಹ ನಾಚಿಕೆಯಾ ಯಿತು. ಮಗನಿಗಾಗಿ ಏನನ್ನೂ ತರದೆ ಬರೀ ಕೈಯಲ್ಲಿ ಬಂದುದಕ್ಕಾಗಿ ಪುಲ್ಲಯ್ಯನಿಗೆ ವ್ಯಸನವಾಗಿತ್ತು. ಆದರೂ, ಒಳಗೆ ಓಡಿಹೋಗಿ ಮಗನನ್ನು ಎತ್ತಿಕೊಂಡ. ಮಲ್ಲೇಶಿ, ತಂದೆಯನ್ನಪ್ಪಿಕೊಂಡು ಅಳಹತ್ತಿದ. ಅಳುತ್ತಲೆ, ಬೇಗನೆ ಹಿಂದಿರುಗದಿದ್ದಕ್ಕಾಗಿ ತಂದೆ ಯನ್ನು ದೂರಿದ.

"ಅಳಬ್ಯಾಡ ಮಗ ಅಳಬ್ಯಾಡ. ಇನ್ನೇನು ನಾವು ಎಲ್ಲರೂ ಅಲ್ಲೇ ಹೋಗಿ ಇರ್ತೀವಲ್ಲ. ಆಮ್ಯಾಲೆ ನಾನು ನಿನ್ನ ಬಿಟ್ಟು ಎಲ್ಲಿಗೂ ಹೋಗಾಣೆಲ್ಲ"—ಪುಲ್ಲಯ್ಯ ಮಗನನ್ನು ಸಮಾಧಾನ ಮಾಡಿದ.

ಅಳುತ್ತಿದ್ದ ಮಲ್ಲು, ಒಂದು ಸಲ, "ಹಾಂ"—ಎಂದು ಉದ್ಗಾರ ತೆಗೆದ.

"ನಾವು ಇನ್ನ ಮ್ಯಾಲೆ ಪಟ್ಟಣದಾಗ ಇರೋಣ. ನಮ್ಮ ಊರು–ಕೇರಿ, ಎಲ್ಲಾನೂ ಪಟ್ಟಣ ಆಗ್ತದ. ನಾವೂ, ಪಟ್ಟಣದವರು ಆಗೋಣ. ಅಲ್ಲಿ ರೈಲು……"

"ರೈಲು, ಹಾಂಗಂದರೇನು ಅಪ್ಪಾ?" ಅಳುವುದನ್ನು ನಿಲ್ಲಿಸಿ ಕೇಳಿದ ಮಲ್ಲೇಶಿ.

"ಭುಕ್‌ಭುಕ್‌ಭುಕ್—ಅಂತ ಕಬ್ಬಿಣದ ಪಳಿಗಳ ಮ್ಯಾಲೆ ಓಡ್ತದದು. ಅದರೊಳಗ ನಾವು ಕೂತರ ಆತು—ಸೀದಾ ಪಟ್ಟಣಕ್ಕ ಒಯ್ತದ."

"ಅಪ್ಪಾ ಅದು—ಆ ರೈಲು—ನಮ್ಮೂರಿಗೆ ಬರುವ ಬಸ್ಸಿನ್ಹಾಂಗ ಇರ್ತದೇನು?"

"ಬಸ್ಸಿಗಿಂತ ದೊಡ್ಡದಿರ್ತದ—ಆದರ, ನೀನು ಹೀಂಗ ಅತ್ತು ರಗಳಿ ಮಾಡಿದರ, ಅದು ನಿಲ್ಲೋದೇ ಇಲ್ಲ."

"ಇಲ್ಲ ಇಲ್ಲ—ನಾನು ಅಳಾಣೆಲ್ಲ"—ಎನ್ನುತ್ತಾ ತಂದೆಯ ಭುಜದ ಮೇಲಿನಿಂದ ಕೆಳಗಿಳಿದ ಮಲ್ಲೇಶಿ, ಮಂಚದ ಮೇಲೆ ಮಲಗಿದ್ದ ತನ್ನ ತಂಗಿಯ ಬಳಿ ಹೋಗಿ, "ನಾವು ಊರಿಗೆ ಹೋಗ್ತೀವಿ...... ನಾವು ಪಟ್ಟಣಕ್ಕ ಹೋಗ್ತೀವಿ......" ಎಂದು ಕೇಕೆ ಹಾಕತೊಡಗಿದ.

ಪುಲ್ಲಯ್ಯ. ಅಂದು ರಾತ್ರಿ ನರಸಿಂಹನನ್ನು ಭೇಟಿಯಾಗಿ, ಹಳ್ಳಿ ಬಿಟ್ಟು ಪಟ್ಟಣ ಸೇರುವ ತನ್ನ ಯೋಜನೆಯನ್ನು ಅವನ ಮುಂದಿಟ್ಟ. "ಪಟ್ಟಣದಾಗ ಅಷ್ಟು ಜನ ರಿದ್ದಾರ—ಅಷ್ಟು ಕಂಪೆನಿ ಅವ, ಎಲ್ಲಾದರೂ ಒಂದು ಕೆಲಸ ಸಿಕ್ಕೆ ಸಿಗ್ತದ. ಇಲ್ಲಿದ್ದು ಉಪವಾಸ ಸಾಯೋದಕ್ಕಿಂತ ಅಲ್ಲಿ ಹೋಗಿ ಕೆಲಸಕ್ಕ ಪ್ರಯತ್ನಪಟ್ಟರ ಒಂದಿಲ್ಲ ಒಂದು ಅನುಕೂಲ ಆಗೇ ಆಗ್ತದ"—ಎಂದು ತಿಳಿಸಿದ.

ನರಸಿಂಹ ಪುಲ್ಲಯ್ಯನ ವಿಚಾರವನ್ನು ಅನುಮೋದಿಸಿದ. ಹಾಗೆಯೇ ಪುಲ್ಲಯ್ಯ ನನ್ನು ನೋಡಿ, ಅವನು ತೀರ ಇಳಿದುಹೋದುದನ್ನು ಗಮನಿಸಿದ. "ಮೊದಲಿದ್ದ ಪುಲ್ಲಯ್ಯನಿಗೂ, ಈ ಪುಲ್ಲಯ್ಯನಿಗೂ ಅಜ–ಗಜಾಂತರ. ಆ ಗಿರಿಜಾಮೀಸೆಗಳಿಲ್ಲ ದಿದ್ದರೆ ಇವನು ಅದೇ ಪುಲ್ಲಯ್ಯನೆಂದು ಗುರುತಿಸಲೂ ಸಹ ಆಗದು"—ನರಸಿಂಹ ಮನಸ್ಸಿನಲ್ಲೆ ಮರುಗಿದ.

ಬೆಳಗಾಗುವುದರೊಳಗಾಗಿ, ಪುಲ್ಲಯ್ಯ ಊರು ಕೇರಿ ಬಿಟ್ಟು, ಪಟ್ಟಣಕ್ಕೆ ಹೋಗ ಲಿದ್ದಾನೆಂಬ ಸುದ್ದಿ, ಊರಿನ ತುಂಬ ಹರಡಿತ್ತು. ಈ ಬಗ್ಗೆ ನಾಲ್ಕು ಜನರು ನಾಲ್ಕು ರೀತಿ ಮಾತನಾಡಿಕೊಂಡರು. "ಮೈಬಗ್ಗದವರಿಗೆ ಹಳ್ಳಿ ಒಗ್ಗದು, ದುಡಿದು ತಿನ್ನಲಿಕ್ಕೆ ಕೈಲಾಗದ ಊರು ಬಿಟ್ಟು ಹೊಂಟಾನ"—ಎಂದೆಲ್ಲಾ ಜನರು ಆಡಿಕೊಂಡರು. ಕೆಲವರು ನೀಲಿಯನ್ನು ಮಾತನಾಡಿಸಲು ಮನೆಯವರೆಗೂ ಬಂದರು. ಆದರೆ, ನೀಲಿ ಮಾತ್ರ, ಯಾವ ಕಾತರವನ್ನಾಗಲೀ, ಕಳವಳವನ್ನಾಗಲೀ ವ್ಯಕ್ತಪಡಿಸದೆ ಶಾಂತವಾಗಿಯೇ ಇದ್ದಳು. ಯಾರು ಏನು ಕೇಳಿದರೂ, "ಹೌದು"–"ಇಲ್ಲ"—ಎಂದು ಉತ್ತರ ಕೊಟ್ಟಳಾದರೂ ತನ್ನ ಮನದ ಇಂಗಿತವನ್ನು ವ್ಯಕ್ತಪಡಿಸಲಿಲ್ಲ.

ಮಗನನ್ನು ಕರೆದುಕೊಂಡು ಊರು ಸುತ್ತಲು ಹೋಗಿದ್ದ ಪುಲ್ಲಯ್ಯ, ಮಧ್ಯಾಹ್ನ ಮನೆಗೆ ಹಿಂದಿರುಗಿದ. ಆಗ ಮಾತ್ರ, "ನಾವು ಊರು ಬಿಡೋ ನಿರ್ಧಾರ ಊರಿಗೆಲ್ಲ ತಿಳಿದರೂ, ನನಗs ಮಾತ್ರ ತಿಳೀಲಿಲ್ಲ"–ಎಂದು ಮೃದುವಾಗಿಯೇ ಗಂಡನನ್ನು ಆಕ್ಷೇಪಿಸಿದಳು ನೀಲಿ.

ಪುಲ್ಲಯ್ಯ, ಅವಳ ಈ ಮಾತಿಗೆ ಯಾವ ಜವಾಬೂ ಕೊಡದಾದ. "ಯಾವ ಮುಂದಾಲೋಚನೆಯೂ ಇಲ್ಲದ ಇದ್ದಕ್ಕಿದ್ದ ಹಾಂಗ ಊರು ಬಿಟ್ಟು ಹೋಗೋದು ಒಳ್ಳೆಯದಲ್ಲ. ನಾವು ಹುಟ್ಟಿಬೆಳೆದ ಊರು. ಹುಟ್ಟಿದಾಗಿನಿಂದ ಹೊಟ್ಟೆಗೆ ಅನ್ನ ನೀಡಿದ ಭೂಮಿ. ನಾಳೆ ಏನಾದರೂ ಆಪತ್ತಿನ ಕಾಲ ಬಂದರ. ಒಬ್ಬರಿಲ್ಲ ಒಬ್ಬರು ಸಹಾಯ ಮಾಡಲು ಮುಂದೆ ಬಂದಾರು. ಅಪರಿಚಿತ ಊರು. ಅದರಾಗ ಆ ದೊಡ್ಡ ಪಟ್ಟಣದಾಗ ಯಾರಿಗೆ ಯಾರು ದಿಕ್ಕು. ನನ್ನ ಮಾತು ಕೇಳು."

ನೀಲಿ ಇನ್ನೂ ಏನನ್ನೋ ಹೇಳುವುದರಲ್ಲಿದ್ದಳು. ಪುಲ್ಲಯ್ಯ ಅವಳನ್ನು ಅಷ್ಟಕ್ಕೆ ತಡೆದು—"ನೀನು ಹೀಂಗೆಲ್ಲಾ ಮಾತಾಡ್ತೀದಿ ಅಂತ ತಿಳಿದ್ರ ನಿನ್ನ ಮುಂದ ನಾನು ಯಾವ ವಿಷಯಾನೂ ಎತ್ತಲಿಲ್ಲ"—ಎಂದು ಹೇಳಿ, ಅಲ್ಲಿಂದೆದ್ದು ಹೊರಟುಹೋದ.

ನರಸಿಂಹನ ಮನೆಯ ಬಳಿ ಸೇರಿದ್ದ ಹತ್ತು ಜನರು, ಪುಲ್ಲಯ್ಯನನ್ನು ಹತ್ತು ಪ್ರಶ್ನೆ ಕೇಳಿದರು. ಪುಲ್ಲಯ್ಯ ಮಾತ್ರ, ಎಲ್ಲರಿಗೂ, ಎಲ್ಲಾ ಪ್ರಶ್ನೆಗಳಿಗೂ ಒಂದೇ ಉತ್ತರ ನೀಡುತ್ತಿದ್ದ—"ನನ್ನ ಮನಸ್ಸು, ನನಗ ತಿಳಿದ್ಹಾಂಗ ನಾ ಮಾಡ್ತೀನಿ". ಇದನ್ನು ಕೇಳಿದ ನರಸಿಂಹ ಮುಂದೆ ಬಂದು, "ನಮ್ಮ ಹಳ್ಳಿಯವನೊಬ್ಬ, ಹಳ್ಳಿಯಿಂದ ದಿಲ್ಲಿಯ ವರೆಗೂ ಪ್ರಸಿದ್ಧಿಯಾಗಿರುವ ಪಟ್ಟಣಕ್ಕೆ ಹೋಗಿ ನೆಲಸ್ತೀನಿ ಅಂಬೊ ಧೈರ್ಯ ಮಾಡಿದ್ದನ್ನು ನೋಡಿ ಸಂತೋಷಪಡದ, ಇಲ್ಲದ್ದ ತಕರಾರು ಯಾಕ ಮಾಡ್ತೀರೊ ನನಗ ತಿಳೀಲಿಲ್ಲ. ಪಟ್ಟಣದಾಗ ಏನು ನಡೀತದ. ಏನು ಬದಲಾವಣೆ ಆಗ್ಯದ ಅಂಬೋದು ನಿಮಗ ತಿಳಿದಿಲ್ಲ. ನಾವೆಲ್ಲರೂ ಭಾವಿ ಒಳಗಿನ ಕಪ್ಪಿ ಹಾಂಗ ನಮ್ಮ ಹಳ್ಳೀನ ಪ್ರಪಂಚ ಅಂತ ತಿಳಿದು ಬದುಕಿಕೊಂಡೀವಿ ಆತು. ಅಮೇರಿಕದವರು ದೊಡ್ಡ ವಿಮಾನದಾಗ ಕೂತು ಚಂದ್ರಲೋಕಕ್ಕ ಹೋಗೊ ತಯ್ಯಾರಿ ನಡಸ್ಯಾರ. ಜಗತ್ತು ಈಗಾಗಲೇ ಸಾಕಷ್ಟು ಮುಂದು ಹೋಗ್ಯದ. ನಾವು ಮಾತ್ರ ಹ್ಯಾಂಗಿದ್ವಿ–ಹಾಂಗs ಉಳಿದಿವಿ. ಈಗ ಪುಲ್ಲಯ್ಯ ಧೈರ್ಯಮಾಡಿ ಮುಂದ ಹೊರಟರ, ಅವನ ಕಾಲು ಹಿಡಿದು ಎಳೆಯೋದು ಎಲ್ಲಿ ನ್ಯಾಯ—ಪುಲ್ಲಯ್ಯ ನಿನಗೂ ಒಂದು ಮಾತು ಹೇಳ್ತೀನಿ. ಅಲ್ಲಿಗೆ ಹೋದ ಮ್ಯಾಲೆ, ಇಲ್ಲಿ ಹಾಂಗ ನಿನ್ನ ಸುಖ ನಿನಗ. ನನ್ನ ದುಃಖ ನನಗ ಅಂತ ಸುಮ್ಮನ ಕೂಡಬ್ಯಾಡ. ಈಗ ಕಷ್ಟ ಅನುಭವಿಸುತ್ತಿದ್ದರೂ, ಒಂದು ಕಾಲದಾಗ ಸುಖವಾಗಿ ಬಾಳಿದವ ನೀನು. ಅಲ್ಲಿ ಹೋದಮ್ಯಾಲೆ, ನಿನ್ನ ಕಷ್ಟ ಎಲ್ಲರ ಕಷ್ಟ, ನಿನ್ನ ಸುಖ ಎಲ್ಲರ ಸುಖ ಅಂತ ತಿಳಿದು ಬಾಳು. ನನ್ನ ಮಕ್ಕಳು, ನಿನ್ನ ಮಕ್ಕಳು ಅವನ ಮಕ್ಕಳು—ಎಲ್ಲಾ ಒಂದೇ ಅಂತ ತಿಳಿ. ಆಸ್ತಿ–ಪಾಸ್ತಿ ಏನಿದ್ದರೂ, ಅದು ಎಲ್ಲರ ಸ್ವತ್ತು ಅಂತ ಭಾವಿಸು. ನಾವು ಎಲ್ಲರೂ ಒಂದೇ—ಮನುಷ್ಯ ಜಾತಿ ಒಂದೇ—ಅಂತ ಭಾವನೆಯುಳ್ಳ ಸರ್ಕಾರ ಅಲ್ಲಿ ಅಧಿಕಾರಕ್ಕ ಬರೋ ಹಾಂಗ ಮಾಡು"—ಎಂದು ದೊಡ್ಡ ಭಾಷಣ ಬಿಗಿದ.

ಮಲ್ಲೇಶಿ, ನರಸಿಂಹನ ಮಾತುಗಳು ತನಗೆ ಅರ್ಥವಾದಂತೆ "ತಾತಾ–ತಾತಾ"—ಎಂದು ಕೇಕೆ ಹಾಕಿ ಚಪ್ಪಾಳೆ ತಟ್ಟಿದ.

ಅದು ಸಂಜೆ, ಪುಲ್ಲಯ್ಯ, ನೀಲಮ್ಮಳ ಗುಡಿಯ ಎದುರಿಗೆ ಒಂಟಿಯಾಗಿ ಕುಳಿತಿದ್ದ. ಮಲ್ಲೇಶಿ, ಗುಡಿಯ ಮುಂದಿನ ರಸ್ತೆಯಲ್ಲಿ, ಕೇರಿಯ ಇತರ ಹುಡುಗರ ಜೊತೆ ಆಡುತ್ತಿದ್ದ. "ರಾಮದಾಸು ಈಗ ಇದ್ದಿದ್ದಲ್ಲಿ, ಏನು ಹೇಳ್ತಿದ್ದನೊ ಏನೊ? ತಾಯಿ ನೀಲಮ್ಮಳ ಪರವಾಗಿ ಆಶೀರ್ವದಿಸಿ ಕಳುಹಿಸುತ್ತಿದ್ದನೇನೊ? ಈಗಂತೂ ದೇವಿಯ ಮುಂದೆ ದೀಪ ಕೂಡ ಹಚ್ಚಿಡುವವರಿಲ್ಲ. ಈ ಊರಿಗೆ ಊರೆ, ದೇವರು–ದಿಂಡರು— ಎಂಬ ಭಯಭೀತಿ ಇಲ್ಲದ ಕಾಡು–ಕಾಡಾಗಿ ಹೋಗ್ಯದ. ಯಾರಿಗೇನು ಸಿಕ್ಕರೂ, ಅದು, ಅವನದ್ಯ ಆಗಿ ಹೋಗ್ತದ. ನೆರೆ ಅವರು ಉಪವಾಸ ಸಾಯ್ತಿದ್ದರೂ ಕನಿಕರಪಡೋವ ರಿಲ್ಲ ಈ ಊರಾಗ. ನೀತಿ, ನ್ಯಾಯ—ದಿಕ್ಕಾಪಾಲಾಗಿ ಹೋಗ್ಯಾವ. ನ್ಯಾಯಕ್ಕ ದುಂಬಾಲು ಬಿದ್ದವರು ಮಣ್ಣುಮುಕ್ಕಿ, ದುಡ್ಡಿಗೆ ದುಂಬಾಲು ಬಿದ್ದವರು ದೊಡ್ಡವ ರಾಗ್ಯಾರ. ದುಡ್ಡಿದ್ದವನ್ನ ಎಲ್ಲರೂ ಪೂಜಿಸ್ತಾರ—ಇಂತಹ ಈ ಊರು ಯಾರಿಗೆ ಬೇಕು? ಪಂಚಪಕ್ವಾನ್ನ ಸಿಕ್ಕರೂ ಸರಿ, ಇಲ್ಲಿ ಇರಬಾರದು. ನ್ಯಾಯಕ್ಕ ನೀತಿಗೆ ಮರ್ಯಾದೆ ಇರೋ ಸ್ಥಳದಾಗ, ಬೊಗಸಿ ನೀರು ಸಿಕ್ಕರೂ ಸರಿ ಹಾಯಾಗಿರ ಬಹುದು."

"ಪಟ್ಟಣಕ್ಕ ಹೋಗ್ತೀನಿ. ದುಡುದು ತಿಂದು ಈ ಮುಂಚಿನ ಹಾಂಗ ಹಾಯಾ ಗಿರ್ತೀನಿ. ನ್ಯಾಯಕ್ಕ, ನೀತಿಗೆ ಕಟ್ಟುಬಿದ್ದು ಮಲ್ಲಯ್ಯ ನಾಯ್ಡುವಿನ ಮಗನಾಗಿ, ಮಲ್ಲೇಶಿಯ ತಂದೆಯಾಗಿ, ಗಂಜಿ ಕುಡಿದಾದರೂ ಗೌರವದಿಂದ ಬದುಕ್ತೀನಿ"— ಪುಲ್ಲಯ್ಯ ಯೋಚಿಸುತ್ತಾ ಹಾಗೆಯೇ ಕುಳಿತಿದ್ದ. ಪಟ್ಟಣದಲ್ಲಿ ತನಗೆ ಸಿಗಬಹುದಾದ ಉದ್ಯೋಗ, ಅಲ್ಲಿನ ಬದುಕನ್ನು ನೆನೆದು ಅವನ ಮನಸ್ಸು ಪ್ರಸನ್ನವಾಯಿತು. ಮತ್ತೆ ರಾಮದಾಸುವನ್ನು ನೆನಸಿದ. ನೀಲಮ್ಮ ದೇವಿಗೆ, ಮನಸ್ಸಿನಲ್ಲೆ ಕೈಮುಗಿದ......ಆಗಲೇ ಕತ್ತಲು ಕವಿದಿತ್ತು. ನೀಲಮ್ಮ ದೇವಿಗೆ ನಮಸ್ಕರಿಸಿ ಮನೆಗೆ ಹೊರಡಬೇಕೆಂದು ಮೇಲೆದ್ದ. ಮುಂದೆ ಹೋಗಿ, ಮುಚ್ಚಿದ ಬಾಗಿಲಿನ ಸಂದಿಯಿಂದ ಒಳಗೆ ನೋಡಿದ. ದೇವರ ಮುಂದೆ ನಂದಾದೀಪ ಉರಿಯುತ್ತಿರುವಂತೆ ಕಾಣಿಸಿತು. ಆ ದೀಪದ ಮಂದ ಬೆಳಕಿನಲ್ಲಿ ರಾಮ ದಾಸು ಕಣ್ಣುಮುಚ್ಚಿ ಕುಳಿತಂತೆ ಭಾಸವಾಯಿತು. ರಾಮದಾಸು ಸತ್ತರೂ ನೀಲಮ್ಮಳ ಸೇವೆ ಮಾಡುವುದನ್ನು ಬಿಟ್ಟಿಲ್ಲವೆಂಬ ವಿಚಾರ ಬಂದಾಗ, ಪುಲ್ಲಯ್ಯನಿಗೆ ರೋಮಾಂಚನ ವಾಯಿತು. ನಿಂತಲ್ಲಿಂದಲೇ ದೇವಿಗೆ ನಮಸ್ಕರಿಸಿ, "ರಾಮದಾಸು, ನಾನು ಊರು ಬಿಟ್ಟು ಪಟ್ಟಣಕ್ಕ ಹೊರಟೀನಿ—ಆಶೀರ್ವದಿಸು"—ಎಂದು ಬೇಡಿಕೊಂಡ. ಕೂಡಲೇ "ಅಪ್ಪಾ– ಪುಲ್ಲಯ್ಯಾ"—ಎಂದು ತನ್ನನ್ನು ಯಾರೊ ಕರೆದಂತೆ ಭ್ರಮೆಪಟ್ಟ ಪುಲ್ಲಯ್ಯ. ಆತ ಹಾಗೆಯೇ ಅಲ್ಲಿಯೇ ಕುಳಿತ. ಅವನ ಕಣ್ಣೆದುರು ನೀಲಮ್ಮದೇವಿ...... ರಾಮ ದಾಸು...... ಗುಡಿಯನ್ನು ಬೆಳಗಿದ ದೀಪಗಳು...... ಎಲ್ಲವೂ ಸುಳಿದುವು. ರಾಮ ದಾಸು ತನ್ನ ಮೌನವನ್ನು ಮುರಿದು, "ಲೋ ಸರಬಿಳ್ಳೆ......" ಎಂದು ಕೂಗಿದಂತೆ ಕೇಳಿಸಿತು. ಪುಲ್ಲಯ್ಯ, ಮತ್ತೆ ಎದ್ದು ನಿಂತು, ಸಾಷ್ಟಾಂಗ ನಮಸ್ಕಾರ ಹಾಕಿದ.

"ಹೋಗೊ ಹುಚ್ಚಪ್ಪ...... ನಾನು ಈ ಊರಾಗ...... ಈ ಗುಡಿ ಒಳಗ ಮಾತ್ರ ಇದ್ದೀನಂತ ತಿಳಿದಿ ಏನು? ನಿನ್ನೊಳಗೂ, ನಿನ್ನನ್ನು ದ್ವೇಷಿಸುವ ಜನರೊಳಗೂ ನಾನಿದ್ದೀನಿ. ನಾನಿರಲಾರದ ಸ್ಥಳವಿಲ್ಲ—ನಾನಿರಲಾರದ ಊರಿಲ್ಲ...... ಹೊಟ್ಟೆ ತುಂಬಿಕೊಳ್ಳಲಿಕ್ಕೆ ಎಲ್ಲಿ ಅವಕಾಶ ಸಿಗ್ತದೊ, ಅದೇ ನಮ್ಮ ಊರು. ಅದೇ ನನ್ನ ಕೇರಿ ಅಂತ ತಿಳಿ."

ಇಷ್ಟರಲ್ಲಿ, "ಅಪ್ಪಾ" "ಅಪ್ಪಾ"—ಎಂಬ ಕೂಗು ಕೇಳಿಸಿತು ಪುಲ್ಲಯ್ಯನಿಗೆ. ಅವನು ಗುಡಿಯ ಬಾಗಿಲುಗಳ ಸಮೀಪಕ್ಕೆ ಹೋಗಿ, ಸಂದಿನ ಮೂಲಕ ಒಳಗೆ ನೋಡಿದ...... ಆಶ್ಚರ್ಯ...... ಒಳಗೆ ಯಾವ ದೀಪವೂ ಇಲ್ಲ. ಬರೀ ಕಣ್ಣುಕುಕ್ಕುವ ಕತ್ತಲು. ತಾನು ಕಂಡದ್ದು, ಕೇಳಿದ್ದು ಎಲ್ಲವೂ ಒಂದು ಕನಸಿನಂತೆ ಭಾಸವಾಯಿತು ಪುಲ್ಲಯ್ಯನಿಗೆ. ಆ ಕತ್ತಲಿನಲ್ಲಿ ಯಾವ ಭಯವೂ ಇಲ್ಲದೆ ಗುಡಿಯನ್ನು ಪ್ರವೇಶಿಸಿದ್ದ ಮಗನು ಕಣ್ಣಿಗೆ ಬಿದ್ದಾಗ ಪುಲ್ಲಯ್ಯ ಸಂತೋಷದಿಂದ ಉಬ್ಬಿಹೋದ. ಹಾಗೆಯೇ ಮುಂದೆ ಹೋಗಿ, ಮಗನನ್ನು ಎತ್ತಿ ಮುದ್ದಾಡಿದ.

## [ 26 ]

ಪಟ್ಟಣದಲ್ಲಿ ಒಂದು ಮನೆ ಮಾಡಿಕೊಳ್ಳದೆ, ಯಾವುದೇ ಒಂದು ಉದ್ಯೋಗವನ್ನು ನೋಡಿಕೊಳ್ಳದೆ, ಇದ್ದಕ್ಕಿದ್ದಂತೆ ಊರು ಬಿಟ್ಟು ಹೋಗುವುದು ನೀಲಿಗೆ ಇಷ್ಟವಿರಲಿಲ್ಲ. ಪುಲ್ಲಯ್ಯ ಮೊದಲು ಹೋಗಿ, ಯಾವುದಾದರೂ ಒಂದು ಉದ್ಯೋಗ ಹಿಡಿದು, ಇರಲು ಒಂದು ಗುಡಿಸಲಾದರೂ ಮಾಡಿಕೊಳ್ಳಬೇಕೆಂಬುದು ಅವಳ ಅಭಿಪ್ರಾಯವಾಗಿತ್ತು. ಆದರೆ, ಮಲ್ಲೇಶಿ, ತಂದೆಯನ್ನು ತುಂಬ ಹಚ್ಚಿಕೊಂಡಿದ್ದ. ತಂದೆಯನ್ನು ಬಿಟ್ಟು ಅವನು ಒಂದು ನಿಮಿಷವೂ ಇರುತ್ತಿರಲಿಲ್ಲ. ಪುಲ್ಲಯ್ಯ, ಅವನನ್ನು ಹೇಗೊ ಸಮಾಧಾನಮಾಡಿ ಹೋಗಬಹುದಾಗಿತ್ತು. ಆದರೆ ಹಾಗೆ ಅವನು ಹೋಗಿದ್ದಲ್ಲಿ, ಮಲ್ಲೇಶಿ ಕೊರಗಿ ಕಂಗಾಲಾಗುವ ಭಯವಿತ್ತು. ಅವಲ್ಲದೆ ಮುದಿ ಅಜ್ಜಿ ಕಣ್ಣುಮುಚ್ಚುವ ಮೊದಲು ಹೇಳಿದ ಮಾತು ಜ್ಞಾಪಕಕ್ಕೆ ಬಂದದ್ದರಿಂದ ನೀಲಿ ಕರಾರುವಾಕ್ಕಾಗಿ ಏನನ್ನೂ ಹೇಳಲಿಲ್ಲ.

ಕತ್ತಲಾಗಿ, ಆಗಲೇ ಬಹಳ ಹೊತ್ತಾಗಿತ್ತು. ನೀಲಿ, ಒಂಟಿಯಾಗಿ ಮನೆಯ ಮುಂದಿನ ಜಗುಲಿಯ ಮೇಲೆ ಕುಳಿತಿದ್ದಳು. ಅಷ್ಟರಲ್ಲಿ ಕುಡ್ಡ ವೆಂಕಣ್ಣ ಮತ್ತು ಗೌರಮ್ಮ ಅಲ್ಲಿಗೆ ಬಂದದ್ದರಿಂದ, ನೀಲಿಯ ಯೋಚನೆಗಳು ಕಡಿದುಬಿದ್ದವು. ಪುಲ್ಲಯ್ಯನೂ ಅದೇ ಹೊತ್ತಿಗೆ ಹಿಂದಿರುಗಿದ. ಮಲ್ಲೇಶಿ, ತಂದೆಯ ಪರಾಕ್ರಮವನ್ನು ಹಾವಭಾವಗಳೊಡನೆ ತಾಯಿಗೆ ವಿವರಿಸುತ್ತಿದ್ದ. ಅದನ್ನು ನೋಡಿ ಪುಲ್ಲಯ್ಯ ನಗುತ್ತಿರುವುದನ್ನು ಗಮನಿಸಿದ

ನೀಲಿ, "ಸುಮ್ಮಸುಮ್ಮನೆ ಅವರ ವಿರೋಧ ಕಟ್ಟಿಕೊಂಡು, ಈಗ ನಗತೀಯಲ್ಲ — ಎಂದು ಗಂಡನನ್ನು ಆಕ್ಷೇಪಿಸಿದಳು.

"ವಿರೋಧ ಕಟ್ಟಿಕೊಳ್ಳದ ಇನ್ನೇನು ಮಾಡಲಿ? ಅವಕಾಶ ಸಿಕ್ಕರ ಅವನ ರಕ್ತಾನೂ ಹೀರ್ತೀನಿ."

"ಛೆ—ಅದೆಂತಹ ಮಾತು...... ಯಾಕ ಹೀಂಗ ಹುಚ್ಚುಹುಚ್ಚಾಗಿ ಹಾರಾಡ್ತಿದಿ. ಆ ರಾಜಣ್ಣ ನಮಗೇನು ಅಂತಹ ಅನ್ಯಾಯ ಮಾಡ್ಯಾನ?"

"ಏನು?—ಅವನು ನಮಗ ಮಾಡಿದ ಅನ್ಯಾಯ ಸಾಲದೇನು? ಅರ್ಧ ದುಡ್ಡು ಕೊಟ್ಟು ಹೊಲಕ್ಕ ಹೊಲಾನs ನುಂಗತೀನಿ ಅಂತಾನ. ಅಂದರೂ ನಾನು ಸುಮ್ಮನೆ ಕೂಡಬೇಕಂತಿ ಏನು? ಅವನ ಹೊಟ್ಟಿ ಹರಿದಾದರೂ, ನನ್ನ ಹೊಲ ನಾನು ತಗೊ ತೀನಿ."

ಇದನ್ನು ಕೇಳಿಸಿಕೊಂಡ ಕುಡ್ಡ ವೆಂಕಣ್ಣ, ದೊಡ್ಡದಾಗಿ "ಶಬಾಷ್ ಪುಲ್ಲಯ್ಯ"— ಎಂದು ತನ್ನ ಮೆಚ್ಚುಗೆ ವ್ಯಕ್ತಪಡಿಸಿದ.

"ನೀನೂ ಅವರ ಹಾಂಗ ಮಾತಾಡ್ತೀದಲ್ಲ ವೆಂಕಣ್ಣ? ಅಲ್ಲ, ರಾಜಣ್ಣನ ಹೆಂಡ್ತಿ ಒಂದು ದುಡ್ಡು ಕೊಟ್ಟಿರದಿದ್ದರ ಈತ ಜೈಲಿನ್ಯಾಗ ಇರಬೇಕಾಗ್ತಿತ್ತು—ಅಂಬೋದನ್ನ ನೀನೂ ಮರತೇನು? ನನ್ನ ಅಜ್ಜಿ ತೀರಿಕೊಂಡಾಗ, ಆ ರಾಜಣ್ಣನ ಅಲ್ಲೇನು— ಮುಂದಾಗಿ ಎಲ್ಲಾ ಮಾಡಿದ್ದು. ಆತ ಏನು ನಮ್ಮ ಒಳಗ–ಸಂಬಂಧ...... ನಮ್ಮವರ ಮ್ಯಾಲೆ ನಮಗs ವಿಶ್ವಾಸ ಇರದಿದ್ದರ, ನಾವು ಮನುಷ್ಯರು ಅಂತ ಯಾಕ ಹೇಳಿ ಕೊಳ್ಳಬೇಕು?"

"ಮಗಳೇ, ನೀನು ಎಲ್ಲಾರನ್ನೂ ಒಳ್ಳೆಯವರಂತs ಅಂತಿದಿ. ನಿನ್ನ ಪಾಲಿಗೆ, ಬೆಳ್ಳ ಗಿದ್ದದ್ದೆಲ್ಲಾ ಹಾಲು. ಆದರ, ಈ ಪರಪಂಚದಾಗ ಎಲ್ಲಾರೂ ನಿನ್ಹಾಂಗ ಅಮಾಯಕ ರಾಗಿಲ್ಲ...... ಆ ರಾಜಣ್ಣಾ...... ಕಣ್ಣಿಗೆ ಬಿದ್ದದ್ದೆಲ್ಲಾ ನುಂಗಬೇಕೂ ಅಂತಾನ."

"ನೋಡು ವೆಂಕಣ್ಣ, ನಿಮಗ ಬೇಕಾದರ ಸಾವಿರ ನಮಸ್ಕಾರ ಹಾಕ್ತೀನಿ. ಈ ಕೋಪ-ತಾಪ ಎಲ್ಲಾ ಬಿಟ್ಟುಬಿಡ್ರಿ. ಅವನಿಂದ ಏನು ಆಗಬೇಕಾಗ್ಯದ ಅದನ್ನ ನನಗ ಹೇಳ್ರಿ. ನಾನೆಲ್ಲಾ ನೋಡಕೊತೀನಿ. ಕೇಳೋ ರೀತಿಲೆ ಕೇಳಿದರ, ಇಲ್ಲಾಂತ ಅವನಾದರೂ ಹ್ಯಾಂಗ ಅಂದಾನು?"

"ಅಂವ ಅಂಬೋದೇನು ಬಂತು. ಕೈ ಬೀಸಿ ನಿನಗs ಕಪಾಳಕ್ಕ ಕೊಡ್ತಾನ"— ಪುಲ್ಲಯ್ಯ ಬುಸುಗುಟ್ಟಿದ.

"ಇಷ್ಟು ಎತ್ತರದ ದೇಹ ಇರೋವಾಗ, ಕಪಾಳಕ್ಕ ಯಾಕ ಹೊಡೀತಾನ—ಅಲ್ಲದ ಹೆಂಗಸರ ಮ್ಯಾಲೆ ಕೈಮಾಡಲು ಅವನಿಗೆ ಆಗಾಣಿಲ್ಲ"—ಎನ್ನುತ್ತಾ ನೀಲಿ ಒಳಗೆ ಹೋದಳು.

ಎಲ್ಲರೂ, ಆ ಒಂದು ಕ್ಷಣ ಮೌನವಾಗಿ ಕುಳಿತರು. ವೆಂಕಣ್ಣ ಮತ್ತು ಗೌರಮ್ಮ

ಬಹಳ ಹೊತ್ತಿನ ವರೆಗೆ ಅಲ್ಲಿಯೇ ಕುಳಿತಿದ್ದರು. ವೆಂಕಣ್ಣ, ಹೊಟ್ಟೆ ಹಸಿದಿದ್ದರೂ, ಕೂಡ, ಪಾತ್ರೆಯಲ್ಲಿ ಹಾಕಿದ್ದ ಗಂಜಿಯನ್ನು ಮುಟ್ಟಿರಲಿಲ್ಲ. ಗೌರಮ್ಮ ಎದ್ದು, ವೆಂಕಣ್ಣನ ಕೈಹಿಡಿದುಕೊಂಡು ಊರಿನ ಭಜನೆಮಂದಿರದ ಬಳಿ ಕರೆದೊಯ್ದಳು.

ರಾಜಣ್ಣನ ಮನೆ ಅಲ್ಲಿಯೇ ಇತ್ತು. ಭಜನೆಮಂದಿರದ ಗೋಡೆಗೆ ಒರಗಿಕೊಂಡು, ಯಾವುದೊ ಯೋಚನೆಯಲ್ಲಿ ವೆಂಕಣ್ಣ ಮಗ್ನನಾಗಿದ್ದ.

ಅಮಾವಾಸ್ಯೆಯ ರಾತ್ರಿ. ಊರಿಗೆ ಊರೆ ಕತ್ತಲಿನಲ್ಲಿ ಮುಳುಗಿತ್ತು. ಗೌರಮ್ಮ, ವೆಂಕಣ್ಣನ ಪಾತ್ರೆಯಲ್ಲಿದ್ದ ಅನ್ನ ಕದ್ದು ಬಾಯಿಗೆ ತುರುಕಿಕೊಳ್ಳುತ್ತಿದ್ದಳು. ಅನ್ನ ಅಗಿದರೆ ತನ್ನ ಕಳವು ಎಲ್ಲಿ ಹೊರಬೀಳುವುದೊ ಎಂದು ಹೆದರಿ. ತುತ್ತುಗಳನ್ನು ಹಾಗೆಯೇ ನುಂಗುತ್ತಿದ್ದಳು. ಆದಾಗ್ಯೂ, ಅವಳು ತುತ್ತು ನುಂಗಿದಾಗ, ಗಂಟಲು ಗೊರಗೊರ ಅನ್ನುತ್ತಿತ್ತು. ವೆಂಕಣ್ಣನ ಕಿವಿಗಳು ಅತಿ ಸೂಕ್ಷ್ಮವಾಗಿದ್ದವಾದರೂ, ಅಂದು ಮಾತ್ರ ಅವನ ಕಿವಿಗೆ ಯಾವ ಶಬ್ದಗಳೂ ಬೀಳಲಿಲ್ಲ. ಅವನ ಮನಸ್ಸಿನಲ್ಲಿ ರಾಜಣ್ಣ, ಪುಲ್ಲಯ್ಯನಿಗೆ ಮಾಡಿದ ಅನ್ಯಾಯದ ವಿಚಾರ ತುಂಬಿಕೊಂಡಿತ್ತು.

ಅರ್ಧರಾತ್ರಿ ಕಳೆದಿತ್ತು. ಅದುವರೆಗೂ ನಿದ್ದೆಯಿಲ್ಲದೆ ಕುಳಿತಿದ್ದ ವೆಂಕಣ್ಣನ ಮನಸ್ಸು ನೂರೆಂಟು ಆಲೋಚನೆಗಳಿಂದ, ತನ್ನ ಗತ ಜೀವನದ ಸ್ಮೃತಿಗಳಿಂದ ತುಂಬಿಹೋಗಿತ್ತು. ಅವನು ಕುಳಿತಲ್ಲಿಯೇ ಗ್ರಾಮದೇವತೆ ನೀಲಮ್ಮಳನ್ನು ಸ್ಮರಿಸಿ ನಮಸ್ಕರಿಸಿದ. ರಾಮ ದಾಸುವನ್ನು ನೆನೆದ. "ತಾಯಿ ನೀಲಮ್ಮ, ನನಗೆ ಒಂದು ತಿಂಗಳ ಮಟ್ಟಿಗಾದರೂ ಕಣ್ಣುಕಾಣಿಸುವಂತೆ ಮಾಡು" ಎಂದು ಮನಸಾರ ಬೇಡಿಕೊಂಡ. ಅವನ ಈ ಕೋರಿಕೆ ಬರು–ಬರುತ್ತಾ ಉಲ್ಬಣವಾಯಿತು. ಅದರೊಡನೆ ಅವನ ಉದ್ರೇಕವೂ ಹೆಚ್ಚಿತು. "ತಾಯಿ ಒಂದು ತಿಂಗಳು ಬೇಡ...... ಒಂದು ವಾರದ ಮಟ್ಟಿಗೆ...... ಇಲ್ಲ ಇಲ್ಲ...... ಒಂದು ದಿನದ ಮಟ್ಟಿಗಾದರೂ ನನಗ ಕಣ್ಣುಕಾಣುವಂತೆ ಮಾಡು...... ಈ ಊರನ್ನು, ಈ ಊರಿನಲ್ಲಿನ ದೊಡ್ಡ–ಹೇಡಿಗಳನ್ನು ತಿವಿದು ಜಾಗೃತಗೊಳ ಸ್ತೀನಿ...... ಎತ್ತುಗಳಂತೆ ಏಟು ತಿಂದು, ಹಗಲಿರುಳು ದುಡಿದರೂ ಹೊಟ್ಟೆಗಿಲ್ಲದೆ ಉಪವಾಸ ಬಿದ್ದಿರುವ ಈ ಜನರನ್ನು ಬಡಿದೆಬ್ಬಿಸಿ ಹುಲಿಗಳನ್ನಾಗಿ ಮಾಡ್ತೀನಿ...... ತಾಯಿ ನೀಲಮ್ಮ...... ಒಂದು ದಿನವಲ್ಲ, ಒಂದು ತಾಸಿನ ಮಟ್ಟಿಗಾದರೂ ಕಣ್ಣು ಕೊಡು ತಾಯಿ...... ಈ ಊರಾಗ ನಡೀತಿರೊ ಅನ್ಯಾಯವನ್ನ ನಿರ್ನಾಮ ಮಾಡ್ತೀನಿ...... ಒಂದೇ ಒಂದು ತಾಸು ದೃಷ್ಟಿ ದಯಪಾಲಿಸು"—ಎಂದು ಮನಸ್ಸಿ ನಲ್ಲೇ ಅಂಗಲಾಚಿದ.

ವೆಂಕಣ್ಣ ಎಷ್ಟು ಪ್ರಾರ್ಥಿಸಿದರೂ, ಅವನ ಕಣ್ಣಿನ ದೃಷ್ಟಿ ಹಿಂದಿರುಗಿ ಬರಲಿಲ್ಲ. ಭಾವಾವೇಶದಿಂದ, ಅವನ ಕಣ್ಣುಗಳಲ್ಲಿ ನೀರು ಮಾತ್ರ ತುಂಬಿಕೊಂಡಿತ್ತು. ಕಣ್ಣೀರನ್ನು ಮೈಮೇಲಿದ್ದ ಬಟ್ಟೆಯ ಚುಂಗಿನಿಂದ ಒರೆಸಿಕೊಂಡ ವೆಂಕಣ್ಣ, ಯಾವುದೋ ನಿರ್ಧಾರಕ್ಕೆ ಬಂದು, ತನ್ನಷ್ಟಕ್ಕೆ ತಾನು ನಕ್ಕ.

ಕತ್ತಲು—ಕಣ್ಣುಕಟ್ಟುವಂತಹ ಗಾಢಾಂಧಕಾರ—ಪ್ರಕೃತಿ, ಗಾಢವಾಗಿ ನಿದ್ರಿಸುತ್ತಿರುವಂತೆ ಎಲ್ಲವೂ ಪ್ರಶಾಂತವಾಗಿತ್ತು. ವೆಂಕಣ್ಣ, ಕುಳಿತಲ್ಲಿಂದಲೇ ಕೈ ಮುಂದೆ ಮಾಡಿ ನೆಲ ಸವರಿದ. ಕೈಗೆ ಕೋಲು ತಟ್ಟಿದಾಗ, ಅದನ್ನು ಎತ್ತಿಕೊಂಡು ಮೇಲೆದ್ದ. ಹಾಗೆಯೆ ಅಂದಾಜಿನ ಮೇಲೆ ರಾಜಣ್ಣನ ಮನೆಯ ಕಡೆಗೆ ಎರಡು ಹೆಜ್ಜೆ ಹಾಕಿದ. ಇದ್ದಕ್ಕಿದ್ದಂತೆ ಏನೊ ಸದ್ದಾಯಿತು. "ಯಾರದು"—ಎಂದು ಕೇಳಬೇಕೆಂದುಕೊಂಡನಾದರೂ, ಕೇಳದೆ ಹಿಂದಿರುಗಿ ಬಂದು, ಭಜನೆಮಂದಿರದ ಕಟ್ಟೆಯ ಮೇಲೆ ಕುಳಿತ. ಒಂದೆರಡು ನಿಮಿಷ ಕಲ್ಲಿನಂತೆ ಹಾಗೆಯೇ ಕುಳಿತುಕೊಂಡಿದ್ದ. ಮತ್ತೆ ಯಾವ ಸದ್ದೂ ಕೇಳಿಸಲಿಲ್ಲ. ಗೌರಮ್ಮ ಅದೇ ಕಟ್ಟೆಯ ಮೇಲೆ ಮಲಗುತ್ತಾಳೆಂಬುದು ತಿಳಿದದ್ದರಿಂದ, ನೆಲ ಸವರುತ್ತಾ ಹೋಗಿ ಆಕೆಯನ್ನು ಎಬ್ಬಿಸಿದ. ಎಚ್ಚರವಾಗಿಯೇ ಇದ್ದ ಗೌರಮ್ಮ, ಗಾಢವಾದ ನಿದ್ರೆಯಿಂದ ಎದ್ದಂತೆ ಮೈಮುರಿದು ಎದ್ದು ಕುಳಿತಳು.

"ಗೌರಮ್ಮ, ನನಗೊಂದು ಉಪಕಾರ ಮಾಡ್ತೀಯಾ?" ವೆಂಕಣ್ಣ ಪಿಸುಗುಟ್ಟಿದ.

"ನಾ ಏನು ಮಾಡಬಲ್ಲೆ? ನನ್ನಿಂದ ಏನಾಗ್ತದ?"

"ಏನೂ ಇಲ್ಲ. ಆ ರಾಜಣ್ಣ ತನ್ನ ಮನಿ ಕಣಜದ ಮುಂದ ಕಾವಲಾಗಿ ಮಲಗಿರ್‍ತಾನ. ಯಾವ ಸದ್ದೂ ಮಾಡದ, ಅಲ್ಲಿ ವರೆಗೂ ಹೋಗಿ ಅವನು ಮಲಗ್ಯಾನೊ—ಎದ್ದಾನೊ ನೋಡಿ ಬರ್‍ತೀಯಾ?"

"ಅಯ್ಯ, ಇದೇನು ಇದ್ದಕ್ಕಿದ್ದ್ಹಾಂಗ ಕಳ್ಳತನಕ್ಕ ಇಳೀಬೇಕಂತ ಮಾಡಿ ಏನು? ನಾ ಹೋಗಾಣೆಲ್ಲ."

"ಏ ರಂಡೆ...... ನನ್ನ ಪಾತ್ರಿ ಒಳಗಿನ ಅನ್ನ ಎಲ್ಲಾ ನುಂಗಿ ಈಗ...... ಹೋಗಲಿ. ಈಗ ನಾನು ಹೇಳಿದ್ಹಾಂಗ ಕೇಳದಿ ಅಂದರ. ಇನ್ನು ಮುಂದ ನನಗ ಏನು ಸಿಕ್ಕರೂ ಅದರೊಳಗ ಅರ್ಧ ನಿನಗ ಕೊಡ್ತೀನಿ. ಏನಂತಿ ಹೇಳು......?"

ವೆಂಕಣ್ಣ ಕೊಟ್ಟ ಮಾತಿಗೆ ಕಟ್ಟುಬೀಳುವ ಆಸಾಮಿ—ಎಂಬುದನ್ನು ಅರಿತಿದ್ದ ಗೌರಮ್ಮ, ಸರಕ್ಕನೆ ಅವನ ಪಾತ್ರೆಯಲ್ಲಿ ಉಳಿದಿದ್ದ ಗಂಜಿಯನ್ನು ಗಟಗಟ ಕುಡಿದು ಮುಗಿಸಿ, ಅವನ ಷರತ್ತನ್ನು ಒಪ್ಪಿಕೊಂಡಳು.

ಮುದಿ ಗೌರಮ್ಮ, ನಡು ಬಗ್ಗಿಸಿಕೊಂಡು, ಸುತ್ತಲೂ ಕಣ್ಣು ಹಾಯಿಸುತ್ತಾ ಮುನ್ನಡೆದಳು. ರಾಜಣ್ಣ ಹಾಯಾಗಿ ಗೊರಕೆ ಹೊಡೆಯುತ್ತಾ ಮಲಗಿದ್ದ. ಅಲ್ಲಿಯೇ ಇದ್ದ ದನಕರುಗಳೂ ಸಹ ಮೌನವಾಗಿ ಮೆಲುಕುಹಾಕುತ್ತಿದ್ದವು.

ಈ ಮಧ್ಯೆ, ವೆಂಕಣ್ಣನ ತಲೆಯಲ್ಲಿ ಸಾವಿರ ಯೋಚನೆಗಳು ಸುಳಿದುವು. ರಾಜಣ್ಣನ ಮನೆಗೆ ಬೆಂಕಿ ಹಚ್ಚಬೇಕೆಂದು ಒಮ್ಮೆ ಯೋಚಿಸಿದ. ಅವನ ರಕ್ತ ಹೀರಬೇಕೆಂದುಕೊಂಡ. ಅವನು ಮಲಗಿರುವಾಗಲೇ, ಅವನನ್ನು ಸಾಯಿಸಬೇಕೆಂದುಕೊಂಡ.

ಅವನು ಹೀಗೆ ಆಲೋಚಿಸುತ್ತಿರುವಾಗಲೇ, ಅವನ ಅಂತರಾತ್ಮ ಅವನನ್ನು ಚುಚ್ಚ ಹತ್ತಿತು. ಅವನ ಮನಸ್ಸಿನಲ್ಲಿ ನೂರೆಂಟು ಪ್ರಶ್ನೆಗಳು ತಲೆ ಎತ್ತಿದುವು. ಅವನು

ಯಾರು?—ರಾಜಣ್ಣ ಯಾರು? ಅವನು ನಿನ್ನ ಮಗನಲ್ಲವೆ?...... ಮಗನನ್ನು ಕೊಲ್ಲುತ್ತೀಯಾ...... ಅವನ ರಕ್ತ...... ನಿನ್ನ ಮಗನ ರಕ್ತ ನೀನೆ ಹೀರಬೇಕಂತೀಯಾ? —ಸೂರಮ್ಮ ಆ ರಾತ್ರಿ ಹೇಳಿದ್ದನ್ನು ಮರೆತುಬಿಟ್ಟೆಯಾ? ಅವಳಿಗೆ ಏನು ಮಾತು ಕೊಟ್ಟಿದ್ದಿ? ಈಗ ಅವಳ ಮಗನನ್ನು ಕೊಂದಲ್ಲಿ, ಅವಳು ನಿನ್ನನ್ನು ಕ್ಷಮಿಸಬಹುದೆ?

ಕುಡ್ಡ ವೆಂಕಣ್ಣ ಗಾಬರಿಯಿಂದ ಎದ್ದು ನಿಂತ. ಮಗನಾದರೇನು?—ಯಾರಾದ ರೇನು? ಕೆಟ್ಟವನು ಕೆಟ್ಟವನೇ. ಆ ಮಹಾತಾಯಿ ಸೀಲಮ್ಮಳ ಮನೆಗೆ ಬೆಂಕಿ ಇಟ್ಟ. ಪುಲ್ಲಯ್ಯ—ಅವನ ವಂಶಜರು—ಮಾಡಿಕೊಂಡಿದ್ದ ಭೂಮಿಯನ್ನು ಕೊಂಡು, ಅವನ ಹೊಟ್ಟೆಮ್ಯಾಲೆ ಕಲ್ಲುಹಾಕಿದ—ಪುಲ್ಲಯ್ಯನ ಸ್ವಂತ ಭೂಮಿ ನುಂಗಲಿಕ್ಕೆ ಈಗ ಹೊಂಚು ಹಾಕಿ ಅವರಿಗೆ ಅದೂ ಇಲ್ಲದ್ಹಾಂಗ ಮಾಡಿದ. ಈಗ ತಾನು ಕೊಟ್ಟ ಮಡ್ಡಿಗೆ, ಅವರಿರುವ ಮನೆಯನ್ನೂ ಬಿಟ್ಟುಕೊಟ್ಟರೂ ಸಾಲದೆಂದು ಹೇಳಿ, ಅವರನ್ನು ನಿರ್ಗತಿಕ ರನ್ನಾಗಿ ಮಾಡುವ ಉಪಾಯ ಹುಡುಕ್ಯಾನ...... ಅವನೇನಾದರೂ ಮನುಷ್ಯನs ......ನನ್ನ ಮಗನs...... ಇಲ್ಲ, ಇಲ್ಲ...... ಅವನು ನನ್ನ ಮಗನಲ್ಲ.

ಗೌರಮ್ಮ ಹಿಂದಿರುಗಿ ಬಂದಾಗ, ತನ್ನನ್ನು ರಾಜಣ್ಣನ ಮನೆಯ ಬಳಿ ಬಿಡುವಂತೆ ವೆಂಕಣ್ಣ ಕೇಳಿಕೊಂಡ. ಅವಳ ಭುಜದ ಮೇಲೆ ಕೈಯಿಟ್ಟು, ಯಾವ ಸದ್ದೂ ಮಾಡದೆ, ರಾಜಣ್ಣ ಮಲಗಿದ್ದ ಜಗುಲಿಯನ್ನು ತಲುಪಿದ ವೆಂಕಣ್ಣ. ಗೌರಮ್ಮ, ಅವನ ಪಾಡಿಗೆ ಅವನನ್ನು ಬಿಟ್ಟು ಹಿಂದಿರುಗಿ ಓಡಿಬಂದಳು. ಬಂದವಳು, ಕಟ್ಟೆಯ ಮೇಲೆ ಉರುಳಿ ಕೊಂಡು, ನಿದ್ದೆ ಬಂದವರಂತೆ ಕಣ್ಣುಮುಚ್ಚಿದಳು.

ರಾಜಣ್ಣನ ಗೊರಕೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅದರಿಂದ ಅವನು ಗಾಢನಿದ್ರೆ ಯಲ್ಲಿದ್ದುದು ತೀರ ಸ್ಪಷ್ಟವಾಗಿತ್ತು. ಕುಡ್ಡ ವೆಂಕಣ್ಣ ಒಮ್ಮೆ ಮುಖದ ಮೇಲಿನ ಬೆವರನ್ನು ಒರೆಸಿಕೊಂಡ. ಅವನಲ್ಲಿ ಜಾಗೃತವಾಗಿದ್ದ ಅಭಿಮಾನ, ಅವನು ಮಾಡಲು ಉದ್ದೇಶಿಸಿದ್ದ ಕರ್ತವ್ಯದಲ್ಲಿ ಭಸ್ಮವಾಗಿಹೋಯಿತು. ತಾನು ಮಾಡಲು ಅಂದುಕೊಂಡ ದ್ದನ್ನು ಮಾಡಿ ಮುಗಿಸಲು, ಅವನ ದೇಹದಲ್ಲಿನ ನರನರವು ಹಾತೊರೆಯುತ್ತಿರುವಂತೆ ಉಬ್ಬಿಕೊಂಡಿದ್ದವು. ಎಲ್ಲೆಲ್ಲೂ ಕತ್ತಲು—ಆ ಕತ್ತಲಿನಲ್ಲಿ, ತನಗೆ ಎಲ್ಲವೂ ಸ್ಪಷ್ಟ ವಾಗಿ ಗೋಚರಿಸುತ್ತಿರುವಂತೆ ಭ್ರಮೆಪಟ್ಟ ವೆಂಕಣ್ಣ. ಹಸಿದ ಹುಲಿಗೆ ಕುರಿಮರಿ ಕಣ್ಣಿಗೆ ಬಿದ್ದಂತಾಗಿತ್ತು. ಕುಡ್ಡ ವೆಂಕಣ್ಣ, ಆಗಲೇ ಮೃಗರಾಜನಾಗಿದ್ದ. ರಾಜಣ್ಣನ ಹಾಸಿಗೆ ಬಳಿ, ಆತನ ತಲೆಗೆ ತೀರ ಸಮೀಪದಲ್ಲಿ ನಿಂತಿದ್ದ ವೆಂಕಣ್ಣ, "ನಾನು ಮಲಗಿದ್ದಾಗ ನನ್ನನ್ನು ಎಬ್ಬಿಸದೆ ನನ್ನ ಕಣ್ಣು ಕೀಳಿಸಿದಿ—ಆದರ ನಾನು ಹಾಂಗ ಮಾಡೋ ಹೇಡಿ ಯಲ್ಲ. ಏಳು—ಏಳು ನನ್ನ ಮಗನೆ...... ಹುಂ......" ಎಂದು ಕೂಗಿದ.

ಫಕ್ಕನೆ ಎಚ್ಚರಗೊಂಡ ರಾಜಣ್ಣ ಮೇಲೆ ಏಳಲು ಪ್ರಯತ್ನಿಸಿದ. ಆದರೆ ವೆಂಕಣ್ಣ, ಆಗಲೆ ಅವನ ಜುಟ್ಟು ಹಿಡಿದು, ಅವನಿಗೆ ಏಳಲು ಬಾರದಂತೆ ನೆಲಕ್ಕೆ ಒತ್ತಿದ್ದ. ಗಾಬರಿ ಯಾದ ರಾಜಣ್ಣ "ಅಪ್ಪೋ...... ಬಿಡ್ರಿ...... ನನ್ನ ಜೀವಾ ಉಳಸ್ರಿ"—ಎಂದು

ಕೂಗಿಕೊಳ್ಳತೊಡಗಿದ. ವೆಂಕಣ್ಣ, ತನ್ನ ಕೈಗೆ ಸಿಕ್ಕು ವಿಲಿವಿಲಿ ಒದ್ದಾಡುತ್ತಿದ್ದ ರಾಜಣ್ಣನ ಮೂಗಿನ ಮೇಲೆ ಬಲವಾದ ಒಂದು ಗುದ್ದು ಕೊಟ್ಟ. ರಾಜಣ್ಣನ ಮೂಗಿನಿಂದ ಬಳಬಳನೆ ರಕ್ತ ಹರಿಯತೊಡಗಿತು. ಆ ರಕ್ತದ ತಿಲಕವಿಟ್ಟುಕೊಂಡ ವೆಂಕಣ್ಣ, "ಮಗನೆ, ನಿನ್ನ ತಾಯಿಗೆ ಮಾತು ಕೊಟ್ಟೇನಿ ಅಂತ ಈಗ ಇಷ್ಟಕ್ಕs ಬಿಟ್ಟೇನಿ. ಇಲ್ಲಾ ಅಂದರ ಈ ಹೊತ್ತಿಗೆ ಯಮಲೋಕ ಕಾಣತಿದ್ದಿ"—ಎಂದು ಗರ್ಜಿಸಿದ.

ರಾಜಣ್ಣನ ಆರ್ತನಾದವನ್ನು ಕೇಳಿಸಿಕೊಂಡ ಅಕ್ಕಪಕ್ಕದ ಜನರು. ಆ ವೇಳೆಗೆ ಅಲ್ಲಿಗೆ ಓಡಿಬಂದರು. ನಾಲ್ವರು ಧೈರ್ಯಮಾಡಿ ಮುಂದೆ ಬಂದು. ವೆಂಕಣ್ಣನನ್ನು ಹಿಡಿದು ಕೊಂಡರು. ಆದರೂ, "ಪುಲ್ಲಯ್ಯನಂತಹವರ ಎಷ್ಟು ಮಂದಿ ಮನಿ ಹಾಳುಮಾಡ್ತಿಯೊ ಮಗನ...... ಹಾಂ...... ಬಿಡ್ರಿ...... ನನ್ನ ಬಿಡ್ರಿ...... ಇನ್ನೂ ಒಂದು ಗುದ್ದು ಕೊಟ್ಟರ ಈ ನನ್ನ ಮಗಗ ಬುದ್ಧಿ ಬರ್ತದ...... ನನ್ನ ಮಗನಿಗೆ ನಾನs ಬುದ್ಧಿ ಕಲಿಸ್ತೀನಿ"—ಎಂದು ಗರ್ಜಿಸುತ್ತಲೇ ಇದ್ದ ವೆಂಕಣ್ಣ.

ರಾಜಣ್ಣ, ಮೂಗಿಗೆ ಬಟ್ಟೆ ಒತ್ತಿಕೊಂಡು ಕುಳಿತಿದ್ದ. ವೆಂಕಣ್ಣನ ಮಾತುಗಳನ್ನು ಸಹಿಸಲಾಗದಿದ್ದಾಗ, "ನಾನು ನಿನ್ನ ಮಗನs......" ಎಂದು ಅರಚುತ್ತಾ ಎದ್ದುಬಂದು ವೆಂಕಣ್ಣನ ಹೊಟ್ಟೆಯ ಮೇಲೆ ರಭಾಡಿಸಿ ಒದ್ದ. ಆ ಏಟನ್ನು ಸಹಿಸಿಕೊಳ್ಳಲಾಗದ ವೆಂಕಣ್ಣ ನಿಂತಲ್ಲೆ ಕುಸಿದುಬಿದ್ದ. ಆಗ ಅಲ್ಲಿ ಸೇರಿದ್ದ ಅಷ್ಟು ಜನರ ಪೈಕಿ ಯಾರೇ ಆಗಲಿ, "ಕಣ್ಣಿಲ್ಲದವನ ಮ್ಯಾಲೆ ಯಾಕಿದ್ದೀತು ನಿನ್ನ ಪ್ರತಾಪ"—ಎನ್ನಲಿಲ್ಲ. ಅಷ್ಟೊತ್ತಿಗೆ ಏನು ಗದ್ದಲವೆಂದು ನೋಡಲು ಪುಲ್ಲಯ್ಯ ಅಲ್ಲಿಗೆ ಬಂದ. ಪುಲ್ಲಯ್ಯನನ್ನು ನೋಡಿ. ಜನರಲ್ಲಿ ಗುಸುಗುಸು ಪ್ರಾರಂಭವಾಯಿತು. ರಾಜಣ್ಣ ಮತ್ತಷ್ಟು ರೌದ್ರಾವತಾರ ತಾಳಿದ. "ಪುಲ್ಲಯ್ಯ, ಈ ಕಿತಾಪತಿ ಯಾರದು, ಯಾರು ಮಾಡಸ್ಯಾರ ಅಂಬೋದು. ನನಗೂ ಗೊತ್ತು, ಈ ಊರಾಗಿನ ಪ್ರತಿಯೊಬ್ಬರಿಗೂ ಗೊತ್ತು. ಇದು ನಾಲ್ಕು ಜನರಿದ್ದ ಊರು—ಅಡವಿಯಲ್ಲ. ಈಗ ಇಲ್ಲಿ ಇರೋರೆಲ್ಲಾ ಸಾಕ್ಷಿ ಹೇಳ್ತಾರ. ನಾಳೆ ಮುಂಜಾನೆ ಪೋಲೀಸಿನವರು ಬಂದರ, ಯಾರು ಸಿಗಿಬೀಳ್ತಾರೊ, ಯಾರು ಜೈಲಿಗೆ ಹೋಗ್ತಾರೊ ನೋಡೋಣ"—ಎಂದು ಆರ್ಭಟಿಸಿದ ರಾಜಣ್ಣ.

ಬೆಳಗಾಯಿತು. "ಯಾರೊಬ್ಬರ ನೆರವೂ ಇಲ್ಲದೆ ಕುಡ್ಡಗ ಅಷ್ಟು ಧೈರ್ಯ ಬರ ಲಾರದು"—ಎಂದೆಲ್ಲ ಜನರು ಆಡಿಕೊಳ್ಳತೊಡಗಿದರು. "ಆ ಪುಲ್ಲಯ್ಯನಿಗೆ ಏನೋ ಕೇಡು ಬಂದದ. ರಾಜಣ್ಣ, ತಾನು ಗೇಣಿ ಹಿಡಿದ ಹೊಲ ಕೊಂಡಾಗಿನಿಂದ ಹ್ಯಾಂಗಾವರೂ ಸೇಡು ತೀರಿಸಿಕೊಳ್ಳಬೇಕೂ ಅಂತ ಹೊಂಚುಹಾಕಿದ್ದ—ಆಯ್ತು...... ಅವನ ಹಣೆ ಬರಹ ಜೈಲಿನೊಳಗ ಅವ ಕೊಳೀಬೇಕೂ ಅಂತಿದ್ದರ ಯಾರೇನು ಮಾಡ್ತಾರ?" "ಕಷ್ಟ ಬಂದಾಗ, ಕೆಟ್ಟವನಾದ ಪುಲ್ಲಯ್ಯ. ಅವಳ ಒಳ್ಳೆಯತನ ಅವನನ್ನು ಎಷ್ಟು ದಿನ ಕಾಪಾಡೀತು?"—ಜನರು ಹೀಗೆಯೇ ತಲೆಗೊಂದು ಮಾತನಾಡಿದರು. ಪುಲ್ಲಯ್ಯ ಮಾತ್ರ, ಯಾರಿಗೂ ಜವಾಬು ಹೇಳಲಿಲ್ಲ. ನೀಲಿ ಎಲ್ಲವನ್ನೂ ಕೇಳಿ ತಿಳಿದುಕೊಂಡಿದ್ದ

ಕಾದರೂ, ತುಟಿ ಪಿಟಕ್ ಅನ್ನಲಿಲ್ಲ. ಕುಡ್ಡ ವೆಂಕಣ್ಣ ರಾತ್ರಿ ಬಿದ್ದ ಏಟಿನಿಂದಾದ ನೋವಿನಿಂದ ನರಳುತ್ತಾ ಮಲಗಿದ್ದಾನೆಂದು ತಿಳಿದಾಗ ಮಾತ್ರ, ನೀಲಿ ತನ್ನ ಪಾಲಿನ ಗಂಜಿಯನ್ನು ಒಂದು ಬಟ್ಟಲಿನಲ್ಲಿ ಹಾಕಿಕೊಂಡು ಭಜನೆಮಂದಿರಕ್ಕೆ ಹೋದಳು.

ನೀಲಿ ಬಂದು ತನ್ನನ್ನು ಕೂಗಿದಾಗ, ಅವಳಿಗೆ ಮುಖ ತೋರಿಸಲು ವೆಂಕಣ್ಣನಿಗೆ ನಾಚಿಕೆಯಾಯಿತು. ಆದರೂ, ಮಲಗಿದವನು ಪಡಬಡಿಸಿ ಎದ್ದು ಕುಳಿತ. ನೀಲಿ, ಅವನ ಪಕ್ಕದಲ್ಲಿ ಕುಳಿತು, ಅವನ ಹೊಟ್ಟೆಯ ಮೇಲೆ ಕೈ ಆಡಿಸುತ್ತಾ, "ಪಾಪ, ಬಾವು ಬಂದದ"—ಎಂದುಕೊಂಡು, ಮೃದುವಾಗಿ ತೀಡಿದಳು. ಕುಡ್ಡ ವೆಂಕಣ್ಣನ ಕಣ್ಣುಗಳಲ್ಲಿ ನೀರೂರಿತು. ನೀಲಿ, ಅವನ ಕೈಯಲ್ಲಿ ತಾನು ತಂದ ಗಂಜಿಯ ಬಟ್ಟಲನ್ನಿಟ್ಟು ಕುಡಿಯಲು ಹೇಳಿದಳು. ಹಸಿವಿನಿಂದ ಕಂಗಾಲಾಗಿದ್ದ ವೆಂಕಣ್ಣ, ಗಟಗಟನೆ ಗಂಜಿ ಕುಡಿದು, ಪಾತ್ರೆಯಲ್ಲಿ ಉಳಿದ ಅನ್ನದ ಅಗಳುಗಳನ್ನು ಹೆಕ್ಕಿ ತಿನ್ನತೊಡಗಿದ. ಆದರೊಡನೆ, ಅವನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯತೊಡಗಿತು. ನೀಲಿಯ ಕಣ್ಣುಗಳಲ್ಲೂ ಸಹ ನೀರೂರಿತು. ಒತ್ತಿಬಂದ ದುಃಖ ಅದುಮಿಕೊಂಡ ನೀಲಿ, "ಅಳಬೇಡ ವೆಂಕಣ್ಣ. ಮನುಷ್ಯರೂ ಅಂದಮ್ಯಾಲೆ ಒಂದೇ ರೀತಿ ಇರಲಿಕ್ಕೆ ಆಗಾಣಿಲ್ಲ. ಇವತ್ತು ಇದ್ದದ್ದು ನಾಳೆ ಇರಾಣಿಲ್ಲ. ಇವೊತ್ತು ನಾವು ಒಬ್ಬರನ್ನ ಕೆಟ್ಟವರು ಅಂದರ, ನಾಳೆ ಇನ್ನೊಬ್ಬರು ನಮ್ಮನ್ನ ಕೆಟ್ಟವರು ಅನ್ನಬಹುದು...... ನಿನ್ನಂತಹವರ ನಾಲಿಗೆ ಒಳ್ಳೆಯದಾಗಿದ್ದರ, ಈ ಊರು ಒಳ್ಳೆಯದಾಗ್ತದ"—ಎಂದು ಹೇಳಿದಳು.

ದುಃಖದಿಂದ ತಳಮಳಿಸುತ್ತಿದ್ದ ವೆಂಕಣ್ಣ, ಯಾವ ಮಾತೂ ಆಡಲಿಲ್ಲ. ಆದೆಲ್ಲಿಗೂ ಹೋಗಿದ್ದ ಗೌರಮ್ಮ ಬಂದಾಗ—"ನೀನೂ ಇಲ್ಲೇ ಇದ್ದಿ. ಆ ರಾಜಣ್ಣನ ಮನೆಗೆ ಹೋಗದ್ದಾಂಗ ವೆಂಕಣ್ಣನ ನೀನು ತಡೀಬಹುದಾಗಿತ್ತು. ನಿನ್ನ ಮಾತು ಕೇಳಿರದಿದ್ದರ, ನನಗಾದರೂ ಬಂದು ಹೇಳಬಹುದಾಗಿತ್ತು. ನೋಡು, ಪಾಪ, ಹೊಟ್ಟಿ ಹ್ಯಾಂಗ ಬಾತದ...... ಎಣ್ಣೆ ತಂದು ತೀಡತೀನಿ. ಬಾವು ಕಡಿಮಿ ಆಗಬಹುದು"—ಎಂದು ಹೇಳಿ ನೀಲಿ ಎದ್ದು ನಿಂತಳು.

ನೀಲಿಯ ಮಾತು ಕೇಳಿ ಗೌರಮ್ಮಳ ಜೀವ ಗಂಟಲಿಗೆ ಬಂತಾದರೂ, ಅದನ್ನು ತೋರಿಸಿಕೊಡದೆ, "ಒಳ್ಳೆಯವರಿಗೆ ಬುದ್ಧಿ ಹೇಳೊ ಅಗತ್ಯನs ಬರಾಣಿಲ್ಲ. ಇನ್ನ ಕೆಟ್ಟವರಿಗೆ, ಕೆಟ್ಟ ಹಾದಿ ಹಿಡಿದವರಿಗೆ ಯಾರಾದರೂ ಬುದ್ಧಿ ಹೇಳಲಿಕ್ಕ ಹೋದರ, ಅವರ ಪಿತ್ತ ನೆತ್ತಿಗೇರ್ತದಂತ....... ನನ್ನ ಗತಿ ಏನಾಯಿತು...... ಹಣೆಬರಹ...... ಹಣ್ಯಾಗ ಬರದದ್ದನ್ನ ಅಳಿಸಲಿಕ್ಕ ಆಗ್ತದ?"—ಎಂದೆಲ್ಲ ಏನೇನೊ ಮಾತನಾಡಿ, ಇನ್ನು ಅಲ್ಲಿಯೇ ಕೂಡುವುದು ಕ್ಷೇಮವಲ್ಲವೆಂದು ಅಲ್ಲಿಂದ ಜಾರಿಕೊಂಡಳು.

ಅದೇ ದಾರಿಯಲ್ಲಿ ಹೊರಟಿದ್ದ ಸಂಜೀವಿ, ನೀಲಿಯನ್ನು ನೋಡಿ, "ನೀನೇನೊ ಆ ಕುಡ್ಡನ ಮ್ಯಾಲೆ ಕನಿಕರ ಪಟ್ಕೊಕೋತ ಇಲ್ಲಿ ಕುಂತೀದಿ. ಅಲ್ಲಿ, ಆ ರಾಜಣ್ಣ ಪೋಲೀಸ್ ಪಟೇಲರ ಮುನ್ಯಾಗ ಕೂತು, ಪೋಲೀಸರನ್ನು ಕರೆಸೊ ಮಸಲತ್ತು

ನಡಸ್ತಾನ. ಏನೋ–ಏಂತೊ. ಪುಲ್ಲಯ್ಯನಿಗೆ ಯಾಕೊ ಶನಿಕಾಟ ಪ್ರಾರಂಭ ಆಗ್ಯದಂತ ಕಾಣಸ್ತದ"—ಎಂದು ಹೇಳಿದ.

"ಬರಲಿ—ಪೋಲೀಸರಾರ ಬರಲಿ—ಮತ್ಯಾರಾದರೂ ಬರಲಿ. ಯಾರೇನು ಕಳವು ಮಾಡಿಲ್ಲ—ಖೂನಿ ಮಾಡಿಲ್ಲ. ಖರೆ ಯಾವುದು–ಸುಳ್ಳು ಯಾವುದು, ಎಲ್ಲಾರಿಗೂ ತಿಳಿದದ" ಕುಡ್ಡ ವೆಂಕಣ್ಣ ಚುರುಕಾಗಿ ಉತ್ತರ ಕೊಟ್ಟ.

"ಹೌದ್ಹೌದು. ನಿನ್ನ ಹಾಂಗs ಬಿಟ್ಟಿದ್ದರ, ಆ ರಾಜಣ್ಣನ ಕೊಂದsಬಿಡ್ತಿದ್ದಿ—ಮತ್ತ ಮ್ಯಾಲೆ. ಖರೆ ಯಾವುದು–ಸುಳ್ಳು ಯಾವುದು ಅಂತ. ಈಗ ಇಲ್ಲದ್ದ ಪುರಾಣ ಹೇಳತಿ ಏನು"—ಸಂಜೀವಿ ವೆಂಕಣ್ಣನನ್ನು ಆಕ್ಷೇಪಿಸಿದ.

ಇವನ್ನು ಕೇಳಿ, ವೆಂಕಣ್ಣನ ರಕ್ತ ಮತ್ತೆ ಕುದಿಯಿತು. "ಪುಲ್ಲಯ್ಯನಂತಹ ಒಳ್ಳೆಯವರು ಈ ಊರಾಗ ಮತ್ತೊಬ್ಬರಿಲ್ಲ. ಆತನ್ನ ಅದು ಹ್ಯಾಂಗ ಜೈಲಿಗೆ ಹಾಕ್ತಾರೊ ನಾನೂ ನೋಡ್ತೀನಿ"—ಎಂದ.

"ನೀ ಏನು ನೋಡತಿ—ನಿನ್ನs ಈ ಊರಿನಿಂದ ಹೊರಗಹಾಕಲಿಕ್ಕೆ ನೋಡ್ಲಿ ಹತ್ಯಾರ ಅವರು."

"ಹಾಕಲಿ–ಹಾಕಲಿ. ಊರು ಬಿಟ್ಟು ಹೋಗೋ ಪರಿಸ್ಥಿತಿ ಬಂದರ, ನಾಲ್ಕು ಜನರ ರಕ್ತ ಕುಡಿದs ಹೋಗ್ತೀನಿ"—ಆವೇಶದಿಂದ ಹೇಳಿದ ವೆಂಕಣ್ಣ.

ನೀಲಿ, ನಡುವೆಯೆ ಮಾತನಾಡಿ, "ಕೊಲ್ತೀನಿ–ಹೊಡಿತೀನಿ—ಅಂತ ಮೊಂಡು ಹಠ ಯಾಕಿದ್ದೀತು? ಡೊಂಕಾಗಿರೊ ಕೋಲನ್ನ ಸರಿ ಮಾಡಲಿಕ್ಕೆ ಬರಾಣಿಲ್ಲ. ಅದನ್ನ ಸರಿ ಮಾಡಲೇಬೇಕು ಅಂದರ, ಬೆಂಕಿ ಒಳಗ ಹಾಕಬೇಕಾಗ್ತದ. ನಿನ್ನ ಕೈಯಿಂದ ಅದೇಗಾದೀತು ಹೇಳು"—ಎಂದು ಕೇಳಿದಳು.

"ಹೌದು, ಸೊಟ್ಟ ಕೋಲು ಸರಿಮಾಡಲಿಕ್ಕೆ, ಯಾರಾದರೂ ಅದನ್ನು ಬೆಂಕಿ ಒಳಗ ಹಾಕಬೇಕಲ್ಲ. ಆ ಕೆಲಸ ನಾನು ಮಾಡ್ತೀನಿ"—ಕುಡ್ಡ ವೆಂಕಣ್ಣ ಹೇಳಿದ.

"ಅಂತಹ ಕಾಲ ಬಂದರ, ಆ ಕೋಲು ಸ್ವತಃ ಬೆಂಕಿ ಒಳಗ ಬಂದು ಬೀಳ್ತದ. ದೇವರು ತಕ್ಕವರಿಂದ ಆ ಕೆಲಸ ಮಾಡಸ್ತಾನ."

"ಆ ಕೆಲಸಕ್ಕ ನಾನs ತಕ್ಕವನು—ಅವನ ತಂದೆಯಾದ ನಾನs ಇದಕ್ಕ ಸರಿಯಾದ ವ್ಯಕ್ತಿ."

"ಓಡುತ್ತಾ ಪಾಯಸ ಕುಡಿಯೋ ಬದಲು, ಕೂತು ನೀರು ಕುಡಿದರ, ಅದು ಮೈಗೆ ಹತ್ತದಂತ. ಸುಮ್ಮನೆ ಅವಸರಪಟ್ಟರ ಏನು ಬರ್ತದೆ. ಅವಸರದಾಗ ಒಂದು ವೇಳೆ ಕೆಲಸ ಆದರೂ, ಅದು ಬಹಳ ಕಾಲ ಉಳಿಯೋದಿಲ್ಲ. ಯಾವ ಕೆಲಸ ಮಾಡಿದರೂ, ಪೂರ್ವಾಪರ ಯೋಚಿಸೋದು ಒಳ್ಳೆಯದು...... ಸರಿ ನಾನು ಬರ್ತೀನಿ"—ಎಂದು ಹೇಳಿ, ವೆಂಕಣ್ಣನಿಗೆ ಮಾತನಾಡಲೂ ಸಹ ಅವಕಾಶ ಕೊಡದೆ, ನೀಲಿ ಅಲ್ಲಿಂದ ಹೊರಟು ಹೋದಳು. ಸಂಜೀವಿ ಕೂಡ, "ಇವನಿಗೆ ಕಣ್ಣು ಇದ್ದರ......" ಎನ್ನುತ್ತಾ ಹೊರಟು ಹೋದ.

ರಾಜಣ್ಣ ಪೋಲೀಸ್ ಪಟೇಲರ ಮನೆಯಿಂದ ಹಿಂದಿರುಗಿ, ಪುಲ್ಲಯ್ಯನಿಗೆ ಹೀಂಗ ಮಾಡ್ತೀನಿ–ಹಾಂಗ ಮಾಡ್ತೀನಿ—ಎಂದು ಹೆಂಡತಿಯ ಮುಂದೆ ಪ್ರತಾಪ ಕೊಚ್ಚಿಕೊಳ್ಳ ತೊಡಗಿದ. ಆದರೆ, ಆತನ ಹೆಂಡತಿ ಅವನ ಈ ಬಡಾಯಿಗೆ ಸೊಪ್ಪು ಹಾಕದೆ, "ನಿಮಗ ಬುದ್ಧೀನೆ ಇಲ್ಲ"—ಎಂದುಬಿಟ್ಟಳು. "ಯಾರಿಗೆ ನನಗs......?" ಎನ್ನುತ್ತ ಏನೊ ಕೇಳಲು ಹೊರಟ ರಾಜಣ್ಣ, ಕೂಡಲೆ ಮಾತು ನಿಲ್ಲಿಸಿ, ಹೆಂಡತಿಯ ಮುಖ ನೋಡಿದ. ಆಮೇಲೆ, "ಏನs ಹಾಗ್ಯಾಕಂತೀದಿ?"—ಎಂದು ಕೇಳಿದ.

ಆಕೆ ಹುಸಿಕೋಪ ನಟಿಸುತ್ತಾ, "ನನಗೇನು ಆಗಬೇಕಾಗ್ಯದ. ನೀವಾದರ ಮೀಸೆ ಹೊತ್ತ ಗಂಡಸರು—ಎತ್ತುಗಳ ಜೊತೆ ಹೋರಾಡೆ ಪೌರುಷ ಉಳ್ಳವರು. ಆ ಕುಡ್ಡ ವೆಂಕಣ್ಣನ ಊರಿಂದ ತೊಲಗಿಸ್ತೀನಿ, ಪುಲ್ಲಯ್ಯನ ಜೈಲಿಗೆ ಕಳುಹಿಸ್ತೀನಿ ಅಂತ ಹಾರಾಡ್ತೀರಿ ಅತು."

"ಹೌದು ಮತ್ತ ಊರಿಗೆ ಊರೆ ನನ್ನ ಪರವಾಗಿ ಅದ—ಅಂದಮ್ಯಾಲೆ ಬಿಡಲ್ಯಾಕ?"

"ಕೋರ್ಟು ಕಚೇರಿ ಹತ್ತಿದವರು, ಕತ್ತಿ ಹತ್ತಿದವರು ಒಂದs ಅಂತಾರ. ನೀವು, ಆ ಪುಲ್ಲಯ್ಯನ ಜೈಲಿಗೆ ಹಾಕಸ್ತೀರಿ ಖರೆ. ಆದರೆ ನಾಳೆ ಅವನು ಜೇಲಿನಿಂದ ಹೊರಗ ಬಂದಮ್ಯಾಲೆ ನಿಮ್ಮನ್ನ ಉಳಿಗೊಡ್ತಾನೇನು? ಆ ಕುಡ್ಡ ನಿಮಗೇನಾದರೂ ಕೆಟ್ಟದು ಮಾಡದs ಊರು ಬಿಟ್ಟು ಹೋಗ್ತಾನೇನು?—ಸುಮ್ಮನೆ ನಾನು ಹೇಳಿದಷ್ಟು ಮಾಡ್ರಿ"

"ನಿನ್ನ ಮಾತು ಎಂದು ತಗದುಹಾಕೀನs. ನಿನ್ನ ಮಾತು ಕೇಳಿ, ಆ ವೆಂಕಣ್ಣನ ಕಣ್ಣು ಕೀಳಿಸಿದೆ, ಇನ್ನೇನು......?"

ರಾಜಣ್ಣನ ಹೆಂಡತಿ ಗಂಡನ ಕಿವಿಯಲ್ಲಿ ಏನನ್ನೊ ಹೇಳಿದಳು. ರಾಜಣ್ಣ 'ಸರೆ' ಎಂದು ತಲೆಹಾಕಿ ಹೊರಹೊರಟ. ಕೂಡಲೇ, ಪೋಲೀಸ್ ಪಟೇಲರನ್ನೂ, ಶಾನುಭೋಗರು ಮತ್ತು ದೇಸಾಯರನ್ನು ಭಜನೆಮಂದಿರಕ್ಕೆ ಕರೆಸಿದ. ಊರಿನ ಹಿರಿಯರು ಸೇರಿ ಪುಲ್ಲಯ್ಯನನ್ನು ಕರೆಸಿದರು. ಕರೆಕಳುಹಿಸಿದಾಗ ಪುಲ್ಲಯ್ಯ ಬಂದನಾದರೂ, ಅವರು ಕೇಳಿದ ಯಾವ ಪ್ರಶ್ನೆಗೂ ಉತ್ತರ ಕೊಡಲಿಲ್ಲ. ಹಿರಿಯರು ಸೇರಿ, "ನೀನೆ ರಾಜಣ್ಣನ ಖೂನಿ ಮಾಡಿಸಬೇಕೂ—ಅಂತ ಉಪಾಯ ಹೂಡಿದ್ದಿ"—ಎಂದು ಆಪಾದಿಸಿದಾಗ್ಯೂ ಪುಲ್ಲಯ್ಯ ಬಾಯಿ ಬಿಡಲಿಲ್ಲ. ಅಲ್ಲಿಯೇ ಇದ್ದ ವೆಂಕಣ್ಣ ಮಾತ್ರ, "ರಾಮ, ರಾಮ ......ಆತನ ಮ್ಯಾಲೆ ಇಲ್ಲದ ಅಪವಾದ ಯಾಕ ಹೊರಸ್ತೀರಿ. ರಾಜಣ್ಣನ ಮ್ಯಾಲೆ ಕೈಮಾಡಿದ್ದು ನಾನು. ಈಗ ಆಗಿದ್ದಕ್ಕೆಲ್ಲ ನಾನೇ ಕಾರಣ. ಇದರೊಳಗ ಪುಲ್ಲಯ್ಯನ ಯಾಕ ಎಳೀತೀರಿ"—ಎಂದು ಕೂಗಿಕೊಂಡ.

ಸಂಜೀವಿ ಮುಂದೆ ಬಂದು, "ನೋಡು ರಾಜಣ್ಣ, ಪುಲ್ಲಯ್ಯ ಹ್ಯಾಂಗಿದ್ದರೂ ಊರು ಬಿಟ್ಟು ಪಟ್ಟಣಕ್ಕ ಹೊರಟಾನ. ಅವನ್ನ ಈಗ ಜೈಲಿನ್ಯಾಗ ಹಾಕಿಸಿದರ ನಿನಗೇನು ಸಿಗ್ತದ? ಆ ನೀಲಿ ಮುಖ, ಆ ಮಕ್ಕಳ ಮುಖ ನೋಡಿ ಆದರೂ, ಈ ವಿಷಯ ಇಷ್ಟಕ್ಕs ಬಿಡು"—ಎಂದು ಕೇಳಿಕೊಂಡ.

"ಅದೆಲ್ಲಾ ನಾ ಕೇಳಾಣಿಲ್ಲ. ರಾತ್ರಿ ಯಾರೂ ನನ್ನ ಸಹಾಯಕ್ಕ ಬರದೆ ಇದ್ದರ, ಈ ಹೊತ್ತಿಗೆ ನನ್ನ ದೇಹ ಭಸ್ಮವಾಗಿಹೋಗ್ತಿತ್ತು. ಅಂತಹುದು, ಅವನ ಮ್ಯಾಲಿ ಕನಿಕರ ತೋರಿಸು ಅಂತ ನನಗs ಹೇಳ್ತೀರೇನು?"—ಎಂದು ರಾಜಣ್ಣ ರೇಗಿದ.

"ಹಾಂಗಂದರ ಹ್ಯಾಂಗ ರಾಜಣ್ಣ? ಏನೊ ನಿನ್ನಿಂದ ಬರಬೇಕಾದ ರುಡ್ಡು ಬರಲಿಲ್ಲ ಅಂತ ಅವಸರಪಟ್ಟ. ಬುದ್ಧಿ ಕೆಡಿಸಿಕೊಂಡ. ಈಗ ಹ್ಯಾಂಗಿದ್ದರೂ ಊರಿನ ಎಲ್ಲಾ ಹಿರೆರೂ ಇಲ್ಲಿದ್ದಾರ. ಅದೇನು ಲೆಕ್ಕಪತ್ರ ಅದನೊ ತೋರಿಸಿ ಅವನಿಗೆ ಕೊಡಬೇಕಾದ್ದು ಕೊಟ್ಟುಬಿಡು ಆತು."

"ನನಗ ಆತನ ಭೂಮಿನೂ ಬ್ಯಾಡ, ಮನೀನೂ ಬ್ಯಾಡ. ನಾ ಕೊಟ್ಟ ರುಡ್ಡು ನನಗ ಕೊಟ್ಟರಾಯಿತು. ಒಂದು ಕಾಸು ಬಡ್ಡೀನೂ ಕೇಳಾಣಿಲ್ಲ."

"ರಾಜಣ್ಣ, ಈಗಾಗಲೇ ಅರೆಜೀವ ಆಗಿರೋರನ್ನ ನೀರಿನ್ಯಾಗ ಮುಳುಗಿಸಬೇಕಂತಿ ಏನು?. ಆದದ್ದಾಯಿತು. ಮೈನರಿಗೆ (ಅಲ್ಪ ವಯಸ್ಕನಿಗೆ) ಸೇರಿದ ಆಸ್ತಿ ಮಾರಲು ಪುಲ್ಲಯ್ಯಗ ಅಧಿಕಾರ ಇಲ್ಲ. ಒಂದು ವೇಳೆ ಆತ ಆಸ್ತಿ ಮಾರಿದರೂ, ಯಾರೂ ಕೊಳ್ಳಲಾರ......"

ಶಾನುಭೋಗರು ನಡುವೆಯೇ ಬಾಯಿ ಹಾಕಿ, "ಅದೆಲ್ಲಾ ಯಾಕ? ಆ ಮನಿ ಬರದು ಕೊಡ್ತಾನ. ಸರಕಾರ ಊರಿನ ಅಂಚಿನಲ್ಲಿರೊ ಜಗಾ ಬಿಟ್ಟಿ ಕೊಡಲು ಮುಂದೆ ಬಂದದ. ಅಂದಮ್ಯಾಲಿ, ಆ ಹಳೆಯ ಮನಿ ಯಾರು ತೊಗೂತಾರ? ......ಪುಲ್ಲಯ್ಯ ಹ್ಯಾಂಗಿದ್ದರೂ ಊರು ಬಿಟ್ಟು ಪಟ್ಟಣಕ್ಕ ಹೊರಟಾನ. ಅವನಿಗೆ ಪಟ್ಟಣಕ್ಕ ಹೋಗಲಿಕ್ಕೆ ತಗಲೊ ವೆಚ್ಚ, ಐದು ದಿನದ ಊಟಕ್ಕ ಆಗೋವಷ್ಟು ರುಡ್ಡು ಕೊಟ್ಟುಬಿಡು ಆತು"—ಎಂದು ಸೂಚಿಸಿದರು.

"ನಾನು ಒಂದು ಪುಡಿ ಕಾಸೂ ಕೊಡಾಣಿಲ್ಲ. ಬೇಕಾದರ ಆ ಮನಿ ಹರಾಜು ಮಾಡ್ರಿ. ಅದರಿಂದ ಬಂದ ರುಡ್ಡು ನನಗ ಕೊಡ್ರಿ ಆತು. ಅದರೊಳಗ ಲಾಭ ಬಂದರ ಲಾಭ, ನಷ್ಟ ಆದರ ನಷ್ಟ—ಒಪ್ಪಿಕೊತೀನಿ"—ರಾಜಣ್ಣ ಖಚಿತವಾಗಿ ಹೇಳಿದ.

"ಸತ್ತ ಹಾವಿಗೆ ಹೊಡದರ ಯಾತಕ್ಕ ಬಂತು? ನಿನ್ನ ಕೊಲ್ಲೊ ತನ್ನ ಪ್ರಯತ್ನ ಊರಿಗೆಲ್ಲಾ ತಿಳಿದುಹೋಯಿತಲ್ಲಾ—ಅಂತ, ಅವನು ಆಗಲೇ ಪೇಚಾಡ್ತಿ ಸಾಯ್ಲಿಖತ್ತಾನ—ನಾವು ಕೇಳಿದ ಪ್ರಶ್ನೆಗಳಿಗೆ ಜವಾಬು ಕೊಡದs, ನಿನ್ನ ಕೊಲ್ಲಸಲಿಕ್ಕ ಹೊಂಚು ಹಾಕಿದ್ದು ಒಪ್ಪಿಕೊಂಡ್ಹಾಂಗ ಆಗ್ಯದ. ಅದನ್ನು ಈಗ ಮರೆತುಬಿಡು. ಆದದ್ದು ಆಯ್ತು. ಅವನ ಹೆಣ್ತಿ–ಮಕ್ಕಳ ಮುಖ ನೋಡಿ ಆದರೂ, ಆ ಒಂದು ಹೊಲ–ಮನಿ ತೊಗೊಂಡು ಮ್ಯಾಲೆ ಐವತ್ತು ರೂಪಾಯಿ ಕೊಟ್ಟುಬಿಡು. ಇದಕ್ಕೂ ಹೆಚ್ಚಿಗೆ ನಾವು ಏನೂ ಹೇಳಲಾರೆವು. ಏನಪಾ ಪುಲ್ಲಯ್ಯ, ಇದು ನಿನಗ ಒಪ್ಪಿಗಿ ಹೌದಲ್ಲೊ"—ಎಂದು ಪೋಲೀಸ್ ಪಟೇಲ ಕೇಳಿದಾಗ, ಪುಲ್ಲಯ್ಯ ಮೌನವಾಗಿಯೇ ತಲೆ ಅಲ್ಲಾಡಿಸಿ ಒಪ್ಪಿಗೆ ಸೂಚಿಸಿದ.

"ನೀವೆಲ್ಲರೂ ದೊಡ್ಡವರು, ಹಿರಿಯರು. ನೀವು ಹೇಳಿದ್ದಕ್ಕ ಇಲ್ಲ ಅಂದು, ಈ

ಊರಾಗ ಬದುಕಲಾರೆ. ನನಗ ಇವರೊಳಗ ನಷ್ಟ ಆದರೂ, ನೀವು ಹೇಳಿದ್ವನ್ನ ನಾನೂ ಒಪ್ಪಿಕೋತೀನಿ"—ಎಂದು ರಾಜಣ್ಣನೂ ತನ್ನ ಸಮ್ಮತಿ ಸೂಚಿಸಿದ. ಅಲ್ಲಿಗೆ ಪಂಚಾಯಿತಿ ಮುಗಿದು ಎಲ್ಲರೂ ಎದ್ದು ಹೋದರು. ಪುಲ್ಲಯ್ಯ ಮಾತ್ರ, ಭಜನೆಮಂದಿರದ ಕಂಬಕ್ಕೆ ಒರಗಿ ಹಾಗೆಯೇ ಕುಳಿತಿದ್ದ. ಅವನ ಪಕ್ಕದಲ್ಲಿ ಕುಳಿತಿದ್ದ ವೆಂಕಣ್ಣ, "ಪುಲ್ಲಯ್ಯಾ, ನಿನಗ ಅನ್ಯಾಯ ಆಯ್ತು"—ಎನ್ನುತ್ತಾ ಕಣ್ಣೀರು ಸುರಿಸಿದ.

"ಬ್ಯಾಡ ವೆಂಕಣ್ಣ—ದುಃಖಿಸಬೇಡ"—ಎಂದು ಪುಲ್ಲಯ್ಯನೇ ಅವನನ್ನು ಸಮಾಧಾನ ಮಾಡಿದ.

"ಇನ್ನೇನು ಮಾಡಲಿ. ನಾ ಮಾಡಿದ ಅಪರಾಧ ನಿನ್ನ ತಲೆಮ್ಯಾಲೆ ಹಾಕಿಕೊಂಡಿ. ನನ್ನ ತಪ್ಪಿಗೆ ನೀನು ಶಿಕ್ಷೆ ಅನುಭವಿಸಬೇಕಾಗ್ಯದ. ನಿನ್ನ, ಊರುಬಿಟ್ಟು ಹೊರಗ ಹಾಕೊ ಮಸಲತ್ತು ಮಾಡ್ಯಾರ...... ನಾನೆಂಥ ತಪ್ಪು ಕೆಲಸ ಮಾಡಿದೆ."

"ನೀನೇನೂ ತಪ್ಪು ಮಾಡಿಲ್ಲೇಳು. ನನ್ನ ಮ್ಯಾಲಿನ ಅಭಿಮಾನದಿಂದ, ದೊಡ್ಡದಕ್ಕ ಕೈಹಾಕಿದಿ. ಈಗ, ಈ ಅಪವಾದ ನಿನ್ನ ತಲೀಗೆ ಬಂದಿದ್ದರ, ನೀನು ಈ ಊರಾಗ ಅನ್ನ ಕಾಣ್ತೀ ಏನು? ನಾನs ರಾಜಣ್ಣನ್ನ ಕೊಲ್ಲಲಿಕ್ಕೆ ನಿನ್ನ ಕಳುಹಿಸಿದ್ದೆ ಅಂತ ಹೇಳು. ನಾ ಏನು, ಮತ್ತs ಈ ಊರಿನ ಮುಖ ನೋಡೋದು ಅಷ್ಟರಾಗ ಅದ."

"ನಮ್ಮಪ್ಪ ಪುಲ್ಲಯ್ಯ, ಮತ್ತs ನೀನು ಇತ್ಲಾಗ ಬರಾಣಿಲ್ಲೇನೊ? ನಾನು ಸಾಯೊ ಮುಂದ ನನ್ನ ಮೊಮ್ಮಗನ್ನ ನಾನು ನೋಡಬಾರದೇನೊ? ನನ್ನ ತಾಯಿ ನೀಲಮ್ಮ, ನನ್ನ ಹತ್ತಿರ ಇರಾಣಿಲ್ಲ...... ಆಯ್ತು ಇದಕ್ಕೆಲ್ಲ ಆ ದೇವರೆ ಕಾರಣ. ಅವನಿಗೆ ಕನಿಕರ ಅಂಬೋದು ಇಲ್ಲ...... ಅವನೂ ನನ್ನ ಹಾಂಗ ಕುಡ್ಡ...... ಅಂವ...... ಅಂವ"—ಉದ್ರೇಕದಿಂದ ಮುಂದೆ ಮಾತು ಬರಲಿಲ್ಲವಾದರೂ ಕುಡ್ಡ ವೆಂಕಣ್ಣನ ಕಣ್ಣುಗಳಿಂದ ನೀರು ಉಕ್ಕಿ ಹರಿಯಿತು.

ಇಬ್ಬರೂ ಎಷ್ಟೊ ಹೊತ್ತು ಮೌನವಾಗಿ ಹಾಗೆಯೇ ಕುಳಿತಿದ್ದರು.

## [27]

ಪುಲ್ಲಯ್ಯ ಪಟ್ಟಣಕ್ಕೆ ಹೋಗುವ ದಿನ ಖಚಿತವಾಯಿತು. ಹುಲಿವೇಷ ಹಾಕುವಲ್ಲಿ ಸುತ್ತಮುತ್ತಲಿನ ಗ್ರಾಮಗಳಲ್ಲಿ ಸಾಕಷ್ಟು ಹೆಸರು ಗಳಿಸಿದ್ದ ಪುಲ್ಲಯ್ಯ, ಊರು ಬಿಟ್ಟು ಹೋಗುವ ಮುನ್ನ ಒಮ್ಮೆಯಾದರೂ ಹುಲಿವೇಷ ಹಾಕಿ ತೋರಿಸಬೇಕೆಂದು ಊರಿನ ಜನರು ದುಂಬಾಲು ಬಿದ್ದಾಗ, ಪುಲ್ಲಯ್ಯ ಒಪ್ಪಿಕೊಂಡ. ಮೈಗೆಲ್ಲಾ ಹುಲಿಬಣ್ಣ ಹಚ್ಚಿಕೊಂಡು, ಮುಖಕ್ಕೆ ಹುಲಿಯ ಮುಖವಾಡ ಹಾಕಿಕೊಂಡು ಎದುರು ನಿಂತರೂ ಕೂಡ, ಮಲ್ಲೇಶಿ ಹೆದರದೆ, "ನಾನೂ ಹುಲಿ ಆಗ್ತೀನಿ"—ಎಂದು ಹಠಹಿಡಿದ. ಅವನಿಗೂ

ಮೈತುಂಬ ಬಣ್ಣ ಬಳಿದು, ಹಳದಿ ಬಟ್ಟೆಯೊಂದರ ಮೇಲೆ ಹುಲಿಯ ಮುಖ ಇಳಿಸಿ, ಬಾಯಿ, ಮೂಗು ಮತ್ತು ಕಣ್ಣುಗಳ ಬಳಿ ರಂಧ್ರ ಕೊರೆದು ಕಟ್ಟಲಾಯಿತು. ಹಿಂದೆ ಒಂದು ಬಾಲ ಕಟ್ಟಿದಾಗ ಮಲ್ಲೇಶಿ ಹುಲಿಯ ಮರಿಯಂತೆಯೆ ಕಂಡ. ಮಲ್ಲೇಶಿ, ಮುಂದಾಗಿ ಹೋಗಿ ಮನೆಯ ಜಗುಲಿಯ ಮೇಲೆ ನಿಂತು ಕುಣಿಯತೊಡಗಿದಾಗ, ನೋಡಿದವರೆಲ್ಲರಿಗೂ ಆನಂದವಾಯಿತು. ಕುಣಿಯುವಂತೆ ಅವನನ್ನು ಪ್ರೋತ್ಸಾಹಿಸಿ, ಜನರು ಕೇಕೆ ಹಾಕತೊಡಗಿದಾಗ, ಮಲ್ಲೇಶಿ ಪುಟಿ–ಪುಟಿದು ಕುಣಿಯತೊಡಗಿದ. ಕೆಲವರಂತೂ ತಂದೆಗಿಂತ ಮಗನ ಕುಣಿತವೇ ಚೆನ್ನಾಗಿದೆ ಎಂದು ಮೆಚ್ಚಿಕೊಂಡರು. ಆ ದಿನಗಳಲ್ಲಿ ಪುಲ್ಲಯ್ಯನ ಹುಲಿ ಆಟ ನೋಡಿದವರೆಲ್ಲರೂ, ಇಂದು ಆತನನ್ನು ನೋಡಿ, "ಇವನು ಅದೇ ಪುಲ್ಲಯ್ಯನೇ" ಎಂದು ಆಶ್ಚರ್ಯಪಟ್ಟರು. "ಪಾಪ, ಬಹಳ ಸೊರಗಿಹೋಗ್ಯಾನ. ಆಗಿನ ತೀಕ್ಷ್ಣತೆ, ಆಗಿನ ಹುರುಪು–ಶಕ್ತಿ ಈಗ ಉಳಿದಿಲ್ಲ. ಆಗ ಇವನ ಕುಣಿತಕ್ಕ ಸರಿಯಾಗಿ ತಮಟೆ ಬಾರಿಸಲು ಯಾರಿಂದಲೂ ಆಗುತ್ತಿರಲಿಲ್ಲ. ಆದರ—ಈಗ ಏನದ...... ಬರಿ ಎಲುಬಿನ ಹಂದರ ಆಗ್ಯಾನ......" ಜನರು ತಮ್ಮ ತಮ್ಮಲ್ಲೆ ಮಾತನಾಡಿಕೊಂಡರು.

ಹುಲಿ ಕುಣಿತ ಮುಗಿಸಿ, ನದಿಯಲ್ಲಿ ಸ್ನಾನಮಾಡಿ ಬಣ್ಣ ಒರೆಸಿಕೊಂಡು, ಪುಲ್ಲಯ್ಯ ಮನೆಗೆ ಬರುವ ವೇಳೆಗೆ ರಾತ್ರಿಯಾಗಿತ್ತು. ಹಸಿವಿನಿಂದ ಹೊಟ್ಟೆ ದಹಿಸುತ್ತಿತ್ತಾದರೂ, ಮನೆಯಲ್ಲಿ ಗಂಜಿ ಬಿಟ್ಟು ಮತ್ತೇನೂ ಇರಲಿಲ್ಲ. ಪುಲ್ಲಯ್ಯ, ಮಗನ ಜೊತೆಗೆ ಕುಳಿತು ಒಂದು ಬಟ್ಟಲು ಗಂಜಿ ಕುಡಿದು, ಎದುರಿಗಿದ್ದ ಹೆಂಡತಿಗೆ, "ದೊಡ್ಡ ಪಟ್ಟಣ ದಾಗ—ಎಲ್ಲಾರೂ ಒಂದು ಚೀಲ ಹೊತ್ತರ, ನಾನು ಎರಡು ಚೀಲ ಹೊರ್ತೀನಿ...... ಆಗ ಈ ಹೊಟ್ಟೆ ಉರಿ ಇರಾಣಿಲ್ಲೇಳು"—ಎಂದು ಹೇಳಿದ.

"ಆಗಲಿ, ಈಗ ಆ ಮಾತು ಯಾಕ"—ಎಂದು ನೀಲಿ ಹೇಳಿದಾಗ, ಕಡೀವರೆಗೂ ನಾವು ಹೀಂಗs ಇರ್ತಿವೇನು? ನಮಗೂ ಒಳ್ಳೆ ಕಾಲ ಬರ್ತದ. ಕಷ್ಟಪಡ್ತೀನಿ. ನ್ಯಾಯ–ನೀತಿಗೆ ಕಟ್ಟುಬಿದ್ದು ಜೀವನ ಸಾಗಸ್ತೀನಿ. ನನ್ನ ಮಕ್ಕಳಿಗೆ ಯಾವ ಕೊರತೆಯೂ ಇಲ್ಲಾರದ್ಹಾಂಗ ನೋಡಕೊತೀನಿ"—ಎನ್ನುತ್ತ ಪುಲ್ಲಯ್ಯ, ತಲೆ ಎತ್ತಿ ಹೆಂಡತಿಯ ಮುಖ ನೋಡಿದ. ಅಷ್ಟಕ್ಕೆ ಗಂಜಿ ಕುಡಿಯುವುದನ್ನು ನಿಲ್ಲಿಸಿ ಕೈತೊಳೆದುಕೊಂಡ. ನೀಲಿ, ಗಂಡ ಮತ್ತು ಮಗ ಕುಡಿದು ಬಿಟ್ಟಿದ್ದ ಗಂಜಿಯನ್ನೆ ಬಾಯಿಗೆ ಹಾಕಿಕೊಂಡು ನೀರು ಕುಡಿದಳು.

ಪುಲ್ಲಯ್ಯ ಊರು ಬಿಡುವವರೆಗೂ, ನೂರೆಂಟು ಯೋಚನೆಗಳಲ್ಲಿ ಮುಳುಗಿದ್ದ. ಎಲ್ಲರ ಮನೆಗೂ ಹೋಗಿ, ಎಲ್ಲರನ್ನೂ ಭೇಟಿಯಾಗಿ ಬಂದದ್ದಾಗಿತ್ತು. ನೀಲಿ, ಕುಡ್ಡ ವೆಂಕಣ್ಣ, ಗೌರಮ್ಮ ಮತ್ತು ಕುಷ್ಠರೋಗಿಯನ್ನು ಮನೆಯ ವರೆಗೂ ಕರೆದು ಊಟಕ್ಕೆ ಹಾಕಿದಳು. ಮನೆಯಲ್ಲಿನ ಸಾಮಾನುಗಳನ್ನು ಸಾವರಿಸಿಕೊಂಡು ಗಂಟುಕಟ್ಟುತ್ತಿದ್ದಾಗ, ಕುಡ್ಡ ವೆಂಕಣ್ಣ ಮಲ್ಲೇಶಿಯ ಕೈಯಲ್ಲಿಟ್ಟಿದ್ದ ಮಣ್ಣಿನ ಹೆಂಟೆ ಕಣ್ಣಿಗೆ ಬಿತ್ತು. ನೀಲಿ,

ಅದನ್ನು ಕೈಯಲ್ಲಿ ತೆಗೆದುಕೊಂಡು, ಸ್ವಲ್ಪ ಹೊತ್ತು ಮೌನವಾಗಿ ಹಾಗೆಯೇ ನಿಂತು ಬಿಟ್ಟಳು. ಆ ಮಣ್ಣಿನ ಹೆಂಟೆಯನ್ನು ಹಾಗೆಯೇ ಬೀದಿಗೆ ಒಗೆಯಲು ಕೈ ಏಳಲಿಲ್ಲ. ಮಣ್ಣಿನ ಮಗನಾದ ಮಲ್ಲೇಶಿ, ಮುಂದೆ ಎಂದಾದರೂ ಮಣ್ಣನ್ನು ನಂಬಿ ಬದುಕ ಲಾರನೇ ಎಂದುಕೊಳ್ಳುತ್ತಾ, ಆ ಮಣ್ಣಿನ ಹೆಂಟೆಯನ್ನು ಪಟ್ಟಣಕ್ಕೆ ತಾನು ಒಯ್ಯಲಿದ್ದ ಸಾಮಾನುಗಳಲ್ಲಿ ಸೇರಿಸಿದಳು.

ಬೆಳಗಾಯಿತು. ಬೆಳಗಿನ ತಂಗಾಳಿ ತುಂಬ ಆಹ್ಲಾದಕರವಾಗಿತ್ತು. ಪೂರ್ವದಲ್ಲಿನ ಮಬ್ಬಿನಲ್ಲಿ ಸೂರ್ಯ ಅವಿತುಕೊಂಡಿದ್ದ. ನದಿಯಲ್ಲಿ ಪ್ರವಾಹ ಬಂದಿದ್ದರಿಂದ, ನೀರಿನ ಭೋರ್ಗರೆಯುವ ಸದ್ದು ಸ್ಪಷ್ಟವಾಗಿ ಕೇಳಿಸುತ್ತಿತ್ತು. ಸಾಮಾನುಗಳಿಂದ ತುಂಬಿದ ಚೀಲವನ್ನು, ಪುಲ್ಲಯ್ಯ ಭುಜದ ಮೇಲೇರಿಸಿದ. ನೀಲಿ ಮಗಳನ್ನು ಎತ್ತಿ ಕೊಂಡು, ಮನೆಯನ್ನು ಒಂದು ಸಲ ಕಣ್ಣುತುಂಬ ನೋಡಿದಳು. ನಂತರ ಯಾವ ಮಾತೂ ಆಡದೆ ಹೊರಗೆ ನಡೆದಳು. ನರಸಿಂಹ, ಗಂಗವ್ವ, ಕುಡ್ಡ ವೆಂಕಣ್ಣ, ಗೌರಮ್ಮ— ಎಲ್ಲರೂ ಅವರ ಜೊತೆ ಜೊತೆಗೆ ಹೆಜ್ಜೆ ಹಾಕತೊಡಗಿದರು. ನೀಲಿ ಒಮ್ಮೆಯೂ ಹಿಂದಿರುಗಿ ನೋಡಲಿಲ್ಲ. ರಸ್ತೆಯಲ್ಲಿ ಇತರ ಹೆಂಗಳೆಯರು ಮಾತನಾಡಿಸಿದಾಗಲೂ, ಅವಳು ತಲೆ ಎತ್ತಲಿಲ್ಲ. ಗಂಗವ್ವ, ಪುಲ್ಲಯ್ಯನಿಗೆ ಬುದ್ಧಿವಾದ ಹೇಳುತ್ತಿದ್ದಳು— "ನೋಡು ಪುಲ್ಲಯ್ಯ, ಬುದ್ಧಿವಂತನಾಗಿ ನಡೆದುಕೊಂಡರ ನಾಲ್ಕು ದಿನ ಹಾಯಾಗಿ ಬದುಕಬಹುದು. ಮಡುಕಿದರ, ಇಲ್ಲದ ಪೌರುಷ ತೋರಿಸಿದರ ಏನೂ ಲಾಭ ಇಲ್ಲ. ಆಕಿ ಹೇಳಿದ್ಹಾಂಗ ಕೇಳದಿ ಅಂದರ ನಿನಗs ಒಳ್ಳೇದಾಗ್ತದ. ನಾಲ್ಕು ದಿನ ಕಷ್ಟಪಟ್ಟು, ನಾಲ್ಕು ಕಾಸು ಮಾಡಿಕೊಂಡು ಮತ್ತs ಊರಿಗೆ ಬಂದರ, ನಿನ್ನ ಯಾರೂ ತಡೆಯಾ ಣಿಲ್ಲ"—ಗಂಗವ್ವ ತಿಳಿಹೇಳಿದಳು.

"ಪುಲ್ಲಯ್ಯ, ಪಟ್ಟಣದಾಗ ಕೂಲಿ–ನಾಲಿ ಏನಾದರೂ ಮಾಡಿಕೊಂಡು ಹಾಯಾಗಿರ ಬಹುದು—ರುಡ್ಡು ಮಾಡಿಕೊಳ್ಳಬಹುದು. ಲಕ್ಷ್ಮಿ ಬಂದರ, ಲಕ್ಷಣ ಬರ್ತಾವಂತ. ಪಟ್ಟಣಕ್ಕ ಹೋಗಿ ಬದಲಾಗಬ್ಯಾಡ—ನಮ್ಮನ್ನ ಮರೀಬ್ಯಾಡ"—ನರಸಿಂಹ ಹೇಳಿದ.

ನೀಲಮ್ಮಳ ಗುಡಿ ಸಮೀಪಿಸಿದಾಗ, ಗಂಡ–ಹೆಂಡತಿ ಇಬ್ಬರೂ ಗರ್ಭಗುಡಿಯ ವರೆಗೂ ಹೋಗಿ ಸಾಷ್ಟಾಂಗ ನಮಸ್ಕಾರ ಹಾಕಿದರು. ಮಲ್ಲೇಶಿ ಕೂಡ, ದೇವಿಗೆ ನಮಸ್ಕರಿಸಿದ. ಅಲ್ಲಿಂದ ಮುಂದೆ, ಅವರು ರಸ್ತೆಗೆ ಬಂದರು. ಪುಲ್ಲಯ್ಯ, ರಸ್ತೆಯ ಏರಿನ ಮೇಲೆ ನಿಂತು, ಒಮ್ಮೆ ಸುತ್ತಲೂ ನೋಡಿದ. ಹಾಲಿನಿಂದ ತುಂಬಿದ ತೆನೆಗಳು ಕುಯ್ಲಿಗೆ ಸಿದ್ಧವಾಗಿ ತಲೆದೂಗುತ್ತಿದ್ದವು. ಎಲ್ಲೆಡೆಯಲ್ಲೂ ಹರಡಿಕೊಂಡಿದ್ದ ಹಳದಿ ಮತ್ತು ಎಲೆಹಸಿರು ಬಣ್ಣ, ಕಣ್ಣಿಗೆ ಆಹ್ಲಾದಕರವಾಗಿತ್ತು. ರಸ್ತೆಯ ಪಕ್ಕದಲ್ಲಿ ಊರು. ಒಂದೆಡೆ ನೀಲಮ್ಮಳ ಗುಡಿ; ಮತ್ತೊಂದೆಡೆ ಎತ್ತರವಾಗಿ ಬೆಳೆದ ಗಿಡ–ಮರಗಳಿಂದ ತುಂಬಿದ ತೋಟಗಳು. ಊರಿನ ಪಶ್ಚಿಮಕ್ಕೆ ವಂಶಧಾರಾ ನದಿ.—ಇವನ್ನೆಲ್ಲ ನೋಡಿ, ಪುಲ್ಲಯ್ಯನಿಗೆ ಅದುವರೆವಿಗೂ ಇದ್ದ ಧೈರ್ಯ ಉಡುಗಿಹೋಯಿತು. ಆದರೂ,

ಮನಸ್ಸು ಗಟ್ಟಿಮಾಡಿಕೊಂಡ. ಅವರನ್ನು ಕಳುಹಿಸಲು ಬಂದಿದ್ದವರು, ಕಣ್ಣಲ್ಲಿ ನೀರು ತಂದುಕೊಂಡು ಹಿಂದಕ್ಕೆ ಹೊರಟರು. ಕುಡ್ಡ ವೆಂಕಣ್ಣ, ಕುಷ್ಠರೋಗಿಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಅವರು ಉಕ್ಕಿಬಂದ ದುಃಖವನ್ನು ತಡೆದು ಕೊಳ್ಳಲು ಬಾಯಲ್ಲಿ ಬಟ್ಟೆ ಒತ್ತಿಕೊಂಡು ಬಿಕ್ಕಳಿಸುತ್ತಾ ನಿಂತರು.

ಪುಲ್ಲಯ್ಯನಿಗೆ ಮುಂದೆ ಹೆಜ್ಜೆ ಹಾಕಲು ಆಗಲಿಲ್ಲ. ರೈಲು ನಿಲ್ದಾಣ, ಇನ್ನೂ ಏಳು ಮೈಲು ದೂರದಲ್ಲಿತ್ತು. ನಡೆಯಲೇಬೇಕು. ಆದರೆ, ಆಗಲೇ ಕಾಲು ಎಳೆಯಲು ಪ್ರಾರಂಭವಾಗಿತ್ತು. ಅದರಲ್ಲಿ ಸ್ವಗ್ರಾಮದ ಅಭಿಮಾನ, ಭಾವ–ಬಂಧನಗಳು ಅವನ ಹೃದಯವನ್ನು ಹಿಡಿ, ಅವನನ್ನು ನಿಶ್ಶಕ್ತನನ್ನಾಗಿ ಮಾಡಿದ್ದವು. "ಏನೇ ಆಗಲಿ, ಇದು ನನ್ನ ಊರು. ನನ್ನ ಈ ಅಪ್ಪಟ ಚಿನ್ನ. ಚಿನ್ನದಂತಹ ಈ ಊರನ್ನು ಬಿಟ್ಟು ಹೋಗು ತ್ತಿದ್ದೇನೆ...... ಮತ್ತೆ ಈ ಊರಿಗೆ ಬರಲಾರೆ...... ಇಲ್ಲ...... ಇಲ್ಲ...... ಉಪವಾಸ ಬಿದ್ದರೂ ಚಿಂತೆ ಇಲ್ಲ. ಇದೇ ಊರಿನಲ್ಲಿ ಸಾಯ್ತೀನಿ...... ಪಟ್ಟಣಕ್ಕೆ ಹೋಗಾಣೆಲ್ಲ...... ನನ್ನ ಊರು...... ನನ್ನ ತಾಯಿ...... ನಾನು ಇಲ್ಲೇ ಇರ್ತೀನಿ ......ಇರಬೇಕು"—ಎಂದೆಲ್ಲ ಮನಸ್ಸಿನಲ್ಲಿ ಅಂದುಕೊಳ್ಳುತ್ತಲೇ ಮುಂದೆ ಮುಂದೆ ಹೆಜ್ಜೆ ಇಡುತ್ತಿದ್ದ ಪುಲ್ಲಯ್ಯ. ಅವನ ಮನಸ್ಸಿನಲ್ಲಿ ವೇದನೆ, ಕಣ್ಣೀರಾಗಿ ಹೊರಬಂತು. ಹೃದಯ ಭಾರವಾಯಿತು. ರಸ್ತೆಯ ಪಕ್ಕದಲ್ಲಿನ ಕಲ್ಲಿನ ಮೇಲೆ ನಿಂತು ಹಿಂದಿರುಗಿ ನೋಡಿದ...... ನೀಲಿ ಮಾತ್ರ ಮೌನವಾಗಿ, ತಲೆ ಕೆಳಗೆ ಹಾಕಿಕೊಂಡು ಹೆಜ್ಜೆಹಾಕು ತ್ತಿದ್ದಳು. ಅವಳ ಆ ಗಂಭೀರವಾದ ಮುಖ ನೋಡಿದಾಗ, ಪುಲ್ಲಯ್ಯನಿಗೆ ಮೊದಲು ನಾಚಿಕೆಯಾಯಿತು. ಆ ಮೇಲೆ ಅವಳ ಬಗ್ಗೆ ಕನಿಕರ ಮೂಡಿತು.

ಪುಲ್ಲಯ್ಯ ಏನೋ ಹೇಳಬೇಕೆಂದುಕೊಂಡ. ಆದರೆ, ಬಾಯಿಂದ ಮಾತೇ ಹೊರಡ ಲಿಲ್ಲ. ನೀಲಿ, ಮೌನವಾಗಿ, ಶಾಂತವಾಗಿ ತಲೆ ಎತ್ತಿ ಹೆಜ್ಜೆ ಇಡುತ್ತಿರುವುದನ್ನು ನೋಡಿ, ಪುಲ್ಲಯ್ಯನಿಗೂ ಸ್ವಲ್ಪ ಧೈರ್ಯ ಬಂತು. ಮಲ್ಲೇಶಿ, ರಸ್ತೆಯ ಪಕ್ಕದಲ್ಲಿ, ಸಿಪಾಯಿ ಯಂತೆ ಠೀವಿಯಿಂದ ಹೆಜ್ಜೆ ಹಾಕುತ್ತಿದ್ದ. ಅತ್ತನಿಂದ ಕುರಿಗಳ ಒಂದು ಹಿಂಡು ಬಂತು. ಕುರುಬರವನು, "ಯಾರಪ್ಪಾ, ಎತ್ಲಾಗ ಹೊಂಟೀರಿ?"—ಎಂದು ಕೇಳಿದಾಗ, ಮಲ್ಲೇಶಿ, "ಪಟ್ಟಣಕ್ಕ ಹೊಂಟೀವಿ"—ಎಂದು ಸಂತೋಷದಿಂದ ಕೂಗಿ ಹೇಳಿದ.

ಕುರಿಗಳ ಮಂದೆ ಊರಿನತ್ತ ಸಾಗಿತು. ಅವರು ಊರಿನಿಂದ ದೂರವಾಗಿ, ಭಾರವಾದ ಹೃದಯದಿಂದ, ಆಶೆ ತುಂಬಿದ ಕಣ್ಣುಗಳಿಂದ ಮುಂದಡಿ ಇಟ್ಟರು.

ಬೆವರು ಸುರಿಸುತ್ತಾ ಸ್ಟೇಷನ್‌ಅನ್ನು ತಲುಪಿದ ಪುಲ್ಲಯ್ಯನ ಕುಟುಂಬ, ಒಳಹೋಗಿ ಒಂದು ಮೂಲೆಯಲ್ಲಿ ಕುಸಿದು ಕುಳಿತಿತು. ಪುಲ್ಲಯ್ಯ ಸ್ವಲ್ಪ ದಣಿವಾರಿಸಿಕೊಂಡು ಮೇಲೆದ್ದ. ಮಲ್ಲೇಶಿ ಕೂಡ ತಂದೆಯನ್ನು ಅನುಸರಿಸಿದ. ಒಂದು ರೂಪಾಯಿ ಮುರಿಸಿ, ನಾಲ್ಕು ಬಾಳೆಹಣ್ಣು, ಚೆಕ್ಕಲಿ ಮುಂತಾದ ತಿಂಡಿಗಳನ್ನು ಕೊಂಡು ತಂದ ಪುಲ್ಲಯ್ಯ. ಅದನ್ನೇ ತಿಂದು ನೀರು ಕುಡಿದರು. ಹಾಗೆ ಕುಳಿತಿರುವಾಗಲೇ ಗೂಡ್ಸ್ ಗಾಡಿಯೊಂದು ಬಂತು. ಮಲ್ಲೇಶಿ, ಸಂತೋಷದಿಂದ ಕುಣಿದಾಡಿದ. ಗಾಡಿಯನ್ನು ನೋಡಿ, ತಂದೆಗೆ ಸಾವಿರ ಪ್ರಶ್ನೆಗಳನ್ನು ಹಾಕಿದ. ಅವನಿಂದ ಸಮಾಧಾನ ಪಡೆದು ಮುಖ ಹಿಗ್ಗಿಸಿಕೊಂಡು ಕುಳಿತ. ಮಧ್ಯಾಹ್ನ ಸುಮಾರು ಮೂರು ಗಂಟೆ ಹತ್ತು ನಿಮಿಷಕ್ಕೆ ರೈಲು ಬಂತು. ಎಲ್ಲಾ ಡಬ್ಬಿಗಳು ತುಂಬಿಹೋಗಿದ್ದವು. ಕಾಲಿಡಲೂ ಸಹ ಸ್ಥಳವಿರಲಿಲ್ಲ. ಪುಲ್ಲಯ್ಯ, ಒಂದು ಕೈಯಲ್ಲಿ ಮಲ್ಲೇಶಿಯನ್ನು ಎತ್ತಿಕೊಂಡು, ಇನ್ನೊಂದು ಕೈಯಲ್ಲಿ ಸಾಮಾನು ಗಳನ್ನು ಹಿಡಿದುಕೊಂಡಿದ್ದ. ನೀಲಿ ಒಂದು ಕೈಯಲ್ಲಿ ಮಗಳನ್ನು ಎತ್ತಿಕೊಂಡು, ಇನ್ನೊಂದು ಕೈಯಲ್ಲಿ ಸಣ್ಣಪುಟ್ಟ ಗಂಟುಗಳನ್ನು ಹಿಡಿದುಕೊಂಡು, ಗಂಡನ ಹಿಂದೆ ನಿಂತಿದ್ದಳು. ಗಂಡ ಮುಂದೆ ಹೊರಟಾಗ ಅವಳೂ ಹೊರಟಳು. ರೈಲಿನ ಒಂದು ತುದಿಯಿಂದ ಮತ್ತೊಂದು ತುದಿಯ ವರೆಗೆ ಹೋದರೂ, ಎಲ್ಲೂ ಜಾಗ ಸಿಗಲಿಲ್ಲ. ಮೇಲೇರಲು ಪ್ರಯತ್ನಿಸಿದಂತೆಲ್ಲಾ ಡಬ್ಬಿಯ ಒಳಗಿನ ಜನರು ಅವರನ್ನು ಕೆಳಕ್ಕೆ ದಬ್ಬಿಬಿಡುತ್ತಿದ್ದರು. ಒಂದು ಡಬ್ಬಿ ಖಾಲಿ ಇತ್ತಾದರೂ, ಅದರಲ್ಲಿ ಕುಳಿತಿದ್ದ ಟೊಣಪ ನೊಬ್ಬ ಮುಂದೆ ಬಂದು, "ಇದು ದೊಡ್ಡವರು ಕುಳಿತುಕೊಳ್ಳೊ ಡಬ್ಬಿ...... ಇವರಾಗ ಕಾಲಿಟ್ಟರ ಜೈಲಿನಾಗ ಹಾಕ್ತಾರ"—ಎಂದು ಬೆದರಿಸಿದ. ಇನ್ನೇನು ರೈಲು ಹೊರಡು ತ್ತದೆ ಎನ್ನುವಾಗ, ಕೊನೆಯ ಡಬ್ಬಿಯಲ್ಲಿ ಹೇಗೊ ಕಷ್ಟಪಟ್ಟು ಒಳಗೆ ತೂರಿಕೊಂಡರು. ಟಿಕೆಟಿಲ್ಲದೆ ಪ್ರಯಾಣ ಮಾಡುವವರಿಬ್ಬರು ಎಲ್ಲಿಂದಲೊ ಓಡಿಬಂದು ಅದೇ ಡಬ್ಬಿ ಯನ್ನು ಏರಿದರು. ಡಬ್ಬಿಯ ತುಂಬ ಜನರಿದ್ದರು. ಕೆಳಗೆ ಕುಳಿತುಕೊಳ್ಳಲೂ ಸಹ ಸ್ಥಳವಿರಲಿಲ್ಲ. ಮಲ್ಲೇಶಿಯನ್ನು ಸಾಮಾನುಗಳ ಗಂಟಿನ ಮೇಲೆ ಕೂಡಿಸಿ, ಪುಲ್ಲಯ್ಯ ಮತ್ತು ನೀಲಿ ನಿಂತೆ ಪ್ರಯಾಣ ಮಾಡಲು ನಿರ್ಧರಿಸಿದರು. ರೈಲು ಮುಂದೆ ಮುಂದೆ ಓಡುತ್ತಲೇ ಇತ್ತು.

ಮಲ್ಲೇಶಿಯಂತೂ ಕುತೂಹಲದಿಂದ ನೋಡುತ್ತಿದ್ದ. ತಾನು ಕುಳಿತ ಮೂಟೆಯನ್ನೆ ಮದ್ದಲೆ ಮಾಡಿಕೊಂಡು ಬಾರಿಸತೊಡಗಿದ. ರೈಲು, ನಾಲ್ಕೈದು ಸ್ಟೇಷನ್‌ಗಳನ್ನು ದಾಟುವ ವೇಳೆಗೆ, ಡಬ್ಬಿಯಲ್ಲಿನ ಗದ್ದಲ ಸ್ವಲ್ಪ ಕಡಿಮೆಯಾಯಿತು. ಪುಲ್ಲಯ್ಯ ಮತ್ತು ನೀಲಿ, ನಿಂತ ಜಾಗದಲ್ಲೆ ಸ್ವಲ್ಪ ಸ್ಥಳ ಮಾಡಿಕೊಂಡು ಕುಳಿತರು. ಮಲ್ಲೇಶಿ ರೈಲು ಕೂಗುಹಾಕಿದಾಗ ತಾನೂ ಶಿಳ್ಳೆಹಾಕುತ್ತಿದ್ದ. ಪುಲ್ಲಯ್ಯ ತನ್ನ ಬದುಕು ನಡೆದುಬಂದ

ದಾರಿಯನ್ನು ನೆನೆಸಿಕೊಂಡ. ತನ್ನ ಮನೆ, ತನ್ನ ಹೊಲ, ತಾನು...... ಹೆಂಡತಿ...... ಮಕ್ಕಳು...... ವೆಂಕಣ್ಣ...... ರಾಜಣ್ಣ...... ಗಂಗವ್ವ...... ಎಲ್ಲರೂ ಆವನ ಸ್ಮೃತಿಪಟಲದ ಮೇಲೆ ಸುಳಿದುಹೋದರು. ಹೆಂಡತಿಯ ಜೊತೆಗೆ ತನ್ನ ಮನೆ ಸೇರಿ ಸ್ವರ್ಗ ಕಂಡ ಮುದುಕಿ, ರಾಮದಾಸು, ನೀಲಮ್ಮದೇವಿ, ಆ ದೇವಿಯ ಗುಡಿ—ಎಲ್ಲ ವನೂ ಅವನು ಸ್ಮರಿಸಿದ. ಸತ್ತರೆ, ಆ ಊರಿನ ಮಣ್ಣಿನಲ್ಲೆ ಮಣ್ಣಾಗಿ ಬೆರೆತುಹೋಗ ಬೇಕೆಂದು ನಿರ್ಧರಿಸಿದ. ಮಲ್ಲೇಶಿ, ಹಿಂದಕ್ಕೆ ಸರಿದುಹೋಗುತ್ತಿದ್ದ ಪ್ರಕೃತಿಯನ್ನು ನೋಡಿ, ಉತ್ಸಾಹದಿಂದ, "ಅಪ್ಪಾ, ನೋಡು, ಈ ಎಲ್ಲ ಗಿಡಗಳು ನಮ್ಮ ಊರಿನ ಕಡೆ ಹೊಂಟಾವ"—ಎಂದು ಕೂಗಿದ.

ಆಗಲೇ, ಪುಲ್ಲಯ್ಯನಿಗೆ ತಾನು ಊರು ಬಿಟ್ಟು ಪಟ್ಟಣಕ್ಕೆ ಹೊರಟಿದ್ದು ಮನೋಜ್ಞ ವಾಯಿತು. ಅವನ ಯೋಚನೆ ಈಗ ಪಟ್ಟಣದತ್ತ ಹರಿಯಿತು. ಪಟ್ಟಣದಲ್ಲಿ ಮೈ ಬಗ್ಗಿಸಿ ದುಡಿದಲ್ಲಿ ಸುಖವಾಗಿ ಬಾಳಬಹುದೆಂದು ಊಹಿಸಿದ.

ರೈಲು ವಾಲ್ಟೈರು ತಲುಪಿದಾಗ, ರಾತ್ರಿ ಎಂಟೂವರೆ ಗಂಟೆಯಾಗಿತ್ತು. ಕೈಯಲ್ಲಿ ಪುಟ್ಟ ಕೋಲನ್ನು ಹಿಡಿದುಕೊಂಡಿದ್ದ ಚೆಕಿಂಗ್ ಇನ್‌ಸ್ಪೆಕ್ಟರರು, ಟಿಕೆಟ್ ಕೇಳುತ್ತಾ ಬಂದರು. ಪುಲ್ಲಯ್ಯ ಮತ್ತು ನೀಲಿ, ಮಕ್ಕಳನ್ನು ಕರೆದುಕೊಂಡು ರೈಲು ಇಳಿದು ಹೊರಟರು. ಟಿಕೆಟ್ ಕಲೆಕ್ಟರ್ ಅವರನ್ನು ತಡೆದು, "ಗಂಟನ್ಯಾಗ ಅಕ್ಕಿ ಏನಾದರೂ ತಂದಿರೇನು?"—ಎಂದು ಕೇಳಿದ. ಪುಲ್ಲಯ್ಯ ಯಾವ ಮಾತೂ ಆಡಲಿಲ್ಲ. ಆದರೆ ನೀಲಿ, "ಸಣ್ಣಸಣ್ಣ ಮಕ್ಕಳವ, ಹೊತ್ತುಗೊತ್ತಿಗಿರಲಿ ಅಂತ ಸ್ವಲ್ಪ ಅಕ್ಕಿ ತಂದಿವ್ರಿ ಧಣೇರ"—ಎಂದು ಸತ್ಯವನ್ನೆ ನುಡಿದಳು. "ಸರಿ ಹಾಗಾದರ, ನೀವು ಇಲ್ಲೆ ಇರ್ರಿ. ಪೋಲೀಸರು ಬಂದು ನಿಮ್ಮನ್ನ ವಿಚಾರಿಸಿಕೊತಾರ"—ಎಂದ ಆ ಸರ್ಕಾರಿ ನೌಕರ. ಇದನ್ನು ಕೇಳಿ ನೀಲಿಗೆ ಭಯವಾಯಿತು. ಅವರ ಜೊತೆ ರೈಲಿನಲ್ಲಿ ಬಂದ ಕೋಟುಧಾರಿ ವ್ಯಕ್ತಿಯೊಬ್ಬ ಕಬ್ಬಿಣದ ಪೆಟ್ಟಿಗೆಯ ತುಂಬ ಅಕ್ಕಿ ತುಂಬಿಕೊಂಡು ಬಂದದ್ದು ಅವಳು ನೋಡಿದ್ದಳು. ಆದರೆ, ಅವನನ್ನು ಯಾರೂ ತಡೆದಿರಲಿಲ್ಲ. ಯಾರೂ ಏನೂ ಕೇಳಿರ ಲಿಲ್ಲ. ತಮ್ಮನ್ನು ಮಾತ್ರ ತಡೆಹಿಡಿದದ್ದನ್ನು ನೋಡಿ, ನೀಲಿಗೆ ತುಂಬ ಆಶ್ಚರ್ಯ ವಾಯಿತು. ಆದರೊಡನೆ, ದೊಡ್ಡೂರು—ಪಟ್ಟಣ ಅಂದರೆ ಎಂತಹುದೆಂಬುದು ಅವಳಿಗೆ ಆಗಲೇ ತಿಳಿದುಹೋಯಿತು. ಟಿಕೆಟ್ ಕಲೆಕ್ಟರ್ ಅವರಿಂದ ನಾಲ್ಕು ರೂಪಾಯಿ ಕಿತ್ತುಕೊಂಡು ಅವರನ್ನು ಬಿಟ್ಟುಕೊಟ್ಟ. ಪುಲ್ಲಯ್ಯನಿಗೆ ಇದು ಸರಿ ಕಾಣಲಿಲ್ಲ. ಅವನು ಏನನ್ನೊ ಹೇಳಲು ಬಾಯಿ ತೆರೆದಾಗ, ನೀಲಿ ನಡುವೆಯೆ ಮಾತನಾಡಿ, "ಆತ, ನಾವು ಜೈಲಿನ್ಯಾಗ ಬೀಳೋದನ್ನ ತಪ್ಪಿಸ್ಯಾನ ಅಂದ ಮ್ಯಾಲೆ ನಾಲ್ಕು ರೂಪಾಯಿ ಇಸಗೊಂಡರ ಏನಾತೇಳ್ರಿ"—ಎಂದು ಅವನ ಬಾಯಿ ಮುಚ್ಚಿಸಿದಳು.

ಅವರು ನಿಲ್ದಾಣದಿಂದ ಹೊರ ಬಂದು, ಪುಲ್ಲಯ್ಯ ಗಂಗವ್ವನ ಜೊತೆ ಬಂದಾಗ ಇಳಿದುಕೊಂಡಿದ್ದ ಛತ್ರದ ಕಡೆಗೆ ಕಾಲುಹಾಕಿದರು. ಮಲ್ಲೇಶಿ, ರಸ್ತೆಯಲ್ಲಿನ ಜಗಜಗಿ

ಸುವ ದೀಪಗಳನ್ನು, ವೇಗವಾಗಿ ಹೋಗುತ್ತಿದ್ದ ಕಾರು, ಬಸ್ಸು, ರಿಕ್ಷಾಗಳನ್ನು ಕುತೂಹಲ ದಿಂದ ನೋಡುತ್ತಿದ್ದ. ದೊಡ್ಡ ಬಂಗಲೆಗಳ ಮುಂದೆ ಬಾಯಿಬಿಟ್ಟುಕೊಂಡು ನಿಂತೇಬಿಟ್ಟ. ಒಂದೆಡೆ ಗ್ರಾಮಫೋನ್‌ನಿಂದ ಬರುತ್ತಿದ್ದ ಸಿನೆಮಾ ಹಾಡನ್ನು ಕೇಳುತ್ತಾ ಅಲ್ಲಿಯೇ ನಿಂತುಬಿಟ್ಟ. ಕೊನೆಗೆ ಪುಲ್ಲಯ್ಯನೆ ಬಂದು ಅವನನ್ನು ಎಳೆದುಕೊಂಡು ಹೋಗ ಬೇಕಾಯಿತು.

"ಅಪ್ಪಾ, ಅಷ್ಟು ದೊಡ್ಡದಾಗಿ ಹಾಡತಾನಲ್ಲ...... ಆತನ ಗಂಟಲು ದೊಡ್ಡದಿರ ಬೇಕಲ್ಲ"—ಮಲ್ಲೇಶಿ ಕೇಳಿದ.

"ಹಾಡೋದು ಮನುಷ್ಯನಲ್ಲ, ಅದು ಫೋನೊಗ್ರಾಫು......"

"ಫೊನೊಗ್ರಾಫು—ಅದು ಹೆಂಗ ಇರ್ತದ?"

"ಪೆಟ್ಟಿಗಿ ಹಾಂಗ ಇರ್ತದೇಳು."

"ಪೆಟ್ಟಿಗಿ ಹಾಡ್ತದೇನು......? ಹಾಂಗಿದ್ದರ ನನಗೂ ಅಂಥಾದೊಂದು ಪೆಟ್ಟಿಗಿ ಕೊಡಸ್ತೀಯಾ?" ಮಲ್ಲೇಶಿ ಅಂಗಲಾಚಿದ.

"ಆಗಲಿ, ಕೈಗೆ ದುಡ್ಡು ಬಂದರ ಕೊಡಸ್ತೀನೇಳು."

ಪುಲ್ಲಯ್ಯ, ಮಗನನ್ನು ಸಮಾಧಾನ ಮಾಡುತ್ತಾ, ಅವನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುತ್ತಾ ಹೆಜ್ಜೆಹಾಕುತ್ತಿದ್ದ. ಎದುರಿನಿಂದ, ಮಿಠಾಯಿಗಳಿಂದ ತುಂಬಿದ ಒಂದು ಬಂಡಿ ಬಂದಾಗ, ಮಲ್ಲೇಶಿ ಆಸೆಗಣ್ಣಿನಿಂದ ಅವನ್ನು ನೋಡುತ್ತಾ ನಿಂತ. ಪುಲ್ಲಯ್ಯ ನಾಲ್ಕಾಣೆ ಕೊಟ್ಟು ಮಿಠಾಯಿ ಕೊಂಡಾಗಲೇ ಅವನು ಮುನ್ನಡೆದ. ದಾರಿ ಯಲ್ಲಿ, ಅಲ್ಲಲ್ಲಿ, ಮನೆಗಳ ಮುಂದೆ, ಚಲ್ಲಣ–ಅಂಗಿಗಳನ್ನೂ ಗೌನುಗಳನ್ನೂ ಹಾಕಿ ಕೊಂಡು ಹುಡುಗರು ಆಡುತ್ತಿದ್ದರು. ಆ ಹುಡುಗರಿಗಿದ್ದಂತೆ ತನಗೂ ಒಂದು ಚಲ್ಲಣ ವಿದ್ದಲ್ಲಿ ಎಷ್ಟು ಚೆನ್ನಾಗಿರುತ್ತಿತ್ತು ಎಂದುಕೊಂಡ ಮಲ್ಲೇಶಿ. "ನನಗ ಅಂತಹ ಚಲ್ಲಣ–ಅಂಗಿ ಮತ್ತ ತಂಗಿಗೆ ಅಂತಹ ಅಂಗಿ ಕೊಡಸ್ತೀಯಾ?"—ಎಂದು ಬೊಟ್ಟು ಮಾಡಿ ದಾರಿಯಲ್ಲಿ ಹೋಗುತ್ತಿದ್ದ ಹುಡುಗರನ್ನು ತೋರಿಸಿದ.

"ಆಗಲಿ–ಆಗಲಿ"—ಎನ್ನುತ್ತ ಪುಲ್ಲಯ್ಯ ಮುನ್ನಡೆದ.

ಟರ್ನರ್ ಛತ್ರದಲ್ಲಿ ಕಾಲು ಇಟ್ಟ ಕೂಡಲೇ, ಎಲ್ಲಿಂದಲೊ ಒಂದು ನಾಯಿಮರಿ ಬಂತು. ಮಲ್ಲೇಶಿ ಅದನ್ನು "ಚುಚ್ಚು......ಚುಚ್ಚು"—ಎಂದು ಕರೆದು, ಕೈಯಲ್ಲಿದ್ದ ಪಕೋಡಿಯ ಒಂದು ತುಂಡನ್ನು ಅದಕ್ಕೆ ಹಾಕಿದ. ಅದರ ರುಚಿ ಕಂಡ ನಾಯಿ, ಬಾಲ ಆಡಿಸುತ್ತಾ ಅವನ ಹಿಂದೆ ಹಿಂದೆ ಹೊರಟಿತು. ಮಲ್ಲೇಶಿ ಕೈಯಲ್ಲಿದ್ದ ಪಕೋಡಿಗಳಲ್ಲಿ ಒಂದು ತುಂಡು ತಾನು ತಿಂದು, ಒಂದು ತುಂಡು ಅದಕ್ಕೆ ಕೊಡುತ್ತಿದ್ದ. ಹಾಗೆಯೇ ಛತ್ರವನ್ನು ಸುತ್ತಾಡಿ ಬಂದ. ಈ ಗಡಿಬಿಡಿಯಲ್ಲಿ, ಅವನು ತಂದೆಯನ್ನು ಪ್ರಶ್ನೆಗಳಿಂದ ಪೀಡಿಸುವುದನ್ನು ನಿಲ್ಲಿಸಿದ್ದ.

ಛತ್ರದಲ್ಲಿ ಸಿರಿವಂತರಿಗಾಗಿ ಮತ್ತು ಮಧ್ಯಮ ವರ್ಗದವರಿಗಾಗಿ ಪ್ರತ್ಯೇಕವಾದ

ಕೊಠಡಿಗಳಿದ್ದವು. ದುಡ್ಡು ಕೊಡಲು ಸಾಮರ್ಥ್ಯವಿಲ್ಲದವರಿಗಾಗಿ, ಛತ್ರದ ಒಂದು ಮೂಲೆಯಲ್ಲಿ, ಒಂದು ತಾಳೆಗರಿಯ ಹಂದರವನ್ನು ಹಾಕಲಾಗಿತ್ತು. ಪುಲ್ಲಯ್ಯ ಆ ಹಂದರದ ಒಂದು ಮೂಲೆಯಲ್ಲಿ ತನ್ನ ಸಂಸಾರ ಹೂಡಿದ. ಸಿಂಹಾಚಲದ ದೇವರ ದರ್ಶನ ಪಡೆದು, ಊರು ನೋಡಲು ಬಂದ ಅನೇಕರು, ಅಲ್ಲಿಯೇ ಬೀಡುಬಿಟ್ಟಿದ್ದರು. ಹಂದರದ ಒಂದು ಮೂಲೆಯಲ್ಲಿ ಅಡಿಗೆಯ ಸಿದ್ಧತೆ ನಡೆದಿತ್ತು. ಇನ್ನೊಂದೆಡೆ ಕೈಕೂಸುಗಳು ದೊಡ್ಡ ಧ್ವನಿಯಲ್ಲಿ ಅಳುತ್ತಿದ್ದವು. ಹರಕೆಯನ್ನು ಈಡೇರಿಸಿ ಕೂದಲು ಕೊಟ್ಟು ಬಂದಿದ್ದ ಇಬ್ಬರು ಹೆಂಗಸರು, ನಾಲ್ವರು ಗಂಡಸರೊಡನೆ ವಾದಕ್ಕಿಳಿದಿದ್ದರು. ಹಂದರದ ಮತ್ತೊಂದು ಪಕ್ಕದಲ್ಲಿ ಕುಳಿತಿದ್ದ ಮುದಿಯನೊಬ್ಬ, ಕೈಯಲ್ಲಿದ್ದ ಕೋಲಿನಿಂದ ನಾಯಿಗಳನ್ನು ಓಡಿಸುವ ಪ್ರಯತ್ನ ನಡೆಸಿದ್ದ. ಹಂದರದ ಸುತ್ತಲೂ, ಉಗುಳು, ಎಂಜಲು, ಹೊಲಸು ತುಂಬಿತ್ತು.

ಪುಲ್ಲಯ್ಯ ಹೋಗಿ ಸೀಮೆ ಎಣ್ಣೆ ತಂದ. ಅಲ್ಲಲ್ಲಿ ಬಿದ್ದಿದ್ದ ಒಣ ಕಟ್ಟಿಗೆಗಳನ್ನು ಆರಿಸಿಕೊಂಡು ಬಂದು ನೀಲಿಯ ಮುಂದೆ ಹಾಕಿದ. ನೀಲಿ, ಮೂರು ಕಲ್ಲುಗಳನ್ನು ಜೋಡಿಸಿ, ಅಡಿಗೆಗೆ ನಿಂತಳು. ಮಲ್ಲೇಶಿ, ತಂಗಿಯನ್ನು ಮುದ್ದಾಡುತ್ತಾ, ನಾಯಿಯೊಡನೆ ಆಡುತ್ತಾ ಕುಳಿತಿದ್ದ.

ಇವರು ಊಟ ಮಾಡಿ ನೀರು ಕುಡಿದು ಕುಳಿತರೂ, ಹಂದರದಲ್ಲಿನ ಕೋಲಾಹಲ ಕಡಿಮೆಯಾಗಿರಲಿಲ್ಲ. ಇಬ್ಬರು ಹೆಂಗಳೆಯರು, ಯಾವುದೊ ವಿಷಯದ ಬಗ್ಗೆ ಕಚ್ಚಾಡುತ್ತಿದ್ದರು. ಇಬ್ಬರು ಹೆಂಡಂದಿರನ್ನು ಮಾಡಿಕೊಂಡಿದ್ದ ಮೀಸೆ ಹೊತ್ತ ಗಂಡಸು, ತನ್ನ ಮರ್ಯಾದೆ ಉಳಿಸುವಂತೆ ಅವರನ್ನು ಬೇಡಿಕೊಳ್ಳುತ್ತಿದ್ದ. ಇನ್ನೊಂದೆಡೆ, ಸ್ವಲ್ಪ ಹೆಚ್ಚಿಗೆ ಅನ್ನ ಹಾಕು—ಎಂದು ಕೇಳಿದ್ದಕ್ಕಾಗಿ, ಸೊಸೆ ಮುಖ ತಿವಿದಳೆಂದು, ಸತ್ತ ತನ್ನ ಮಗಳನ್ನು ನೆನೆಸಿಕೊಂಡು ಒಬ್ಬ ಮುದುಕ ದುಃಖಿಸುತ್ತಿದ್ದ. ಕೆಲವರು, ಅದೇ ಒಲೆ ಹೊತ್ತಿಸಿ, ಅಡಿಗೆ ಮಾಡುವ ಸಿದ್ಧತೆ ನಡೆಸಿದ್ದರು. ಒಬ್ಬಳು, ಮೀನುಗಳನ್ನು ಕುಯ್ದು ಪಲ್ಯ ಮಾಡುವ ತವಕದಲ್ಲಿದ್ದಳು. ಚಿಕಿತ್ಸೆಗಾಗಿ ಬಂದ ರೋಗಿಯೊಬ್ಬನು, ಆಗಲೋ—ಈಗಲೋ ಸಾಯುವವನಂತೆ ಹೊಟ್ಟೆಹಿಡಿದುಕೊಂಡು ಬೊಬ್ಬೆ ಇಡುತ್ತಿದ್ದ. ಯಾವುದೊ ಮಗು, ಇದಾವುದರ ಪರಿವೆಯೂ ಇಲ್ಲದೆ, ತನಗೆ ಬಂದ ಹಾಡುಗಳನ್ನು ದೊಡ್ಡದಾಗಿ ಹೇಳುತ್ತಿತ್ತು. ಹರೆಯದವನೊಬ್ಬ, ಮುಖಪರಿಚಯವೂ ಸಹ ಇಲ್ಲದ ಹರೆಯದ ಹೆಣ್ಣೊಂದರೊಡನೆ, ದೂರದಿಂದಲೇ ಸರಸಾಟ ನಡೆಸಿದ್ದ. ಅವರ ಈ ಸರಸಾಟ ನೋಡಿ, ಮತ್ಸರದಿಂದ–ಕೋಪದಿಂದ ಕೆಂಡವಾಗಿದ್ದ ಅವಳ ಜೊತೆಯವನು, ಅವಕಾಶ ಸಿಕ್ಕಲ್ಲಿ ಅಪರಿಚಿತ ಯುವಕನಿಗೆ ಬುದ್ಧಿಕಲಿಸಲು ಕಾದಿದ್ದ. ಏನೂ ಅರಿಯದ ಹಸುಳೆಯಂತೆ ಕಾಣುತ್ತಿದ್ದವನೊಬ್ಬ, ನಲ್ಲಿಯ ಪಕ್ಕದಲ್ಲಿ ಕುಳಿತು, ನೀರಿಗೆ ಬಂದು–ಹೋಗುತ್ತಿದ್ದ ಹೆಂಗಸರ ಕೊರಳುಗಳನ್ನೆ ನೋಡುತ್ತಿದ್ದ. ಎಂಜಲು ಅನ್ನಕ್ಕಾಗಿ, ಎರಡು ನಾಯಿಗಳು ಕಚ್ಚಾಡುತ್ತಿದ್ದವು. ತನ್ನದೇ ಆದ ಆ ಲೋಕದಲ್ಲಿ

ಪದಾರ್ಪಣ ಮಾಡಿದ್ದ ಪುಲ್ಲಯ್ಯ ಮತ್ತು ನೀಲಿ, ಆಯಾಸದಿಂದ ಮಲಗಿದರು. ನಡುವೆ ಮಕ್ಕಳನ್ನು ಮಲಗಿಸಿ, ಅತ್ತ ನೀಲಿ, ಇತ್ತ ಪುಲ್ಲಯ್ಯ ಮಲಗಿದ್ದರು. ಪುಲ್ಲಯ್ಯ, ಸಾಮಾನುಗಳ ಗಂಟನ್ನು ತನ್ನ ತಲೆಯ ಬಳಿ ಇಟ್ಟುಕೊಂಡಿದ್ದ. ಮಲ್ಲೇಶಿ ಹಾಕಿದ ಅನ್ನ ತಿಂದ ನಾಯಿ ಅವನ ಕಾಲಬಳಿಯೆ ಮಲಗಿತ್ತು. ನಡುರಾತ್ರಿ ಕಳೆದ ಮೇಲೆ ಸ್ವಲ್ಪ ಚಳಿಯಾಗತೊಡಗಿತು. ಪುಲ್ಲಯ್ಯ, ಹೊದ್ದುಕೊಳ್ಳಲು ಪಂಚೆ ತೆಗೆದುಕೊಳ್ಳಬೇಕೆಂದು ಎದ್ದ. ನೀಲಿ ಮಾತ್ರ, ಸೀರೆಯ ಸೆರಗನ್ನೆ ಮಕ್ಕಳಿಗೆ ಹೊದಿಸಿ, ತಾನೂ ಹೊದ್ದು ಮುದುಡಿಕೊಂಡು ಮಲಗಿದ್ದಳು.

ನಿದ್ರಾದೇವಿಗೆ ಅಧೀನರಾಗಿ ಎಲ್ಲರೂ ಬಿದ್ದುಕೊಂಡಿದ್ದರು. ರಸ್ತೆಯಲ್ಲಿನ ದೀಪದ ಬೆಳಕು, ಹಂದರದ ಒಂದು ಮೂಲೆಯಲ್ಲಿ ಬಿದ್ದು, ಅಲ್ಲಿ ಸಾಕಷ್ಟು ಬೆಳಕಾಗಿತ್ತು. "ಅಪ್ಪಾ, ಯಾರಾದರೂ ಎಚ್ಚರಿದ್ದೀರೇನು?"—ಯಾರೊ ಕೂಗಿದ್ದು ಪುಲ್ಲಯ್ಯನಿಗೆ ಕೇಳಿಸಿತು. ಯಾರಿರಬಹುದೆಂದು, ಪುಲ್ಲಯ್ಯ ಮಂದವಾದ ಆ ಬೆಳಕಿನಲ್ಲಿ ಸುತ್ತಲೂ ದೃಷ್ಟಿ ಹರಿಸಿದ. ಯಾರೊ ಮುದುಕ ಎದ್ದು ಕುಳಿತಿದ್ದ. ಆ ಕತ್ತಲಿನಲ್ಲಿ, ಆತ ದಾಸಯ್ಯ ನಂತೆಯೆ ಕಂಡ. ರಾಮದಾಸು, ತನಗೆ ಮುಂದಿನ ದಾರಿ ತೋರುವುದಕ್ಕಾಗಿ ಈ ಮುದಿಯನ ರೂಪದಲ್ಲಿ ಬಂದಿರಬಹುದೇನೊ—ಎಂದು ಪುಲ್ಲಯ್ಯ ಭ್ರಮೆಪಟ್ಟ. ಈ ವಿಚಾರ ಬಂದೊಡನೆ ಪುಲ್ಲಯ್ಯನ ರೋಮರೋಮವು ಪುಳಕಿತಗೊಂಡಿತು. ಪುಲ್ಲಯ್ಯ, ವಿನಯದಿಂದ ಆ ಮುದುಕನ ಬಳಿ ಹೋದ. ಆ ಮುದುಕ, ಪುಲ್ಲಯ್ಯನನ್ನು ಪಕ್ಕದಲ್ಲಿ ಕೂಡಿಸಿಕೊಂಡು, ಅವನ ಕಿವಿಯಲ್ಲಿ ಏನೊ ಉಸುರಿದ. "ಆಗಲಿ ತಾತ, ನೀನು ಈಗ ಮಲಗಿಕೊ. ನಾನೆಲ್ಲ ನೋಡಕೊತೀನಿ"—ಎಂದು ಹೇಳಿ ಹಿಂದಿರುಗಿದ. ಸಾಮಾನು ಗಳ ಗಂಟಿನಲ್ಲಿದ್ದ ಪಂಚೆಯೊಂದನ್ನು ಹೊರತೆಗೆದು, ಮಕ್ಕಳಿಗೆ ಹೊದಿಸಿ, ತಾನು ಹೊದ್ದುಕೊಂಡು ನಿದ್ದೆಮಾಡುವವನಂತೆ ಮಲಗಿ, ಹಂದರದ ಸುತ್ತಲೂ ದೃಷ್ಟಿ ಬೀರಿದ.

ನಿಶಾರಾತ್ರಿ. ಎಲ್ಲವೂ-ಎಲ್ಲೆಡೆಯೂ ಮೌನ ಆವರಿಸಿತ್ತು. ಪುಲ್ಲಯ್ಯನನ್ನು ಮಾತನಾಡಿಸಿದ ಮುದಿಯ, ಆಗಲೇ ಗೊರಕೆ ಹೊಡೆಯುತ್ತಿದ್ದ. ಪುಲ್ಲಯ್ಯ ಮಾತ್ರ ಎಚ್ಚರವಾಗಿಯೇ ಇದ್ದ. ಅವನ ನಿದ್ರೆ ಹಾರಿಹೋಗಿತ್ತು. ಅವನು ನೋಡುತ್ತಿದ್ದಂತೆಯೇ, ಅದುವರೆಗೆ, ಎದುರಿಗಿದ್ದ ಕೋಣಾಯಿಯ ಕಟ್ಟೆಯ ಹಿಂದೆ ಅಡಗಿ ಕುಳಿತಿದ್ದ ಇಬ್ಬರು, ನಿಧಾನವಾಗಿ ಎದ್ದು, ಛಪ್ಪರದತ್ತ ಬಂದರು. ಪುಲ್ಲಯ್ಯ, ಮೈಯೆಲ್ಲಾ ಕಣ್ಣುಮಾಡಿಕೊಂಡು ಅವರ ಚಲನವಲನಗಳನ್ನೆ ಗಮನಿಸುತ್ತಿದ್ದ.

ಕಳ್ಳರ ಪೈಕಿ ಒಬ್ಬ, ಗಾಢವಾದ ನಿದ್ರೆಯಲ್ಲಿದ್ದ ಮಹಿಳೆಯೊಬ್ಬಳ ಕುತ್ತಿಗೆಗೆ ಕೈ ಹಾಕುವುದರಲ್ಲಿದ್ದ—ಪುಲ್ಲಯ್ಯ ಸಿಂಹದಂತೆ ಚಂಗನೆ ಹಾರಿ, ಅವನ ಮೇಲೆರಗಿದ. ಮುಷ್ಟಿಯುದ್ಧ ನಡೆಯಿತು. ಆ ಇಬ್ಬರು ಕಳ್ಳರನ್ನು, ಪುಲ್ಲಯ್ಯ ಒಬ್ಬನೆ ಎದುರಿಸಿದ. ಈ ಗದ್ದಲದಿಂದ ನಿದ್ರೆ ಕೆಡಿಸಿಕೊಂಡ ಕೆಲವರು ಏನಾಗುತ್ತಿದೆ—ಎಂಬುದು ತಿಳಿಯದೆ,

ಕಣ್ಣುಕಣ್ಣು ಬಿಡುತ್ತಾ ಕುಳಿತಿದ್ದರು. ಇತರ ಕೆಲವರು, "ಕಳ್ಳ, ಕಳ್ಳ"—ಎಂದು ಕೂಗತೊಡಗಿದರು. "ಹಿಡಿಯಿರಿ–ಹೊಡೆಯಿರಿ", ಎಂದೆಲ್ಲ ಕೂಗತೊಡಗಿದರು. ಈ ಕೋಲಾಹಲದಲ್ಲಿ, ಒಬ್ಬ ಕಳ್ಳ ತನ್ನ ಕೈಯಲ್ಲಿದ್ದ ಕತ್ತರಿಯಿಂದ ಪುಲ್ಲಯ್ಯನನ್ನು ಹೊಡೆದ. ಇನ್ನೊಬ್ಬ ಕಳ್ಳ, ಪುಲ್ಲಯ್ಯನ ಬನಿಯನ್ ಹಿಡಿದು, "ಇವನ್ಕ ಕಳ್ಳ. ಆ ಹೆಣ್ಣುಮಗಳ ಕುತ್ತಿಗ್ಯಾಗಿನ ಸರ ಕಿತ್ತುಕೊಳ್ಳಲಿಕ್ಕೆ ಬಂದಿದ್ದ" — ಎಂದು ಹೇಳಿದ.

"ಸಮಯಕ್ಕ ಸರಿಯಾಗಿ ನಾವು ಬಂದ್ವಿ ಸರಿಹೋಯಿತು....... ನೋಡಿದಿರಾ ವ ಹ ಸಂಭಾಯಿತನ ಹಾಂಗ ಇಲ್ಲಿಗೆ ಬಂದು ಎಂತಹ ಕೆಲಸಕ್ಕ ಕೈಹಾಕಿದ ಅನ್ನೋದು" —ಮೊದಲನೆಯ ಕಳ್ಳ ಹೇಳಿದ.

ಅವರು ಹೀಗೆ ಹೇಳುತ್ತಿದ್ದಾಗ, ಗಾಯಗೊಂಡ ಪುಲ್ಲಯ್ಯನ ಬಾಯಿಯಿಂದ ಮಾತೇ ಹೊರಡಲಿಲ್ಲ. ಅವನು ಕಳ್ಳನಿದ್ದರೂ ಇರಬಹುದೆಂದು ತಿಳಿದ ಜನರು, ಅವನನ್ನೆ ಹೊಡೆಯತೊಡಗಿದರು. ನೀಲಿ, "ಅಲ್ಲ, ಅಲ್ಲ, ಆತ ಕಳ್ಳನಲ್ಲ"—ಎಂದು ಕೂಗಿಕೊಂಡರೂ, ಯಾರೂ ಅವಳ ಮಾತನ್ನು ಕೇಳಲಿಲ್ಲ. "ಈ ಭಂಡನ್ನ ಪೋಲೀಸರಿಗೆ ಕೊಡೋಣ"—ಎಂದು ಯಾರೊ ಸೂಚಿಸಿದರು. ಅಷ್ಟರಲ್ಲಿ, ಗೊರಕೆ ಹೊಡೆಯುತ್ತಾ ಮಲಗಿದ್ದ ಮುದುಕನಿಗೆ ಎಚ್ಚರಿಕೆಯಾಗಿ ಅವನೆದ್ದು ಬಂದ. ಆ ವೇಳೆಗೆ ಕಳ್ಳರು ಪಲಾಯನಮಾಡುತ್ತಿದ್ದುದನ್ನು ನೋಡಿದ ಪುಲ್ಲಯ್ಯ, "ಅವರೆ ಕಳ್ಳರು, ಹಿಡಿಯಿರಿ, ಹಿಡಿಯಿರಿ"—ಎಂದು ಕೂಗತೊಡಗಿದ. ಆದರೆ, ಓಡಿಹೋಗುತ್ತಿದ್ದ ಕಳ್ಳರನ್ನು ಹಿಡಿಯಲು ಯಾರೂ ಮುಂದಾಗಲಿಲ್ಲ. ಮುದುಕ, ಪುಲ್ಲಯ್ಯನನ್ನು ಸುತ್ತುವರಿದಿದ್ದ ಜನರನ್ನು ಸರಿಸಿ ಮುಂದೆ ಬಂದು, ಪುಲ್ಲಯ್ಯನ ಮುಖಕ್ಕೆ ಸಮೀಪದಲ್ಲಿ ತನ್ನ ಮುಖ ತಂದು, "ಕಳ್ಳರನ್ನು ಹಿಡಿದೇನಪಾ...... ಅಯ್ಯೋ ಪಾಪ...... ಪೆಟ್ಟು ತಾಕಿತೇನು? ......ಎಲ್ಲಿದ್ದಾರ ಆ ಕಳ್ಳರು?" ಎಂದು ಕೇಳಿದ.

"ನಾನು ಒಬ್ಬನಾದರೂ, ಆ ಇಬ್ಬರನ್ನು ಹಿಡಿಬಹುದು ಅಂತ ಮಾಡಿದ್ದೆ...... ಆದರ, ನನಗ್ಕ ಮೋಸಮಾಡಿ, ತಪ್ಪಿಸಿಕೊಂಡು ಓಡಿಹೋದರು"—ಪುಲ್ಲಯ್ಯ ಆಯಾಸ ದಿಂದ ಹೇಳಿದ.

ಸ್ವಲ್ಪ ಹೊತ್ತಿನಲ್ಲೆ, ಎಲ್ಲರಿಗೂ ನಿಜ ಸಂಗತಿ ತಿಳಿದುಹೋಯಿತು. ಗಂಡನ ತಲೆಗೆ ಬಟ್ಟೆಯ ಪಟ್ಟಿಯನ್ನು ಕಟ್ಟಿದ ನೀಲಿ, ಆತನನ್ನು ಎಬ್ಬಿಸಿಕೊಂಡು ಹೋಗಿ, ನೆಲದ ಮೇಲೆಯೇ ಮಲಗಿಸಿದಳು. ಛಪ್ಪರದಲ್ಲಿದ್ದ ನಾಲ್ಕು ಜನರು, ನಾಲ್ಕು ರೀತಿ ಮಾತ ನಾಡಿಕೊಂಡರು. "ಅವರು ಇಬ್ಬರು, ನೀನು ಒಬ್ಬವ...... ಯಾರನ್ನಾದರೂ ಎಬ್ಬಿಸ ಬಾರದಾಗಿತ್ತೇನಪ್ಪಾ?"—ಮುದುಕ ಆಕ್ಷೇಪಿಸಿದ.

ಮಲ್ಲೇಶಿ, ತಂದೆಯ ಗತಿಯನ್ನು ನೋಡಿ, ಮೊದಲು ಅಳಲು ಪ್ರಾರಂಭಿಸಿದವನು, ಈಗ ನಗತೊಡಗಿದ. ಅವನು ಈಗ ನಾಯಿಯನ್ನು ಮುಂದಿಟ್ಟುಕೊಂಡು, "ನಮ್ಮಪ್ಪ

ಹುಲಿ ಹಾಂಗ ಕಳ್ಳರ ಮ್ಯಾಲೆ ಬಿದ್ದು ನಾಲ್ಕು ಬಿಗಿದ...... ಅವರು ದಿಕ್ಕಾಪಾಲಾಗಿ ಓಡಿದರು"—ಎಂದು ಹೇಳಿದ.

ಈ ಮಾತನ್ನು ಕೇಳಿಸಿಕೊಂಡ ಪುಲ್ಲಯ್ಯ, ತನ್ನಷ್ಟಕ್ಕೆ ತಾನೆ ನಕ್ಕ. ಪೆಟ್ಟು ಬಿದ್ದಲ್ಲಿ, ರಕ್ತ ಹೆಪ್ಪುಗಟ್ಟಿತ್ತು. ಪುಲ್ಲಯ್ಯ ಅದನ್ನು ಲಕ್ಷಿಸದೆ ಹಾಗೆಯೆ ಒರಗಿ, ಕಣ್ಣುಮುಚ್ಚಿ ನಿದ್ರೆಹೋದ. ಬೆಳಗಾಗುತ್ತಲೆ, "ಇವತ್ತು ಹ್ಯಾಂಗಾದರೂ ಮಾಡಿ, ಒಂದು ಮನಿ, ಬಾಗಿಲು ಅಂತ ಮಾಡಿಕೊಳ್ಳದಿದ್ದರ, ಇಲ್ಲಿ ಇರಲಿಕ್ಕೆ ಆಗಾಣೆಲ್ಲ"—ಎಂದು ಹೇಳಿದಳು.

ಮಲ್ಲೇಶಿ, "ಇವತ್ತೊಂದು ದಿವಸ ಇಲ್ಲೆ ಇರೋಣ—ಆ ಕಳ್ಳರು ಇವತ್ತೂ ಬರ ಬಹುದು. ಅವರು ಬಂದರ, ಅವರ ಮೈ ಹಣ್ಣು ಆಗೊ ಹಾಂಗ ಹೊಡೆದು ಕಳಿ ಸೋಣ"—ಎಂದ.

"ಜಾತ್ರೆಗೆ ಬಂದ ಜನರು ಹೊರಟುಹೋಗ್ತಾರ. ಆ ಮ್ಯಾಲೆ ಒಬ್ಬರಲ್ಲ, ಇಬ್ಬರಲ್ಲ, ಪತ್ತು ಮಂದಿ ಕಳ್ಳರು ಒಟ್ಟಿಗೆ ಬಂದರ ನಮ್ಮ ಅವಸ್ಥಿ ಆಗೇ ಹೋಗ್ತದ...... ಆ ಕಳ್ಳರು ಏಟು ತಿಂದು ಸುಮ್ಮನಿರ್ತಾರೇನು? ಈ ಇಬ್ಬರು ಕಳ್ಳರು ಒಳ್ಳೆಯವರಂತ ಹೇಳಬೇಕು—ಇಲ್ಲಾಂದರ, ಚಾಕು–ಚೂರಿ ತೊಗೊಂಡು ಹೊಟ್ಟಿ ಹರಿದಿದ್ದರ ನಿನ್ನ ಗತಿ ಏನಾಗ್ತಿತ್ತು? ಸಾಹಸ ತೋರಿಸಲಿಕ್ಕೂ, ಧೈರ್ಯ ಪ್ರದರ್ಶಿಸಲಿಕ್ಕೂ ಸಮಯ–ಸಂದರ್ಭ ಇರ್ತಾವ. ಇಷ್ಟು ಯೋಚಿಸದಿದ್ದರ ಹ್ಯಾಂಗ?"—ನೀಲಿ, ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದಳಾದರೂ, ಪುಲ್ಲಯ್ಯ ಮಾತನಾಡಲಿಲ್ಲ. ಪುಲ್ಲಯ್ಯ ತಂಗಳು ಅನ್ನ ಉಂಡು, ಬಿಸಿಲಿನಲ್ಲಿ ಮನೆ ಹುಡುಕಲು ಹೊರಟ. ಮಲ್ಲೇಶಿ, ನಾಯಿಯ ಮರಿಯನ್ನು ಎತ್ತಿ ಕೊಂಕುಳದಲ್ಲಿಟ್ಟುಕೊಂಡು ಅವನನ್ನು ಹಿಂಬಾಲಿಸಿದ. ತಾಳೆಗರಿಯ ಛತ್ತುಗಳಿದ್ದ ಗುಡಿಸಲುಗಳತ್ತ ಅವರು ಕಾಲು ಹಾಕಿದರು. ದೊಡ್ಡದಾದ, ಸಾಕಷು ಗಾಳಿ–ಬೆಳಕಿದ್ದ ಮನೆಯಲ್ಲಿ ಹುಟ್ಟಿ ಬೆಳೆದ ಪುಲ್ಲಯ್ಯನಿಗೆ, ಪೆಟ್ಟಿಗೆಯಂತೆ ಪುಟ್ಟದಾಗಿದ್ದ ಆ ಗುಡಿಸಲುಗಳನ್ನು ನೋಡಿ ಮುಖ ಮುರಿಯುವಂತಾಯಿತು. ಸುತ್ತಲೂ ಕೊಳಚೆನೀರಿನ ಕಾಲುವೆಗಳು, ಕಸದ ಕುಪ್ಪೆಗಳು, ಹ್ವಾಮಿ–ನೊಣಗಳು. ಎಲ್ಲವೂ ಅಸಹ್ಯವಾಗಿತ್ತು. ಮನುಷ್ಯರು ಆ ಗುಡಿಸಲುಗಳಲ್ಲಿ ಹೇಗಾದರೂ ಜೀವಿಸುತ್ತಾರೊ—ಎಂದು ಪುಲ್ಲಯ್ಯ ಆಶ್ಚರ್ಯಪಟ್ಟ. ಆ ಗುಡಿಸಲುಗಳಾದರೊ, ಒಂದಕ್ಕೊಂದು ಅಂಟಿಕೊಂಡಿದ್ದವು. ಯಾವುದಾದರೂ ಒಂದು ಗುಡಿಸಲಿಗೆ ಬೆಂಕಿ ಹತ್ತಿದರೆ, ಎಲ್ಲಾ ಗುಡಿಸಲುಗಳೂ ನಾಶವಾಗುವುದು ಖಚಿತವಾಗಿತ್ತು. ನವಿರಿಯಲ್ಲಿನ, ತನ್ನ ಊರಿನಲ್ಲಿನ ಮನೆಗಳಿಗೆ ಅಗ್ನಿಪ್ರಮಾದದ ಭಯವೇ ಇರಲಿಲ್ಲ. ಒಂದು ವೇಳೆ ಯಾರಾದರೂ ಸೇಡಿನಿಂದ ಅಥವಾ ಹೊಟ್ಟೆಕಿಚ್ಚಿನಿಂದ ಬೆಂಕಿ ಹಾಕಿದರೂ, ಅದನ್ನು ಆರಿಸುವುದು ಸುಲಭ. ಆದರೆ, ಇಲ್ಲಿ ಕಾಲಿಡಲೂ ಸಹ ಸ್ಥಳವಿರಲಿಲ್ಲ.—ಏನೇ ಆಗಲಿ, ತನಗಂತೂ ಒಂದು ಮನೆ ಬೇಕೆಂದು, ಪುಲ್ಲಯ್ಯ, ಆ ಗುಡಿಸಲುಗಳಲ್ಲೆ ಖಾಲಿ ಇದ್ದುದನ್ನು ನೋಡಿದ. ಆ ಗುಡಿಸಲುಗಳಿಗೂ ಸಹ, ತಿಂಗಳಿಗೆ ಐದು ರೂ.ಗಳಿಂದ ಹತ್ತು ರೂಪಾಯಿ

ಬಾಡಿಗೆ ಕೊಡಬೇಕಾಗಿತ್ತು. ಒಂದು ತಿಂಗಳಿನ ಬಾಡಿಗೆ, ಮುಂದಾಗಿ ಪಾವತಿ ಮಾಡ ಬೇಕಾಗಿತ್ತು. ಹಾಗೆ ಬಾಡಿಗೆ ಕೊಟ್ಟಲ್ಲಿ, ಕೈಯಲ್ಲಿದ್ದ ದುಡ್ಡು ಉಳಿಯುವುದಿಲ್ಲವೆಂದು ಪುಲ್ಲಯ್ಯ ಯೋಚಿಸತೊಡಗಿದ.

ಬೆಳಿಗ್ಗೆಯಿಂದ, ಬಿಸಿಲು ನೆತ್ತಿಗೆ ಏರುವವರೆಗೆ ಕೇರಿ–ಕೇರಿ ಸುತ್ತಿ ಸುಸ್ತಾಗಿ, ಸಮುದ್ರ ತೀರಕ್ಕೆ ಬಂದ ಪುಲ್ಲಯ್ಯ. ಮಲ್ಲೇಶಿ, ಆ ಜಲರಾಶಿಯನ್ನು ನೋಡಿ ಭಯಪಡದೆ, ಕೇಕೆಹಾಕುತ್ತಾ, "ಅಪ್ಪಾ, ಈ ಕೆರಿ ಎಷ್ಟು ದೊಡ್ಡದದಲ್ಲ......" ಎಂದು ಕೇಳಿದ. ಪುಲ್ಲಯ್ಯ ಮಗನ ಈ ಮಾತು ಕೇಳಿ ನಕ್ಕು, "ಮಗನೇ ಅದು ಕೆರಿ ಅಲ್ಲ, ಸಮುದ್ರ" ಎಂದು ಹೇಳಿದ.

"ಸಮುದ್ರ—ಹಾಂಗಂದರ?"

"ಇದೇ ಸಮುದ್ರ. ಸಮುದ್ರದ ನೀರು ಉಪ್ಪು. ಈ ನೀರಿನಿಂದ ಉಪ್ಪು ತೆಗಿತಾರ."

"ಹಾಂಗಾದರ. ನೀರಿನ ಮ್ಯಾಲೆ ನೇಗಿಲು ಹೊಡೀತಾರೇನು?"

"ಛೆ ನಿನ್ನ. ಹೊಲದಾಗ ಮಡಿ ಮಾಡೋ ಹಾಂಗ ಮಡಿಮಾಡಿ, ಅದರೊಳಗ ಸಮುದ್ರದ ನೀರು ಹಾಕ್ತಾರ. ಬಿಸಿಲಿಗೆ ನೀರೆಲ್ಲ ಒಣಗಿ ಉಪ್ಪು ಆಗ್ತದ."

"ಅಪ್ಪಾ. ಈ ನೀರು ಗಂಜಿಗೆ ಹಾಕಿಕೊಂಡರ ಮ್ಯಾಲೆ ಉಪ್ಪು ಹಾಕಿಕೊಳ್ಳಬೇಕಾಗ್ತ ದೇನು?"

"ಮಂ–ಮಂ...... ಗಂಜಿಗೆ ಈ ನೀರು ಹಾಕಿಕೊಳ್ಳಬಾರದು......" ಎಂದು ಹೇಳಿ. ಮಗನನ್ನು ನೀರಿನ ವರೆಗೆ ಕರೆದೊಯ್ದ ಪುಲ್ಲಯ್ಯ. ಅದೇ ಹೊತ್ತಿಗೆ ಬಂದರಿನಿಂದ ಹೊರಟಿದ್ದ ಸ್ಟೀಮರ್ ಒಂದು. ಮಲ್ಲೇಶಿಯ ಕಣ್ಣಿಗೆ ಬಿತ್ತು. ಮಲ್ಲೇಶಿ ಅದನ್ನು ತಂದೆಗೆ ತೋರಿಸುತ್ತಾ. "ಅಪ್ಪಾ ಅಪ್ಪಾ, ಅದು ನೋಡು. ಅದು ಎಷ್ಟು ದೊಡ್ಡದದ ......ಏನಪಾ ಅದು?" ಎಂದು ಕೇಳಿದ.

"ಅದs ಹಡಗು. ಅದರೊಳಗ ಕೂತು ರಂಗೂನ್‌ಗೆ ಹೋಗಬಹುದು."

"ಹಾಂಗಾದರ ನಾವೂ ಅದರೊಳಗ ಹೋಗೋಣ."

"ಈಗ ಬ್ಯಾಡ ಬಿಡು...... ಮೊದಲು ಒಂದು ಮನಿ ಮಾಡಿಕೊಳ್ಳೋಣ—ಕೆಲಸ ಹುಡುಕಿಕೊಳ್ಳೋಣ...... ಆ ಮ್ಯಾಲೆ, ಎಲ್ಲಿಗೆ ಬೇಕಾದರೂ ಹೋಗೋಣ."

ಪುಲ್ಲಯ್ಯ ಮಗನನ್ನು ಕರೆದುಕೊಂಡು ಛತ್ರಕ್ಕೆ ಹಿಂದಿರುಗಿದ. ನೀಲಿ ಮಾಡಿಟ್ಟಿದ್ದ ಅನ್ನ ಉಂಡು ಹಾಯಾಗಿ ಮಲಗಿದ. ಮಲ್ಲೇಶಿಗೆ, ಬೆಳಿಗ್ಗೆಯಿಂದ ಸುತ್ತಿಸುತ್ತಿ ಕಾಲು ನೋವಾಗಿತ್ತು. ತನ್ನ ಕಾಲನ್ನು ತಾನೇ ಒತ್ತಿಕೊಳ್ಳುತ್ತಾ, ನಾಯಿಗೆ ಕಾಲು ನೋವು ಎಂದು ಹೇಳಿದಾಗ, ಆ ನಾಯಿ ಮರಿ ಒಮ್ಮೆ ಅವನ ಕಾಲು ಮೂಸಿನೋಡಿ, ನೆಕ್ಕಿತು.

ಪುಲ್ಲಯ್ಯನಿಗೆ ಎಚ್ಚರವಾಗುವ ವೇಳೆಗೆ, ಛಪ್ಪರದಲ್ಲಿದ್ದ ಅನೇಕರು ಹೊರಟು ಹೋಗಿದ್ದರು. ರಾತ್ರಿ ಬಹುಶಃ ತಮ್ಮ ಸಂಸಾರ ಒಂದೇ ಅಲ್ಲಿ ಇರಬೇಕಾಗಬಹುದೆಂದು

ಪುಲ್ಲಯ್ಯ ಅಂದುಕೊಂಡ. ಮನೆಗಾಗಿ ತಾನು ಪಟ್ಟ ಕಷ್ಟಗಳನ್ನು ನೀಲಿಯ ಮುಂದೆ ಹೇಳಿಕೊಂಡ. ಕೊನೆಗೆ ನೀಲಿ, ತಾನೇ ಹೋಗಿ ಯಾವುದಾದರೊಂದು ಗುಡಿಸಲು ನೋಡಿಕೊಂಡು ಬರುವುದಾಗಿ ಹೇಳಿದಾಗ, "ಬ್ಯಾಡ, ಸಂಜಿ ಆಗ್ಯದ, ಎಲ್ಲಾದರೂ ಹಾದಿ ತಪ್ಪೀತು"—ಎಂದು ಪುಲ್ಲಯ್ಯ ಅಡ್ಡಿ ಮಾಡಿದ. "ಬಾಯಿ ಇದ್ದರ ಹೊಸ ಊರು ಹಳೇದಾಗ್ತದ. ನೀನು ಹೋದರ, ನಿನಗ ಯಾವ ಮನೀನೂ ಸರಿ ಬರಾಣೆಲ್ಲ. ನಾವು ಇರೊ ಸ್ಥಿತಿ ಒಳಗ ದೊಡ್ಡ ಮನಿ ಬೇಕ ಅಂದರ ಹ್ಯಾಂಗ? ಒಂದು ವೇಳೆ, ದೊಡ್ಡ ಮನಿ ಸಿಕ್ಕರೂ, ಅದರೊಳಗ ಇರ್ಲಿಕ್ಕೆ ನಮಗ ಆಗಾಣೆಲ್ಲ. ಮುಖಕ್ಕ ತಕ್ಕ ಕುಂಕುಮ ಹಚ್ಚಿಕೊಂಡರs ಮುಖಕ್ಕ ಕಳೆ ಬರ್ತದ"—ಎಂದು ಹೇಳಿ, ನೀಲಿ ಮನೆ ಹುಡುಕಲು ಹೊರಟಳು.

ಕತ್ತಲಾಗುವ ವೇಳೆಗೆ ನೀಲಿ ಹಿಂದಿರುಗಿದಳು. ಆಗಲೇ ಗಾಬರಿಯಾಗಿದ್ದ ಪುಲ್ಲಯ್ಯ, ಅವಳನ್ನು ನೋಡಿ, "ಬಂದೆಯಾ ಮಹಾರಾಯ್ತಿ—ಎಲ್ಲಿ ಹಾದಿ ತಪ್ಪಿಸಿಕೊಂಡಿಯೊ ಏನೊ ಅಂತ ಗಾಬರಿಯಾಗಿದ್ದೆ"—ಎಂಧ ಸಮಾಧಾನದಿಂದ.

"ದೊಡ್ಡ ಛತ್ತರ ಎಲ್ಲಿ ಅದ ಅಂತ ದಾರಿಪೋಕರನ್ನ ಕೇಳಿದರ ಹಾದಿ ತೋರಿಸಿದರು ಬಂದೆ"—ಎಂದು ನೀಲಿ ನಕ್ಕಳು.

"ಮನಿ ಸಿಕ್ಕಿತs?"

"ಹುಂ. ಸದ್ಯಕ್ಕ, ತಲಿ ಮರೆಸಿಕೊಳ್ಳಲಿಕ್ಕೆ ಒಂದು ಗುಡಿಸಲು ಸಿಕ್ಕದ. ಈಗ ಇಲ್ಲೆ ಅಡಿಗಿ–ಊಟ ಮಾಡಿಕೊಂಡು, ರಾತ್ರಿ ಆ ಗುಡಿಸಲಿಗೆ ಹೋಗಿ ಮಲಗೋಣ"—ನೀಲಿ ತನ್ನ ನಿರ್ಧಾರ ತಿಳಿಸಿದಳು.

"ರಾತ್ರಿ ಆದರ, ಹಾದಿ ಹ್ಯಾಂಗ ಗೊತ್ತಾಗ್ತದ?"

"ಇಲ್ಲಿಂದ ಬಹಳ ದೂರ ಏನಿಲ್ಲ. ಬಂದರಿಗೆ ಹೋಗೋ ರಸ್ತೆ ಒಳಗಿನ ಕಾಲುವೆಯ ಹತ್ತಿರ ಒಂದು ದೊಡ್ಡ ಮರ ಅದ. ಆ ಮರದ ಎದುರಿಗೆ, ರಸ್ತೆಯ ಆ ಕಡೆ ಗುಡಿಸಲು ಅದ"—ನೀಲಿ ಸಮಾಧಾನದಿಂದ ಹೇಳಿದಳು.

ರಾತ್ರಿ ಊಟ ಬೇಗನೆ ಮುಗಿಸಿ, ಪುಲ್ಲಯ್ಯನ ಕುಟುಂಬ ಹೊಸ ಮನೆಗೆ ಹೊರಟಿತು. ಮಲ್ಲೇಶಿ ನಾಯಿಯ ಮರಿಯನ್ನು ಕಂಕುಳದಲ್ಲಿಟ್ಟುಕೊಂಡು ಮುಂದೆ ಹೊರಟ. ಪುಲ್ಲಯ್ಯ ತಲೆಯ ಮೇಲೆ ಸಾಮಾನುಗಳ ಗಂಟನ್ನು ಇಟ್ಟುಕೊಂಡು, ಮಲ್ಲೇಶಿಯ ಭುಜದ ಮೇಲೆ ಕೈ ಇಟ್ಟು ಹೊರಟಿದ್ದ...... ನೀಲಿ ಹೇಳಿದ ರಸ್ತೆ, ಆ ದೊಡ್ಡ ಮರ ಸಮೀಪಿಸುತ್ತಿದ್ದಂತೆ, ಮಲ್ಲೇಶಿ, "ಅಪ್ಪಾ, ಇದೇನು ದುರ್ನಾತ—ಎಂದು ಮೂಗು ಮುಚ್ಚಿಕೊಂಡ. ರಸ್ತೆಯ ಉದ್ದಕ್ಕೂ ದುರ್ಗಂಧ ಹರಡಿತ್ತು. ನೀಲಿ ಆ ಬಗ್ಗೆ ಚಕಾರವೂ ಎತ್ತದೆ, ಮೊದಲೇ ಗೊತ್ತುಮಾಡಿದ್ದ ಗುಡಿಸಲನ್ನು ತಲುಪಿದಾಗ, ಪಕ್ಕದ ಗುಡಿಸಲಿ ನಲ್ಲಿನ ಹೆಂಗಸು ದೊಡ್ಡದಾಗಿ ಅಳುತ್ತಿದ್ದಳು. ಅವಳ ಗಂಡ ಏನೊ ಗೊಣಗಿಕೊಳ್ಳು ತ್ತಿದ್ದ.

"ಏನು ಅಳುವೊ ಏನೊ"—ಎನ್ನುತ್ತಾ, ಪುಲ್ಲಯ್ಯ ಗುಡಿಸಲಿನ ಮುಂದೆ ತಲೆಯ ಮೇಲಿನ ಗಂಟನ್ನು ಇಳಿಸಿ ಒಮ್ಮೆ ಸುತ್ತಲೂ ನೋಡಿದ.

ಗುಡಿಸಲುಗಳಿಗೆ ತೀರ ಸಮೀಪದಲ್ಲಿ, ಚರಂಡಿನೀರಿನ ದೊಡ್ಡ ಕಾಲುವೆ ಇತ್ತು. ಆ ಕಾಲುವೆಗೆ, ಊರಿನ ಕೊಳಚೆನೀರನ್ನು ತಂದು ಸೇರಿಸುವ ಇತರ ಎರಡು ಕಾಲುವೆಗಳಿದ್ದವು. ಎದುರುಗಡೆ, ಪುರಸಭೆಗೆ ಸೇರಿದ, ಕಸ ಎತ್ತುವ ಅನೇಕ ಬಂಡಿಗಳಿದ್ದವು. ಅವುಗಳ ಪಕ್ಕದಲ್ಲೆ ರಸ್ತೆ. ರಸ್ತೆಗೆ ಅಂಟಿಕೊಂಡಂತೆ, ಇಪ್ಪತ್ತು—ಇಪ್ಪತ್ತೈದು ಗುಡಿಸಲುಗಳಿದ್ದವು. ಮೂರು ನಾಲ್ಕು ಗುಡಿಸಲುಗಳ ಒಂದು ಸಾಲು. ಒಂದು ಗುಡಿಸಲು—ಮತ್ತೊಂದು ಗುಡಿಸಲಿನ ನಡುವೆ ತೆಳುವಾದ ಬಿದಿರಿನ ಗೋಡೆ. ಒಂದು ಗುಡಿಸಲಿನಲ್ಲಿ ಉಸಿರಾಡಿದರೂ, ಪಕ್ಕದಲ್ಲಿನ ಗುಡಿಸಲಿನಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಆ ಬಿದಿರಿನ ಗೋಡೆ ಅಲ್ಲಲ್ಲಿ ಹರಿದುಹೋಗಿದ್ದರಿಂದ, ಪಕ್ಕದ ಗುಡಿಸಲಿನಲ್ಲಿ ಏನು ನಡೆಯುತ್ತಿದೆ—ಏನಿಲ್ಲ—ಎಂಬುದನ್ನೂ ಸ್ಪಷ್ಟವಾಗಿ ನೋಡಬಹುದಾಗಿತ್ತು. ಪ್ರತಿಯೊಂದು ಗುಡಿಸಲಿನ ಮುಂದೆ ಒಂದು ಪುಟ್ಟ ಅಂಗಳ. ಹಿಂದೆ, ಬಿದಿರಿನ ಚಾಪೆಗಳಿಂದ ನಿರ್ಮಿಸಲಾದ ಒಂದು ಪುಟ್ಟ ಅಡಿಗೆಮನೆ. ಕಾಲುವೆಯಲ್ಲಿ ನೀರು ಹೆಚ್ಚಾದಾಗ, ಗುಡಿಸಲಿನ ಹಿಂದಿನ ಗೋಡೆಯವರೆಗೂ ನೀರು ಬರುತ್ತಿತ್ತು. ಕಪ್ಪು ಮೋಡಗಳಿಗೆ ಅವರ ಮೇಲೇನಾದರೂ ಕೋಪ ಬಂದಲ್ಲಿ, ಆ ಕಾಲುವೆಯ ಕೊಳಚೆನೀರು ಗುಡಿಸಲನ್ನು ತುಂಬಿಬಿಡುತ್ತಿತ್ತು.

"ಬಾಡಿಗೆ ಎಷ್ಟು?"—ಪುಲ್ಲಯ್ಯ ಅಸಮಾಧಾನದಿಂದ ಕೇಳಿದ.

"ಎರಡು ರೂಪಾಯಿ......" ಎಂದು ಹೇಳಿದ ನೀಲಿ, ಪಕ್ಕದ ಗುಡಿಸಲಿನ ಹೆಣ್ಣುಮಗಳನ್ನು ಸಮಾಧಾನ ಮಾಡಲು ಹೊರಟುಹೋದಳು. ನೀಲಿ ಸಾಂತ್ವನಗೊಳಿಸಿದಂತೆಲ್ಲಾ, ಆಕೆ ಇನ್ನೂ ಜೋರಾಗಿ ಅಳಹತ್ತಿದಳು. ಈ ಮಧ್ಯೆ, ಮಲ್ಲೇಶಿ, ಆ ದುರ್ನಾತವನ್ನು ತಡೆದುಕೊಳ್ಳಲಾಗದೆ, "ಇಲ್ಲಿ ಇರೋದು ಬ್ಯಾಡ—ಬ್ಯಾರೆ ಎಲ್ಲಿಗಾದರೂ ಹೋಗೋಣ"—ಎಂದು ರಂಪಮಾಡಹತ್ತಿದ. ಪುಲ್ಲಯ್ಯ, ಈ ಜನರೆಲ್ಲ ಇಲ್ಲಿ ಹೇಗಾದರೂ ಇದ್ದಾರೊ ಎಂದು ಚಕಿತಗೊಂಡ. ಮೈಮೇಲೆ ಬಂಗಾರ ಹೇರಿಕೊಂಡು, ದೊಡ್ಡ ದೊಡ್ಡ ಕಾರುಗಳಲ್ಲಿ ಹೋಗುತ್ತಿದ್ದ ಸಿರಿವಂತರು, ಒಂದು ನಿಮಿಷಕ್ಕಾದರೂ ಆ ವಾಸನೆಯನ್ನು ತಡೆದುಕೊಳ್ಳಲಾಗದೆ ಮೂಗಿಗೆ ಕರವಸ್ತ್ರ ಇಟ್ಟುಕೊಂಡು ಹೋಗುತ್ತಿದ್ದರು. ನವನಾಗರಿಕತೆಯ ಕುರುಹಾಗಿ ಆಕಾಶದೆತ್ತರಕ್ಕೆ ನಿಂತಿದ್ದ ಕಟ್ಟಡಗಳು, ಇವರ ಗುಡಿಸಲುಗಳನ್ನು ನೋಡಿ, ಅಟ್ಟಹಾಸ ಬೀರುತ್ತಿರುವಂತೆ ಪುಲ್ಲಯ್ಯನಿಗೆ ಭಾಸವಾಯಿತು. ಪುಲ್ಲಯ್ಯನಿಗೆ, ತನ್ನ ಊರು, ತನ್ನ ಮನೆಯ ಜ್ಞಾಪಕ ಬಂತು. ಹಿತ್ತಲದಲ್ಲಿನ ಮರಗಳ ಮೇಲೆ ಪಕ್ಷಿಗಳ ಕಿಲಕಿಲ, ಗೋಶಾಲೆಯಲ್ಲಿನ ದನಕರುಗಳ ಕೊರಳಿನಲ್ಲಿನ ಗಂಟೆಗಳ ನಿನಾದ...... ತಣ್ಣಗೆ, ಪ್ರಶಾಂತವಾದ ವಾತಾವರಣ,...... ಆ ಮನೆ...... ಆ ನದಿ...... ಬಂಗಾರದ ಬೆಳೆ ನೀಡುವ ಆ ಭೂಮಿ...... ಆ ಪ್ರಕೃತಿ

ಸೌಂದರ್ಯ—ನರಕದಲ್ಲಿ ಕುಳಿತಿದ್ದ ಪುಲ್ಲಯ್ಯನಿಗೆ ಎಲ್ಲವೂ ಜ್ಞಾಪಕಕ್ಕೆ ಬಂದವು. ಪುಲ್ಲಯ್ಯ, ತನ್ನದೇ ಆದ ಲೋಕದಲ್ಲಿ ಮುಳುಗಿದಾಗ, ಮಲ್ಲೇಶಿ ಪಕ್ಕದ ಮನೆಯ ಹೆಂಗಸಿನ ಗೋಳು ಕೇಳಲಾಗದೆ ಕಿವಿಮುಚ್ಚಿಕೊಂಡ.

ಪುಲ್ಲಯ್ಯನಿಗೆ, ಈಗ ಆ ಹೆಂಗಸಿನ ಅಳು ಸ್ಪಷ್ಟವಾಗಿ ಕೇಳಿಸಿತು. ಆ ಹೆಣ್ಣುಮಗಳು ಒಂದು ಬೆಕ್ಕು ಸತ್ತದ್ದಕ್ಕಾಗಿ ಗೋಳಿಡುತ್ತಿದ್ದಾಳೆಂದು ತಿಳಿದಾಗ, ಪುಲ್ಲಯ್ಯನಿಗೆ ಇನ್ನೂ ಆಶ್ಚರ್ಯವಾಯಿತು. ಅವಳ ಗಂಡ, ಅವಳನ್ನು ಸಮಾಧಾನ ಮಾಡಲು ಪ್ರಯತ್ನಿಸುತ್ತಿದ್ದ. ಅದರಲ್ಲಿ ನೀಲಿಯ ಧ್ವನಿಯೊಂದೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಪುಲ್ಲಯ ತನ್ನದೇ ಆದ ಯೋಚನೆಗಳಲ್ಲಿ ಮುಳುಗಿದ್ದಾಗ ಮತ್ತೊಂದು ಪಕ್ಕದಲ್ಲಿನ ಗುಡಿಸಲಿನಲ್ಲಿದ್ದವನು, "ಯಾವ ಊರಪ್ಪಾ ನಿಮ್ಮದು?"—ಎಂದು ಕೇಳಿದ.

"ನವಿರಿ."

"ಎಷ್ಟು ದಿನ ಆತು ಇಲ್ಲಿಗೆ ಬಂದು?"

"ನಿನ್ನೆನೆ ಬಂದ್ವಿ."

"ಎಲ್ಲಾದರೂ ಕೆಲಸ ಸಿಕ್ಕದೇನು?"

"ಕೆಲಸ ಹುಡುಕಿಕೊಂಡ ಇಲ್ಲಿಗೆ ಬಂದೀನಿ. ಪಟ್ಟಣ, ಯಾವುದಾದರೂ ಕೆಲಸ ಸಿಗಬಹುದು—ಅಂತ ಆಶಾ ಇಟ್ಟುಕೊಂಡೀನಿ......"

"ಏನು ದೊಡ್ಡೂರೂ—ಏನು ಪಟ್ಟಣಾನೊ? ಹಳ್ಯಾಗ ಕೈಯಾಗ ಒಂದು ಪುಡಿಕಾಸು ಇಲ್ಲದ ಬದುಕಬಹುದು. ಇಲ್ಲೇನದ ಮಣ್ಣು...... ಈ ಹೊಲಸು...... ಈ ಗೊಂಬಿಗಳು......"

"ಗೊಂಬಿಗಳು......"

"ಹೂಂ—ಮತ್ತ. ಆ ಬಿಳಿ ಪರದೆಯ ಮೇಲಿನ ಗೊಂಬೆಗಳನ್ನು ನೋಡಿಯಾದರೂ, ನಮ್ಮಂತಹವರು ಸಂತೋಷಪಡಬೇಕು. ಇಲ್ಲದಿದ್ದರ ಏನದ ಇಲ್ಲೆ?" ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದ ಆ ವ್ಯಕ್ತಿ, "ಸುತ್ತಮುತ್ತಲಿನ ಹಳ್ಳಿಗಳ ಜಂಗಲಿಗಳು, ಹಿಂದು—ಮುಂದಿನ ಆಲೋಚನೆಯಿಲ್ಲದೆ ದೊಡ್ಡೂರು ಸೇರಿಕೊಂಡರ. ನಮ್ಮಂತಹವರಿಗೆ ಏನು ಕೆಲಸ ಸಿಗ್ತದ?"—ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡ.

ಈ ಮಾತುಗಳನ್ನು ಕೇಳಿಸಿಕೊಂಡ ಪುಲ್ಲಯ್ಯನಿಗೆ ಚುರುಕು ಮುಟ್ಟಿತ್ತು. "ಯಾಕಪ್ಪಾ ಸುಮ್ಮಸುಮ್ಮನೆ ಕೆಂಡ ಕಾರ್ತೀದಿ. ಒಂದೆರಡು ಒಳ್ಳೇ ಮಾತಾಡಲಿಕ್ಕೆ ಬರಾಣೆಲ್ಲೇನು?" —ಎಂದು ಸ್ವಲ್ಪ ಖಾರವಾಗಿಯೇ ಕೇಳಿದ.

"ಇನ್ನ ಹ್ಯಾಂಗ ಮಾತಾಡಲಿ ನೀನೇ ಹೇಳು. ಇವತ್ತು ಮುಂಜಾನೆ, ಈ ಗುಡಿಸಲಿನಿಂದ ಒಂದು ಶವ ತೊಗೊಂಡು ಹೋದರು. ಸಂಜಿ ಆಗೋದರೊಳಗ ನೀವು ಈ ಗುಡಿಸಲಿಗೆ ಬಂದೀರಲ್ಲಾ ಇದಕ್ಕೇನು ಅನಬೇಕು......"

ಈ ಮಾತು ಕೇಳಿ, ಪುಲ್ಲಯ್ಯನಿಗೆ, ನೀಲಿಯ ಮೇಲೆ ಕೋಪ ಉಕ್ಕಿತು. ಒಳ್ಳೆಯದು—

ಕೆಟ್ಟದರ ವಿಚಾರ ಮಾಡದೆ ಮನೆ ಗೊತ್ತುಮಾಡಿದಳೆಂದು, ಪುಲ್ಲಯ್ಯ ಕುಳಿತಲ್ಲೆ ಚಡಪಡಿಸಿದ.

ನೀಲಿ ಬಂದು, ಸಾಮಾನುಗಳ ಜೊತೆಗಿದ್ದ ಪುಟ್ಟ ಕಂದೀಲನ್ನು ತೆಗೆದು ದೀಪ ಹಚ್ಚಿದಳು. ಆ ಮೇಲೆ, ಸಾಮಾನುಗಳನ್ನು ಸವರಿಸಿಡಲು ಪ್ರಾರಂಭಿಸಿದಳು. ಸಾಮಾನುಗಳಿಂದ ತುಂಬಿದ್ದ ಗಂಟನ್ನು, ನೀಲಿಯೇ ಪ್ರಯಾಸದಿಂದ ಹೊತ್ತುಕೊಂಡು ಹೋಗಿ ಒಳಗಿಟ್ಟಳಾದರೂ, ಪುಲ್ಲಯ್ಯ ಕುಳಿತ ಸ್ಥಳದಿಂದ ಏಳಲಿಲ್ಲ. ಮಲ್ಲೇಶಿ ಕೂಡ ಮುಖ ಸಿಂಡರಿಸಿಕೊಂಡು, ಅಲ್ಲಿಯೇ ಕುಳಿತಿದ್ದ. ನೀಲಿ, ಒಳಗೆ ಹಾಸಿಗೆ ಹಾಸಿ, "ಮಲಗು ಬಾ"—ಎಂದು ಕೈಹಿಡಿದು ಎಬ್ಬಿಸಿದರೂ—"ಛಿ—ಈ ಕೆಟ್ಟ ವಾಸನಿ ಒಳಗ ನಾನು ಮಲಗೂದಿಲ್ಲ"—ಎಂದು ತುಟಿ ಮುಂದೆ ಮಾಡಿದ. ಇದನ್ನು ಕೇಳಿದ ಪಕ್ಕದ ಮನೆಯವರು ಪಕ–ಪಕ ನಕ್ಕರು. ಅವರು ಏಕೆ ನಕ್ಕರೆಂಬುದು ನೀಲಿಗೆ ಅರ್ಥವೇ ಆಗಲಿಲ್ಲ. ಅವಳು ಸುಮ್ಮನೆ ಒಳಗೆ ಹೋಗಿ, ನೀಲಮ್ಮ ದೇವಿಯನ್ನೂ, ಅಜ್ಜಿಯನ್ನೂ ಸ್ಮರಿಸಿಕೊಂಡು, ಹಾಸಿಗೆಯ ಮೇಲೆ ಮಲಗಿದ್ದ ಮಗುವಿನ ಪಕ್ಕದಲ್ಲಿ ಉರುಳಿಕೊಂಡಳು. ಎಲ್ಲೆಲ್ಲೂ ಹರಡಿಕೊಂಡಿದ್ದ ಹೊಲಸು ನಾತವನ್ನು ಸಹಿಸಿಕೊಳ್ಳಲಾಗದಿದ್ದರೂ ಏನೂ ಇಲ್ಲದ ತೃಪ್ತಿ–ಆನಂದ ಅವಳನ್ನು ಆವರಿಸಿತ್ತು. ಸ್ವಲ್ಪ ಹೊತ್ತಿನಲ್ಲೆ, ಅವಳು ಹಾಯಾಗಿ ನಿದ್ರೆಹೋದಳು. ಬಹಳ ಹೊತ್ತಿನ ವರೆಗೆ ಅಂಗಳದಲ್ಲೆ ಕುಳಿತಿದ್ದ ಪುಲ್ಲಯ್ಯ, ನಿಧಾನವಾಗಿ ಮೇಲೆದ್ದ. ಮಲ್ಲೇಶಿ ಕೂಡ ತಂದೆಯನ್ನು ಅನುಸರಿಸಿದ. ಪುಲ್ಲಯ್ಯ ಮಲಗಿದಾಗ, ಮಲ್ಲೇಶಿ ಆತನ ಎದೆಯ ಮೇಲೆ ತಲೆಯಿಟ್ಟು ನಿದ್ರೆಹೋದ. ಪುಲ್ಲಯ್ಯ, ನಿದ್ರೆಯಲ್ಲಿದ್ದ ಮಗನನ್ನು ಪಕ್ಕದಲ್ಲಿ ಮಲಗಿಸಿಕೊಂಡು ತಾನೂ ಸಹ ನಿದ್ರೆಮಾಡಲು ಹವಣಿಸಿದ—ಪಕ್ಕದ ಮನೆಯ ಹೆಂಗಸಿನ ಅಳುವು ಬರುಬರುತ್ತಾ ಕಡಿಮೆಯಾಗಿ ಕೊನೆಗೆ ನಿಂತಿತ್ತು. ಮತ್ತೊಂದು ಪಕ್ಕಕ್ಕಿದ್ದ ಗುಡಿಸಲಿನಿಂದ ಗುಸು–ಗುಸು ಮಾತುಗಳು ಕೇಳಿಬರುತ್ತಿದ್ದವು.

ಗಂಡುಧ್ವನಿ: "ಇನ್ನೂ ಸ್ವಲ್ಪ ಹತ್ತಿರಕ್ಕ ಬಾರಃ...... ಸಿನಿಮಾದಾಗ ನೋಡಿದಿಲ್ಲೋ; ಹ್ಯಾಂಗಿರ್ತಾರ......"

ಹೆಣ್ಣುಧ್ವನಿ: "ಮಾವಾ, ನಾವಿಬ್ಬರೂ ಚಂದ್ರ–ಚಕೋರಿ ಹಾಂಗ ಇದ್ದೀವಲ್ಲ."

ಗಂಡು: "ಬಾ–ಬಾರ—ಇನ್ನೂ ಹತ್ತಿರಕ್ಕ ಬಾ. ನಿನ್ನಂತಹ ಚೆಂದೊಳ್ಳೆ ಹೆಣ್ಣು ಹೀಂಗ ನಾಚಿದರ ಹ್ಯಾಂಗ?"

ಹೆಣ್ಣು: "ನೀನು, ನಿನ್ನ ಆ ಮುಂಗೂದಲುಗಳನ್ನು ಮುಂದೆ ಹಾಕಿಕೊಂಡು ಬಾಯಾಗ ಸಿಗರೇಟು ಇಟ್ಟುಕೊಂಡರ...... ಥೇಟ್ ಆ ನಾಗೇಶ್ವರ ರಾವ್ ನ್ಹಾಂಗ ಕಾಣಸ್ತಿ, ನೋಡು."

ಸ್ವಲ್ಪ ಹೊತ್ತು ಹೀಗೆಯೇ ಮುಂದುವರಿದ ಸರಸಸಲ್ಲಾಪ ನಗುವಿನಲ್ಲಿ ಕೊನೆಗೊಂಡು—ಕೊನೆಗೆ ಎಲ್ಲವೂ ನಿಶ್ಶಬ್ದವಾಯಿತು.

ಸರಿರಾತ್ರಿಯಾಗಿದ್ದರೂ ಪುಲ್ಲಯ್ಯನಿಗೆ ನಿದ್ರೆ ಬಂದಿರಲಿಲ್ಲ...... ಅಂದಿನ ಬೆಳದಿಂಗಳ ರಾತ್ರಿ...... ಚೆಲುವಿನ ಚಂದಿರ...... ಪಳ್ಳಿಯ ಲಲನೆಯರು...... ನೀಲಿ ......ಅವಳು ಆ ಒಲವು-ಒಯ್ಯಾರ...... ಗರಡಿಯಲ್ಲಿ ಗಟ್ಟಿಗನೆನಸಿಕೊಂಡ ತಾನು ......ತುಂಬಿದ ಮಾಂಸಖಂಡಗಳಿಂದ ನಿಗಿನಿಗಿಸುತ್ತಿದ್ದ ತನ್ನ ದೇಹ...... ಗಿರಿಜಾ ಮೀಸೆ...... ನೀಲಿ...... ಪ್ರಥಮ ರಾತ್ರಿಯಂದು, ನೀಲಿ ತನ್ನ ಗಿರಿಜಾಮೀಸೆಯ ಮೇಲೆ ಕೈಯಾಡಿಸಿ ಮುಸಿಮುಸಿ ನಕ್ಕಿದ್ದು...... ಅವಳ ಆ ನಾಚಿಕೆ...... ಪುಲ್ಲಯ್ಯನಿಗೆ, ಈಗ ಅದೆಲ್ಲಾ ನೆನಪಾಗಿ, ಕಣ್ಣಲ್ಲಿ ನೀರೂರಿತು.

"ನೀಲಿ, ನನ್ನ ಸರ್ವಸ್ವವಾಗಿರುವ ನೀಲಿ, ಎಂದೂ ಯಾರಿಗೂ ಇಲ್ಲವೆನ್ನದೆ ಬಾಳಿದ ನನ್ನ ನೀಲಿ, ಇಂದು ಈ ಕಂಪನ್ನು—ಇಂಪು ಮಾಡಿಕೊಂಡು, ಎಷ್ಟು ಹಾಯಾಗಿ ಮಲಗಿದ್ದಾಳಲ್ಲ. ನನಗೇಕೆ ಅವಳ ಹಾಗಿರಲು ಆಗುತ್ತಿಲ್ಲ?"—ಎಂದೆಲ್ಲ ಯೋಚಿಸುತ್ತಾ ಪುಲ್ಲಯ್ಯ ಬಿದ್ದುಕೊಂಡಿದ್ದ. ಆಗಲೇ, ನೀಲಿ ಹೇಳಿದ ಮಾತು ಅವನಿಗೆ ಜ್ಞಾಪಕಕ್ಕೆ ಬಂತು—"ಸಂತೋಷ ಹೆಚ್ಚಾದರ ಭರಿಸಲಾರೆವು. ದುಃಖ ಬಂದರ ಸಮಾಧಾನ ಮಾಡಿಕೊಳ್ಳಲಾರೆವು."

ಪಕ್ಕದ ಗುಡಿಸಲಿನಿಂದ ಮತ್ತೆ ಗುಸುಗುಸು ಕೇಳಿಸಹತ್ತಿತು. ಅವರು, ಸತ್ತ ಬೆಕ್ಕಿಗಾಗಿ ಸಂಜೆ ಎಲ್ಲಾ ಅತ್ತ ಆ ಹೆಣ್ಣುಮಗಳ ಬಗ್ಗೆ ಏನೇನೊ ಮಾತನಾಡಿಕೊಳ್ಳುತ್ತಿದ್ದರು......

ಅವಳು: ಅವನು ಸತ್ತ, ಈಗಿ ಮಹಾಸಾಧ್ವಿ. ನೋಡಿದವರ ಕಣ್ಣಿಗೆ ಮಣ್ಣು ಹಾಕಲಿಕ್ಕೆ, ಬೆಕ್ಕಿನ ಹೆಸರು ಹೇಳಿ ಅತ್ತಳು ಆತು.

ಅವನು: ಆತ ಸತ್ತರೇನಾತು. ಈಗ ಮತ್ತೊಬ್ಬ ಬಂದಾನಲ್ಲ.

ಅವಳು: ಹೌದು, ಈ ಇಬ್ಬರಿಗೂ ಅದು ಹ್ಯಾಂಗ ಗೆಳೆತನ ಕುದುರತೊ ನೋಡಬೇಕು.

ಅವನು: ಆಯಿತು. ಇನ್ನ ಇವನೂ ಸತ್ತರ, ಅದು ಯಾರ ನೆಪ ಮಾಡಿಕೊಂಡು ಅಳ ತಾಳೊ ನೋಡಬೇಕು.

ಅವರು ನಗತೊಡಗಿದಾಗ, ಪುಲ್ಲಯ್ಯನಿಗೆ ಸಹಿಸಲಾಗಲಿಲ್ಲ.

ಹೇಗಾದರೂ ಮಾಡಿ ಈ ಮನೆ ಬಿಡಬೇಕು—ಎಂದು ಯೋಚಿಸತೊಡಗಿದ. ಹಾಗೆ ಯೋಚಿಸುತ್ತಾ ಬಿದ್ದುಕೊಂಡಿರುವಾಗಲೇ, ಅವನು ನಿದ್ರಾದೇವಿಗೆ ವಶವಾದ.

## [ 29 ]

ಛತ್ರದಲ್ಲಿ, ಒಂಟಿಯಾಗಿ ಕಳ್ಳರನ್ನು ಹಿಡಿಯುವ ಹವ್ಯಾಸದಲ್ಲಿ ತಗುಲಿದ್ದ ಪೆಟ್ಟು, ಬೆಳಗಾಗುವುದರೊಳಗಾಗಿ ಹೆಚ್ಚು ನೋವು ಕೊಡಲು ಪ್ರಾರಂಭಿಸಿತ್ತು. ಎದುರಿಗಿದ್ದ ದೊಡ್ಡ ದೊಡ್ಡ ಬಂಗಲೆಗಳು—ಕಾರು ಮತ್ತು ಸೈಕಲ್‌ಗಳ ಮೇಲೆ ಹೋಗುತ್ತಿದ್ದ

ಜನರನ್ನು ನೋಡುತ್ತಾ, ನೋವನ್ನು ಮರೆಯಲು ಪ್ರಯತ್ನಿಸುತ್ತಿದ್ದ ಫುಲ್ಲಯ್ಯ. ಹಡಗು ಕಟ್ಟುವ ಸಿಂಡಿಯಾ ಕಂಪೆನಿಯ ಬೂಂಗ ಊದಿದ ಕೂಡಲೇ, ಕೂಲಿ ಜನರು ಅವಸರಅವಸರವಾಗಿ ಹೊರಟಾಗ, ಅವರಂತೆ ಕೆಲಸಕ್ಕೆ ಹೋಗಲು ತನಗೂ ಸಾಧ್ಯವಾಗ ಬಹುದೆ ಎಂಬ ಆಶೆಯಿಂದ ಫುಲ್ಲಯ್ಯ ಅವರನ್ನೇ ನೋಡಿದ. ತನಗಾಗುತ್ತಿದ್ದ ನೋವನ್ನು ನಿರ್ಲಕ್ಷಿಸಿ ಅವರ ಬಳಿ ಹೋಗಬೇಕೆಂದುಕೊಂಡ. ಆದರೆ, ನೋವು ಹೆಚ್ಚಾಗಿ, ಜ್ವರ ಬಂದವರಂತೆ ಕುಸಿದು ಕುಳಿತ. ಮಲ್ಲೇಶಿ ಮತ್ತು ನೀಲಿ, ಅವನ ಪಕ್ಕದಲ್ಲೇ ಇದ್ದು, ಅವನು ಎಲ್ಲಿಗೇ ಆಗಲಿ ಹೋಗಲು ಬಿಡಲಿಲ್ಲ.

ಒಂದು ದಿನ ಕಳೆಯಿತು. ನೀಲಿ ಮಾಡಿದ ಆರೈಕೆಯಿಂದ ನೋವು ಕಡಿಮೆಯಾಗಿತ್ತಾದರೂ, ಮುಂದೇನು ಎಂಬ ಪ್ರಶ್ನೆ ಅವನನ್ನು ಕಾಡುತ್ತಿತ್ತು. ಅದನ್ನೇ ಮನಸ್ಸಿಗೆ ಹಚ್ಚಿಕೊಂಡು ದಿಕ್ಕು ಕಾಣದಂತವನಾದ ಫುಲ್ಲಯ್ಯ. ಅಂದು ರಾತ್ರಿ—ನೀಲಿ ಹಚ್ಚಿಟ್ಟಿದ್ದ ದೀಪ ಮಂದವಾಗಿ ಉರಿಯುತ್ತಿತ್ತು. ಮಲ್ಲೇಶಿ, ತನ್ನ ನಾಯಿಮರಿ ಎಲ್ಲಿಗೊ ಹೋಯಿತೆಂದು ಅತ್ತುಅತ್ತು ಮಲಗಿದ್ದ. ನೋವಿನಿಂದ ನರಳುತ್ತಿದ್ದ ಫುಲ್ಲಯ್ಯ, ಪಕ್ಕದಲ್ಲಿ ಕುಳಿತಿದ್ದ ನೀಲಿಯನ್ನು—"ನಾವು ಕೊನೆಯ ವರಗೂ ಹೀಗs ಉಪವಾಸ–ವನವಾಸದಾಗ ಜೀವನ ಕಳಿಬೇಕೇನs"—ಎಂದು, ನಿರಾಶೆಯಿಂದ ಕೇಳಿದ.

"ಹಂಗ್ಯಾಕ ಇಲ್ಲದ್ದು ಮನಸ್ಸಿಗೆ ಹಚ್ಚಿಕೊಂಡು ಸಂಕಟಪಡ್ತೀದಿ. ಏನೊ ಒಂದು ದಿವಸ ಸುಖ ಇದ್ರ, ಇನ್ನೊಂದು ದಿವಸ ಕಷ್ಟ ಬಂದೇ ಬರ್ತದ. ಕೊನಿವರೆಗೂ ಹೀಗs ಏನೂ ಇರಾಣೆಲ್ಲ ಬಿಡು."

ನೀಲಿಯ ಈ ಮಾತಿನಿಂದ ಫುಲ್ಲಯ್ಯನಿಗೆ ಸಮಾಧಾನವಾಗಲಿಲ್ಲ. ಅವನು ಹೆಂಡತಿಯ ಕೈಹಿಡಿದು—"ಅಲ್ಲೆ ಊರಾಗ, ಇಲ್ಲದ ಅಪವಾದ ಹೊರಿಸಿ ಇದ್ದಬಿದ್ದ ಹೊಲ ಕಸಕೊಂಡರು; ಇಲ್ಲೆ ಕಾಲಿಡೊ ಫುರಸತ್ತಿಲ್ಲದ ಕಳ್ಳರ ಕೈಯಾಗ ಸಿಕ್ಕು ಈ ಗತಿ ಆಯ್ತು. ಇನ್ನು ಈ ಮನಿ"—ಎನ್ನುತ್ತಾ ದೀರ್ಘವಾಗಿ ನಿಟ್ಟುಸಿರು ಬಿಟ್ಟ. "ಅಯ್ಯಾ, ಕಷ್ಟಕಾಲ ಬಂದ ಮಾತ್ರಕ್ಕ ನಾವೇನೂ ಭಿಕ್ಷುಕರಾಗಿಲ್ಲೇಳು. ಏನೋ ಈಗ ಕಷ್ಟಕಾಲ ಬಂದದ—ಯಾವಾಗ್ಲೂ ನಮ್ಮ ಪಾಲಿಗೆ ಸುಖ ಇರಬೇಕು ಅಂದರ ಹ್ಯಾಂಗ"—ನೀಲಿ ನಗುತ್ತಲೇ ಹೇಳಿದಳು. ಫುಲ್ಲಯ್ಯ, ನಿದ್ರೆಮಾಡಬೇಕೆಂಬ ಪ್ರಯತ್ನದಲ್ಲಿ ಮೌನವಾಗಿ ಮಲಗಿದ. ಹೊರಗಡೆ ಆಕಾಶದ ತುಂಬ ಮೋಡಗಳು ಕವಿದಿದ್ದವು. ಮೋಡಗಳು ಗುಡುಗಿದಾಗ, ಅದರ ಶಬ್ದಕ್ಕೆ ಗುಡಿಸಲುಗಳು ನಡುಗುತ್ತಿದ್ದವು. ಸರಿರಾತ್ರಿ ಕಳೆದ ಮೇಲೆ, ಮಳೆ ಸುರಿಯತೊಡಗಿತು. ಗುಡಿಸಲು ಸೋರತೊಡಗಿತು. ಮಲಗಿದ್ದ ಮಗು ಎಚ್ಚೆತ್ತು ಅಳತೊಡಗಿತು. ನೀಲಿ, ಮಲ್ಲೇಶಿಯನ್ನು ಎತ್ತಿಕೊಂಡು, ಒಂದು ಮೂಲೆಯಲ್ಲಿ ಮಲಗಿಸಿದಳು. ಜ್ವರದಿಂದ ಮೊದಲೇ ನಿತ್ರಾಣನಾಗಿದ್ದ ಫುಲ್ಲಯ್ಯ, ನಡುಗುತ್ತಾ ಮತ್ತೊಂದು ಮೂಲೆಯಲ್ಲಿ ಕುಳಿತಿದ್ದ. ಗುಡಿಸಲಿನ ಅವಸ್ಥೆಯನ್ನು ನೋಡಿ, "ಎಂತಹ ಕೆಟ್ಟ ದಿನಗಳು ಬಂದವಪ್ಪ"—ಎಂದು ಗೊಣಗಿಕೊಂಡ. ಅದರೊಡನೆ ಒಂದು

ಕಾಲದಲ್ಲಿ ತಾನು ಅನುಭವಿಸಿದ ಸುಖಜೀವನದ ನೆನಪಾಗಿ, ಅವನ ಹೃದಯದ ತಳಮಳ ಮತ್ತಷ್ಟು ಹೆಚ್ಚಿತು. ಮಳೆಯ ನೀರು, ಈಗ ಅವನ ಪಾದಗಳ ವರೆಗೂ ಬಂದಿತ್ತು.

ನೀಲಿ, ಕೈಯಲ್ಲಿ ಒಂದು ಪುಟ್ಟ ಪಾತ್ರೆಯನ್ನು ಹಿಡಿದುಕೊಂಡು, ಗುಡಿಸಲಿನಲ್ಲಿ ನಿಂತಿದ್ದ ನೀರನ್ನು ಎತ್ತಿ ಹೊರಹಾಕುವ ವಿಫಲ ಪ್ರಯತ್ನ ನಡೆಸಿದ್ದಳು.

"ಕೊನೆಗೆ, ನೂಲಿನ ಒಂದು ಮಂಚಾನಾದರೂ ಉಳೀಲಿಲ್ಲ ನಮ್ಮ ಪಾಲಿಗೆ"—ಪುಲ್ಲಯ್ಯ ಗೊಣಗುತ್ತಲೇ ಇದ್ದ.

ಬೆಳಗಾಯಿತು. ನೀಲಿಗಾಗಲೀ, ಪುಲ್ಲಯ್ಯನಿಗಾಗಲೀ, ಸರಿಯಾಗಿ ನಿದ್ರೆಯೇ ಬಂದಿರಲಿಲ್ಲ. ಗುಡಿಸಲಿನ ಒಳಗೆ ಮತ್ತು ಗುಡಿಸಲುಗಳ ಹೊರಗೆ, ಎಲ್ಲೆಲ್ಲೂ ರೊಜ್ಜಾಗಿತ್ತು. ಕಾಲಿಟ್ಟರೆ ಸಾಕು, ಕಾಲಿಗೆ ರಾಡಿ ಮೆತ್ತಿಕೊಳ್ಳುತ್ತಿತ್ತು. ಆದರೆ, ಮೊದಲಿದ್ದ ಆ ಕೆಟ್ಟ ವಾಸನೆ, ಆ ಕಂಪು ಈಗ ಇರಲಿಲ್ಲವಾದ್ದರಿಂದ, ಪುಲ್ಲಯ್ಯನಿಗೆ ಅಷ್ಟೇ ಸಮಾಧಾನವಾಗಿತ್ತು. ಸ್ವಲ್ಪ ಹೊತ್ತಿಗೆಲ್ಲಾ ಸೂರ್ಯ ಮೇಲೇರಿ ಬಂದು, ಚೆನ್ನಾಗಿ ಬಿಸಿಲು ಬಿತ್ತು. ಪುಲ್ಲಯ್ಯ, ರಾತ್ರಿ ಸರಿಯಾಗಿ ನಿದ್ರೆ ಮಾಡಿರದಿದ್ದರೂ, ಗಾಯದ ನೋವು ಕಡಿಮೆಯಾಗಿದ್ದರಿಂದ, ಕೆಲಸ ಹುಡುಕಲು ಹೊರಟ. ಮಾಮೂಲಿನಂತೆ, ಮಲ್ಲೇಶಿ ಕೂಡ ಅವನ ಹಿಂದೆ ಹೊರಟ. ಸ್ವಲ್ಪ ಜ್ವರ ಬಂದು ನಿತ್ರಾಣ ಹೆಚ್ಚಿದ ಮಾತ್ರಕ್ಕೆ ಧೈರ್ಯ ಗುಂದಿದ್ದಕ್ಕಾಗಿ, ಪುಲ್ಲಯ್ಯ ತನ್ನಷ್ಟಕ್ಕೆ ತಾನೆ ನಾಚಿಕೆಪಟ್ಟುಕೊಂಡ. ತನ್ನಲ್ಲಿ, ನೀಲಿಗಿದ್ದಷ್ಟು ಸಹನೆ, ಧೈರ್ಯ ಉಳಿದಿಲ್ಲವಲ್ಲ—ಎಂದು ನೊಂದುಕೊಂಡ. ಇನ್ನು ಮೇಲಾದರೂ, ಎಂತಹುದೇ ಪರಿಸ್ಥಿತಿ ಬಂದರೂ ಸಮಾಧಾನದಿಂದಿದ್ದು, ಕೂಲಿನಾಲಿ ಮಾಡಿಕೊಂಡು ಹೊಟ್ಟೆತುಂಬಿಕೊಳ್ಳಬೇಕೆಂದು, ಮನಸ್ಸು ಗಟ್ಟಿಮಾಡಿದ. ಅದೇ ಹುರುಪಿನಲ್ಲಿ ಮನೆಯಿಂದ ಹೊರಟ.

ಸೂರ್ಯ ನೆತ್ತಿಯ ಮೇಲೆ ಬರುವವರೆಗೂ, ಪುಲ್ಲಯ್ಯ ರಸ್ತೆ-ರಸ್ತೆ ಸುತ್ತಿದ. ಕಂಡವರನ್ನೆಲ್ಲ ಕೆಲಸ ಕೇಳುತ್ತಾ, ಬಂದರಿನ ಬಳಿ ಹೋದ. ಅಲ್ಲಿ ತನ್ನಂತಹವರು ಎಷ್ಟೋ ಜನರು ಮೂಟೆ ಹೊರುವುದನ್ನು ನೋಡಿದ. ಅವರಲ್ಲಿ ತಾನೂ ಒಬ್ಬನಾದರೆ ......ಕೂಲಿ ಜನರು, ಹಡಗಿನಿಂದ ಮೂಟೆಗಳನ್ನು ಹೊತ್ತು ತರುತ್ತಿದ್ದರು. ಅವರಲ್ಲಿ ಒಬ್ಬ, ಸಣ್ಣದಾದ ಒಂದು ಮೂಟೆಯನ್ನು ಹೊರಲಾರದೆ ಹೊತ್ತು ತರುತ್ತಿರುವುದನ್ನು ನೋಡಿ, "ನೋಡು ಮಗ—ಅವನು ಆ ಒಂದು ಸಣ್ಣ ಮೂಟೆ ತರಲಿಕ್ಕೆ ಎಷ್ಟು ಒದ್ದಾಡತಾನ...... ನಾನಾಗಿದ್ದರ......"

"ಅಪ್ಪಾ, ನೀನಾಗಿದ್ದರ ಎರಡು ಮೂಟೆ ಒಂದೇ ಸಲಕ್ಕ ಎತ್ತಿದ್ದೀಯಲ್ಲ"—ಮಗ ತಂದೆಯನ್ನು ನೋಡಿ ನಗುತ್ತಲೇ ಹೇಳಿದ.

ಅತ್ತಕಡೆಯಿಂದ ಬರುತ್ತಿದ್ದ ಕೂಲಿಯವನೊಬ್ಬನನ್ನು ಪುಲ್ಲಯ್ಯ ಮರ್ಯಾದೆಯಿಂದ ಮಾತನಾಡಿಸಿ, ತನಗೂ ಕೂಲಿ ಸಿಗಬಹುದೇ—ಎಂದು ಕೇಳಿದ. ಅವನು ಇಲ್ಲವೆಂದು ಕೈಯಾಡಿಸಿ ಮುಂದೆ ಹೋಗಿಬಿಟ್ಟ. ಮನೆಗೆ ಹಿಂದಿರುಗಿದ ಮೇಲೆ, ಮಲ್ಲೇಶಿ, "ಅಪ್ಪಾ

ಎರಡು ಮೂಟೆ ಹಾಯಾಗಿ ಎತ್ತುಬಲ್ಲ"—ಎಂದು ತಾಯಿಗೆ ಅಭಿಮಾನದಿಂದ ಹೇಳಿದ.

ಪುಲ್ಲಯ್ಯ ಊಟಕ್ಕೆ ಕುಳಿತಾಗ, ಅವನ ಎದೆ ಧಸಕ್ಕೆಂದಿತು. ನಾಳೆಯೂ ಕೂಲಿ—ಕೆಲಸ ಸಿಗದಿದ್ದಲ್ಲಿ, ಹೊಟ್ಟೆಯ ಪಾಡೇನು......? "ನಾನೇನೊ ದೊಡ್ಡವನು. ಒಂದು ಒಪ್ಪತ್ತು ಊಟ ಮಾಡದಿದ್ದರೂ ನಡೆದೀತು. ಆದರೆ, ಮಲ್ಲೇಶಿ...... ಮಗಳು...... ಅವರ ಗತಿ......?"

ಗಬಗಬನೆ ನಾಲ್ಕು ತುತ್ತು ಉಂಡು, ಕಾಲುಗಳು ಎಳೆಯುತ್ತಿದ್ದರೂ ಲೆಕ್ಕಿಸದೆ ಮತ್ತೆ ಸಿಂಡಿಯಾ ಕಂಪೆನಿಗೆ ಹೊರಟ ಪುಲ್ಲಯ್ಯ. ಮಲ್ಲೇಶಿ, ತಂದೆಯ ಬೆನ್ನು ಬಿಡಲಿಲ್ಲ. ಅವನೂ ಓಡುತ್ತಲೇ ತಂದೆಯ ಹಿಂದೆ ಹೊರಟ. ಪುಲ್ಲಯ್ಯ ಸಿಂಡಿಯಾ ಕಂಪೆನಿಯನ್ನು ತಲುಪಿದ. ಆದರೆ, ಅಲ್ಲಿ ಅವನನ್ನು ಕೇಳುವವರಾರೂ ಇರಲಿಲ್ಲ. ಆದರೂ ಪುಲ್ಲಯ್ಯ ಅಲ್ಲಿಯೇ ನಿಂತ. ಅಷ್ಟರಲ್ಲಿ ಬೂಂಗಾ ಊದಿ, ಕೂಲಿ ಜನರು ಕಂಪೆನಿಯ ಒಳಗಿನಿಂದ ಹೊರಬರಹತ್ತಿದರು. ಆ ಕೂಲಿ ಜನರ ಪೈಕಿ ಒಬ್ಬರೊಡನಾದರೂ ಸ್ನೇಹ ಬೆಳೆಸಿಕೊಂಡಲ್ಲಿ, ಅವನ ಜೊತೆಗೆ ನಾಳೆಯಾದರೂ ಕೆಲಸಕ್ಕೆ ಬರಬಹುದೆಂದು ಪುಲ್ಲಯ್ಯ ಎಣಿಸಿದ. ಎಂತಲೆ, ಒಬ್ಬ ಕೂಲಿಯವನ ಬಳಿ ಹೋಗಿ, "ನನಗೂ ನಿಮ್ಮ ಈ ಕಂಪೆನಿ ಒಳಗ ಕೆಲಸ ಕೊಡಿಸಪ್ಪಾ"—ಎಂದು ಅಂಗಲಾಚಿದ. ಆ ಕೂಲಿ ಅವನು ನಗಲಾರಂಭಿಸಿದಾಗ, ಪುಲ್ಲಯ್ಯ—"ಯಾಕಪ್ಪಾ ಹಾಂಗ ನಗತೀದಿ"—ಎಂದು ಕೇಳಿದ.

"ಈ ಕಂಪೆನಿ ಒಳಗ ಕೆಲಸ ಸಿಗೋದು ಅಂದರ ಏನು ಅಂದುಕೊಂಡಿ—ತಿಂಗಳಿಗೆ ಎಂಬತ್ತು ರೂಪಾಯಿಗೆ ಕಡಿಮೆ ಕೊಡಾಣಿಲ್ಲ......"

"ಅಬ್ಬ ! ಅಷ್ಟು ದುಡ್ಡು ಕೊಡ್ತಾರ...... ಹಾಂಗಿದ್ದರ ಹ್ಯಾಂಗಾದರೂ ಮಾಡಿ, ನನ್ನೂ ನಿಮ್ಮೊಳಗ ಸೇರಿಸಿಕೊಂಡುಬಿಡಪಾ. ಹಳ್ಳಿಅವನು—ಬದುಕು ಕಂಡವನು. ಈಗ ಏನೊ ಕೆಟ್ಟ ದಿನ ಬಂದಾವ...... ನಿನಗ ಪುಣ್ಯ ಬರ್ತದ...... ಮಕ್ಕಳೊಂದಿಗ. ನಿನ್ನ ಹೆಸರು ಹೇಳಿಕೊಂಡು ಬದುಕ್ತೀನಿ......"

"ಏ, ನೀನೇನು ಕಾಡುಮನುಷ್ಯ ಇದ್ದಾಂಗಿದ್ದಿಯಲ್ಲ—ಇಲ್ಲಿ ಕೆಲಸ ಸಿಗೋದು ಅಂದರ ಏನಂತ ತಿಳಿದೀದಿ"—ಎನ್ನುತ್ತಾ ಅವನು ನಗಹತ್ತಿದ.

"ಆಗಲಿ, ನಿನ್ನ ಮನಸ್ಸಿಗೆ ಬಂದದ್ದು ಅನ್ನು...... ನಾಲ್ವರು ಕೂಡಿ ಮಾಡಿದ ಕೆಲಸದ ನಾಲ್ಕು ಪಟ್ಟು ಕೆಲಸ ಮಾಡ್ತೀನಿ. ಇಲ್ಲಾಂದರ ಬೇಕಾದ್ದು ಶಿಕ್ಷೆ ಕೊಡು—ಆಯ್ತು."

"ಏ ಹುಚ್ಚಪ್ಪ. ಮೊನ್ನೆಮೊನ್ನೆ ಐನೂರು ಮಂದೀನ್ನ ಕೆಲಸದಿಂದ ತಗಮುಹಾಕ್ಯಾರ. ಅದಲ್ಲದ ಇವತ್ತ ನಾಳಿನ ಕಾಲದಾಗ, ಮೂಟೆ ಹೊರೊ ಕೆಲಸ ಮಾಡಲಿಕ್ಕೂ ಓದಿದವರು ಬೇಕಂತಾರ. ಸುಮ್ಮನೆ, ಎಲ್ಲಾದರೂ ದಿನಕೂಲಿ ಮಾಡಿಕೊಂಡು ಬದುಕಿಕೊ

ಹೋಗು. ಸುಮ್ಮನೆ ಇಲ್ಲಿ ಕೂತರ ಏನೂ ಆಗಾಣಿಲ್ಲ"—ಎಂದು ಹೇಳಿ ಅವನು ಹೊರಟುಹೋದ.

ಪುಲ್ಲಯ್ಯ ಮನೆಗೆ ಹಿಂದಿರುಗಿದಾಗ, ಸಂಜೆಯಾಗಿತ್ತು. ದಿನವಿಡೀ ಬಿಸಿಲು ಚುರುಕಾಗಿದ್ದರಿಂದ, ಗುಡಿಸಲಿನ ಸುತ್ತುಮುತ್ತಲಿನ ರೊಜ್ಜು ಒಣಗಿ, ಪರಿಸ್ಥಿತಿ ಸ್ವಲ್ಪ ಸುಧಾರಿಸಿತ್ತು. ಪುಲ್ಲಯ್ಯ, ಮಗನನ್ನು ಎತ್ತಿಕೊಂಡು ಹೋಗಿ, ಗುಡಿಸಲಿನೊಳಗೆ ಕುಳಿತ. ಪುಲ್ಲಯ್ಯನ ತಲೆಯಲ್ಲಿ, ಇನ್ನೂ ಆ ಸಿಂಡಿಯಾ ಕಂಪೆನಿಯ ಗುಂಗಿತ್ತು. ಆ ಕಂಪೆನಿಯಲ್ಲಿ ಕೆಲಸ ಸಿಕ್ಕಲ್ಲಿ, ತಾನೂ ಉಂಡು, ನಾಲ್ಕು ಜನರಿಗೂ ಊಟಕ್ಕೆ ಹಾಕಬಹುದೆಂದು ಅವನು ಲೆಕ್ಕಹಾಕಿದ. "ದಿನಕೂಲಿ ಮಾಡಿಕೊ ಅಂದನಲ್ಲ—ಹಾಂಗ ದಿನಕೂಲಿಗಾಗಿ ಇಲ್ಲಿಗೆ ಬಂದೀನೇನು ನಾನು?—ಎಲ್ಲಿ ಆದರೂ ತಿಂಗಳು ಸಂಬಳ ಬರೊ ನೌಕರಿ ಹಿಡಿಬೇಕು...... ಮಗನಿಗೆ ಓದಿಸಬೇಕು...... ನನ್ನ ಮಗ...... ನನ್ನ ಮಲ್ಲೇಶಿ......" ಇದೇ ಆಲೋಚನೆಯಲ್ಲೆ ಕತ್ತಲಾಯಿತು.

ಅಂದು ರಾತ್ರಿ ಅಂಗಳದಲ್ಲೆ ಹಾಸಿಗೆ ಹಾಸಿದರು. ತಂದೆಯ ಹಿಂದೆ ಸುತ್ತಾಡಿ ಆಯಾಸಗೊಂಡಿದ್ದ ಮಲ್ಲೇಶಿ, ಬೇಗನೆ ಮಲಗಿಬಿಟ್ಟ.—ರಾತ್ರಿ ಹತ್ತು ಗಂಟೆಯಾಗಿತ್ತು. ಆಕಾಶದಲ್ಲಿನ ನಕ್ಷತ್ರಗಳು ಮಿಣುಕುತ್ತಿದ್ದವು. ಎದುರಿಗಿದ್ದ ಮರದ ಉತ್ತರಕ್ಕೆ ವಿದ್ಯುದ್ದೀಪವಿದುದರಿಂದ, ಮರದ ಕೆಳಗೆಲ್ಲಾ ಅದರ ಬೆಳಕು ಬಿದ್ದಿತ್ತು. ಆ ಮರದ ಕೆಳಗೆ ಹುಡುಗರು ದಿನಬೆಳಗಾದರೂ ಆಡುತ್ತಿದ್ದುದರಿಂದ, ಅಲ್ಲಿನ ಜಾಗ ಸ್ವಲ್ಪ ಸ್ವಚ್ಛವಾಗಿಯೇ ಇತ್ತು.

ಅಂಗಳದಲ್ಲಿ ಮಲಗಿದ್ದ ಪುಲ್ಲಯ್ಯ, ನಿದ್ದೆ ಬಾರದೆ ಹೊರಳಾಡುತ್ತಿದ್ದ. ನೀಲಿ, ಮಗಳು ಅಳಲು ಪ್ರಾರಂಭಿಸಿದಾಗ, ಅವಳನ್ನು ಸಮಾಧಾನಪಡಿಸಲೆಂದು ಒಳಗೆ ಹೋದವಳು, ಅಲ್ಲಿಯೇ ಮಲಗಿದಳು. ಇದ್ದಕ್ಕಿದ್ದಂತೆ ನಾಯಿಮರಿಯೊಂದು ಅರಚಲು ಪ್ರಾರಂಭಿಸಿದಾಗ, ಪುಲ್ಲಯ್ಯ ರಸ್ತೆಯ ಕಡೆ ದೃಷ್ಟಿ ಬೀರಿದ. ಎದುರಿಗಿದ್ದ ಮರದ ಕೆಳಗೆ ನಾಯಿಯ ಮರಿಯೊಂದನ್ನು...... ಮಲ್ಲೇಶಿಯ ನಾಯಿಮರಿಯಂತೆಯೇ ಇತ್ತು...... ಯಾರೊ ಹಿಡಿದುಕೊಂಡು ಕುಳಿತಿದ್ದ. ಪುಲ್ಲಯ್ಯ ಅವನನ್ನೆ ನೋಡಹತ್ತಿದ...... ನಾಯಿಮರಿ ತನ್ನನ್ನು ಹಿಡಿದುಕೊಂಡವನ ಕೈಯಿಂದ ಪಾರಾಗಲು ಒದ್ದಾಡುತ್ತಿತ್ತು. ಆದರೆ, ಆತ, ಅದನ್ನು ಬಿಟ್ಟುಕೊಡದೆ ಗಟ್ಟಿಯಾಗಿ ಹಿಡಿದುಕೊಂಡು ಕುಳಿತಿದ್ದ.

ಪುಲ್ಲಯ್ಯ, ಎದ್ದು ಕುಳಿತ. ತನ್ನ ಮಗನಿಗೆ ಅಚ್ಚುಮೆಚ್ಚಾದ ಆ ನಾಯಿಮರಿಯನ್ನು ಬಿಡಿಸಿಕೊಂಡು ಬರಬೇಕೆಂದು ನಿಧಾನವಾಗಿ ಮೇಲೆದ್ದ. ಮರದ ಕೆಳಗೆ ಕುಳಿತ ಆ ಮನುಷ್ಯ, ನಾಯಿಯನ್ನೇ ನೋಡುತ್ತಿದ್ದರಿಂದ, ಪುಲ್ಲಯ್ಯ ಬಂದುದನ್ನು ಅವನು ಗಮನಿಸಲೇ ಇಲ್ಲ.

ಇದ್ದಕ್ಕಿದ್ದಂತೆ, ಆ ಮನುಷ್ಯ, ತನ್ನ ಕೈಯಲ್ಲಿದ್ದ ನಾಯಿಮರಿಯ ಮೈ ಸವರುತ್ತಾ, ಅದರೊಡನೆ ಸಂಭಾಷಣೆಯನ್ನು ಪ್ರಾರಂಭಿಸಿದ—"ನಿಮ್ಮ ಜಾತಿಗೆ ಅದೆಂತಹ ವಿಶ್ವಾಸ–

ನಂಬಿಕೆ. ವಿಶ್ವಾಸದಲ್ಲೆ ಹುಟ್ಟಿ, ವಿಶ್ವಾಸದಲ್ಲೆ ಬದುಕಿ...... ಏನೇ ಆಗಲಿ, ಎಂತಹ ಪರಿಸ್ಥಿತಿಯೇ ಬರಲಿ, ವಿಶ್ವಾಸಘಾತುಕರಾಗದೆ...... ಛಲದಿಂದ ಬದುಕು ಸಾಗಿಸ್ತೀರಿ—ಇನ ನಮ್ಮ ಜಾತಿ...... ಮಾನವ ಜಾತಿ...... ಥೂ, ಎಲ್ಲಾನೂ ಬರೀ ಮೋಸ-ನಟನೆ. ನಮ್ಮ ಜಾತಿಗೆ ದುಡ್ಡು ಅಂದರ ಆತು. ಬೇಕಾದ್ದು ಮಾಡತಾರ. ಮನುಷ್ಯ ರನ್ನ—ಮಾನವಜಾತಿಯನ್ನ ಯಾವುದಕ್ಕೂ ನಂಬಲೇಬಾರದು......" ಎನ್ನುತ್ತ ಆತ ನಾಯಿಯನ್ನು ಮುದ್ದಾಡಿದ.

ಆಮೇಲೆ ಅದರ ತಲೆಯನ್ನು ಸವರುತ್ತಾ—"ನೀನಾದರೂ ನನ್ನ ಗೋಳು ಕೇಳ್ತೀಯಾ ......ಕೇಳು...... ಎರಡು ದಿನಗಳಿಂದ ನನ್ನ ಜೊತೆಗಿದ್ದು, ನನ್ನ ಕಷ್ಟ-ಸುಖಗಳನ್ನು ನೀನೂ ಅನುಭವಿಸಿದಿ...... ನನಗ ಸಿಕ್ಕಿದ್ದರಾಗ ನಿನಗೂ ಕೊಟ್ಟೆ...... ಅದರಾಗ ನಿನ್ನ ಹೊಟ್ಟೆ ತುಂಬದಿದ್ದರೂ ಕೂಡ, ನೀನು ನನ್ನ ಬೆನ್ನುಬಿಟ್ಟಿಲ್ಲ...... ಎರಡು ದಿನ ಆತು, ಒಂದು ತುತ್ತು ಅನ್ನ ಸಿಕ್ಕಿಲ್ಲ...... ಹಾಂ...... ನನ್ನ ಹತ್ತಿರ ದುಡ್ಡಿಲ್ಲ—ಅಂತ ತಿಳಿದಿ ಏನು?—ಒಂದು ಕಾಲದಾಗ ನನ್ನ ಹತ್ತಿರ ಎಷ್ಟು ದುಡ್ಡಿತ್ತು...... ಅದಕ್ಕs ಅಲ್ಲೇನು ನನ್ನ ಹೆಂಡತಿ ನನಗ ಮೋಸಮಾಡಿದ್ದು. ಅವಳು ಮೋಸಮಾಡ್ತಾಳ ಅಂತ ನನಗ ಮೊದಲs ಅನುಮಾನ ಬಂತು. ಅದಕ್ಕ ನನ್ನ ಐಶ್ವರ್ಯವನ್ನೆಲ್ಲಾ ಎಲ್ಲಿ ಬಚ್ಚಿಟ್ಟೇನಿ ಅಂಬೋದು ಗೊತ್ತೇನು ನಿನಗ...... ಅದನ್ನೆಲ್ಲಾ ಆಮ್ಯಾಲೆ ಹೇಳ್ತೀನೇಳು ನಿನಗ......" ಎನ್ನುತ್ತ ನಾಯಿಮರಿಯನ್ನು ಮತ್ತೆ ಕಂಕುಳಲ್ಲಿ ಎತ್ತಿಕೊಂಡ. ಮತ್ತೆ ಸ್ವಲ್ಪ ಸಮಯದ ನಂತರ, "ನನ್ನ ಅರ್ಧಾಂಗಿ, ನನ್ನ ಸರ್ವಸ್ವದಲ್ಲೂ ಅರ್ಧಪಾಲನ್ನು ಪಡೆದವಳು—ಎಂದು ನಂಬಿದ್ದ ನನ್ನ ಹೆಂಡತಿ...... ಆಪ್ತಸ್ನೇಹಿತನೆಂದು ನಂಬಿದವ ನೊಡನೆ ಸೇರಿಕೊಂಡು, ನನಗೆ ದ್ರೋಹ ಬಗೆದರು...... ನನಗೆ ಮೋಸಮಾಡಿ ದರು...... ಥೂ, ವಿಶ್ವಾಸ ಅಂಬೋದು ಎಲ್ಲಿದ ಈ ಜಾತಿಗೆ......" ಎಂದು, ಒಂದೇ ಸಮನೆ ಅಳಹತ್ತಿದ. ಪುಲ್ಲಯ್ಯ ಕನಿಕರದಿಂದ ಅವನನ್ನೆ ನೋಡುತ್ತಾ ನಿಂತುಬಿಟ್ಟ. —ಅವನ ಆ ಅಳುವು, ಎಷ್ಟೋ ಹೊತ್ತಿನ ವರೆಗೆ ಅವನ ಕಿವಿಯಲ್ಲಿ ಮೊಳಗುತ್ತಲೇ ಇತ್ತು. ದುಃಖಿಸುತ್ತಿದ್ದ ಆ ವ್ಯಕ್ತಿಯಿಂದ ನಾಯಿಯನ್ನು ಪಡೆದುಕೊಳ್ಳುವ ತನ್ನ ಇಚ್ಛೆಯನ್ನು ಬದಲಾಯಿಸಿ ಹಾಗೆಯೇ ಹಿಂದಿರುಗಿದ ಪುಲ್ಲಯ್ಯ.

ಬೆಳಗಾಗುವುದರೊಳಗಾಗಿ, ಆ ವ್ಯಕ್ತಿ ನಾಯಿಯೊಡನೆ ಹೊರಟುಹೋಗಿದ್ದ.

ಮಲ್ಲೇಶಿ ಜೊತೆ ಬರುವುದಾಗಿ ಹಠಮಾಡಿದಾಗ ಅವನನ್ನು ಸಮಾಧಾನಮಾಡಿ ಬಿಟ್ಟುಹೋಗಲು, ಪುಲ್ಲಯ್ಯ ಶತಪ್ರಯತ್ನ ಮಾಡಿದ. ಆದರೆ, ಮಲ್ಲೇಶಿ, ತಂದೆಯನ್ನು ಒಂಟಿಯಾಗಿ ಹೋಗಗೊಡಲಿಲ್ಲ. ನಿರ್ವಾಹವಿಲ್ಲದೆ, ಪುಲ್ಲಯ್ಯ ಅವನನ್ನು ಕರೆದು ಕೊಂಡು ಹೊರಟ. ದಿನವೆಲ್ಲಾ ಸುತ್ತಿ ಕಂಡಕಂಡವರನ್ನೆಲ್ಲ ಕೆಲಸ ಕೇಳಿ ಮೂತಿ ತಿವಿಸಿ ಕೊಂಡು ಬರುವುದನ್ನು ಬಿಟ್ಟು, ಪುಲ್ಲಯ್ಯನಿಗೆ ಯಾವ ಲಾಭವೂ ಆಗಲಿಲ್ಲ. ಕೆಲವ ರಂತೂ, "ನಿನ್ನಂತಹವರಿಗೆ ಯಾರು ಕೆಲಸ ಕೊಡ್ತಾರ ಹೋಗೊ"—ಎಂದು ಮೂದಲಿಸಿ

ದರು. ತಾನು ಈ ಮುಂಚಿನಂತೆ ಮಾಂಸಖಂಡಗಳಿಂದ ತುಂಬಿದ ಗಂಡುಗಲಿಯಾಗಿದ್ದಲ್ಲಿ, ಈಗ ಬಹುಶಃ ತನಗೆ ಕೆಲಸ ಸಿಗುತ್ತಿತ್ತೇನೋ—ಎಂದು ಪುಲ್ಲಯ್ಯ ಅದೆಷ್ಟೋ ಸಲ ಮನಸ್ಸಿನಲ್ಲೆ ಅಂದುಕೊಂಡ. ತಿರುಗಾಡಿ ಬೇಸತ್ತ ಪುಲ್ಲಯ್ಯ, ಕೊನೆಗೆ ಹಳೆಯ ಮಾರು ಕಟ್ಟೆಯನ್ನು ತಲುಪಿದ. ಅಲ್ಲಿ, ಮುದಿ ಹೆಣ್ಣುಮಕ್ಕಳು ಬಿದಿರಿನ ಪುಟ್ಟಿಗಳನ್ನಿಟ್ಟು ಕೊಂಡು ಕೂಲಿಗಾಗಿ ಕಾದು ಕುಳಿತಿದ್ದರು. ಕೆಲಸಕ್ಕಾಗಿ ಕಚ್ಚಾಡುತ್ತಿದ್ದ ಅವರನ್ನು ನೋಡಿ, ಅವರಲ್ಲಿ ಒಬ್ಬನಾಗಿ ತಾನೂ ಸೇರಿಕೊಳ್ಳಬಹುದೇ—ಎಂಬ ಯೋಚನೆ ಬಂತು. ಅಲ್ಲಿ ಸಿಗುವಷ್ಟು ಕೂಲಿ ಮತ್ತೆಲ್ಲಿಯೂ ಸಿಗುತ್ತಿರಲಿಲ್ಲವೆಂಬುದು ನಿಜ ವಾಗಿದ್ದರೂ, ತನ್ನಂತಹವನು ಅವರಲ್ಲಿ ಒಬ್ಬನಾಗಿ ಸೇರಿಕೊಳ್ಳುವುದು...... ಮಲ್ಲಯ್ಯ ನಾಯ್ಡುವಿನ ಮಗನಾಗಿ, ಹತ್ತು ಗ್ರಾಮಗಳಲ್ಲಿ ಹೆಸರು ಪಡೆದು ಘನವಾಗಿ ಬಾಳಿದ ತಾನು, ಈಗ ಗೇಣು ಹೊಟ್ಟೆಗಾಗಿ ಬೀದಿ ಬೀದಿ ಅಲೆಯುವ ಪರಿಸ್ಥಿತಿ ಬಂದಿತಲ್ಲಾ—ಎಂದು ಪುಲ್ಲಯ್ಯ ಕೊರಗಿದ.

ನಡುಮಧ್ಯಾಹ್ನವಾದರೂ, ಹೊಟ್ಟೆ ಹಸಿದಿದ್ದರೂ, ಯಾವುದಾದರೊಂದು ಕೆಲಸ ಕುದುರಿಸಿಕೊಂಡೇ ಹೋಗಬೇಕೆಂಬ ಛಲದಿಂದ ಅಲ್ಲಿಯೇ ಕುಳಿತ. ಅಲೆದು ಸುಸ್ತಾಗಿದ್ದ ಮಲ್ಲೇಶಿಗೆ, ಮುದುಕಿಯೊಬ್ಬಳ ಬಳಿ ಬೇಯಿಸಿದ ಗೆಣಸಿನ ತುಂಡೊಂದನ್ನು ಕೊಡಿಸಿ, ತಾನೂ ಅಲ್ಲಿಯೇ—ಆ ಮುದುಕಿಯ ಬಳಿ—ಕುಳಿತುಕೊಂಡ. ಬೊಚ್ಚು ಬಾಯಿಯ ಆ ಮುದುಕಿ, "ಯಾ ಊರಪಾ ನಿಮ್ಮದು"—ಎಂದು ಮಾತು ಪ್ರಾರಂಭಿಸಿದಳು.

"ಪೂರ್ವದ ನವಿರಿ ಗ್ರಾಮದವರು."

"ಪಟ್ಟಣಾಕ್ಕ ಯಾಕ ಬಂದೀದಿ?"

"ಹೊಟ್ಟೆಪಾಡಿಗೆ—ಕೆಲಸ ಹುಡುಕಲಿಕ್ಕೆ."

"ಹುಂ—ಎಲ್ಲಿ ನೋಡಿದರೂ ಕ್ಷಾಮ, ಅಭಾವ...... ಯಾರಿಗೂ ಸರಿಯಾಗಿ ಒಂದು ಒಪ್ಪತ್ತು ಊಟ ಸಿಗವಲ್ದು. ಇಷ್ಟು ದೊಡ್ಡ ಪಟ್ಟಣ—ಆದರೂ, ಹಗಲಿನ್ಯಾಗ ದೀಪ ಹಚ್ಚಿ ಹುಡುಕಿದರೂ, ಬೇಕಾದವರಿಗೆ ಒಂದು ಕೆಲಸ ಸಿಗಾಣೆಲ್ಲ—ಅಂತಹದ ರೊಳಗ ನೀನು ಯಾಕ ಬಂದ್ಯೋ ನಮ್ಮಪ್ಪಾ." "ಏನು ಮಾಡಬೇಕು. ದಿಕ್ಕಿಲ್ಲದ ಇಲ್ಲಿಗೆ ಬಂದೀವಿ. ಅದಿರಲಿ, ಅವ್ವಾ, ನಿನ್ನ ನೋಡಿಕೊಳ್ಳವರು, ನಿನ್ನವರು ಯಾರೂ ಇಲ್ಲೇನು?" "ಯಾಕಿಲ್ಲ—ಇಬ್ಬರು ಮಕ್ಕಳಿದ್ದಾರ. ಹೆಣ್ಣುಮಕ್ಕಳು ಮಾತ್ರ ಇಲ್ಲ. ಹಿರಿಯವ ಸಿಂಡಿಯಾ ಕಂಪೆನ್ಯಾಗ ಕೆಲಸಕ್ಕಿದ್ದಾನ. ಕಿರಿಯ, ಕೆಲಸ ಇಲ್ಲದ ನಿನ್ನ ಹಾಂಗ ತಿರಗ್ತಾನ ಆತು. ಹಿರಿಯನ ಹೆಣ್ತಿ ನನಗ ಕೂಳು ಹಾಕಾಣೆಲ್ಲ—ಆತು. ಒಂದು ಕಾಲದಾಗ ನಾವೂ ಘನವಾಗಿ ಬಾಳಿಬದುಕಿದ್ದೆ—ಈಗ ಕೂಲಿ ಕೆಲಸ ಮಾಡಲಿಕ್ಕೆ ಮನಸ್ಸು ಒಪ್ಪಒಲ್ಲದು. ನಾನು॥ ಈ ಪೈಸಾ—ಎರಡು ಪೈಸಾದ ವ್ಯಾಪಾರ ಇಟ್ಟುಕೊಂಡೀನಿ. ಈ ಗಡ್ಡಿ—ಗೆಣಸಿನ ವ್ಯಾಪಾರದಾಗಿನ ಗಳಿಕೀನ॥ ನಮ್ಮ ಹೊಟ್ಟೆಗೆ ಆಧಾರ...... . ಕಿರಿಯನಿಗೆ ಹೆಂಡತಿ ಇಬ್ಬರು ಮಕ್ಕಳು ಬ್ಯಾರೆ ಇದ್ದಾರ...... ಒಮ್ಮೊಮ್ಮೆ ಆ ಕೂಸುಗಳು ಕೂಡ

ಹಸಿವಿನಿಂದ ಕಣ್ಣುಕಣ್ಣು ಬಿಡ್ತಾವ...... ಆದರ ಏನು ಮಾಡಬೇಕು—ಆ ನಮ್ಮಪ್ಪ ತಿರುಪತಿ ತಿಮ್ಮಪ್ಪಗ ನಮ್ಮ ಮ್ಯಾಲೆ ಯಾವಾಗ ಕರುಣ ಬರ್‍ತದೊ ಏನೊ?"

ಇವನ್ನು ಕೇಳಿ, ತನ್ನ ಮಕ್ಕಳೆ ಹಸಿವಿನಿಂದ ಕಂಗಾಲಾಗಿ ಕಣ್ಣು ಬಿಡುತ್ತಿರುವಂತೆ ಪುಲ್ಲಯ್ಯ ಪುಲ್ಲಯ್ಯನಿಗೆನಿಸಿತು. ಈ ಪ್ರಪಂಚದಲ್ಲಿ, ತನಗಿದಷ್ಟು ಕಷ್ಟ—ಕಾರ್ಪಣ್ಯಗಳು ಯಾರಿಗೂ ಇಲ್ಲವೆಂದುಕೊಂಡಿದ್ದ ಪುಲ್ಲಯ್ಯ, ಆದರೆ ಈಗ, ತನ್ನಂತೆಯೇ ಇತರರು ಅನೇಕರು ಇದ್ದಾರೆಂಬ ಅರಿವು ಅವನಲ್ಲಿ ಮೂಡಿತು. ಹಣ್ಣುಹಣ್ಣಾದ ಈ ಮುದುಕಿ, ತನ್ನ ಬಾಳಿನ ಕಹಿಯನ್ನು ನುಂಗಿಕೊಂಡು ಧೈರ್ಯದಿಂದಿರುವುದು ಆಶ್ಚರ್ಯವೆನಿಸಿತು. ಆವ ಳಿಗೆ ಯಾವುದರ ಮೇಲೂ ಅಚಲ ವಿಶ್ವಾಸವಿದೆ. ಆ ವಿಶ್ವಾಸದಿಂದಲೇ ಅವಳು ಎಂತಹ ಕಷ್ಟ ಬಂದರೂ ಎದುರಿಸಬಲ್ಲೆನೆಂಬ ಧೈರ್ಯದಿಂದ ಸುಖವಾಗಿದ್ದಾಳೆ. ಅವಳಿಗಿದ್ದ ಧೈರ್ಯ, ವಿಶ್ವಾಸ ತನಗೇಕಿಲ್ಲ—ಅವಳು ಇದ್ದಂತೆ ತಾನೇಕೆ ಇರಬಾರದೆಂದು ಪುಲ್ಲಯ್ಯ, ತನ್ನನ್ನು ತಾನೆ ಪ್ರಶ್ನಿಸಿಕೊಂಡ.

ಅದುವರೆಗೆ ತನ್ನಲ್ಲಿ ಮನೆಮಾಡಿದ್ದ ನಿರಾಶೆ ದೂರವಾಗಿ, ಆತ್ಮ ವಿಶ್ವಾಸ ಮೂಡಿದ್ದ ರಿಂದ, ಪುಲ್ಲಯ್ಯ ಅಲ್ಲಿದ್ದೆದ್ದು ಮುನ್ನಡೆದ.

ಒಂದು ಅಂಗಡಿಯ ಮುಂದೆ, ಹತ್ತಿಪ್ಪತ್ತು ಜನರು ಸೇರಿ ಏನನ್ನೋ ನೋಡು ತ್ತಿದ್ದರು. ಅಲ್ಲಿ ಏನಿದೆ —ಎಂಬುದನ್ನು ನೋಡಲು, ಪುಲ್ಲಯ್ಯ ಆ ಗುಂಪಿನಲ್ಲಿ ನುಸುಳಿದ. ಅಲ್ಲಿ ಹೊಸ ಸೈಕಲ್ ರಿಕ್ಷಾಗಳನ್ನು ಇಡಲಾಗಿತ್ತು. ಅಲ್ಲಿ ಸೇರಿದ್ದ ಪುಲ್ಲಯ್ಯನಂತಹವರು ಅನೇಕರು, ಆಸೆಯಿಂದ ಅವನ್ನೆ ನೋಡುತ್ತಾ ನಿಂತಿದ್ದರು.

ಆ ರಿಕ್ಷಾಗಳನ್ನು ನೋಡಿ, ಪುಲ್ಲಯ್ಯನ ಮನಸ್ಸಿನಲ್ಲೂ ಸಹ ಆಸೆಯ ಬೀಜ ಮೊಳಕೆ ಯೊಡೆಯಿತು. ಒಂದು ರಿಕ್ಷಾ ಸಿಕ್ಕಲ್ಲಿ, ಆದರಿಂದ ಬರುಸ ಗಳಿಕೆಯಲ್ಲಿ ಅರ್ಧ ಅದರ ಮಾಲೀಕರಿಗೆ ಕೊಟ್ಟು, ಉಳಿದರ್ಧದಲ್ಲಿ ಸುಖವಾದ ಬಾಳು ನಡೆಸಬಹುದೆಂದು ಕೊಂಡ. ಆದರೆ, ಮರುಕ್ಷಣವೇ,—ಒಂದು ಕಾಲದಲ್ಲಿ ನಾಲ್ಕು ಜನರನ್ನು ಕೈಕೆಳಗಿಟ್ಟು ಕೊಂಡು ಬಾಳಿದ ತಾನು, ಈಗ ಗುದುರೆಯಂತೆ ಜನರನ್ನು ಹೊತ್ತು ತಿರುಗಬೇಕೆ?...... ಒಂದು ವೇಳೆ ನಾನು ಈ ಕೆಲಸಕ್ಕೆ ಕೈಹಾಕಿದಲ್ಲಿ, ಅದು ಊರಿನ ಜನರಿಗೆ ತಿಳಿದಲ್ಲಿ...... ಅವರು ನನ್ನನ್ನು ಕುಲಭ್ರಷ್ಟನನ್ನಾಗಿ ಮಾಡಿದರೆ?...... ಮತ್ತೆ ನಾನು ಆ ಊರಿನವರಿಗೆ ಮುಖ ತೋರಿಸಬಲ್ಲೆನೆ......? ಛೆ......ಛೆ...... ಇದೆಂತಹ ಕೆಲಸ ಹಾಳಾದ್ದು— ಎಂದುಕೊಂಡು ಪುಲ್ಲಯ್ಯ ಆ ಗುಂಪಿನಿಂದ ದೂರ ಸರಿದ.

ನಾಲ್ಕೈದು ಅಂಗಡಿಗಳಲ್ಲಿ ಕೆಲಸಕ್ಕಾಗಿ ಬಾಯಿಬಿಟ್ಟು, ಅವರಿಂದ 'ಇಲ್ಲ' ಎನ್ನಿಸಿ ಕೊಂಡ ಪುಲ್ಲಯ್ಯ, ಮತ್ತೆ ಅದೇ ಅಂಗಡಿಗೆ ಬಂದ. ಈ ಸಲ ಮಾತ್ರ, ಹಿಂದೆಮುಂದೆ ಯೋಚಿಸದೆ ಒಳಹೋಗಿ, ಅಂಗಡಿಯ ಯಜಮಾನನನ್ನೇ ಮಾತನಾಡಿಸಿದ.

"ದಿನಕ್ಕೆ ಎರಡು ರೂಪಾಯಿ ಬಾಡಿಗೆ ಮೇಲೆ, ನಾವು ಆ ರಿಕ್ಷಾ ಕೊಡ್ತೀವಿ"— ಎಂದು ಯಜಮಾನ ಠೀವಿಯಿಂದ ಹೇಳಿದ.

"ದಿನಕ್ಕ ಎರಡು ರೂಪಾಯಿ......"

"ಹೌದು ಮತ್ತ, ನಿನಗ ಎಂದಾದರೂ ಒಂದು ದಿನ ಹತ್ತು ರೂಪಾಯಿ ಗಳಿಸಲಿಕ್ಕೆ ಬಂತೂ ಅಂದರ, ನೀ ಏನು ನನಗ ಹೆಚ್ಚಿಗೆ ಬಾಡಿಗೆ ಕೊಡ್ತಿ ಏನು......? ಎರಡು ರೂಪಾಯಿ ಅಂದರ ಮುಖ ಸೊಟ್ಟು ಮಾಡ್ತಿಯಲ್ಲ......"

"ಹಳ್ಳಿ ಪೆದ್ದರೀ ಧಣೇರ. ನನಗ ಈ ಬಗ್ಗೆ ಹೆಚ್ಚಿಗೆ ಗೊತ್ತಿಲ್ಲ...... ಈ ರಿಕ್ಷಾ ನಡಸೊದರೊಳಗ, ಅಷ್ಟು ದುಡ್ಡು ಬರ್‍ತದೇನ್ರಿ?"

"ಹಡಗಿನೊಳಗ ಬಂದ ಇಳಿಯುವ ಜನರನ್ನ—ಅದರೊಳಗ ಕುಡುದು ಮೈಮರೆತ ಜನರನ್ನ, ಸೋಗಲಾಡೇರ ಓಣಿಗೆ ಕರಕೊಂಡು ಹೋಗಿ ಬಿಟ್ಟ ಅಂದರ, ಒಂದs ಯಾಕ ಐದು ರೂಪಾಯಿ ಆದರೂ ಕೊಟ್ಟು ಹೋಗತಾರ."

"ಸೋಗಲಾಡೇರ ಓಣಿ—ಹಾಂಗಂದ್ರ ಏನ್ರಿ ಧಣೇರ......?"

"ನೀನೆಂತಹ ಪೆದ್ದಲೇ—ಸೋಗಲಾಡೇರ ಓಣಿ ಗೊತ್ತಿರದ ನೀನೇನು ರಿಕ್ಷಾ ನಡಸ್ತೀದಿ...... ಆ ಓಣಿ ಒಳಗಿರೊ ಪಾತರದವರ್‍ನ ನೋಡಿದರ ಕಣ್ಣು ತಿರಗ್ತಾವ......"

ಪುಲ್ಲಯ್ಯನಿಗೆ ಇದು ಸರಿತೋರಲಿಲ್ಲ. ಒಂದು ವೇಳೆ ಯಾರಾದರೂ, ತಾನು ಪಟ್ಟ ಕಷ್ಟಕ್ಕೆ ಪ್ರತಿಫಲವಾಗಿ ಹೆಚ್ಚಿಗೆ ದುಡ್ಡು ಕೊಟ್ಟರೆ, ಅದನ್ನು ಪಡೆಯುವುದು ಅನ್ಯಾಯ ವಾಗುತ್ತದೆ. ಅದಲ್ಲದೆ, ಆ ಸೂಳೇರ ಕೇರಿಗೆ ಹೋಗೋದು ಅಂದರ—ನಾಚಿಗ್ಗೇಡು ......ಆದರೂ, ಬ್ಯಾರೆ ಕಡೆ ಸವಾರಿ ಕರಕೊಂಡು ಹೋಗಿ ನಾಲ್ಕು ಕಾಸು ಮಾಡಿಕೊಳ್ಳ ಬಹುದೆಂಬ ಆಶೆಯಿಂದ—

"ಆಗಲ್ರಿ ಧಣೇರ. ರಿಕ್ಷಾ ಕೊಡ್ರಿ. ದಿನಕ್ಕ ಎರಡು ರೂಪಾಯಿ ಬಾಡಿಗೆ ಕೊಡ್ತೀನಿ" —ಎಂದು ಕೇಳಿದ.

"ಸರೆ. ಮೊದಲ ಇಪ್ಪತ್ತೈದು ರೂಪಾಯಿ ಡಿಪಾಜಿಟ್ ಇಡು"—ಅಂಗಡಿಯ ಯಜಮಾನ ಗಂಭೀರವಾಗಿ ಹೇಳಿದ.

"ಡಿಪಾಜಿಟ್ಟು—ಹಾಂಗಂದ್ರ ಏನ್ರಿ ಧಣೇರ?"

"ಛೆ—ನಿಮ್ಮಂತಹವರಿಗೆ ಏನೂ ತಿಳಿಯಾಣಿಲ್ಲ ನೋಡು. ಅದರೊಳಗ ಈ ಪೂರ್ವದ ಊರುಗಳಿಂದ ಬಂದವರಿಗಂತೂ, ಬುದ್ಧೀನೆ ಇಲ್ಲ—ಕಳವು ಮಾಡಿ ಓಡಿ ಹೋಗೋದು ಬಿಟ್ಟರ, ಮತ್ತಾವ ಶಾಣೇತನಾನೂ ಇಲ್ಲ......"

ಅವನ ಈ ಮಾತುಗಳನ್ನು ಕೇಳಿ ಪುಲ್ಲಯ್ಯನ ಮೈ ಉರಿಯಿತಾದರೂ, "ಅದಕ್ಕ ಇಪ್ಪತ್ತೈದು ರೂಪಾಯಿ ಇಡಬೇಕs?" ಎಂದು ತನ್ನ ಅಚ್ಚರಿಯನ್ನು ವ್ಯಕ್ತಪಡಿಸಿದ.

"ರಿಕ್ಷಾ ಬಾಡಿಗೆಗೆ ತೊಗೊಳ್ಳೋದು ಸುಲಭಲ್ಲ. ಒಂದು ರಿಕ್ಷಾ ಇದ್ದರ, ಇಪ್ಪತ್ತು ಮಂದಿ ಮುಗಿ ಬೀಳ್ತಾರ—ನೀನು ಎಂದು ಬಾಡಿಗೆ ಕೊಡಾಣಿಲ್ಲೊ ಅಥವಾ ಎಂದು ರಿಕ್ಷಾ ವಾಪಸ್ ಕೊಡತಿಯೊ, ಅಂದು ನಿನ್ನ ಇಪ್ಪತ್ತೈದು ರೂಪಾಯಿ ನಿನಗ ಕೊಟ್ಟುಬಿಡ್ತೀವಿ—ತಿಳೀತs" ಯಜಮಾನ ವಿವರಿಸಿದ.

ಪುಲ್ಲಯ್ಯ, ತನ್ನ ಬಳಿ ದುಡ್ಡಿಲ್ಲವೆಂದೂ, ತನ್ನ ಮೇಲೆ ಕನಿಕರ ತೋರಬೇಕೆಂದೂ ಅಂಗಲಾಚಿ ಬೇಡಿಕೊಂಡ. ಏನು ಮಾಡಿದರೂ ಅಂಗಡಿಯವನ ಮನಸ್ಸು ಕರಗ ದಿದ್ದಾಗ, ಹೇಗಾದರೂ ಮಾಡಿ ದುಡ್ಡು ತರುವುದಾಗಿಯೂ, ಅದು ವರೆಗೆ ಆ ರಿಕ್ಷಾ ಯಾರಿಗೂ ಕೊಡಬಾರದೆಂದೂ ಗೋಗರಿದ.

"ನಿನ್ನಂತಹವರು ಹತ್ತು ಮಂದಿ ಬಂದುಹೋಗ್ತ್ಯಾರ ಆಗಲೇ. ನಾಳೆ ಮುಂಜಾನಿ ವರೆಗೆ ವಾಯಿದಾ ಕೊಟ್ಟೀನಿ. ಬೆಳಗಾಗುತ್ತಲೇ ನೀನು ಬರದಿದ್ದರ, ಮತ್ಯಾರಿಗಾದರೂ ಕೊಡ್ತೀನಿ" ಎಂದು ಆತ ಸ್ಪಷ್ಟವಾಗಿ ಹೇಳಿದ.

ಪುಲ್ಲಯ್ಯ, 'ಆಗಲಿ'—ಎಂದು ತಲೆ ಹಾಕಿ ಅಲ್ಲಿಂದ ಹೊರಟ. "ಒಮ್ಮೆಲೆ ಇಪ್ಪತ್ತೈದು ರೂಪಾಯಿ ಎಲ್ಲಿಂದ ತರಲಿ? ಮನ್ಯಾಗ ನೋಡಿದರ ಒಂದು ಕಾಸೂ ಇಲ್ಲ. ಈ ರಾತ್ರಿ ಹೊಟ್ಟಿ ಹ್ಯಾಂಗ ತುಂಬಿಕೊಳ್ಳಬೇಕು ಅಂಬೋದs ತಿಳೀಒಲ್ಲದು—ಇಂಥಾದರೊಳಗ, ಒಂದಲ್ಲ-ಎರಡಲ್ಲ, ಇಪ್ಪತ್ತೈದು ರೂಪಾಯಿ ಎಲ್ಲಿಂದ ತರಬೇಕು?—ಯಾರನ್ನಾದರೂ ಸಾಲ ಕೇಳಬೇಕಂದರ ಅಪರಿಚಿತವಾದ ಈ ಊರಾಗ ಯಾರು ಸಾಲ ಕೊಟ್ಟಾರು? ಊರಾಗಿದ್ದಿದ್ದರ, ಹ್ಯಾಂಗೊ ಆಗ್ತಿತ್ತು. ಇದ್ದ ಚೂರು ಭೂಮಿಮನಿ, ಆ ರಾಜಣ್ಣಗ ಒಪ್ಪಿಸಿ, ನೀರು ಬಿಟ್ಟು ಬಂದೀನಿ. ಏನಾರ ಅಡವು ಇಟ್ಟು ದುಡ್ಡು ಪಡಿಬೇಕಂದರ, ಅದಕ್ಕೂ ಆಸರ ಇಲ್ಲದ್ಹಾಂಗ ಆಗ್ಯದ......"

ಪುಲ್ಲಯ್ಯ ರಸ್ತೆಯಲ್ಲಿ ಹೊರಟಿದ್ದನಾದರೂ, ಅವನ ಮನಸ್ಸು ಮತ್ತೆಲ್ಲಿಯೊ ಇತ್ತು. ಅನ್ಯಮನಸ್ಕನಾಗಿಯೆ ಗುಡಿಸಲಿಗೆ ಹಿಂದಿರುಗಿ, ತನ್ನ ತಲೆ ತಿನ್ನುತ್ತಿದ್ದ ಸಮಸ್ಯೆ ಯನ್ನು ನೀಲಿಯ ಮುಂದಿಟ್ಟ. ಆದರೆ ನೀಲಿ, ಏನೂ ಹೇಳಲಿಲ್ಲ. ಪುಲ್ಲಯ್ಯ, ಮಧ್ಯಾಹ್ನದ ಗಂಜಿ ಕುಡಿದು ಮನೆಯ ಮುಂದಿನ ಅಂಗಳದಲ್ಲಿ ಕುಳಿತ. ರಸ್ತೆಯಲ್ಲಿ ಹೋಗಿಬರುವ ಜನರನ್ನು ನೋಡುತ್ತಿದ್ದ ಪುಲ್ಲಯ್ಯನಿಗೆ, ಅವರ ಜೇಬುಗಳು ದಪ್ಪವಾಗಿ ಉಬ್ಬಿರುವುದು ಕಂಡಿತು. ಅವರ ಆ ಉಬ್ಬಿದ ಜೇಬುಗಳಲ್ಲಿ ದುಡ್ಡಿರಬಹುದೆ—ಇದ್ದಲ್ಲಿ, ಅವರ ಪೈಕಿ ಯಾರಾದರೂ, ಇಪ್ಪತ್ತೈದು ರೂಪಾಯಿ ಸಾಲ ಕೊಡಬಹುದೆ ......ಆ ಹೆಂಗಸು, ತನ್ನ ಕುತ್ತಿಗೆಯನ್ನು ಅಲಂಕರಿಸಿರುವ ಆ ಸರದ ಭಾರದಿಂದ, ಅದನ್ನು ಹೊರಲಾರದೆ ನಡೆಯುತ್ತಿದ್ದಾಳೆ—ಅವಳೇನಾದರೂ ಬಡ್ಡಿಯ ಮೇಲೆ ಇಪ್ಪತ್ತೈದು ರೂಪಾಯಿ ಕೊಡಬಹುದೇ...... ಹೋಗಿ ಕೇಳಬೇಕು—ಎಂದುಕೊಂಡ. ಆದರೆ, ಮರುಗಳಿಗೆಯಲ್ಲಿ, ಅವಳಿಂದ ಬರಬಹುದಾದ ಉತ್ತರ ಊಹಿಸಿಕೊಂಡು ಕುಳಿತ ಸ್ಥಳದಿಂದ ಕದಲಲಿಲ್ಲ.—ರಾತ್ರಿ ಆ ಗಿಡದ ಕೆಳಗ ಕುಳಿತ ಆ ವ್ಯಕ್ತಿ, ತಾನು ತನ್ನ ಐಶ್ವರ್ಯ ಎಲ್ಲ ಬಚ್ಚಿಟ್ಟೀನಿ ಅಂಬೋದು ಹೇಳಿದರ, ಅದರಾಗ ಇಪ್ಪತ್ತೈದು ರೂಪಾಯಿಗೆ ಬೇಕಾದಷ್ಟು ಮಾತ್ರ ಬಂಗಾರ ತೊಗೊಂಡು ಮುಂದ ಗಳಿಸಿ ಹಿಂದಿರುಗಿಸ ಬಹುದು......

ನಿಮಿಷನಿಮಿಷಕ್ಕೂ ಪುಲ್ಲಯ್ಯನ ಕಳವಳ ಹೆಚ್ಚಿತು. ಆದರಿಂದಾಗಿ, ಸರಿಯಾಗಿ ಯೋಚಿಸುವ ಶಕ್ತಿಯನ್ನೂ ಸಹ ಅವನು ಕಳೆದುಕೊಂಡ. ಯಾವ ಒಂದು ನಿರ್ಧಾರಕ್ಕೂ ಬಾರದೆ ತೊಳಲಾಡುತ್ತಿರುವಾಗಲೇ ಕತ್ತಲಾಯಿತು. ಅಂದು ಏಕೊ ಏನೊ ಬೀದಿ ದೀಪಗಳು ಹತ್ತಿರಲಿಲ್ಲ. ಆದರೂ ಪುಲ್ಲಯ್ಯ, ಆ ಕತ್ತಲಿನಲ್ಲಿಯೇ ಕುಳಿತಿದ್ದ. ಪಕ್ಕದ ಗುಡಿಸಲಿನ ಹೆಂಗಸು, ಗಂಡ ಮನೆಯಲ್ಲಿ ಇರಲಿಲ್ಲವಾದ್ದರಿಂದ, ಯಾವುದೊ ಸಿನಿಮಾ ಹಾಡನ್ನು ತನಗೆ ಬಂದಂತೆ ಹೇಳಿಕೊಳ್ಳುತ್ತಿದ್ದಳು. ನೀಲಿ, ಮನೆಯಲ್ಲಿದ್ದುದನ್ನೆ ಬೇಯಿಸಿ ಮಕ್ಕಳಿಗೆ ಕೊಟ್ಟು, ಗಂಜಿ ಕುಡಿಯಲು ಗಂಡನನ್ನು ಕರೆದಳು.

ಅರ್ಧ ಗಂಜಿಯನ್ನು ಕುಡಿದು, ಹೆಂಡತಿಯ ಮುಖ ನೋಡಿ, ಹಸಿವಿದ್ದರೂ ಉಳಿದರ್ಧವನ್ನು ಹಾಗೆಯೆ ಉಳಿಸಿ ಎದ್ದುಬಿಟ್ಟ ಪುಲ್ಲಯ್ಯ.

ರಾತ್ರಿ ಸ್ವಲ್ಪ ಚಳಿ ಆಗತೊಡಗಿತ್ತು. ಆದರೂ, ತಂದೆ—ಮಗ ಅಂಗಳದಲ್ಲೆ ಮಲಗಿದ್ದರು. ನೀಲಿ, ಒಳಗೆ ಮಗಳ ಜೊತೆ ಮಲಗಿದ್ದಳು. ಆಗಲೇ ಹನ್ನೊಂದು ಗಂಟೆಯಾಗಿತ್ತು. ಮಲ್ಲೇಶಿ, ತಂದೆಯ ಎದೆಯ ಮೇಲೆ ಮಲಗಿ ಹಾಯಾಗಿ ನಿದ್ರಿಸುತ್ತಿದ್ದ. ಪುಲ್ಲಯ್ಯನಿಗೆ, ಮನಸ್ಸಿನಲ್ಲಿದ್ದ ಕಳವಳದಿಂದಾಗಿ ಇನ್ನೂ ನಿದ್ರೆ ಬಂದಿರಲಿಲ್ಲ.—ಈ ರಾತ್ರಿ ಕಳೆಯುವುದರೊಳಗಾಗಿ, ಹೇಗಾದರೂ ಮಾಡಿ, ಇಪ್ಪತ್ತೈದು ರೂಪಾಯಿ ಸಂಪಾದಿಸಬೇಕು—ಈ ರಾತ್ರಿ, ಈ ಹಣ ಸಿಕ್ಕಲ್ಲಿ, ನನ್ನ ಮುಂದಿನ ಬದುಕಿನ ದಾರಿಸುಗಮವಾಗುತ್ತದೆ...... ಆದರೆ, ಇಷ್ಟೊಂದು ದುಡ್ಡು ಎಲ್ಲಿ ಸಿಗಬೇಕು? ಯಾರನ್ನೇ ಆಗಲಿ ಕಾಡಿ—ಬೇಡಿದರಂತೂ ಈ ದುಡ್ಡು ಕೈಗೆ ಹತ್ತಾಣೆಲ್ಲ...... ಕಳವು ಮಾಡಿದರ...... ಛೆ—ಛೆ—ಇದೆಂತಹ ಆಲೋಚನೆ......?

ಪುಲ್ಲಯ್ಯ, ನೀಲಮ್ಮದೇವಿಯನ್ನು, ರಾಮದಾಸುವನ್ನು ನೆನೆದ. ಈ ಆಪತ್ಕಾಲದಲ್ಲಿ ತನಗೆ ನೆರವಾಗಬೇಕೆಂದು ಮನಸ್ಸಿನಲ್ಲೆ ಬೇಡಿಕೊಂಡ. ಹಾಗೆ ಯೋಚಿಸುತ್ತಿರುವಾಗಲೇ, ಆ ಕತ್ತಲಿನಲ್ಲಿ ಯಾರದೊ ಕಾಲಿನ ಸಪ್ಪಳ ಕೇಳಿಸಿತು. ರಾಮದಾಸುವೇನಾದರೂ ಅವತಾರ ತಾಳಿ ಬಂದಿರಬಹುದೆ? ಅಥವಾ, ಮತ್ತಾರಾದರೂ ಇರಬಹುದೆ? ಅಥವಾ ರಾತ್ರಿ ನಾಯಿಮರಿಯನ್ನು ಎತ್ತಿಕೊಂಡು ಗೋಳಿಟ್ಟ ವ್ಯಕ್ತಿ ಬಂದಿರಬಹುದೇ? —ಎಂದು ಪುಲ್ಲಯ್ಯ ಯೋಚಿಸುತ್ತಿರುವಾಗಲೇ, ಪಕ್ಕದ ಗುಡಿಸಲಿನ ಆ ಯುವಕ ಬಂದು ತನ್ನ ಗುಡಿಸಲಿನೊಳ ಹೊಕ್ಕ. ಒಂದು ನಿಮಿಷ ಎಲ್ಲವೂ ಮೌನವಾಗಿತ್ತು. ಆ ಮೇಲೆ, ಗುಸುಗುಸು ಕೇಳಿಸಹತ್ತಿತು.

"ನೋಡs......"

"ಹಾಂ...... !"

"ನಿನ್ನ ಹೀಂಗ ಬಡತನದಾಗ ಇಡ್ತೀನಿ ಅಂತ ತಿಳಿದಿ ಏನು? ಸಾಹುಕಾರರ ಹೆಣ್ಣು ಮಕ್ಕಳ ಹಾಂಗ, ಸಿಲ್ಕು ಸೀರೆ ಉಟ್ಟುಕೊಂಡು ಮಜಾ ಮಾಡುವಂತಿ......"

"ಅದಿರಲಿ—ಇಷ್ಟು ದುಡ್ಡು ಎಲ್ಲಿಂದ ಸಿಕ್ಕಿತು ನಿನಗ?"

"ಸಿಗತದೇನs ಹುಚ್ಚಿ, ವಾಲ್ಡೇರು ಸ್ಟೇಷನ್ನಿನ್ಯಾಗ, ಯಾರದೊ ಜೇಬಿಗೆ ಕತ್ತರಿ ಹಾಕಿದೆ—ಆತು."

"ಯಾರೂ ಹಿಡೀಲಿಲ್ಲೇನು ನಿನ್ನ?"

"ಟಿಕೆಟ್ ತೊಗೊಳ್ಳೊ ಕಿಡಕಿ ಹತ್ತಿರ ನೂಕು–ನುಗ್ಗಲು ಬಹಳ. ಆ ಗದ್ದಲದಾಗ ಜೇಬು ಕತ್ತರಿಸೋದು ಏನು ಮಹಾ......"

ಇದನ್ನು ಕೇಳಿಸಿಕೊಂಡ ಪುಲ್ಲಯ್ಯನ ಮನಸ್ಸಿನಲ್ಲಿ ಹುಚ್ಚು ಹೊಳೆ ಹರಿಯಿತು. ತನ್ನ ಭವಿಷ್ಯಕ್ಕಾಗಿ, ತನ್ನ ಮುಂದಿನ ಜೀವನಕ್ಕಾಗಿ, ತಾನೂ ಕೂಡ, ಒಂದು ಸಲ—ಒಂದೇ ಒಂದು ಸಲ, ಈ ಕೆಲಸ ಮಾಡಬಾರದೇಕೆ? "ಮತ್ತ, ಈ ಜನ್ಮದಾಗ ಇಂತಹ ಕೆಟ್ಟ ಕೆಲಸ ಮಾಡಾಣಿಲ್ಲ. ಆದಲ್ಲದ, ನನಗ ಸಿಗೊ ದುಡ್ಡಿನ ಹತ್ತುಪಟ್ಟು ದುಡ್ಡು, ಆ ಮನುಷ್ಯನ ಹೆಸರಿಲೆ ದಾನಮಾಡ್ತೀನಿ"—ಇದೇ ಸರಿ ಎಂದುಕೊಂಡು, ಪುಲ್ಲಯ್ಯ, ಎದೆಯ ಮೇಲೆ ಮಲಗಿದ್ದ ಮಗನನ್ನು ಪಕ್ಕಕ್ಕೆ ಮಲಗಿಸಿದ...... ಆದರೆ, ಮಲ್ಲೇಶಿ, ಕಣ್ಣು ಹೊಸೆಯುತ್ತ ಎದ್ದು ಕುಳಿತೇಬಿಟ್ಟ...... "ಇವನದೊಂದು ತ್ರಾಸs ಅದs"—ಎಂದುಕೊಂಡು, ಅವನನ್ನು ಮತ್ತೆ ಎದೆಯ ಮೇಲೆ ಹಾಕಿಕೊಂಡು ಬೆನ್ನು ಸವರತೊಡಗಿದ.

ರೈಲು ಕೂಗುಹಾಕಿದ್ದು ಸ್ಪಷ್ಟವಾಗಿ ಕೇಳಿತು. ರೈಲು, ಸ್ಟೇಷನ್ನಿನ ಸಮೀಪ ಇರಬಹುದು—ಜನರು ನಾ ಮುಂದೆ–ನೀ ಮುಂದೆ ಎನ್ನುತ್ತ ಟಿಕೆಟ್ ಕೊಳ್ಳಲು ಧಾವಿಸುತ್ತಿರಬಹುದು. ಆ ಗದ್ದಲ—ಆ ಕೋಲಾಹಲ—ಆ ಜನರ ಗುಂಪನ್ನು ಸೇರಿ, ಯಾರದೊ ಜೇಬಿಗೆ ಕೈಹಾಕಿ 'ಪರ್ಸು' ಹಾರಿಸಿದಂತೆ—ಪುಲ್ಲಯ್ಯ ಊಹಿಸಿಕೊಂಡ.

ಮಲ್ಲೇಶಿಯನ್ನು ನಿಧಾನವಾಗಿ, ಅವನಿಗೆ ಎಚ್ಚರವಾಗದಂತೆ, ಹಾಸಿಗೆಯ ಮೇಲೆ ಮಲಗಿಸಿ, ಧೈರ್ಯದಿಂದ ನಾಲ್ಕು ಹೆಜ್ಜೆ ಮುಂದಿಟ್ಟ. ಮಲ್ಲೇಶಿ, ಅಳುತ್ತ ಎದ್ದು ಕುಳಿತವನು ತಂದೆಯ ಹಿಂದೆ ಓಡಹತ್ತಿದ. ಪುಲ್ಲಯ್ಯನಿಗೆ ರಕ್ತ ನೆತ್ತಿಗೇರಿ, ಸಿಟ್ಟು ಉಕ್ಕಿ ಬಂತು. ಆದರೂ ಅದನ್ನು ತೋರಗೊಡದೆ ಹಿಂದೆ ಬಂದು, ಮಗನನ್ನು ಹಾಸಿಗೆಯ ಮೇಲೆ ಮಲಗಿಸಿ ತಟ್ಟತೊಡಗಿದ. ಸ್ವಲ್ಪ ಹೊತ್ತಿನ ಮೇಲೆ, ಮಲ್ಲೇಶಿ ನಿದ್ದೆ ಮಾಡುತ್ತಿರುವವನಂತೆ ಕಣ್ಣು ಮುಚ್ಚಿ ಮಲಗಿದ್ದನ್ನು ನೋಡಿ, ನಿಧಾನವಾಗಿ ಮೇಲೆದ್ದು, ಯಾವ ಸದ್ದೂ ಮಾಡದೆ ಮುಂದೆ ಹೊರಟ. ತಂದೆಯ ಕೈ, ಬೆನ್ನು ತಟ್ಟುವುದನ್ನು ನಿಲ್ಲಿಸಿದಾಗ, ಮಲ್ಲೇಶಿ ತಲೆ ಎತ್ತಿ ನೋಡಿದ. ತಂದೆ, ಸರಸರನೆ ರಸ್ತೆಯಲ್ಲಿ ಹೋಗುತ್ತಿರುವುದು ಅವನಿಗೆ ಕಾಣಿಸಿತು. ಆ ಎಳೆಯ ಮನಸ್ಸಿಗೆ, ಹೇಗೊ–ಏನೊ, ಒಂದು ವಿಚಾರ ಹೊಳೆಯಿತು. ತಾನು ಬೆನ್ನುಬಿದ್ದಲ್ಲಿ, ತಂದೆ ತನ್ನನ್ನು ಜೊತೆಗೆ ಕರೆದುಕೊಂಡು ಹೋಗಲಾರ. ಕರೆದುಕೊಂಡು ಹೋಗು ಎಂದು ಹಠ ಮಾಡಿದಲ್ಲಿ ಹೊಡೆದರೂ ಹೊಡೆಯಬಹುದು...... ಮಲ್ಲೇಶಿ ದೂರದಿಂದಲೇ ತಂದೆಯನ್ನು ಅನುಸರಿಸಿದ...... ಅವನು ನಿಂತಾಗ ತಾನೂ ನಿಂತ. ಅವನು ಹೊರಟಾಗ ತಾನೂ ಮುಂದೆ ನಡೆದ.

ರಾತ್ರಿ ಹನ್ನೆರಡು ಗಂಟೆಯಾಗಿತ್ತು...... ಊರಿಗೆ ಊರೆ ನಿದ್ರಾದೇವಿಗೆ ವಶವಾಗಿತ್ತು. ಪುಲ್ಲಯ್ಯ, ದೊಡ್ಡದೊಡ್ಡ ಹೆಜ್ಜೆ ಹಾಕಿ ವಾಲ್ತೇರು ಸ್ಟೇಷನ್ ತಲುಪಿದ. ಮಲ್ಲೇಶಿ ಕೂಡ ಸ್ಟೇಷನ್ ಅನ್ನು ತಲುಪಿ, ತಂದೆಗೆ ಕಾಣಿಸದಂತೆ ಕಂಬದ ಮರೆಯಲ್ಲಿ ನಿಂತ.

ಸ್ಟೇಷನ್‌ನಲ್ಲಿ, ಮೂರನೆಯ ತರಗತಿಯ ಬುಕಿಂಗ್ ಆಫೀಸಿನ ಬಳಿ, ಜನ ಜಂಗುಳಿ ಹೆಚ್ಚಾಗಿತ್ತು. ಅದನ್ನು ನೋಡಿದ ಪುಲ್ಲಯ್ಯನಿಗೆ, ಒಂದೆಡೆ ಸಂತೋಷವಾದರೆ, ಒಂದೆಡೆ ಭಯ ಆವರಿಸಿಕೊಂಡಿತು. ಮೈಯಲ್ಲಿ ಒಂದು ತೆರನಾದ ನಡುಕ ಹುಟ್ಟಿತು. ಆದರೂ, ತನ್ನ ಜೀವನವನ್ನು ಸುಗಮ ಮಾಡಿಕೊಳ್ಳುವ ಅವಕಾಶ ಇದೊಂದೇ—ಎಂದು ನಂಬಿದ್ದ ಪುಲ್ಲಯ್ಯ, ಗಟ್ಟಿ ಧೈರ್ಯಮಾಡಿ ಮುಂದಕ್ಕೆ ಹೆಜ್ಜೆ ಇಟ್ಟ. ಅತ್ತನಿಂದ ಬರುತ್ತಿದ್ದ ಒಬ್ಬ ವ್ಯಕ್ತಿಯನ್ನು ನೋಡಿ,—"ಇವನ ಹತ್ತಿರ ದುಡ್ಡು ಇರಬಹುದು. ಹೋಗಿ, ಅವನ ಊರು–ಕೇರಿ—ಎಲ್ಲಾ ಕೇಳಿ ಇಟ್ಟುಕೊಬೇಕು. ಆಮ್ಯಾಲ ಅವನ ಜೇಬಿಗೆ ಕನ್ನಹಾಕಿ ಇಪ್ಪತ್ತೈದು ರೂಪಾಯಿ ಮಾತ್ರ ಬಳಸಿಕೊಳ್ಳಬೇಕು. ಮುಂದ, ಆ ದುಡ್ಡನ್ನು ಸೇರಿಸಿ, ಅವನ ಮನಿಗೆ ಹೋಗಿ ಮುಟ್ಟಿಸಬೇಕು—ಹೊಟ್ಟಿಗಾಗಿ ಹೀಂಗ ಮಾಡಿದೆ ಅಂತ ಹೇಳಿ ಕ್ಷಮಾಪಣೆ ಕೇಳಬೇಕು ಆಯ್ತು...... ಮುಂದ ದೇವರಿದ್ದಾನ"—ಎಂದು ನಿರ್ಧರಿಸಿದ.

"ಯಾವ ಊರಿಗೆ ಹೊಂಟೀರಿ ಧಣೇರ?"

"ಮಾಲೂರಿಗೆ."

"ನಿಮ್ಮ ಊರು ಅದೇ ಏನ್ರಿ?"

"ಹೌದು."

"ನಿಮ್ಮ ಹೆಸರೇನ್ರಿ ಸಾಹೇಬ್ರ?"

"ಯಾಕಪಾ, ಬಹಳ ತಪಾಸಣೆ ನಡೆಸಿ ಅಲ್ಲ"—ಎಂದು ನಕ್ಕ ಆ ವ್ಯಕ್ತಿ, "ನಾಗಭೂಷಣ"—ಎಂದು ಹೇಳಿದ.

ಪುಲ್ಲಯ್ಯ ಆತನ ಹೆಸರನ್ನು, ಆತನ ಊರಿನ ಹೆಸರನ್ನು ಮನನ ಮಾಡಿಕೊಂಡ...... ಮಲ್ಲೇಶಿ, ದೂರದಲ್ಲಿನ ಕಂಬ ಒಂದರ ಹಿಂದೆ ನಿಂತು, ತದೇಕಚಿತ್ತದಿಂದ, ತಂದೆಯ ಚಲನವಲನವನ್ನು ನೋಡುತ್ತಿದ್ದ.

ನಾಗಭೂಷಣ, ಟಿಕೆಟ್ ಕೊಳ್ಳಲು, ಆ ಗದ್ದಲಿನಲ್ಲಿ ಸೇರಿದ. ಆತನು ತೊಟ್ಟಿದ್ದ ಖಾದಿಯ ಜುಬ್ಬಾದ ಜೇಬಿನಲ್ಲಿದ್ದ ಪರ್ಸು, ಪುಲ್ಲಯ್ಯನ ಕಣ್ಣು ಕುಕ್ಕುತ್ತಿತ್ತು....... ಪುಲ್ಲಯ್ಯ, ಕೈಯಲ್ಲಿ ಟಿಕೆಟ್ಟಿನ ದುಡ್ಡಿದ್ದವರಂತೆ, ಬುಕಿಂಗ್ ಕಚೇರಿಯತ್ತ ನಡೆದ. ಹಾಗೆಯೇ ಆ ಗುಂಪಿನಲ್ಲಿ ನುಸುಳಿಕೊಂಡ. ಆ ಹೊತ್ತಿಗೆ ಅವನಲ್ಲಿ ಆಗಲೇ ಅವ್ಯಕ್ತವಾದ ಅಳುಕು ತಲೆದೋರಿತ್ತು. ಅವನ ಕಾಲುಗಳು ನಡುಗುತ್ತಿದ್ದವು...... ಮೈ ಎಲ್ಲಾ ಭಾರವಾದಂತೆ ಅನಿಸಹತ್ತಿತು...... ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು—

ಹೊಟ್ಟೆಯ ಹಸಿವು, ನಾಗಭೂಷಣನ ಜೇಬಿಗೆ ಕೈಹಾಕುವಂತೆ ಅವನನ್ನು ಪ್ರೇರೇಪಿಸಿತು ……..ಹಾಗೆಯೇ ಕೈಮುಂದೆ ಮಾಡಿದ. ಉಬ್ಬಿದ ಆತನ ಪರ್ಸು ಕೈಗೆಟುಕಿತಾದರೂ ……ತನ್ನ ಜೇಬು ಹಗುರವಾಗುತ್ತಿರುವುದು ನಾಗಭೂಷಣನಿಗೆ ತಿಳಿದುಹೋಯಿತು. ……ಕಳ್ಳ ಕಳ್ಳ—ಎಂದು ಅವನು ಕೂಗಿಕೊಂಡ…… ಓಡಿಹೋಗಲು ಪ್ರಯತ್ನಿಸಿದ ಕಳ್ಳ ಸಿಕ್ಕಿಬಿದ್ದ—ಜನರು ಸುತ್ತುಗಟ್ಟಿ ನಿಂತರು…… ತಲೆಗೊಂದು ಸೂಚನೆ ಕೊಟ್ಟರು. ಒಬ್ಬ, ಒಂದು ಕಾಲದಲ್ಲಿ ಫಳಫಳನೆ ಹೊಳೆಯುತ್ತಿದ್ದ ಪುಲ್ಲಯ್ಯನ ಕಪ್ಪು ಕೂದಲು ಹಿಡಿದು, ಬಾಗಿದ್ದ ಅವನ ತಲೆಯನ್ನು ಮೇಲೆತ್ತಿದ…… ಅಲ್ಲಿ ಸೇರಿದ್ದ ಜನರು, ಕಳ್ಳನಾಗಿ ಸಿಕ್ಕಿಹಾಕಿಕೊಂಡಿದ್ದ ಪುಲ್ಲಯ್ಯನನ್ನು ಮನಬಂದಂತೆ ಹೊಡೆಯತೊಡಗಿದರು. ಪುಲ್ಲಯ್ಯ, ನಾಚಿಕೆಯಿಂದ…… ನಿಶ್ಶಕ್ತತೆಯಿಂದ ಕುಸಿದು ಕುಳಿತ…… ಯಾರೋ ಪೋಲೀಸರನ್ನು ಕರೀರಿ—ಎಂದು, ನಾಗಭೂಷಣನಿಗೆ ಸಲಹೆ ಇತ್ತರು.

ಈ ಕೋಲಾಹಲವನ್ನು ನೋಡಿ, ಮಲ್ಲೇಶಿಗೆ ನಿಂತಲ್ಲಿ ನಿಲ್ಲಲಾಗಲಿಲ್ಲ. ನಿಮಿಷಾರ್ಧದಲ್ಲಿ ಅವನೂ ಆ ಗುಂಪಿನಲ್ಲಿ ನುಸುಳಿಕೊಂಡು ಬಂದಿದ್ದ. ಪುಲ್ಲಯ್ಯನನ್ನು ಹೊಡೆಯಲು ಕೈ ಎತ್ತಿದ್ದ ಒಬ್ಬನ ತೊಡೆಗಳನ್ನು ಹಿಡಿದು ಗಟ್ಟಿಯಾಗಿ ಕಚ್ಚಿದ. ಆ ಮನುಷ್ಯ ನೋವಿನಿಂದ ಕೂಗಿಕೊಂಡು, ಮಲ್ಲೇಶಿಯನ್ನು ಝಾಡಿಸಿ ಒದ್ದ. ಮಲ್ಲೇಶಿ, ದೂರದಲ್ಲಿ ಹೋಗಿ ಉರುಳಿ ಬಿದ್ದ.—ಗಟ್ಟಿಯಾದ ಗಚ್ಚು, ಅವನ ತಲೆಗೆ ಬಡಿದು, ರಕ್ತ ಹರಿಯಿತು.

ಪುಲ್ಲಯ್ಯ, ನಿಸ್ಸಹಾಯಕನಾಗಿ ಮಗನನ್ನು ನೋಡಿದ. ಅವನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು.

ನಾಗಭೂಷಣ, ಮುಂದೆ ಬಂದು, "ಆತನ್ನ ಬಿಡ್ರಿ"—ಎಂದು ಹೇಳಿದ.

"ನಿಮಗೇನಾದರೂ ಹುಚ್ಚುಹಿಡಿದದೇನ್ರಿ—ಇವತ್ತು ನಿಮ್ಮ ಜೇಬಿಗೆ ಕೈಹಾಕಿದ, ನಾಳೆ ಇನ್ನೊಬ್ಬರ ಜೇಬಿಗೂ ಕೈಹಾಕ್ತಾನ—ಇವರ ಹಣೆಬರಹನs ಇಷ್ಟು. ಜೇಬು ಕತ್ತರಿಸುವುದು, ಇಲ್ಲಾಂದರ, ಖೂನಿ ಮಾಡೋದು…… ಇವರನ್ನ ಹೀಗs ಬಿಡಬಾರದು. ಪೋಲೀಸರಿಗೆ ಒಪ್ಪಿಸೋದs ಒಳ್ಳೇದು"—ಅಲ್ಲಿ ಸೇರಿದವರು ಒಟ್ಟಿಗೆ ಹೇಳಿದರು.

"ಇವನ್ನ ಪೋಲೀಸರಿಗೆ ಒಪ್ಪಿಸಿ, ಅವರ ಹಿಂದ ನಾನು ತಿರುಗಲಾರೆ. ನನ್ನ ದುಡ್ಡು ನನಗ ಸಿಕ್ಕದ. ಸುಮ್ಮನೆ ಅವನ್ನ ಬಿಟ್ಟುಬಿಡ್ರಿ"—ಎಂದು ಹೇಳಿದ ನಾಗಭೂಷಣ, ತಾನೇ ಮುಂದಾಗಿ ಹೋಗಿ, ಪುಲ್ಲಯ್ಯನನ್ನು ಬಿಡಿಸಿಕೊಂಡು, ಕೈಹಿಡಿದು ಮೇಲೆಬ್ಬಿಸಿದ. ನಾಚಿಕೆಯಿಂದ ತಲೆ ಕೆಳಗೆ ಹಾಕಿಕೊಂಡಿದ್ದ ಪುಲ್ಲಯ್ಯ, "ಹೋಗು"—ಎಂದು ಅವನು ಹೇಳಿದ ಕೂಡಲೇ, ಮಗನ ಬಳಿ ಹೋಗಿ ಅವನನ್ನು ಎತ್ತಿಕೊಂಡು ಮನೆಯ ಕಡೆಗೆ ಹೆಜ್ಜೆಹಾಕಿದ.

ದಾರಿಯಲ್ಲಿ, ಮಲ್ಲೇಶಿ, ತನ್ನ ಪ್ರತಾಪ ಹೇಳತೊಡಗಿದಾಗ ಪುಲ್ಲಯ್ಯನಿಗೆ ಮತ್ತಷ್ಟು

ದುಃಖವಾಯಿತು. ಒಂದು ಮಾತೂ ಆಡದೆ, ಆತ ಮನೆಗೆ ತಲುಪಿದ. ನೀಲಿ, "ಇಷ್ಟು ಹೊತ್ತಿನ್ಯಾಗ ಎಲ್ಲಿಗೆ ಹೋಗಿದ್ರಿ?"—ಎಂದು ಕೇಳಿದಾಗ, ಪುಲ್ಲಯ್ಯ ಜವಾಬು ಕೊಡದೆ, ನೆಲದ ಮೇಲೆ ಮಲಗಿದ. ಮಲ್ಲೇಶಿ ತನ್ನ ಶೌರ್ಯ–ಸಾಹಸ ತಾಯಿಗೂ ತಿಳಿಯಬೇಕೆಂಬ ಆಸೆಯಿಂದ, "ಅಮ್ಮಾ, ಅವರೆಲ್ಲ ಸೇರಿ ಅಪ್ಪನ್ನ ದಬ–ದಬ ಹೊಡೀತಿದ್ದರ, ನಾನು ಹೋಗಿ ಅವರನ್ನ ಕಚ್ಚಿದೆ......"

ಅವನು ಇನ್ನೂ ಏನೊ ಹೇಳುವುದರಲ್ಲಿದ್ದ. ಪುಲ್ಲಯ್ಯ, "ಮಲ್ಲೇಶಿ"—ಎಂದು ಕೂಗಿದ. ನೀಲಿ, ಕೂಡಲೇ ಎಲ್ಲವನ್ನೂ ಗ್ರಹಿಸಿ, "ಅದಕ್ಕs ಏನು ಇಷ್ಟು ಅಪರಾತ್ರಿ ಒಳಗ ಹೋಗಿದ್ದು......" ಎಂದು ಕೇಳಿ ನಿಟ್ಟುಸಿರುಬಿಟ್ಟಳು. ಪುಲ್ಲಯ್ಯನಿಗೆ, ಮಗನ ಮೇಲೆ ಎಲ್ಲಿಲ್ಲದ ಕೋಪ ಬಂತು. ಅವನನ್ನು ಹಿಡಿದು ನಾಲ್ಕು ಏಟು ಬಿಗಿದ. ಮೈಮೇಲೆ ಬಾರು ಮೂಡಿದರೂ, ಮಲ್ಲೇಶಿ ತಾಯಿಯ ಬಳಿ ಹೋಗದೆ, ಅಳುತ್ತ ತಂದೆಯ ಬಳಿಯೇ ನಿಂತ. ನೀಲಿ ಮಾತ್ರ, ಎಲ್ಲವನ್ನೂ ನೋಡುತ್ತಾ ಸುಮ್ಮನೆ ನಿಂತಿದ್ದಳು. ಸ್ವಲ್ಪ ಹೊತ್ತಾದ ಮೇಲೆ, ದೀಪ ಆರಿಸಿ, ಮಗಳ ಪಕ್ಕದಲ್ಲಿ ತೆಪ್ಪಗೆ ಮಲಗಿದಳು. ಆದರೆ, ದಿಗಿಲಿನಿಂದ ಆಕೆಗೆ ನಿದ್ರೆಯೇ ಬರಲಿಲ್ಲ.

ಪುಲ್ಲಯ್ಯ ಮಲಗಿದಾಗ, ಮಲ್ಲೇಶಿ, ಎಂದಿನಂತೆ ಅವನ ಎದೆಯ ಮೇಲೆ ಮಲಗಿ ನಿದ್ರೆಹೋದ. ಕತ್ತಲು. ಎಲ್ಲವೂ ಶಾಂತವಾಗಿತ್ತು. ಆಕಾಶದಲ್ಲಿನ ಚುಕ್ಕೆಗಳು ತನ್ನನ್ನು ನೋಡಿ ನಗುತ್ತಿರುವಂತೆ ಪುಲ್ಲಯ್ಯನಿಗೆ ಭಾಸವಾಯಿತು.

ಮಲ್ಲೇಶಿ ನಿದ್ರೆಯಲ್ಲೂ ಬಿಕ್ಕುತ್ತಲೆ ಇದ್ದ. ಪುಲ್ಲಯ್ಯ ನಿಧಾನವಾಗಿ ಅವನ ಬೆನ್ನಿನ ಮೇಲೆ ಕೈಯಾಡಿಸಿದ...... ಪ್ರೀತಿಯಿಂದ, ಅಭಿಮಾನದಿಂದ, ಮಗನ ತಲೆ ಸವರಿದ...... ಮಗನನ್ನು ತಾನು ಹೊಡೆದದ್ದು ನೆನಪಾದಾಗ, ಪುಲ್ಲಯ್ಯನ ದುಃಖದ ಕಟ್ಟೆ ಒಡೆಯಿತು. ಮಗನನ್ನು ತಬ್ಬಿಕೊಂಡು, "ಮಲ್ಲೇಶಿ, ಮಲ್ಲು...... ನನ್ನಪ್ಪಾ. . . ." ಎನ್ನುತ್ತಾ, ಅಳಹತ್ತಿದ.

## [ 30 ]

ಪುಲ್ಲಯ್ಯ, ಬೆಳಿಗ್ಗೆ ದಿನಕ್ಕಿಂತ ಸ್ವಲ್ಪ ತಡವಾಗಿಯೇ ಎದ್ದ. ಆ ವೇಳೆಗಾಗಲೇ, ಮಲ್ಲೇಶಿ ಎದ್ದು ನಾಯಿಕುನ್ನಿಯನ್ನು ಹಿಡಿದುಕೊಂಡು ಕೇಕೆಹಾಕುತ್ತಿದ್ದ. ನಾಯಿಮರಿ ಹಿಂದಿರುಗಿ ಬಂದದ್ದಕ್ಕಾಗಿ, ಅವನು ಸಂತೋಷದಿಂದ ಕುಣಿಯುತ್ತಿದ್ದ. "ಅಪ್ಪಾ, ಯಾವನೊ ಹುಚ್ಚನ ಹಿಂದ ಇದು ಹೊರಟಿತ್ತು. ನಾನು ಹಿಂದಿನಿಂದ ಹೋಗಿ ಎತ್ತಿಕೊಂಡು ಓಡಿ ಬಂದೆ"—ಎಂದು, ತಂದೆಗೆ ತನ್ನ ಪೌರುಷ ಸಾರಿದ.

ಆ ಹುಚ್ಚ ಬಂದು ತನ್ನ ನಾಯಿಮರಿಯನ್ನು ಒಯ್ಯಬಹುದೆಂಬ ಭೀತಿಯಿಂದ,

ಮಲ್ಲೇಶಿ, ಅದನ್ನು ಗುಡಿಸಲಿನ ಹಿತ್ತಲದಲ್ಲಿ ಕಟ್ಟಿಹಾಕಿದ್ದ. ಅಲ್ಲಿಯೇ ಕುಳಿತು ಆದರೊಡನೆ ಆಡತೊಡಗಿದ್ದ. ಆ ನಾಯಿಮರಿ ಮಾತ್ರ, ಒಂದೇ ಸಮನೆ ಕೂಗಿಕೊಳ್ಳು ತ್ತಿತ್ತು. ಪುಲ್ಲಯ್ಯ ಇದೇ ಸಮಯವೆಂದು, ಯಾರಿಗೂ ಹೇಳದೆ–ಕೇಳದೆ ಕೆಲಸ ಹುಡುಕಲು ಹೊರಟ.

ಎಲ್ಲಿ ಹೋದರೆ ಕೆಲಸ ಸಿಕ್ಕೀತು? ಹೋಗಬೇಕಾದ ಕಂಪೆನಿಗಳಿಗೆಲ್ಲ ಹೋಗಿ, "ಇಲ್ಲ"—ಎನ್ನಿಸಿಕೊಂಡು ಬಂದದ್ದಾಗಿತ್ತು. ನಗರದ ಮುಖ್ಯ ಬೀದಿಯಲ್ಲಿ, ಒಂದು ದೊಡ್ಡ ಬಂಗಲೆಯನ್ನು ಕಟ್ಟುತ್ತಿದ್ದರು. ಅಲ್ಲಿಗೆ ಹೋದಲ್ಲಿ ಕೂಲಿ ಕೆಲಸವೇನಾದರೂ ಸಿಗಬಹುದೇನೊ—ಎಂದುಕೊಂಡು ಅತ್ತ ನಡೆದ. ಅಲ್ಲಿದ್ದ ಮೇಸ್ತ್ರಿಯನ್ನು ಕಂಡು, ಯಾವುದಾದರೂ ಕೆಲಸ ಕೊಡಬೇಕೆಂದು ಬೇಡಿಕೊಂಡ. ಕೂಡಲೇ ಇಲ್ಲವೆಂಬ ಉತ್ತರ ಬಂತು. "ಹಳ್ಳಿಯವನು, ಮಕ್ಕಳ ಒಂದಿಗ. ನಿಮ್ಮ ಹೊಟ್ಯಾಗ ನನ್ನೂ ಹಾಕಿಕೊಂಡು ನಿಮ್ಮವನನ್ನಾಗಿ ಮಾಡಿಕೊಳ್ರಿ"—ಎಂದು ಅಂಗಲಾಚಿದ. "ಇಲ್ಲ ಹೋಗೊ. ನಮಗs ಕೆಲಸ ಇಲ್ಲ, ಇನ್ನ ನಿನಗೆಲ್ಲಿಂದ ಕೆಲಸ ಕೊಡಬೇಕು"—ಎಂದು ಮೇಸ್ತ್ರಿ ರೇಗಿದ.

"ಏ ಹೋಗಲಿ ಬಿಡೊ, ಇವತ್ತು ಒಂದು ದಿನ ಕೆಲಸ ಕೊಡು"—ಪಕ್ಕದಲ್ಲಿ ನಿಂತಿದ್ದವನೊಬ್ಬ ಶಿಫಾರಸು ಮಾಡಿದ.

"ಒಣಕಲು ಕಡ್ಡಿಯಾಗ್ಯಾನ—ಇವನಿಂದೇನು ಕೆಲಸ ಆದೀತೊ"—ಮೇಸ್ತ್ರಿ ತನ್ನ ಅನುಮಾನ ವ್ಯಕ್ತಪಡಿಸಿದ.

ಪುಲ್ಲಯ್ಯ, ತನ್ನನ್ನು ತಾನು ಒಮ್ಮೆ ಪರೀಕ್ಷಿಸಿಕೊಂಡ. ಹರಿದುಹೋಗಿದ್ದ ವೋಟು ಬನಿಯನ್ ಅದರೊಳಗಿಂದ ದೇಹದ ಎಲ್ಲಾ ಮೂಳೆಗಳು ಹಣಿಕಿಕ್ಕುತ್ತಿದ್ದವು. ಮೊಳ ಕಾಲ ವರೆಗಿದ್ದ ಪಂಚೆ, ಹಳತಾಗಿ, ಮಾಸಿಹೋಗಿತ್ತು. ಮೂಗಿನ ಕೆಳಗೆ ದಟ್ಟವಾಗಿ ಬೆಳೆದ ಮೀಸೆ, ಗಡ್ಡದೊಡನೆ ಏಕವಾಗಿತ್ತು. ಪುಲ್ಲಯ್ಯನಿಗೆ ಯಾವುದೇ ಜಡ್ಡಾಗಲೀ, ರೋಗವಾಗಲೀ ಇರಲಿಲ್ಲ. ಅವನಿಗಿದ್ದುದು ಒಂದೇ ರೋಗ—ಒಂದೇ ಯೋಚನೆ—"ಛೆ—ಈ ಗೇಣು ಹೊಟ್ಟೆಗಾಗಿ, ಎಷ್ಟೆಲ್ಲ ತಂಟೆ–ತಗಾದೆ......" ದಿನಕೂಲಿಯ ಮೇಲೆ ಕೆಲಸ ಮಾಡಲು ಪುಲ್ಲಯ್ಯನಿಗೆ ಕಿಂಚಿತ್ತೂ ಮನಸ್ಸಿರಲಿಲ್ಲ. ಆದರೆ, ಈಗ, ಅದಿಲ್ಲದೆ ಗತಿಯೇ ಇರಲಿಲ್ಲ—ದಿನಕೂಲಿಗಾಗಿ ಬಂದಿದ್ದ ಹೆಣ್ಣುಮಕ್ಕಳೂ ಸಹ ಅಲ್ಲಿಯೇ ಗುಂಪಾಗಿ ನಿಂತಿದ್ದರು. ಅವರಲ್ಲಿ ಮೈಕೈ ತುಂಬಿಕೊಂಡ ಚೆಲುವೆಯರೂ ಸಹ ಕೆಲವ ರಿದ್ದರು. ಪುಲ್ಲಯ್ಯ, ಏನು ಮಾಡಬೇಕೆಂಬುದು ತೋಚದೆ, ಹಾಗೆಯೇ ನಿಂತಿದ್ದ. ಅಷ್ಟರಲ್ಲಿ ನೆರೆತ ಕೂದಲಿನ ಮೇಸ್ತ್ರಿ ಮುಂದೆ ಬಂದು, "ಯಾಕಲಾ ಚಿನ್ನಿ, ನನ್ನ ತಮ್ಮ ಮೆತ್ತಗ ಬಿದ್ದನೊ ಅಥವಾ ಇನ್ನೊಬ್ಬಾಕಿ ಹಿಂದಬಿದ್ದು ನಿನಗ ಕೈಕೊಟ್ಟನೊ—ಏನಾತು?"—ಎಂದು ಒಬ್ಬ ಯುವತಿಯನ್ನು ಛೇಡಿಸಿದ.

ಅವಳು, ಮುಸಿಮುಸಿ ನಗುತ್ತಲೇ, "ಹೆಣ್ಣು ನೋಡಿದರ ಜೊಲ್ಲು ಸುರಿಸೊ ಚಾಳಿ ಯಾವಾಗ ಬಿಡ್ತೀಯೋ ಮಾವಾ?"—ಎಂದು ಚುಚ್ಚಿ ನುಡಿದಾಗ, ಮೇಸ್ತ್ರಿ ನಿರುತ್ತರ

ನಾಗಿ ಬಾಯಿಮುಚ್ಚಿಕೊಂಡು ತೆಪ್ಪಗೆ ಕುಳಿತ. ಇಬ್ಬರು, ಮನೆ ಕಟ್ಟಿಸುತ್ತಿದ್ದವನ ಬಗ್ಗೆ ಏನೇನೊ ಮಾತನಾಡಿಕೊಳ್ಳುತ್ತಿದ್ದರು.—ಆ ಮನೆಯ ಯಜಮಾನನ ಮೇಲೆ, ಸಿರಿವಂತ ಯುವತಿಯೊಬ್ಬಳ ಕೃಪಾಕಟಾಕ್ಷ ಬಿದ್ದುದರಿಂದಲೇ ಅವನಿಗೆ ಸಂಪತ್ತು ಸಿಕ್ಕಿತೆಂದೂ, ಅದೃಷ್ಟವೆಂದರೆ ಹಾಗಿರಬೇಕೆಂದೂ, ಒಬ್ಬನೆಂದರೆ, ಇನ್ನೊಬ್ಬ, "ಅದೆಂತಹ ಅದೃಷ್ಟ. ಕಷ್ಟಪಟ್ಟು ಸಂಪಾದಿಸಿದ್ದೇ ಉಳಿಯೋದಿಲ್ಲ. ಇನ್ನು ಇಂತಹ ಐಶ್ವರ್ಯ ಎಷ್ಟು ದಿನ ಉಳಿದೀತು?"—ಎಂದು ಮೂದಲಿಸಿದ.

ಬೀಡಿ ಸೇದುತ್ತಾ ಕುಳಿತಿದ್ದವನೊಬ್ಬ, "ಆ ಲಕ್ಷ್ಮೀದೇವಿಗೆ ನೀತಿ—ನಿಜಾಯಿತಿ ಒಂದೂ ಇಲ್ಲ—ದುಡ್ಡಿದ್ದವರಿಗೆ ಒಲಿತಾಳ ಆ ಮಹಾತಾಯಿ...... ಮೊನ್ನೆ, ಈ ಮನಿ ಯಜಮಾನನ ಭಾವಮೈದುನಗ, ಬ್ರಾಕೆಟ್ ಆಟದಾಗ, ಐವತ್ತು ಸಾವಿರ ರೂಪಾಯಿ ಬಂತಂತ. ನಾವು ಇಷ್ಟು ಮಂದಿ ಉಪವಾಸ ಬಿದ್ದು ಸಾಯ್ತಿದೀವಿ ನಮ್ಮ ನಸಿಬಿನ್ಯಾಗ ಒಂದು ಪುಡಿಕಾಸೂ ಸಿಗಾಣಿಲ್ಲ. ಮೊನ್ನೆ ನನ್ನ ಹಿರೆ ಅಳಿಯ, ಈ ಬ್ರಾಕೆಟ್ ಆಟದಾಗ ಎಲ್ಲಾನೂ ಕಳಕೊಂಡು, ಹುಚ್ಚನ್ಹಾಂಗ ಆಗಿ, ರೈಲಿನ ಕೆಳಗ ಬಿದ್ದು ಪ್ರಾಣ ಕೊಟ್ಟ. ಈಗ ನೋಡು, ಆ ಮಗಳು ಒಬ್ಬಾಕೀನs ಅಲ್ಲದ ಅವಳ ನಾಲ್ಕು ಮಕ್ಕಳ ಹೊಟ್ಟೀನೂ ನಾನs ತುಂಬಬೇಕು—ಕಾಲ ನೋಡಿದರ ಹೀಂಗ ಅದ"—ಎಂದು ಗೋಳಿಟ್ಟ.

ಪುಲ್ಲಯ್ಯ, ಅವರ ಈ ಹರಟೆ ಕೇಳುತ್ತಾ ನಿಂತಿದ್ದಾಗ, ಮೇಸ್ತ್ರಿ ಬಂದು, "ಇವತ್ತು ಒಂದು ದಿವಸ ಕೆಲಸ ಕೊಡ್ತೀನಿ ಬಾ"—ಎಂದು ಕರೆದಾಗ, ಯಾರೇ ಆಗಲಿ ಆಕ್ಷೇಪಿಸ ಲಿಲ್ಲ. ಪುಲ್ಲಯ್ಯ, ಪಂಚೆ ಮೇಲೇರಿಸಿ ಕಟ್ಟಿಕೊಂಡು ಕೆಲಸಕ್ಕಿಳಿದ. ಸುಣ್ಣ ಕಲಸಿದ—ಸಿಮೆಂಟ್ ಹೊತ್ತ. ಆದರೆ, ಆ ಕೆಲಸಗಳಲ್ಲಿ ಅವನಿಗೆ ಉತ್ಸಾಹವೇ ಇರಲಿಲ್ಲ. ಮಧ್ಯಾಹ್ನದ ವರೆಗೆ, ಹಾಗೆಯೇ, ನಿರುತ್ಸಾಹದಿಂದಲೇ ಕೆಲಸ ಮಾಡಿದ. ಮಧ್ಯಾಹ್ನ ಹಿರಿಯ ಮೇಸ್ತ್ರಿ ಬಂದು, "ಏನು ಕೆಲಸ ಮಾಡ್ತಿಯೊ ಏನೊ; ನಿನ್ನಗಿಂತ ಆ ಹೆಣ್ಣು ಮಕ್ಕಳು ವಾಸಿ. ನಿನ್ನಂತವರಿಗೆ ಕೆಲಸಕ್ಕ ತೊಗೊಂಡರ ನಮ್ಮ ಕೆಲಸ ಆದ್ಹಾಂಗ. ಇಕ ತೊಗೊ ಈ ಎಂಟಾಣೆ—ಇನ್ನ ಹೋಗು ಇಲ್ಲಿಂದ. ನಿನ್ನ ಸಹವಾಸ ಸಾಕು"—ಎಂದು ಪುಲ್ಲಯ್ಯನನ್ನು ಅಟ್ಟಿದ.

ಹಿರಿಯ ಮೇಸ್ತ್ರಿಯ ಮೇಲೆ, ಪುಲ್ಲಯ್ಯನಿಗೆ ಎಲ್ಲಿಲ್ಲದ ಸಿಟ್ಟು ಬಂತು. ಅದರಲ್ಲಿ, ಆ ಹೆಂಗಳೆಯರ ಎದುರು ತನ್ನ ಮರ್ಯಾದೆ ಹೋಯಿತಲ್ಲ—ಎಂಬ ಆಕ್ರೋಶವೂ ಬೆರೆತು, ಅವನು ಕೊಟ್ಟ ಎಂಟಾಣೆಯನ್ನು ಅವನ ಮುಖಕ್ಕೆ ಎಸೆದು ಹೋಗಬೇಕೆಂದು ಕೊಂಡ. ಆದರೆ, ಮನೆಯಲ್ಲಿ ಮಲ್ಲೇಶಿ ಮತ್ತು ಮಗಳು ಉಪವಾಸವಿರುವರೆಂಬುದು ಜ್ಞಾಪಕಕ್ಕೆ ಬಂದಾಗ, ಒಂದು ಒಪ್ಪತ್ತಿಗಾದರೂ ಈ ಎಂಟಾಣೆ ಸಾಕಾದೀತೆಂದು, ಸಿಟ್ಟನ್ನು ನುಂಗಿಕೊಂಡು, ಮನೆಯ ಹಾದಿ ಹಿಡಿದ. ದಾರಿಯಲ್ಲಿ, ಮೂರು ಅಂತಸ್ತಿನ ಒಂದು ಮನೆ ಕಾಣಿಸಿದಾಗ, ಅದನ್ನು ನೋಡುತ್ತಾ ನಿಂತ. "ಎತ್ತರವಾದ ಈ ಬಂಗಲೆ ಹತ್ತಿ

ನೋಡಿದರ, ಊರೆಲ್ಲಾ ಕಾಣಸ್ತದೇನೆ. ಆದರ, ನನ್ನ ಈ ಜನ್ಮದಾಗಾದರೂ, ನಾನು ಈ ಬಂಗಲೆ ಏರ್ತೀನೊ ಇಲ್ಲೊ"—ಎಂದುಕೊಂಡು, ನಿಟ್ಟುಸಿರುಬಿಟ್ಟ.

ಅಷ್ಟರಲ್ಲಿ, "ಅಪ್ಪಾ"—ಎಂಬ ಕೂಗು ಕೇಳಿ ಹಿಂದಿರುಗಿ ನೋಡಿದ. ಮಲ್ಲೇಶಿ—ಇಲ್ಲಿಗೆ ಹೇಗೆ ಬಂದ?—ದಾರಿಯಲ್ಲಿ ಯಾವುದಾದರೂ ಬಸ್ಸು ಅಥವಾ ಕಾರಿನ ಗಾಲಿಗೆ ಸಿಕ್ಕಿದ್ದರೇನು ಗತಿ—ಸರಸರನೆ ಅವನ ಬಳಿ ಹೋಗಿ, ಗಟ್ಟಿಯಾಗಿ ರಟ್ಟೆಹಿಡಿದು, ನಿಷ್ಠುರವಾಗಿ ಬಯ್ಯಬೇಕೆಂದುಕೊಂಡ. ಆದರೆ, ಮಗನನ್ನು ಎತ್ತಿಕೊಂಡ ಕೂಡಲೇ, ಮನಸ್ಸಿಗಾಗಿದ್ದ ಬೇಜಾರು ಕಳೆದು ಸಂತೋಷವಾಯಿತು. ಮಗನನ್ನು ಎತ್ತಿಕೊಂಡು ಮುನ್ನಡೆದ. ಮಲ್ಲೇಶಿ, "ಅಪ್ಪಾ ಅಪಾ...... ಅದು ನೋಡು ಹುಚ್ಚ"—ಎಂದು ತೋರಿಸಿದ.

ಅವನು, ಆ ರಾತ್ರಿ ಗಿಡದ ಕೆಳಗೆ ಕುಳಿತು ರೋದಿಸಿದ ವ್ಯಕ್ತಿಯೇ ಆಗಿದ್ದ. ತನ್ನಷ್ಟಕ್ಕೆ ತಾನು ಏನೇನೊ ಗೊಣಗುತ್ತ ಕುಳಿತಿದ್ದ. ಪುಲ್ಲಯ್ಯ ಅವನ ಬಳಿ ಹೋಗಿ ಅವನು ಹೇಳುವುದನ್ನು ಕೇಳುತ್ತಾ ನಿಂತ—"ಈ ಲೋಕದಾಗ. ಮೋಸ ಬಿಟ್ಟರ ಇನ್ನೊಂದಿಲ್ಲ—ಈ ಲೋಕದ ಜನರಿಂದs ನಾನು ಮೋಸಹೋದೆ. ಅವನು—ಆ ದೊಡ್ಡ ಮನುಷ್ಯ—ನನ್ನ ದುಡ್ಡು ನುಂಗಿ, ಈ ಮೂರು ಅಂತಸ್ತಿನ ಮನಿ ಕಟ್ಟಿಸಿದ. ಯಾವನೊ. ನನ್ನ ನಾಯಿಕುನ್ನಿ ಎತ್ತಿಕೊಂಡು ಓಡಿಹೋದ. ನನ್ನ ಸುಖ–ದುಃಖ ಕೇಳಲಿಕ್ಕೆ, ನನ್ನ ಬಗ್ಗೆ ಸಹಾನುಭೂತಿ ತೋರಿಸಲಿಕ್ಕೆ ಅದೊಂದಿತ್ತು—ಈಗ ಅದೂ ಇಲ್ಲ—ಇನ್ನು ನಾನು ಯಾಕಾದರೂ ಬದುಕಿರಬೇಕು—ಈಗಂತೂ ನಾನು ಗತಿಯಿಲ್ಲದ ತಿರುಕನಾಗೀನಿ. ತಿರುಕರು, ಹೇಳೋರು–ಕೇಳೋರು ಗತಿಯಿಲ್ಲದ ನಾಯಿ ಹಾಂಗ ಬೀದಿ ಒಳಗ ಬಿದ್ದು ಸಾಯ್ತಾರಂತ—ನಾನೂ ಹಾಂಗs ಸಾಯ್ತಿನಿ—ನನ್ನ ಗೋಳು ಯಾರಿಗೆ ಬೇಕಾಗ್ಯದ—ಯಾರ ಕೇಳ್ತಾರ ನನ್ನ."

ಅವನ ಆ ದೀನಾಲಾಪನೆ ಪುಲ್ಲಯ್ಯನಿಗೆ ಅರ್ಥವಾಯಿತು. ತಾನೂ ಸಹ ತಿರುಕನ ಬಾಳುವೆ ನಡೆಸುತ್ತಿರುವಂತೆ ಅವನಿಗೆ ಭಾಸವಾಯಿತು. ಬೊಚ್ಚುಬಾಯಿಯ ಆ ಮುದುಕಿ, ಗೆಣಸು ಮಾರಿ, ಮಗನನ್ನೂ—ಮೊಮ್ಮಕ್ಕಳನ್ನೂ ಸಾಕ್ತಾಳ. ಆ ಕೂಲಿಯವ ತನ್ನ ಕುಟುಂಬದ ಭಾರದ ಜೊತೆಗೆ, ಮಗಳ ಕುಟುಂಬದ ಭಾರವನ್ನೂ ಸಹ ಹೊತ್ತಿದ್ದಾನೆ. ಅವರೆಲ್ಲ ಬದುಕಿನ ದಾರಿ ಕಂಡುಕೊಂಡಿರುವಾಗ, ತನಗೇಕೆ ಸಾಧ್ಯವಾಗುತ್ತಿಲ್ಲ—ಎಂದು ಪುಲ್ಲಯ್ಯ ಯೋಚಿಸಿದ. ಅದರೊಡನೆ ನೀಲಿ ಹೇಳಿದ ಮಾತು ನೆನಪಾಯಿತು.—"ಎಲ್ಲಾರೂ ರಾಜ–ಮಹಾರಾಜರ ಹಾಂಗ ಬಾಳಲಿಕ್ಕೆ ಸಾಧ್ಯ ಇಲ್ಲ. ಗತಿ ಇರಲಾರದವರು, ಬೇಡಿಕೊಂಡಾದರೂ ತಿನ್ನಬೇಕು. ರಾಜರಿಗೆ ತಕ್ಕ ಹಾಂಗ ರಾಜರು ಬದುಕ್ತಾರ, ಭಿಕ್ಷೆ ಬೇಡಿ ಹೊಟ್ಟಿ ತುಂಬಿಕೊಳ್ಳೋರು, ಬೇಡಿಕೊಂಡs ಹೊಟ್ಟಿ ತುಂಬಿಕೊತಾರ. ಹಾಂಗ ನೋಡಿದರ, ರಾಜರಿಗಿಂತ, ಭಿಕ್ಷೆ ಬೇಡುವವನೆ ಹಾಯಾಗಿರ್ತಾನ. ರಾಜಗ, ನೂರೆಂಟು ಚಿಂತಿ ಕಾಡ್ತಿರ್ತಾವ. ಅದರಿಂದ ಆತ ಸುಖವಾಗಿರಲಾರ. ತಿರುಕನಿಗೆ—

ಭಿಕ್ಷುಕನಿಗೆ ಹೊಟ್ಟಿ ತುಂಬ ಊಟ ಸಿಕ್ಕ ದಿನ ಸುಖ—ಇರಲಾರದ ದಿನ ದುಃಖ. ನನಗ, ತಿಂಗಳದ ಸಂಬಳದ ಕೆಲಸನs ಬೇಕು—ಅಂತ ಹಠಮಾಡಿದರ ಏನು ಬಂತು? ನಮ್ಮ ನಸೀಬು ಚಲೊ ಇದ್ದರ, ಒಳ್ಳೆ ದಿನ ಬಂದರ, ನಾವೂ ಹಾಯಾಗಿರಬಹುದು......"

ಪುಲ್ಲಯ್ಯ, ಇದೇ ಆಲೋಚನೆಯಲ್ಲಿ ಮನೆಸೇರಿದ. ಪಟ್ಟಣದಲ್ಲಿ ಅದೇ ಮೊದಲ ಸಲವಾಗಿ ತಾನು ಬೆವರು ಸುರಿಸಿ ಗಳಿಸಿದ ಎಂಟಾಣೆಯನ್ನು ನೀಲಿಗೆ ಕೊಟ್ಟ. ನೀಲಿಯ ಮುಖ ಸಂತೋಷದಿಂದ ಅರಳಿತು—ನಗುವಿನಿಂದ ಬೆಳಗಿತು. ಆದರೆ, ಮರುಕ್ಷಣವೇ ಆ ದುಡ್ಡು ಎಲ್ಲಿಂದ ಬಂದಿತೆಂದು ಕೇಳಿದಳು. ಪುಲ್ಲಯ್ಯ ಎಲ್ಲವನ್ನೂ ವಿವರಿಸಿದಾಗ, "ಹೀಂಗ ಇದ್ದರ, ನಮ್ಮ ಬದುಕು ಹ್ಯಾಂಗ ಸಾಗ್ತದೊ ಏನೊ?"—ಎಂದು ಉದ್ಗಾರ ತೆಗೆದಳು.

ಪುಲ್ಲಯ್ಯ ಮನೆ-ಮನೆಗೂ ಹೋಗಿ, ಕೆಲಸಕ್ಕಾಗಿ ಅಂಗಲಾಚಿ ಹಿಂದಿರುಗಿದಾಗ, ಅವರ ಗುಡಿಸಲಿನ ಮುಂದೆ ಜನಸೇರಿದ್ದರು. ಬೆಕ್ಕು ಸತ್ತಿತೆಂದು ದಿನವಿಡೀ ಅತ್ತಿದ್ದ ಪಕ್ಕದ ಗುಡಿಸಲಿನ ಹೆಂಗಸು, ಈಗ ತನ್ನ ಮಾಮೂಲು ಸ್ಥಿತಿಗೆ ಬಂದಿದ್ದಳು. ಆ ಕೊಂಪೆ ಯಲ್ಲಿ, ಅವಳ ಬಾಯಿಗೆ ಹೆದರದ ಜನರಿರಲಿಲ್ಲ. ಗಂಡಸರು ಕೂಡ, ಆಕೆಯ ಬಾಯಿಗೆ ಹೆದರಿ, ಮನೆಬಿಟ್ಟು ಹೋಗುತ್ತಿದ್ದರು. ಪುಲ್ಲಯ್ಯ ಇದಕ್ಕೂ ಮುಂಚೆ ಅವಳನ್ನು ಸರಿಯಾಗಿ ನೋಡಿರಲಿಲ್ಲವಾದರೂ ಅಂದು ಅವಳನ್ನು ನೋಡಿದ. ಅವಳ ವಯಸ್ಸು ಮೂವತ್ತೈದು-ನಲವತ್ತರ ಮಧ್ಯದಲ್ಲಿರಬಹುದು. ಮಕ್ಕಳಾಗಿರಲಿಲ್ಲವಾದ್ದರಿಂದ, ನೋಡಲು ಮುವತ್ತು ವರ್ಷದವಳ ಹಾಗೆ ಕಾಣುತ್ತಿದ್ದಳು. ಅವಳಲ್ಲಿ ಸ್ತ್ರೀತ್ವವು ಒಂದು ಪಾಲಿದ್ದರೆ, ಪುರುಷತ್ವವು ಮೂರು ಪಾಲು ಮನೆಮಾಡಿಕೊಂಡಿತ್ತು. ಮನೆ ಯಲ್ಲಿ ಅವಳದೇ ರಾಜ್ಯವಾಗಿತ್ತು. ಯಾವ ವಿಷಯದಲ್ಲೇ ಆಗಲಿ ಗಂಡನ ಮಾತು ನಡೆಯಗೊಡುತ್ತಿರಲಿಲ್ಲ. ಆ ಕೊಂಪೆಯ ಜನರು, ಇವಳನ್ನೇ ಗಂಡ, ಅವನನ್ನೇ ಹೆಂಡತಿ—ಎಂದು ಕರೆಯುತ್ತಿದ್ದರು—ಆದರೆ, ಅವರ ಬೆನ್ನಹಿಂದೆ ಮಾತ್ರ.

ಪುಲ್ಲಯ್ಯ ಗುಡಿಸಲನ್ನು ತಲುಪಿದಾಗ, ಪಕ್ಕದ ಮನೆಯಾಕೆ ದೊಡ್ಡದಾಗಿ ಬಾಯಿ ಮಾಡುತ್ತಿದ್ದಳು. ನೀಲಿ ತನ್ನ ಸೌಮ್ಯವಾದ ಧ್ವನಿಯಲ್ಲಿ ಸಮಜಾಯಿಷಿ ಹೇಳುತ್ತಿದ್ದ ಳಾದರೂ, ಆ ಹೆಂಗಸು ಅದನ್ನು ಕಿವಿಗೆ ಹಾಕಿಕೊಳ್ಳದೆ ಕೂಗಾಡುತ್ತಿದ್ದಳು. ಪುಲ್ಲಯ್ಯ ನನ್ನು ನೋಡಿ, ನೀಲಿ ಒಳಗೆ ನಡೆದಳು. ಪುಲ್ಲಯ್ಯ ಅವಳ ಹಿಂದೆಯೇ ಹೋಗಿ, ಇದೆಲ್ಲಾ ಏನು?—ಎಂದು ಕೇಳಿದ.

"ಗಂಡ ತಿಳಿಯದೆ ಎರಡು ರೂಪಾಯಿಗೆ ಈ ಗುಡಿಸಲು ಕೊಟ್ಟುಬಿಟ್ಟಾನ. ಇನ್ನೂ ಒಂದು ರೂಪಾಯಿ ಹೆಚ್ಚಿಗೆ ಬಾಡಿಗೆ ಕೊಡೋದಿದ್ದರ ಇರ್ರಿ—ಇಲ್ಲಾಂದರ ಗುಡಿಸಲು ಖಾಲಿ ಮಾಡ್ರಿ ಅಂತ ಒಂದೇ ವರಾತ ಹಚ್ಚ್ಯಾಳ"—ಎಂದು ನೀಲಿ ವಿವರಿಸಿದಳು.

"ಇಷ್ಟಕ್ಕ, ಇಷ್ಟು ಯಾಕ ಬಾಯಿ ಮಾಡಬೇಕು?"

"ನಿನ್ನೆ ಹುಡುಗರು ಏನೊ ಗದ್ದಲ ಹಾಕ್ತಿದ್ದವು—ಸರಸರನೆ ಬಂದು ಟಿಸ್-ಟಿಸ್

—ಅಂತ ಬಾಯಿಗೆ ಬಂದದ್ದು ಅಂದುಹೋದಳು. ಆ ಸಿಟ್ಟು ಈಗ ಮತ್ತ ಕೆರಳ್ಯದ. . . ."

"ಹುಡುಗರು ಗದ್ದಲ ಹಾಕದ ಹಿರೇರು ಹಾಕ್ತಾರೇನು? ನಾನೂ ಆದೇನು ಮಾಡ್ತಾಳೊ ನೋಡೇಬಿಡ್ತೀನಿ. ಆವಳು ಅಷ್ಟು ನಾಲಿಗಿ ಹರಿಬಿಟ್ಟಾಗ, ನೀನಾರ ಯಾಕ ಸುಮ್ಮನಿದ್ದಿ?"

"ಆಕಿ ನಾಲಿಗಿ ಹರಿಬಿಟ್ಟಳೂ ಅಂತ ನಾನೂ ಬಾಯಿಗೆ ಬಂದದ್ದು ಬೊಗಳಿದರ ಏನು ಬಂತು. ಇದರೊಳಗ ನನ್ನದೇನೂ ತಪ್ಪಿಲ್ಲ—ನಾನ್ಯಾಕ ಆಕೀ ಹಾಂಗ ಆಗಬೇಕು? ಏನೊ ಸಿಟ್ಟು ಬಂದದ, ಸಿಟ್ಟು ಕಾರಿಕೊಂಡು ಹೋಗಲಿ......"

"ಹೌದ್ಹೌದು ಕಾರಿಕೊಳ್ಳದ ಏನು ಮಾಡ್ತಾಳ......"

"ಮನುಷ್ಯರು ಅಂದಮ್ಯಾಲೆ ಒಳ್ಳೇದು-ಕೆಟ್ಟದು ಇದ್ದೇ ಇರ್ತದ. ಆದರ, ಕೆಟ್ಟತನ ಬಹಳ ಕಾಲ ಉಳಿಯೋದಿಲ್ಲಾ—ಅಂತ ಅಜ್ಜಿ ಹೇಳ್ತಿದ್ದಳು.—ಒಳ್ಳೇದು-ಕೆಟ್ಟದು ಅಂಬೋ ತಾರತಮ್ಯ ಇರದೇ ಇದ್ದರ, ಈ ಪ್ರಪಂಚನs ನಿರ್ಜೀವವಾಗಿ ನಿಸ್ಸತ್ವವಾಗಿ ಹೋಗ್ತಿತ್ತು."

ಪುಲ್ಲಯ್ಯ, ನೀಲಿಯ ಈ ಮಾತುಗಳನ್ನು ಕೇಳಿ ಮೌನ ವಹಿಸಿದ. ಅಂದು ರಾತ್ರಿ ಮಲಗುವುದಕ್ಕೂ ಮುಂಚೆ, ನೀಲಿ ಕಳೆದ ರಾತ್ರಿಯ ಮಾತೆತ್ತಿದಾಗ, ಪುಲ್ಲಯ್ಯ ದಿಗಿಲುಗೊಂಡ. "ನೋಡು—ಹೊಟ್ಟೆಗಿಲ್ಲದ ಹೀಂಗs ಸತ್ತರೂ ಚಿಂತಿಲ್ಲ. ಕಳ್ಳತನಕ್ಕ ಮಾತ್ರ ಕೈಹಾಕಬ್ಯಾಡ"—ಎಂದು ಬೇಡಿಕೊಂಡಳು ನೀಲಿ.

ಕಳವು ಮಾಡುವುದು ನನ್ನ ಉದ್ದೇಶವಾಗಿರಲಿಲ್ಲವೆಂದು ಹೇಳಿದ ಪುಲ್ಲಯ್ಯ. ಸ್ವಲ್ಪ ಸಮಯದ ನಂತರ, "ಏನೊ ತಪ್ಪು ಮಾಡಿದೆ. ಮುಂದಿನ ಜೀವನಕ್ಕ ಒಂದು ಆಧಾರ ಸಿಗ್ತದs ಅಂತ ಕೈಹಾಕಬಾರದ ಕೆಲಸಕ್ಕ ಕೈಹಾಕಿದೆ. ಆಯ್ತು, ಇನ್ನು ನನ್ನ ಹೆಣ ಬಿದ್ದರೂ ಸರಿ, ನಾನು ಇಂತಹ ಹೀನ ಕೆಲಸಕ್ಕ ಇಳಿಯಾಣಿಲ್ಲ"—ಎಂದು ನೀಲಿಯನ್ನು ಸಮಾಧಾನ ಮಾಡಿದ.

"ನಾನು ಯಾರ ಮನ್ಯಾಗರ ಪಾತ್ರೆ-ಪಡಗ ತೊಳದುಕೊಟ್ಟು, ನಮ್ಮ ಸಂಸಾರಕ್ಕ ಬೇಕಾಗುವಷ್ಟು ಸಂಪಾದಿಸಬಹುದು"—ನೀಲಿ, ನಿಧಾನವಾಗಿ ತನ್ನ ಮನದ ಇಂಗಿತವನ್ನು ವ್ಯಕ್ತಪಡಿಸಿದಳು.

ಆ ನಿಮಿಷದಲ್ಲಿ, ಪುಲ್ಲಯ್ಯನಿಗೆ ತನ್ನ ಗತಜೀವನದ ನೆನಪಾಯಿತು. ಅದರ ಜೊತೆಗೆ ಕೂಲಿ ಕೆಲಸ ಮಾಡುವ ಹೆಂಗಸರನ್ನು ಗಂಡಸರು ಹೀಯಾಳಿಸುವುದೂ ಸಹ ನೆನಪಾಯಿತು.

"ಯಾಕಿದ್ದೀತು ಬಿಡು......" ಎಂದಷ್ಟೆ ಹೇಳಿದ.

ಇದಾದ ಮರುದಿನ, ಪುಲ್ಲಯ್ಯ ಮತ್ತೆ ಸಿಂಡಿಯಾ ಕಂಪೆನಿ, ನೌಕಾನೆಲೆ, ಹಾರ್ಬರ್—ಎಲ್ಲಾ ಕಡೆಗೂ ಹೋಗಿ ಬಂದ. ಯಾವುದಕ್ಕೆ ಆಗಲಿ, ಒಬ್ಬರ ಮುಂದೆ ಕೈಚಾಚದ ಪುಲ್ಲಯ್ಯ, ಕಂಡಕಂಡವರ ಕಾಲು ಹಿಡಿದು ಕೆಲಸಕ್ಕಾಗಿ ಅಂಗಲಾಚಿದ. ಮಧ್ಯಾಹ್ನ

ಯಾವುದೊ ವ್ಯಾಪಾರಿಯ ಮೂಟೆಗಳನ್ನು ಹೊತ್ತು, ಸಂಜೆಯ ವೇಳೆಗೆ ಹನ್ನೆರಡಾಣೆ ಗಳಿಸಿದ. ಆದರೆ, ಅದರಿಂದ ಆತನಿಗೆ ಯಾವ ಸಂತೋಷವೂ ಆಗಲಿಲ್ಲ. ನೀಲಿಗೆ ಮಾತ್ರ, ಅಷ್ಟೇ ಸಾಕು—ಎನ್ನಿಸಿತು. ಆ ರಾತ್ರಿ, ಪುಲ್ಲಯ್ಯ ಸಲ್ಲದ ಆವೇದನಕ್ಕೆ ತುತ್ತಾದ. ಮಧ್ಯಾಹ್ನ, ಹೊಟ್ಟೆಗಿಲ್ಲದೆ ಹುಡುಗರು ಗೋಳಿಡುತ್ತಿದ್ದಾಗ, ಪಕ್ಕದ ಗುಡಿಸಲಿನ ಯುವತಿ, ಹುಡುಗರಿಗೆ ತಿಂಡಿ ಕೊಟ್ಟಿದ್ದಳು—ಅವಳ ಜಾತಿ ಯಾವುದೊ ಏನೊ—ಹೊಟ್ಟೆ ಹಸಿದಾಗ ಜಾತಿ-ಗೀತಿ ಕಟ್ಟಿಕೊಂಡು ಏನಾಗಬೇಕು—ಎಂದುಕೊಂಡ. ಸರಿ ರಾತ್ರಿ ಕಳೆದರೂ ಪುಲ್ಲಯ್ಯನಿಗೆ ನಿದ್ದೆ ಬಂದಿರಲಿಲ್ಲ. ತಂಗಾಳಿ ಬೀಸಿ, ಚಳಿ ಪ್ರಾರಂಭ ವಾಗಿತ್ತು. ಅಷ್ಟರಲ್ಲಿ ರೈಲು ಭಯಂಕರವಾಗಿ ಕೂಗು ಹಾಕುತ್ತಾ ಗಡಗಡನೆ ಹೋದದ್ದು ಕೇಳಿಸಿತು. ಅದರೊಡನೆ ಪುಲ್ಲಯ್ಯನ ಆಲೋಚನೆಗಳು ತಲೆಕೆಳಗಾದವು—ಈ ರೀತಿ ಕೈಲಾಗದೆ ಬದುಕುವುದಕ್ಕಿಂತ, ಹೋಗಿ ಆ ರೈಲಿನ ಕೆಳಗೆ ಬಿದ್ದರೆ—ಎಂದುಕೊಂಡ. ಮರುಕ್ಷಣವೇ—"ಗಂಡಸಾಗಿ ಹುಟ್ಟಿ ಹೊಟ್ಟೆ ತುಂಬಿಕೊಳ್ಳಲಿಕ್ಕೆ, ದುಡಿದು ದುಡ್ಡು ಸಂಪಾದಿಸಲಿಕ್ಕೆ ಆಗಾಣೆಲ್ಲಾ ಅಂದರೇನು? ನಾನು ಸತ್ತರ, ನನ್ನ ಹೆಣ್ತಿ-ಮಕ್ಕಳ ಗತಿ ಏನು?"—ಅವರು ತನಗಾಗಿ ಅಳುತ್ತ ಕುಳಿತ ಚಿತ್ರ, ಆಗಲೇ ಅವನ ಕಣ್ಣಿನ ಮುಂದೆ ಸುಳಿದುಹೋಯಿತು. "ನನ್ನ ಬದುಕು ಈ ಮಟ್ಟಕ್ಕ ಬಂದಿತಲ್ಲಾ"—ಎಂದು ಪರಿತಪಿಸಹತ್ತಿದ. "ಉದ್ಯೋಗ ಸಿಗದಿದ್ದರ ಬದುಕು ಸಾಗಿಸೋದಾದರೂ ಹ್ಯಾಂಗ? ಊರೆಲ್ಲಾ ತಿರುಗಿದರೂ ಒಂದು ಕಾಸೂ ಹುಟ್ಟಾಣೆಲ್ಲ...... ಆಯ್ತು, ನನ್ನ ಹಣೆಯ ಬರಹ"—ಎಂದು ವ್ಯಸನಪಡಹತ್ತಿದ ಪುಲ್ಲಯ್ಯ.

ಹಾಗೆ ಪರಿತಪಿಸುತ್ತಿರುವಾಗಲೇ ಪುಲ್ಲಯ್ಯನಿಗೆ ನಿದ್ದೆ ಬಂತು. ಆ ನಿದ್ದೆಯಲ್ಲಿ, ಆತ ಚಿತ್ರ-ವಿಚಿತ್ರವಾದ ಕನಸುಗಳನ್ನು ಕಾಣತೊಡಗಿದ. ಬೆಳಿಗ್ಗೆ ಎದ್ದಾಗ, ಅವನ ಹೃದಯ ಭಾರವಾಗಿತ್ತು. ಎದ್ದವನೆ ಕಾಲು ಸವೆಯುವಷ್ಟು ತಿರುಗಿದ. ಕಣ್ಣಿಗೆ ಬಿದ್ದವರಿಗೆಲ್ಲ ಆಶೆಯಿಂದ ನಮಸ್ಕರಿಸಿದ. ರೈಲ್ವೆ ಸ್ಟೇಷನ್ನಿಗೆ ಹೋಗಿ ಸಾಮಾನು ಹೊರ ಬೇಕೆಂದು ಪ್ರಯತ್ನಿಸಿದ. ಆದರೆ, ಅಲ್ಲಿನ ಲೈಸನ್ಸ್ ಪಡೆದ ಕೂಲಿಗಳು ಅವನಿಗೆ ಆ ಅವಕಾಶ ನೀಡಲಿಲ್ಲ. ಯಾವಳೊ ಒಬ್ಬ ಮುದಿ ಹೆಂಗಸು, ಹೊರಲಾರದೆ ಒಂದು ಗಂಟನ್ನು ಹೊತ್ತು ಒಯ್ಯುತ್ತಿದ್ದುದನ್ನು ನೋಡಿ, ಅವಳ ಕೈಯಿಂದ ಅದನ್ನು ಪಡೆದು ಅವಳಿಗೆ ನೆರವಾಗಲು ಮುಂದಾದ. ಮುದುಕಿ ಮೊದಲು, ಇವನನ್ನು ಒಬ್ಬ ಕೂಲಿ—ಎಂದು ತಿಳಿದು ಗಂಟು ಕೊಡಲು ನಿರಾಕರಿಸಿದಳು. ಆದರೆ ಪುಲ್ಲಯ್ಯ ಅವಳಿಂದ ಒಂದು ನಾಲ್ಕಾಣೆಯಾದರೂ ಸಿಗಬಹುದೆಂಬ ಆಶೆಯಿಂದ ಆಗ್ರಹಮಾಡಿ, ಅವಳ ಗಂಟನ್ನು ಎತ್ತಿಕೊಂಡು ಹೋಗಿ ಅವಳನ್ನು ಡಬ್ಬಿಯಲ್ಲಿ ಕೂಡಿಸಿದಾಗ, "ನಮ್ಮಪ್ಪ—ಸುಖ ವಾಗಿರು"—ಎಂದು ಹರಸಿದ ಮುದುಕಿ, ಅವನ ಕೈಯಲ್ಲಿ ಒಂದಾಣೆಯನ್ನೂ ಸಹ ಇಡಲಿಲ್ಲ.

ದಿನಗಳನ್ನು ಹೇಗೆ ಕಳೆಯಬೇಕೆಂಬುದೇ ಪ್ರತಿ ದಿನದ ಸಮಸ್ಯೆಯಾಗಿರುವಾಗ,

ಸುಖವೆಲ್ಲಿಂದ ಬಂತು? ನಾಳೆಯ ದಿನ ಹೇಗೆ—ಎಂಬ ಚಿಂತೆ ಒಂದೆಡೆಯಾದರೆ, ಹಸಿವು ಮತ್ತೊಂದೆಡೆ ಪೀಡಿಸುತ್ತಿತ್ತು. ಅಭಿಮಾನ ಚುಚ್ಚಿ-ಚುಚ್ಚಿ ಕೊಲ್ಲುತ್ತಿತ್ತು. "ಏನು ಮಾಡಲಿ—ಹೇಗೆ ಮಾಡಲಿ"—ಎಂಬ ಚಿಂತೆಯಲ್ಲೆ ಊರೆಲ್ಲಾ ಸುತ್ತಿದ ಪುಲ್ಲಯ್ಯ.—ಆಗಲೇ ಪಟ್ಟಣದಲ್ಲಿದ್ದು ಅನುಭವ ಪಡೆದವನು ಎಲ್ಲವನ್ನೂ ಅರಿತವನೂ ಆದ ರಾಮಣ್ಣ ಪುಲ್ಲಯ್ಯನಿಗೆ ಗಂಟುಬಿದ್ದ.

"ಏನು ಸರ್ಕಾರನೊ ಏನೊ? ಎಲ್ಲಿ ನೋಡಿದರೂ ಅಭಾವ-ಅನಾವೃಷ್ಟಿ. ನಮ್ಮಂತಹವರು ಸಾವಿರಾರು ಜನ ಹಸಿವಿನಿಂದ ಸತ್ತರೂ ಕೇಳುವವರಿಲ್ಲ......" ಎಂದು, ಅವನೇ ಮಾತು ಪ್ರಾರಂಭಿಸಿದ್ದ.

"ಹೌದು, ನೀನು ಹೇಳೋದೇನೊ ಖರೆ. ಆದರ ನಮ್ಮ ಸರ್ಕಾರ ಇನ್ನೂ ಕಿರಿಯದು. ಸರ್ಕಾರದಾಗ ಇರೊ ಜನರಿಗೆ ಹೆಚ್ಚು ಅನುಭವ ಇಲ್ಲ. ಅವರು ದೊಡ್ಡವರಾಗಿ. ನಮ್ಮ ಸರ್ಕಾರನೂ ದೊಡ್ಡದಾದರ, ನಮ್ಮಂತಹವರ ಗತಿ ಸುಧಾರಿಸ್ತದೇಳು"—ಪುಲ್ಲಯ್ಯ ಹೇಳಿದ.

"ನೀನೊಬ್ಬ ಅಡವಿ ಮನುಷ್ಯ ಇದ್ದಾಂಗ ಇದ್ದೀದಿ. ಸರ್ಕಾರ, ಸರ್ಕಾರದಾಗ ಇರೋವರು ಸಣ್ಣವರೇನಲ್ಲ. ಹಾಂಗ ನೋಡಿದರ, ಅವರು ಸರಿಯಾಗಿ ಕೆಲಸ ಮಾಡಿದರ, ನಮ್ಮಂತಹವರಿಗೆ ಕೆಲಸ ಸಿಗದsa ಇರ್ತದೇನು?"

" ಹಾಂಗಿದ್ದರ. ನಮಗ ಕೆಲಸ ಸಿಗೋ ಹಾಂಗ ಸರ್ಕಾರ ಯಾಕ ಮಾಡವಲ್ದು?"

"ಸರ್ಕಾರ ಎಲ್ಲರಿಗೂ ಕೆಲಸ ಕೊಟ್ಟರ ನಮ್ಮ ಈ ಬಡತನ ಇರಾಣೆಲ್ಲ—ಆದರ, ಬೀದಿ ಜನರ ಕಷ್ಟ-ಸುಖ ಯಾರಿಗೆ ಬೇಕು? ಲಂಚ ಕೊಟ್ಟವರಿಗೆ ಕೆಲಸ ಕೊಟ್ಟರು—ನನ್ನಂತಹವರಿಗೆ ಕೆಲಸ ಇಲ್ಲಾಂತ ಹೊರಗ ಹಾಕಿದರು.—ಈ ಜನರಿಗೆ, ಹಿಂದೂ ಧರ್ಮ ಅಂದರೇನು ಅಂಬೋದು ಅರ್ಥ ಆದರ, ನಮ್ಮ ಗತಿನೂ ಸುಧಾರಿಸ್ತದ. ನ್ಯಾಯವಾಗಿ ಯಾರಿಗೆ ಏನು ದಕ್ಕಬೇಕೊ ಅದನ್ನು ಕೊಡಬೇಕು. ನಮ್ಮ ಸ್ವಂತದ ಅಗತ್ಯಗಳು-ಅವಶ್ಯಕತೆಗಳು ಈಡೇರಿದ ಮ್ಯಾಲೆ, ಉಳಿದದ್ದನ್ನು ಇತರರಿಗೂ ಕೊಡಬೇಕು—ಅಂತ ನಮ್ಮ ಹಿಂದೂ ಧರ್ಮ ಹೇಳ್ತದ"—ಎನ್ನುತ್ತಾ, ರಾಮಣ್ಣಾ, ಪುಲ್ಲಯ್ಯನನ್ನೂ, ಮಲ್ಲೇಶಿಯನ್ನೂ ತನ್ನ ಜೊತೆ ಕರೆದುಕೊಂಡು ಹೋದ.

ರಾಮಣ್ಣಾ, ಹೊಗೆಯಿಂದ ತುಂಬಿದ ಕತ್ತಲು ಕೋಣೆಯೊಂದನ್ನು ಪ್ರವೇಶಿಸಿದಾಗ, ಪುಲ್ಲಯ್ಯ ಮತ್ತು ಮಲ್ಲೇಶಿ ಅವನನ್ನು ಅನುಸರಿಸಿದರು. ಅದೊಂದು ಪುಟ್ಟದಾದ ಕೊಳಕು ಕಾಫಿ ಹೋಟಲಾಗಿತ್ತು. ಹೋಟಲಿನ ತುಂಬ ನೊಣಗಳು ಹಾರಾಡುತ್ತಿದ್ದವು. ಕೊಳಕು ಬಟ್ಟೆಗಳನ್ನು ತೊಟ್ಟ ಹುಡುಗನೊಬ್ಬ ಮೂರು ಕಪ್ಪುಗಳಲ್ಲಿ ಚಹ ತಂದಿಟ್ಟ.

"ಹೂಂ-ಕುಡೀರಿ......" ಎಂದು ರಾಮಣ್ಣ ಹೇಳಿದ.

ಹಸಿವಾಗಿದ್ದರಿಂದ, ಪುಲ್ಲಯ್ಯ ಮರುಮಾತಾಡದೆ ಅದನ್ನು ಕುಡಿದ. ಮಲ್ಲೇಶಿ

ಕೂಡ ಚಹಾ ಕುಡಿದು ಬಾಯಿ ಚಪ್ಪರಿಸಿದ. ಆದರೆ, ಚಹಾ ಕುಡಿದ ಮೇಲೆ, ತಾನು ಯಾವುದೋ ತಪ್ಪು ಮಾಡಿದಂತೆ ಪುಲ್ಲಯ್ಯನಿಗೆ ಅನಿಸಿತು.

ಬೆಲ್ಲದ ಚಹಾ ಅವನಿಗೆ ರುಚಿಸಿತು. ಆಗಲೇ, ಸಂಜೆಯಾಗಿತ್ತು. ಮನೆಯಲ್ಲಿ ಹೆಂಡತಿ ಮಕ್ಕಳು ಹಸಿದು ಕುಳಿತಿರುವರೆಂಬ ಜ್ಞಾಪಕ ಬಂದು ಕಸಿವಿಸಿಯಾಯಿತು.

ಪುಲ್ಲಯ್ಯ ಈ ರೀತಿ ಯೋಚಿಸುತ್ತಿರುವಾಗಲೇ, ಅವನ ಆ ಹೊಸ ಸ್ನೇಹಿತ ರಾಮಣ್ಣ, "ಮೀಟಿಂಗ್‌ಗೆ ಬರಾಣಿಲ್ಲೇನು?" ಎಂದು ಕೇಳಿದ. "ಯಾವ ಮೀಟಿಂಗ್–ಏನು"—ಪುಲ್ಲಯ್ಯ ತಬ್ಬಿಬ್ಬಾಗಿ ಕೇಳಿದ.

"ಗೊತ್ತಿಲ್ಲೇನು ನಿನಗ? ಇನ್ನೂ ಸ್ವಲ್ಪ ದಿನದಾಗ ಓಟು ಹಾಕೊ ಗದ್ದಲ ಪ್ರಾರಂಭ ಆಗೋದದ. ಯಾರಿಗೆ ಓಟುಕೊಟ್ಟರ ನನ್ನ ಈ ಕಷ್ಟ ಕಡಿಮೆ•ಆಗ್ತಾವೊ, ಅವರಿಗೆ ಓಟು ಕೊಡಬೇಕಂತ ಮಾಡೀನಿ. ದೊಡ್ಡ ದೊಡ್ಡವರು ಈ ಅನಾವೃಷ್ಟಿಯ ಪ್ರಯೋಜನ ಪಡೆದು ಸಾಕಷ್ಟು ದುಡ್ಡು ಮಾಡಿಕೊಂಡಾರ. ಎಲ್ಲಿ ನೋಡಿದರೂ ಅನ್ಯಾಯ–ಅನಾಚಾರ ಹೆಚ್ಚಾಗ್ಯದ. ಈ ಕೋಲಾಹಲದೊಳಗ ನಮ್ಮಂತಹವರ ಬದುಕು ಹಾಳಾಗ್ಯದ. ನನಗ ಬದುಕಲಿಕ್ಕೆ ಆಗ್ಲಿಲ್ಲ—ನನ್ನ ತಂಗಿಗೆ ನನ್ನ ಕಷ್ಟ ನೋಡಲಿಕ್ಕೆ ಆಗಲಿಲ್ಲ—ಅದಕ್ಕ......"

"ಅದಕ್ಕ...... ಏನಾತು...... ಏನಾತು ರಾಮಣ್ಣ?"—ಪುಲ್ಲಯ್ಯ ಆರ್ತನಾಗಿ ಕೇಳಿದ.

ರಾಮಣ್ಣನ ಕಣ್ಣುಗಳು ಇದ್ದಕ್ಕಿದ್ದಂತೆ ತುಂಬಿದುವು. "ನನ್ನ ತಂಗಿ, ನನಗಾಗಿ, ನನ್ನ ಮತ್ತು ನನ್ನ ಮಕ್ಕಳ ಗೇಣು ಹೊಟ್ಟೆಗೆ ಹಿಟ್ಟು ಒದಗಿಸುವುದಕ್ಕಾಗಿ ತನ್ನನ್ನು ತಾನು ಮಾರಿಕೊಂಡಳು. ಅವಳು ತನ್ನ ಯೌವನದ ಸಿರಿಯನ್ನು ಮಾರಿಕೊಂಡದ್ದು ತಿಳಿದಾಗ, ಅವಳನ್ನು ಇರಿದು ಸಾಯಿಸಬೇಕೆಂದುಕೊಂಡೆ. ಅದಕ್ಕಾಗಿ ಒಂದು ಚೂರಿಯನ್ನೂ ಸಹ ಸಂಪಾದಿಸಿದೆ. ಆದರೆ, ದುಡುಕಬಾರದೆಂದು ಎರಡು ದಿನ ಸುಮ್ಮನಿದ್ದೆ. ಹೊಟ್ಟೆಗೆ ಹಿಟ್ಟಿಲ್ಲದೆ, ಗಂಜಿ ಇಲ್ಲದೆ, ನಾನೇನೊ ನೀರು ಕುಡಿದು ಬದುಕಿಕೊಂಡೇನು. ಆದರೆ, ತಾಯಿಯಿಲ್ಲದ ನನ್ನ ಮೂರು ಮಕ್ಕಳು...... ಅವಳ ಗಳಿಕೆಯೆ ಅವರ ಪ್ರಾಣ ಉಳಿಸಿತು...... ಅಂದು ರಾತ್ರಿ ಅವಳು ಬಂದು ಗಂಜಿ ಹಾಕಿರದಿದ್ದಲ್ಲಿ ಏನಾಗುತ್ತಿತ್ತೊ ಏನೊ?"

ಇದನ್ನು ಕೇಳಿದ ಪುಲ್ಲಯ್ಯನ ಮನಸ್ಸಿಗೆ ಆಘಾತವಾಯಿತು. ಜೊತೆಗೆ ರಾಮಣ್ಣನ ಬಗ್ಗೆ ಅವನಲ್ಲಿ ಮರುಕ ಹುಟ್ಟಿತು.

"ಇದೆಲ್ಲ ಸುಳ್ಳಲ್ಲ. ಈ ಲೋಕದಾಗ ನಾಲ್ಕು ನಿಮಿಷ ಬದುಕಿದರೂ. ಗೌರವವಾಗಿ ಬದುಕುವವರ ಮಾತು ಬ್ಯಾರೆ—ನನಗ ಹಸಿವು—ಅಂತ ಊರ ಮಂದಿ ಮುಂದ ಸುಳ್ಳು ಹೇಳಿದರ ದೇವರು ಒಳ್ಳೇದು ಮಾಡಾಣಿಲ್ಲ...... ದುಡ್ಡಿದ್ದವರನ್ನು ದೊಡ್ಡವರನ್ನು ನಿರ್ನಾಮ ಮಾಡಬೇಕೂ ಅಂತ ನಾನೇನೂ ಹೇಳಾಣಿಲ್ಲ. ಖರೆ ನೋಡಿದರ, ಈ

ದೊಡ್ಡವರಿಗೆ, ನಮ್ಮಂತಹವರ ಬದುಕು ಹ್ಯಾಂಗ ನಡೀತದ ಅಂಬೋದs ಗೊತ್ತಿಲ್ಲ. ಕಟ್ಟಿಗೆ ಹೊರೆಯನ್ನು ಹೊತ್ತವನಿಗೆ ಅದರ ಭಾರ ಎಷ್ಟು ಅಂಬೋದು ಗೊತ್ತಿರ್ತದs ಹೊರತಾಗಿ ಬ್ಯಾರೆ ಅವರಿಗೇನು ಗೊತ್ತು......?"—ರಾಮಣ್ಣ ಆವೇಶದಿಂದ ಹೇಳಿದ.

ಪುಲ್ಲಯ್ಯನಿಗೆ ಅವನ ಈ ಮಾತುಗಳು ಒಪ್ಪಿಗೆಯಾದವು. ತನಗಿಂತ ಘೋರವಾದ ಪರಿಸ್ಥಿತಿಗಳನ್ನು ಎದುರಿಸಿಯೂ ನಿರಾಶರಾಗದೆ ಹೋರಾಡುತ್ತಿರುವವರು ಇದ್ದಾರೆಂದ ಮೇಲೆ, ತಾನು ಅಧೈರ್ಯನಾಗುವುದರಲ್ಲಿ ಯಾವ ಅರ್ಥವೂ ಇಲ್ಲವೆಂದುಕೊಂಡ ಪುಲ್ಲಯ್ಯ.

ರಾಮಣ್ಣ, ಪುಲ್ಲಯ್ಯನನ್ನು ಚುನಾವಣಾ ಪ್ರಚಾರಕ್ಕಾಗಿ ಏರ್ಪಡಿಸಲಾಗಿದ್ದ ಒಂದು ಸಭೆಗೂ ಸಹ ಕರೆದುಕೊಂಡು ಹೋದ. ಅಲ್ಲಿ, ಪುಲ್ಲಯ್ಯನಂತಹವರು ಅನೇಕ ರಿದ್ದರು. ಅವರನ್ನು ನೋಡಿದಾಗ, ಪುಲ್ಲಯ್ಯನಿಗೆ ಆನಂದವಾಯಿತು. ಬಹುಶಃ ಈ ಎಲ್ಲ ಜನರು, ತನ್ನಂತೆಯೇ ಕಷ್ಟಕ್ಕೀಡಾದವರಿರಬಹುದು. ಇಲ್ಲದಿದ್ದರೆ, ಈ ಸಭೆಗೆ ಅವರು ಬರುತ್ತಲೇ ಇರಲಿಲ್ಲವೆಂದುಕೊಂಡ. ಅರೆ—ಇದೇನು—ನಮ್ಮ ಪಕ್ಕದ ಗುಡಿಸಲಿನ ಆ ಯುವಕ ಜೇಬುಗಳ್ಳ. ಅದೆಷ್ಟು ಗಟ್ಟಿಯಾಗಿ ಕೂಗುತ್ತಿದ್ದಾನೆ. ಇಲ್ಲಿ ಸೇರಿರುವ ಈ ಜನರಲ್ಲಿ ಇಷ್ಟು ಉತ್ಸಾಹ ಇರುವಾಗ, ನಾನಾದರೂ ಅವರ ಹಾಗೆ ಏಕಿರಬಾರದು...... ಪುಲ್ಲಯ್ಯ ಹೀಗೆ ಯೋಚಿಸುತ್ತಿರುವಾಗಲೇ, ಸಣಕಲು ಆಸಾಮಿ ಯೊಬ್ಬ, ಸಭಾವೇದಿಕೆಯನ್ನು ಏರಿದ. ಅಲ್ಲಿ ಸೇರಿದ್ದ ಜನರು ಆತನನ್ನು ನೋಡಿ, ಜಯಜಯಕಾರ ಮಾಡಿದರು. ಪುಲ್ಲಯ್ಯ ಕೂಡ "ಜೈ" "ಜೈ"—ಎಂದು ಕೂಗಿದ. ತಂದೆಯನ್ನು ನೋಡಿ, ಮಗನೂ ಸಹ ತನ್ನ ಧ್ವನಿ ಸೇರಿಸಿದ.

"ಸತ್ಯಕ್ಕ ಎಂದಿದ್ದರೂ ಜಯ ಲಭಿಸ್ತದ. ಈ ದೊಡ್ಡವರು, ದುಡ್ಡಿದ್ದವರು, ಆ ಬ್ರಿಟಿಷರ ಕಾಲದಾಗ ಸಾಕಷ್ಟು ದುಡ್ಡು ಮಾಡಿಕೊಂಡು ಭದ್ರವಾಗಿ ಕೂತಾರ. ಆಗಿನ ಕಾಲದಾಗ, ಕೆಳಗೆ-ಮ್ಯಾಲೆ ಮಾಡಿ ದುಡ್ಡು ನುಂಗೋದು ಸುಲಭ ಆಗಿತ್ತು—ಈಗ ಅದನ್ನೆ ಮೈಗೂಡಿಸಿಕೊಂಡಾರ. ದಿನಕ್ಕ ಒಂದು ಬೆಲೆ, ದಿನಕ್ಕೊಂದು ಯುಕ್ತಿಯಿಂದ, ಈ ಲೋಕಕ್ಕ ಕಿಚ್ಚು ಹಚ್ಚಲಿಕ್ಕೆ ಹವಣಿಸ್ತಾರ ಈ ಜನ. ಈ ಕತ್ತಿಗಳು. ಎಷ್ಟುದಿನ ಅಂತ ಹೀಂಗs ಬದುಕ್ತಾರ? ಹರಿಶ್ಚಂದ್ರ ಮಹಾರಾಜ—ಪಡಬಾರದ ಕಷ್ಟಪಟ್ಟ. ಸ್ಮಶಾನದಾಗ ಹೆಣ ಕಾಯೊ ಕೆಲಸ ಮಾಡಿದ—ಆದರೆ ಸತ್ಯ ಹೇಳೋದನ್ನ ಬಿಡಲಿಲ್ಲ. ಕಷ್ಟ ಕಾಲ ಬಂತೂ ಅಂತ ಹತಾಶನಾಗಲಿಲ್ಲ. ಅದೇ ನಿಜವಾದ ಬದುಕು—ನೋಡು ಆ ಯಜಮಾನ ಹ್ಯಾಂಗಿದ್ದಾನೊ ನೋಡು."

ಪುಲ್ಲಯ್ಯ, ಕಣ್ಣರಳಿಸಿ ವೇದಿಕೆಯ ಮೇಲಿದ್ದವನನ್ನು ನೋಡಿದ.

ರಾಮಣ್ಣ ತನ್ನ ಮಾತನ್ನು ಮುಂದುವರಿಸಿ, "ನ್ಯಾಯ ಎಲ್ಲಿಗೂ ಹೋಗಾಣಿಲ್ಲ. ಅದು ಶಾಶ್ವತ. ಈಗ ನಮ್ಮ ರಕ್ತ ಹೀರಿ ದುಡ್ಡು ಮಾಡಿಕೊಂಡವರೆಲ್ಲಾ, ನಾಳೆ, ಬೀದಿ ನಾಯಿ ಹಾಂಗ ಕಾರಿಕೊಂಡ ಸಾಯ್ತಾರ. ಈಗ, ಈ ಹುಡುಗರು ತಲೆ ಎತ್ತಿ ಅನ್ಯಾಯ

ವಿರೋಧಿಸೊ ಧೈರ್ಯ ಮಾಡ್ತ್ಯಾರ. ಈ ಹುಡುಗರೊಳಗ ಧರ್ಮ, ನ್ಯಾಯಾನ್ಯಾಯದ ಪರಿವೆ ಅದ. ಕೆಟ್ಟದ್ದನ್ನು ಬೇರುಸಹಿತ ಕಿತ್ತಿಹಾಕೊ ಸಾಮರ್ಥ್ಯ ಅದ. ಇವರು, ಇನ್ನ ದುಡ್ಡಿದ್ದವರ ಆಟ ನಡೀದ್ಹಾಂಗ ಮಾಡ್ತಾರೇಳು. ಕೇಳು, ಆ ವೇದಿಕೆಯ ಮೇಲೆ ನಿಂತಾತನ ಭಾಷಣ ಕೇಳು......"

ಆ ಭಾಷಣಕಾರ ಕಡ್ಡಿಯ ಹಾಗೆ ತೆಳುವಾಗಿದ್ದನಾದರೂ ಗಂಗಾಪ್ರವಾಹದಂತೆ, ಏಕಪ್ರಕಾರವಾಗಿ ಭಾಷಣ ಬಿಗಿಯುತ್ತಿದ್ದ. ಅಲ್ಲಿದ್ದ ಜನರು, ಅದೆಷ್ಟೊ ಸಲ ಜಯ ಜಯಕಾರ ಮಾಡಿದರು. ಉದ್ರೇಕಗೊಂಡು ಕೇಕೆ ಹಾಕಿದರು. ಕುಳಿತವರು ಎದ್ದುಎದ್ದು ಮುಂದಕ್ಕೆ ಹೋದರು. ಪ್ರಜಾರಾಜ್ಯ ಯಶಸ್ವಿಯಾಗದಿದ್ದರೆ ಏನಾಗುತ್ತದೆಂದು ಸವಾಲು ಹಾಕಿದ ಭಾಷಣಕಾರ—ತನ್ನ ಧೋರಣೆಯನ್ನು ಪ್ರಸ್ತಾಪಿಸುವಲ್ಲಿ ಮೈಮರೆತು ಮಾತನಾಡಿದ. ಸಭೆಯ ಕೊನೆಯಲ್ಲಿ ತಮ್ಮ ಪಕ್ಷಕ್ಕೆ ಮತ ಕೊಡಬೇಕೆಂಬ ಮನವಿ ಮಾಡಿಕೊಳ್ಳಲಾಯಿತು. ಬದುಕಿನ ಭಾರವನ್ನು ಭರಿಸಲಾಗದೆ ನರಳುತ್ತಿದ್ದರೂ, ಜೀವದ ಮೇಲಿನ ಆಶೆಯಿಂದ ಬದುಕಿದ್ದ ಜನರು, ಆ ಉಪನ್ಯಾಸ ಕೇಳುವಲ್ಲಿ ತಮ್ಮ ಕಷ್ಟಗಳನ್ನು ಮರೆತಿದ್ದರು.

ಸಭೆಯನ್ನು ಮುಗಿಸಿಕೊಂಡು ಚದುರಿಹೋಗುತ್ತಿದ್ದ ಜನರನ್ನು ಉದ್ದೇಶಿಸಿ, ಮತ್ತೊಬ್ಬನು ಯಾವನೊ, ಏನೊ ಹೇಳಲು ಪ್ರಯತ್ನಿಸುತ್ತಿದ್ದ. ಅವನು ಯಾರಿರಬಹುದೆಂದು ಪುಲ್ಲಯ್ಯ ಯೋಚಿಸುತ್ತಿರುವಾಗಲೇ ಮಲ್ಲೇಶಿ, "ಅಪ್ಪಾ, ಹುಚ್ಚ, ಹುಚ್ಚ"—ಎಂದು ಅವನನ್ನು ತೋರಿಸಿದ. ಆ ಹುಚ್ಚ ತನ್ನಲ್ಲೆ ತಾನು ಮಾತನಾಡಿಕೊಳ್ಳುತ್ತಿದ್ದ. "ಎಲ್ಲರೂ ಮುಗ್ಧರು ಬಯ್ಯೊ ನಾಲಿಗಿ, ಒಳ್ಳೆಯದಕ್ಕೂ ಬಯ್ತದ, ಕೆಟ್ಟದಕ್ಕೂ ಬಯ್ತದ. ಅವನಿಗೆ ಮನುಷ್ಯರ ಹೆಸರಿರಲಿ, ಚರಿತ್ರೆಯ ಗತಿಯೇ ಅವನಿಗೆ ಗೊತ್ತಿಲ್ಲ. ನೀವೆಲ್ಲರೂ ಅಮಾಯಕರಾಗಿದ್ದೀರಿ, ಮೂಢನಂಬಿಕೆಯುಳ್ಳವರಾಗಿದ್ದೀರಿ—ಅದಕ್ಕs ನಿಮ್ಮ ಮುಂದ ಇಲ್ಲದ ಪ್ರತಾಪ ಕೊಚ್ಚಿಕೊಳ್ತಾನ ಆತು"—ಎಂದು ಹುಚ್ಚ ಪಕಪಕನೆ ನಕ್ಕ. "ನಿಮ್ಮ ಪೈಕಿ ಎಷ್ಟು ಜನರು, ಕ್ರಾಸ್‌ವರ್ಡ್, ಬ್ರ್ಯಾಕೆಟ್—ಮುಂತಾದ ದುಶ್ಚಟಗಳಿಲ್ಲದವರಿದ್ದೀರೊ ಕೈ ಎತ್ತರಿ—ವರದಕ್ಷಿಣೆ ಇಲ್ಲದೆ ಮದುವೆ ಮಾಡಿಕೊಂಡವರು ಎಷ್ಟು ಮಂದಿ ಇದ್ದೀರಿ ಕೈ ಎತ್ತರಿ—ಎಲ್ಲಿಂದಾದರೂ, ಹೇಗಾದರೂ ಒಂದು ಸಾವಿರ ರೂಪಾಯಿ ದಕ್ಕಬೇಕೆಂಬ ದುರಾಸೆ ಇಲ್ಲದವರು ಯಾರಿದ್ದೀರಿ ಕೈ ಎತ್ತರಿ—ನೀವೆಲ್ಲಾ ದುರಾಸೆಯ ಮಾಯಾಜಾಲದೊಳಗ ಸಿಕ್ಕಿಕೊಂಡು, ಅವನ ದೊಡ್ಡ ದೊಡ್ಡ ಮಾತಿಗೆ ಮರುಳಾದ್ರಿ ಆತು. ಇಲ್ಲಂದರ, ಅವನು ಹೇಳಿದ್ಹಾಂಗ ಎಲ್ಲಾನೂ, ಮಾಯಾಲೋಕದಾಗ ಆದ್ಹಾಂಗ ಆಗ್ತದಂತ ತಿಳಿದಿರೇನು? ನೂರಾರು ವರ್ಷಗಳಿಂದ ಬೆನ್ನು ಬಿದ್ದದ್ದನ್ನ ಒಂದು ದಿನದಾಗ ಬಿಡಿಸಿಕೊಳ್ಳಲಿಕ್ಕ ಆಗ್ತದೇನು? ಕತ್ತಿ ಎಲ್ಲಾದರೂ ಕೋಣ ಆಗಲಿಕ್ಕ ಸಾಧ್ಯ ಅದೇನು? ಸಾಧ್ಯ ಅದ ಅಂತ ಹೇಳೊವನು ಹುಚ್ಚನ ಸರಿ......"

ಅವನ ಈ ಮಾತುಗಳನ್ನು ಕೇಳಿದ ಜನ, ಅವಹೇಳನಕರವಾದ ರೀತಿಯಲ್ಲಿ ಅವನನ್ನು

ನೋಡಿ ನಕ್ಕು ಮುಂದೆ ಹೊರಟರು. ಆದರೆ, ಅವನು ಮಾತ್ರ ತನ್ನ ಭಾಷಣ ಮುಂದು ವರಿಸಿದ—"ಅವನು ಮಚ್ಚನಲ್ಲದಿದ್ದರ ಮತ್ತೇನು...... ಪ್ರಜೆಗಳಿಗೆ ಮತ್ತಷ್ಟು ಗಳಿಸಲು ಅವಕಾಶ ಮಾಡಿಕೊಡೊ ಹೋರಾಟ ನಡೆಸೋದು ಬಿಟ್ಟು, ಇದ್ದ ಅವಕಾಶ ಗಳನ್ನು ನಿರ್ನಾಮ ಮಾಡ್ತೀನಿ ಅಂದರ, ಅವನಿಗೆ ಇನ್ನೇನು ಹೇಳಬೇಕು? ಇದ್ದುದನ್ನು ನಾಶಪಡಿಸಿದಲ್ಲಿ, ಕೆಲಸವಿಲ್ಲದವರಿಗೆ ಕೆಲಸ ಕೊಡುವ ಸ್ವಭಾವದವರು ಮುಂದೇನು ಮಾಡ್ತಾರೊ ನನಗ ಗೊತ್ತಿಲ್ಲ—ಇದ್ದುದರಲ್ಲೆ ತೃಪ್ತಿಯಿಂದಿರುವ ಜನರಲ್ಲಿ ಇಲ್ಲದ ಆಸೆ ಗಳ ಬೀಜ ಬಿತ್ತುವುದು ಸರಿಯಲ್ಲ. ಆಶೆಗಳನ್ನು ಆಕಾಶದೆತ್ತರಕ್ಕ ಬೆಳಸಿ, ಸಂತೃಪ್ತಿ— ಎಂಬೋದನ್ನ ಮರೆಸಲು ಪ್ರಯತ್ನಿಸಿದಲ್ಲಿ, ಅಧಿಕಾರಕ್ಕೆ ಬರುವ ಯಾರೇ ಆಗಲಿ, ಅವರಿಗೆ ಎಷ್ಟು ಕೊಟ್ಟರೂ ಏನೂ ಕೊಟ್ಟರೂ ತೃಪ್ತಿ ಇರುವುದಿಲ್ಲ—ನಿಜ ಹೇಳ ಬೇಕಂದರ, ಭೂಮಿಯ ಮೇಲೆ ಕಾಲಿರದ ಜನರನ್ನ ಎಂದಿಗೇ ಆಗಲಿ ತೃಪ್ತಿಪಡಿಸಲು ಸಾಧ್ಯವಿಲ್ಲ. ಸಲ್ಲದ ಪ್ರಚಾರದಿಂದ, ಈಡೇರಿಸಲಾಗದ ವಾಗ್ದಾನಗಳಿಂದ, ಪ್ರಜೆಗಳಲ್ಲಿ ಈಗಿರುವ ಸೌಖ್ಯವನ್ನೂ ಸಹ ಹಾಳ-ಮಾಡುವುದು ಸರಿಯಲ್ಲ. ಇಟ್ಟಿಗೆಯ ಮೇಲೆ ಇಟ್ಟಿಗೆಯನ್ನಿಟ್ಟು ಗೋಡೆ ಕಟ್ಟುವಂತೆ. ಒಂದಾದ ಮೇಲೊಂದರಂತೆ ಪ್ರಜೆಗಳಿಗೆ ಹಿತಕರವಾದ ಕೆಲಸಗಳನ್ನು ಮಾಡಿದಲ್ಲಿ, ಸಂತೃಪ್ತಿಯುಳ್ಳವರಾದರೂ ಸುಖವಾಗಿರ್ತಾರ. ಸಂತೃಪ್ತಿಯುಳ್ಳ ಜನರು ಹೆಚ್ಚಾಗಿರುವ ದೇಶವೇ. ಸಮೃದ್ಧಿಯಾಗಿ ಕೆಲಕಾಲ ಬಾಳ್ತದ. ನಿಮಗೆಲ್ಲರಿಗೂ ಒಂದಿಲ್ಲ ಒಂದು ಕಷ್ಟ ಅದ...... ನಿಮ್ಮ ಕಷ್ಟಗಳನ್ನು ನೋಡಿ ನನ್ನ ಮನಸ್ಸು ನೊಂದದ. ನಾನೂ ಸಹ ನಿಮ್ಮ ಹಾಂಗs ಬಾಧೆಪಟ್ಟಿದ್ದೇನೆ. ಒಬ್ಬರ ಬಾಧೆ ಯನ್ನು ಹಂಚಿಕೊಳ್ಳಲು ಪ್ರಯತ್ನಿಸಿದವನು ನಾನು. ನಿಮಗೇನಾದರೂ ನಾಲ್ಕು ಬುದ್ಧಿ ಮಾತು ಹೇಳಬೇಕಾಗಿದ್ದರ ಅವರ ಹಕ್ಕು ನನಗದ. ನೀವು ಕೇಳ್ರಿ—ಬಿಡ್ರಿ. ಈಗಿನ ಕಾಲದಾಗ ಎಷ್ಟು ಕುಲಗಳು, ಎಷ್ಟು ಪಕ್ಷಗಳು—ಸಂಘಗಳು ಹುಟ್ಟಿಕೊಂಡವ. ಸಂಘನ ಸಂಸ್ಥೆಗಳನ್ನು ಕಟ್ಟಿಕೊಂಡು ಯಾರೇನು ಮುಂದೆ ಹೋಗಿಲ್ಲ. ಒಬ್ಬನಿಗೆ ಮತ್ತೊಬ್ಬ— ಮೇಲೆ ದ್ವೇಷ, ಅಸೂಯೆ. ಮಾನವೀಯತೆಯ ಮೇಲೆ ಅಸಹ್ಯವಾದ ಪ್ರಭಾವ ಬೀರುವ ಸಂಘ—ಸಂಸ್ಥೆಗಳು ನಮಗೆ ಬೇಡವೇ ಬೇಡ. ಈ ಯುಗಸಂಧಿಯಲ್ಲಿ, ನಮ್ಮ ದೇಶ ಇಷ್ಟು ಅಧ್ವಾನಕ್ಕಿಳಿದದ ಎಂಬುದನ್ನು ನೆನಸಿದರ ಅಳು ಬರ್‍ತದ......" ಕೇಳು ವವರು ಇರದೇ ಇದ್ದರೂ ಆತ ಮಾತನಾಡುತ್ತಲೇ ಇದ್ದ. ಹಾಗೆ ಮಾತನಾಡುತ್ತಲೆ, ಕಣ್ಣಲ್ಲಿ ನೀರು ತಂದುಕೊಂಡು ಮುನ್ನಡೆದ.

ಪುಲ್ಲಯ್ಯ, ಆ ಸಭೆಯಿಂದ ಉತ್ಸಾಹದಿಂದಲೇ ಮನೆಯತ್ತ ಹೆಜ್ಜೆಹಾಕಿದ. ಆದರೆ, ಮನೆ ಸಮೀಪಿಸುತ್ತಿದ್ದಂತೆ, ಈ ಹೊತ್ತಿಗೇನು—ಎಂಬ ಸಮಸ್ಯೆ ಅವನನ್ನು ಕಾಡಹತ್ತಿತು. ಆ ರಾತ್ರಿ, ನೀಲಿ ಪಕ್ಕದವರ ಗುಡಿಸಲಿನಿಂದ ಹಿಟ್ಟು ಕಡ ತಂದು ಗಂಜಿ ಮಾಡಿ ಹಾಕಿದಳು. ರಾತ್ರಿ ಎಲ್ಲಾ ಯೋಚಿಸಿ, ಬೆಳಿಗ್ಗೆ. ತಟ್ಟು ಹಿಡಿದುಕೊಂಡು ಕೂಲಿಗೆ ಹೋಗುವುದೆಂದು ತೀರ್ಮಾನಿಸಿದ ಪುಲ್ಲಯ್ಯ ಹಾಯಾಗಿ ನಿದ್ರೆಹೋದ.

[ 31 ]

ಬದುಕಿನ ಬವಣೆಯನ್ನು ಎದುರಿಸಲಾಗದೆ ಧೃತಿಗೆಟ್ಟು ಪುಲ್ಲಯ್ಯ ಸೊರಗಿಹೋದ. ಒಂದೊಂದು ದಿನ ಕೂಲಿ ಸಿಗುತ್ತಿತ್ತು. ಒಂದೊಂದು ದಿನ ಏನೂ ಸಿಗುತ್ತಿರಲಿಲ್ಲ. ಒಂದು ದಿನ ಹಡಗಿನಿಂದ ಮೂಟೆಗಳನ್ನು ಇಳಿಸುವ ಕೆಲಸಕ್ಕೆ ಹೋದ. ಎರಡು ಮೂಟೆಗಳನ್ನು ಒಟ್ಟಿಗೆ ಎತ್ತಿ ಇಳಿಸಬೇಕೆಂದು ಪ್ರಯತ್ನಪಟ್ಟನಾದರೂ, ಒಂದು ಮೂಟೆಯನ್ನು ಇಳಿಸುವುದರೊಳಗಾಗಿ ಸಾಕು–ಸಾಕಾಯಿತು. ತನ್ನ ಶಕ್ತಿ ಎಲ್ಲಾ ಉಡುಗಿ ಹೋದುದರ ಅರಿವು ಮೂಡಿದಾಗ ಮನಸ್ಸಿನಲ್ಲಿ ನೊಂದುಕೊಂಡ.

ಯಾರೊ. ಯಾವುದೊ ಉದ್ಯೋಗ ಸಂಸ್ಥೆಯಲ್ಲಿ. ಹೆಸರು ಬರೆಸಿದರೆ ಕೆಲಸ ಸಿಗುತ್ತದೆಂದು ಹೇಳಿದರು. ಪುಲ್ಲಯ್ಯ ಅವರಿವರನ್ನು ಕಾಡಿಬೇಡಿ ಅರ್ಜಿ ಬರೆಸಿ, ಹೆಸರು ದಾಖಲು ಮಾಡಿಸಿ ಬಂದನಾದರೂ, ಅಲ್ಲಿಂದ ಉತ್ತರ ಬರಲೇ ಇಲ್ಲ. "ಇವತ್ತು ಬಂದೀತು–ನಾಳೆ ಬಂದೀತು"—ಎಂದು ದಾರಿ ಕಾದು ಬೇಸತ್ತ. "ಏನು ಪಟ್ಟಣನೊ–ಏನೊ. ಬೆಳಗಾದ ಕೂಡಲೆ. ಕೈಯಾಗ ಕಾಸು ಇರದಿದ್ದರ ಜೀವನರಥ ಮುಂದ ಸಾಗೋದೇ ಇಲ್ಲ. ನಮ್ಮೂರsss ಚಲೊ. ಈಗಾದರೂ ಹಳ್ಳಿಗೆ ಹಿಂದಿರುಗಿದರ ಹ್ಯಾಂಗಾದರೂ ಬದುಕಿಕೊಳ್ಳಬಹುದೇನೊ? ಆದರ. ಈ ಪರಿಸ್ಥಿತಿ ಒಳಗ ಊರಿಗೆ ಹೋದರ. ಊರಾಗಿನ ಜನರು ಏನಂದಾರು? ಇದ್ದ ಊರಾಗ ಬದುಕಲಾರದವನು ಪರ ಊರಿಗೆ ಹೋಗಿ ಉಪವಾಸ ಸಾಯ್ತಾನ—ಅಂತ ಮೂದಲಿಸಿದ ಜನ, ಈಗ ನಾನು ವಾಪಸ್ ಹೋದರ ಗೇಲಿ ಮಾಡದ ಇರ್ತಾರ...... ಆಯ್ತು ಹ್ಯಾಗೂ ಕಷ್ಟ ಒಂದು ಎಕರೆ ಭೂಮಿ ಸಂಪಾದಿಸಿಕೊಂಡೆ ಅಂದರ...... ರಾಜಾರೋಷವಾಗಿ ಬದುಕಬಹುದು. ಆದರೆ. ಈಗ ಬದುಕು ಭಾರವಾಗಿ. ಹೊಟ್ಟೆ ಒಂದು ಸಮುದ್ರ ಆಗ್ಯದ. ಹಾಳಾದ ಈ ಹೊಟ್ಟೆಗೆ ಬೆಳಗಾದ ಕೂಡಲೇ ಏನಾದರೂ ಬೀಳಬೇಕು"—ಎಂದೆಲ್ಲ ಯೋಚಿಸುವಲ್ಲಿ ಪುಲ್ಲಯ್ಯ ಹಣ್ಣಾಗಿದ್ದ. ಈ ಚಿಂತೆ, ಅವನಿಗೆ ಒಂದು ರೋಗದಂತೆ ಅಂಟಿಕೊಂಡಿತ್ತು.

ಒಂದು ದಿನ. ಕೈಯಲ್ಲಿ ಪುಟ್ಟಿ ಹಿಡಿದುಕೊಂಡು ಬಜಾರಿಗಿಳಿದ. ಅಲ್ಲಿ ಹುಡುಗರು, ಮುದುಕರ ನಡುವೆ ತಾನೂ ಸಹ ಕೂಲಿಗಾಗಿ ಕುಳಿತುಕೊಳ್ಳಲು ನಾಚಿಕೆಯಾಯಿತು. ಆದರೂ, ಅವರ ಸಾಲಿನಲ್ಲಿ ಹೋಗಿ ಕುಳಿತಾಗ, ಅಲ್ಲಿದ್ದ ಹುಡುಗರು. "ಕತ್ತಿ ಆಗೀದಿ—ಈ ಕೆಲಸಕ್ಕ ಬರಲಿಕ್ಕೆ ನಿನಗೇನು ನಾಚಿಕಿ ಆಗಾಣಿಲ್ಲೇನು?"—ಎಂದು ಹಂಗಿಸಿದರು. ಪುಲ್ಲಯ್ಯ ನಾಚಿಕೆಯಿಂದ ಉಗುಳು ನುಂಗಿಕೊಂಡ. ಆದರೆ ಹಸಿವೆಯಿಂದ ವಿಲಿವಿಲಿ ಒದ್ದಾಡುವ ಬದಲು. ಸಂಪಾದನೆಗೆ ಯಾವುದೊ ಒಂದು ಕೆಲಸ. ಪುಲ್ಲೇಶಿಗಿಂತ ಒಂದೆರಡು ವರ್ಷ ದೊಡ್ಡವರಾಗಿದ್ದ ಮಕ್ಕಳೂ ಸಹ ಅಲ್ಲಿ ಕೂಲಿಗಾಗಿ ಬಂದಿದ್ದರು. ಅವರನ್ನು ನೋಡಿ, ಪುಲ್ಲಯ್ಯನ ಕೋಮಲ ಹೃದಯ ಅಯ್ಯೋ—ಎಂದು ಚೀರಿತು.

ಆದರೂ, ಬೇರೆ ಗತಿಯಿಲ್ಲದೆ, ನಾಲ್ಕೈದು ದಿನ ಆ ಹುಡುಗರ ಜೊತೆ ಕುಳಿತ. ಸಂಜೆ ಆಗುವುದರೊಳಗೆ ಒಂದು ದಿನ ಎಂಟಾಣೆ ಸಿಕ್ಕರೆ ಮತ್ತೊಂದು ದಿನ ಹತ್ತಾಣೆ ಸಿಗುತ್ತಿತ್ತು. ಅದರಿಂದ ಪುಲ್ಲಯ್ಯನಿಗೆ ಯಾವ ಸಂತೋಷವೂ ಆಗುತ್ತಿರಲಿಲ್ಲ. ಈ ಕೂಲಿ ಏನು ಮಹಾ—ಒಂದು ಕಾಲದಾಗ ನಾನ್ ಎಷ್ಟು ಮಂದಿಗೆ ಕೂಲಿ ಕೊಟ್ಟೇನೊ—ಏನೊ ಎಂದು ಮನಸ್ಸಿನಲ್ಲೆ ಅಂದುಕೊಳ್ಳುತ್ತಿದ್ದ.

ಆ ಕಷ್ಟಕಾಲದಲ್ಲೂ, ನೀಲಿ ತನ್ನ ಉದಾರತನವನ್ನು ಬಿಟ್ಟುಕೊಟ್ಟಿರಲಿಲ್ಲ. ಒಂದು ದಿನ ಮನೆಯ ಬಾಗಿಲಿನ ವರೆಗೂ ಬಂದ ಹುಚ್ಚನಿಗೆ ಗಂಜಿ ಹಾಕಿದಳು. ಅವನು ಸಾಧಾರಣವಾಗಿ ಯಾರನ್ನೇ ಆಗಲಿ ಭಿಕ್ಷೆ ಕೇಳುತ್ತಿರಲಿಲ್ಲ—ಕಂಡವರು ಏನಾದರೂ ಕೊಟ್ಟರೂ ಪಡೆಯುತ್ತಿರಲಿಲ್ಲ. ತನಗೆ ತೋಚಿದಾಗ, ಯಾರ ಮನೆಯ ಮುಂದಾದರೂ ಹೋಗಿ ನಿಂತುಕೊಳ್ಳುತ್ತಿದ್ದ. ಅವನಲ್ಲಿ ಯಾವುದೊ ಮಹಾತ್ಮೆ ಇದೆ ಎಂದು ಅನೇಕರು ನಂಬಿದ್ದರು. ಅವನೊಬ್ಬ ವೇದಾಂತಿ, ಎಲ್ಲವನ್ನೂ ತಿಳಿದವನೆಂದು ಇತರರು ನಂಬಿದ್ದರು. ಆ ಹುಚ್ಚ ಒಮ್ಮೆ ಗುಡಿಸಲಿನ ಮುಂದೆ ಬಂದು ನಿಂತು ಬಾಯಿಬಿಟ್ಟು ಕೇಳಿದಾಗ, ನೀಲಿ ತನಗಾಗಿ ಇಟ್ಟುಕೊಂಡಿದ್ದ ಎರಡು ತುತ್ತು ಅನ್ನ ಹಾಕಿ, ಗಂಜಿ ಹಾಕಿದಳು. ಹುಚ್ಚ, ಅವಳು ಕೊಟ್ಟ ಅನ್ನ ಉಂಡು ಗಂಜಿ ಕುಡಿದು ತೇಗಿ ತನ್ನಷ್ಟಕ್ಕೆ ತಾನೇ ನಕ್ಕ. ಆಮೇಲೆ ಆತ ಏನೇನೊ ಹೇಳಿದನಾದರೂ, ನೀಲಿಗೆ ಅದೊಂದೂ ಅರ್ಥವಾಗಲಿಲ್ಲ.

ಪುಲ್ಲಯ್ಯನಿಗೆ, ಮಾರುಕಟ್ಟೆಯಲ್ಲಿ ಕೂಲಿಕೆಲಸ ಮಾಡುವುದು ಅಸಹನೀಯವಾಯಿತು. ಅಲ್ಲಿನ ಹುಡುಗರು ಅವನನ್ನು ನೋಡಿ ಹಂಗಿಸುವುದು ಹೆಚ್ಚಾಗಿತ್ತು. ಅವನ ಗಿರಿಜಾಮೀಸೆ, ಹುಲುಸಾಗಿ ಬೆಳೆದ ಗಡ್ಡ ನೋಡಿ, ಹುಡುಗರು ಅಪಹಾಸ್ಯ ಮಾಡುತ್ತಿದ್ದರು. "ನನ್ನ ಈ ಗಿರಿಜಾಮೀಸೆಗಳು ಒಂದು ಕಾಲದಾಗ ಎಷ್ಟೊ ಪ್ರಸಿದ್ಧಿಯಾಗಿತ್ತು. ಈಗ......"

ಒಂದು ದಿನ ಒಬ್ಬ ಮುದಿಯ ಪುಲ್ಲಯ್ಯನನ್ನು ಕೂಲಿಗೆ ಕರೆದ. ಕತ್ತೆ ಹೊರುವಷ್ಟು ಭಾರ ಹುಡುಗರು ಹೊರಲಾರರೆಂದು ಅವನು ಪುಲ್ಲಯ್ಯನನ್ನು ಕರೆದಿದ್ದ. ಎಷ್ಟು ಕೊಡಬೇಕು—ಎಂಬುದನ್ನು ಪುಲ್ಲಯ್ಯ ಕೇಳಲಿಲ್ಲ. ಅವನು ಹೇಳಲಿಲ್ಲ. ಮುದಿಯನ ಮನೆ ತುಂಬ ದೂರವಿತ್ತು. ಭಾರವನ್ನು ಹೊತ್ತ ಪುಲ್ಲಯ್ಯ, ಅವನ ಹಿಂದೆ ಹಿಂದೆ ಹೊರಟಿದ್ದ. ಆ ಮುದಿಯ ದಾರಿಯಲ್ಲಿ ತನ್ನ ಮನೆಯ ಸುಖದುಃಖಗಳನ್ನು ಹೇಳುತ್ತಾ ಹೊರಟಿದ್ದ. ಅದನ್ನು ಕೇಳಿ, ಸಿರಿಸಂಪತ್ತುಳ್ಳ ಈ ಮನುಷ್ಯನಿಗೂ ಕಷ್ಟಕಾರ್ಪಣ್ಯಗಳಿವೆಯೇ—ಎಂದು ಪುಲ್ಲಯ್ಯ ಆಶ್ಚರ್ಯಗೊಂಡ. ನಾನು ನನ್ನ ಮನೆಯ ಕಷ್ಟಸುಖಗಳನ್ನು ಯಾರ ಮುಂದೂ ಬಾಯಿಬಿಡುವುದಿಲ್ಲ.—ಆದರೆ, ಈ ದೊಡ್ಡ ಮನುಷ್ಯ ನನ್ನ ಮುಂದೆ ತನ್ನ ಮನೆಯ ಗುಟ್ಟನ್ನೆಲ್ಲಾ ಹೇಳಿಕೊಳ್ಳುತ್ತಿರುವುದು ವಿಚಿತ್ರ—ಪಾಪ ಒಳ್ಳೆಯವನಂತೆ ಕಾಣ್ತಾನ—ಎಂದು ಪುಲ್ಲಯ್ಯ ತೀರ್ಮಾನಿಸಿದ. ದುಡ್ಡಿಗಾಗಿ ಪರದಾಡುತ್ತಿರುವು

ದಾಗಿ ಹೇಳಿದ್ಧರೂ, ಸ್ವಂತ ಮನೆ ಇದೆ ಎಂದು ಹೇಳ್ತಾನ—ಮತ್ತ ಮ್ಯಾಲ ಮಗ ಕೂಡ ಸಾಕಷ್ಟು ಗಳಿಸ್ತಾನಂತ ಹೇಳ್ತಾನ—ಅಂದರೂ ಈ ರೀತಿ ಗೋಳಿಡ್ತಾನ ಅಂದರ, ಈತ ಹೇಳೋದೆಲ್ಲ ಸುಳ್ಳು ಇರಬೇಕು. ಮಡುಗಿಯರ ಲಗ್ನ ಮಾಡಬೇಕು ಅಂತಾನ, ಪ್ರತಿ ಹುಡುಗಿಗೂ ಹತ್ತು ಸಾವಿರ ಖರ್ಚು ಆಗ್ತದ ಅಂತಾನ—ಅಬ್ಬಾ, ಹತ್ತು ಸಾವಿರ—ನನಗ ಕೇವಲ ಎರಡು ಸಾವಿರ ಸಿಕ್ಕರ ಸಾಕು, ಬದುಕಿಕೊಳ್ತೇನಿ.

ಮುದುಕನ ಮಾತಿಗೆ ಹೂಂಗುಟ್ಟುತ್ತಲೆ ಪುಲ್ಲಯ್ಯ ಇದನ್ನೆಲ್ಲ ಯೋಚಿಸಿದ. ಒಂದು ಬಂಗಲೆಯ ಬಳಿ ಬಹಳ ಜನರು ಸೇರಿದ್ದನ್ನು ನೋಡಿ, "ಅಷ್ಟು ಮಂದಿ ಅಲ್ಲಿ ಯಾಕ ಸೇರ್ಯಾರ?"—ಎಂದು ಕೇಳಿದ.

"ಅದs, ಅದು ಉದ್ಯೋಗ ವಿನಿಮಯ ಕೇಂದ್ರ. ಅಲ್ಲಿ ಕೆಲಸ ಕೊಡಸ್ತಾರ".

"ಕೆಲಸ ಕೊಡಸ್ತಾರ? ಈ ಊರಾಗ ಇಂತಹದೊಂದು ಅದ ಅಂತ ನನಗ ಯಾರೂ ಹೇಳಲಿಲ್ಲ—ಏನೊ ನನ್ನ ನಸೀಬು ನೆಟ್ಟಗಿಲ್ಲಂತ ನನಗ ಇದು ತಿಳಿಲಿಲ್ಲೆನೊ......"

"ಆ ಕಚೇರಿಗೆ ಹೋದ ಮಾತ್ರಕ್ಕೆ ನಿನಗೇನು ಕೆಲಸ ಸಿಗೋದಿಲ್ಲೇಳು"—ಮುದುಕ ನಿರ್ಲಕ್ಷ್ಯವಾಗಿಯೇ ಹೇಳಿದ.

ಆದರೆ, ಪುಲ್ಲಯ್ಯ, ಮುದುಕನ ಮಾತುಗಳನ್ನು ಕೇಳಿಸಿಕೊಳ್ಳಲೇ ಇಲ್ಲ. ಆದಷ್ಟು ಬೇಗ ಅಲ್ಲಿಗೆ ಹೋಗಬೇಕೆಂದು ಸರಸರನೆ ಹೆಜ್ಜೆಹಾಕತೊಡಗಿದ. ಮುದುಕನ ಮನೆ ತಲುಪಿದ ಕೂಡಲೆ ಸಾಮಾನು ಇಳಿಸಿ, ಅವನು ಕೊಟ್ಟದ್ದನ್ನು ಮರುಮಾತನಾಡದೆ ಪಡೆದು, ಉದ್ಯೋಗ ವಿನಿಮಯ ಕೇಂದ್ರಕ್ಕೆ ಧಾವಿಸಿದ.

"ಅಬ್ಬಾ—ಎಷ್ಟು ಜನರು"—ಅಂದುಕೊಂಡು, ಕೈಯಲ್ಲಿನ ಬುಟ್ಟಿಯನ್ನು ಕೆಳಗಿಟ್ಟು, ಕೈಕಟ್ಟಿಕೊಂಡು ನಿಂತು, ಯಾರನ್ನು ಕೇಳಬೇಕೆಂದು ಯೋಚಿಸತೊಡಗಿದ. ಅಲ್ಲಿ ಸೇರಿದ್ದ ಜನರ ಪೈಕಿ ಅನೇಕರು, ಶುಭ್ರವಾದ ಬಿಳಿಯ ಬಟ್ಟೆಗಳನ್ನು ಇಲ್ಲವೆ ಹೊಸ ಬಟ್ಟೆಗಳನ್ನು ತೊಟ್ಟವರಾಗಿದ್ದರು. ತನ್ನಂತೆ ಇದ್ದವರೂ ಸಹ ತನಗಿಂತ ಎಷ್ಟೋ ಸ್ವಚ್ಛವಾಗಿರುವು ದನ್ನು ಪುಲ್ಲಯ್ಯ ಗಮನಿಸಿದ.

ಪುಲ್ಲಯ್ಯ, ಆ ಗದ್ದಲಿನಲ್ಲಿ ಒಬ್ಬನನ್ನು ತಡೆದು, "ನನಗ ಕೆಲಸ ಕೊಡುಸ್ರಿ"—ಎಂದು ಕೇಳಿದ.

ಆತ ಮುಗುಳ್ನಕ್ಕು, "ಸರೆ, ಸರೆ, ಒಳಗ ಹೋಗಿ ಕೇಳು"—ಎಂದ.

ಪುಲ್ಲಯ್ಯ, ಆತ ತೋರಿಸಿದ ಕೊಠಡಿಯಲ್ಲಿ ಕಾಲಿಟ್ಟಾಗ, ಅಲ್ಲಿದ್ದ ಆಳು, "ಏ ನಡಿಯೊ ಹೊರಗ"—ಎಂದು ಗದರಿಸಿದ.

ಪುಲ್ಲಯ್ಯ ವಿನೀತನಾಗಿ ಹಿಂದಕ್ಕೆ ಸರಿದಾಗ, ಅವನ ಬೆನ್ನಹಿಂದೆಯೇ ಇದ್ದ ಮಲ್ಲೇಶಿ ಕೂಡ ಹಿಂದಕ್ಕೆ ಸರಿದು ನಿಂತ.

ಆ ಆಳು ಹೊರಬಂದು, "ಹೋಗ್ಹೋಗೊ, ನಿನಗ್ಯಾರು ಕೆಲಸ ಕೊಡ್ತಾರ?"—ಎಂದ.

"ಅಪ್ಪಾ—ನಿನಗ ಪುಣ್ಣ ಬರ್ರೈತಿ. ಹಳ್ಳಿಯವನು, ಮಕ್ಕಳೊಂದಿಗ; ಒಂದು ಕಾಲದಾಗ

ಯಾರ ಹಂಗೂ ಇಲ್ಲದ ರೋಪಾಗಿ ಬಾಳಿದವನು—ಸಾಹೇಬರಿಗೆ ಹೇಳಿ, ತಿಂಗಳ ಸಂಬಳದ ಮ್ಯಾಲೆ ನನಗೂ ಒಂದು ನೌಕರಿ ಕೊಡಿಸಿದರ, ನಿನ್ನ ಉಪಕಾರ ಮರೆಯೋದಿಲ್ಲ—ಕೈಲಾದ್ದು ಕೊಡತೀನಿ."

ಪುಲ್ಲಯ್ಯ, ವಿನಮ್ರವಾಗಿ ಆ ಜವಾನನನ್ನು ಬೇಡಿಕೊಳ್ಳುತ್ತಿದ್ದುದನ್ನು ನೋಡಿದ ಸುತ್ತುಮುತ್ತಲಿನವರು ತಮ್ಮತಮ್ಮಲ್ಲೇ ನಕ್ಕರು.

"ಏ ಲಂಚದ ಮಾತಾಡ್ತಿಯೇನು? ಸ್ವಲ್ಪ ಕಣ್ಣು ತಗದು ನೋಡು—ಎಷ್ಟು ಬೋರ್ಡುಗಳು ತೂಗಹಾಕ್ಯಾರ. ಓದು ಬರದಿದ್ದರ ಓದು ಬರೋವರನ್ನ ಹಿಡಿದು ಕೇಳು"—ಜವಾನ ಕೋಪದಿಂದಲೇ ಹೇಳಿದ.

"ನನಗ ಏನೂ ತಿಳಿಯಾಣಿಲ್ಲ. ನನ್ನ ಮಾತು ಕೇಳಿ ನಿನಗ ನೋವು ಆಗಿದ್ದರ ನನ್ನ ಕ್ಷಮಿಸು. ನೋಡು, ನನಗೇನಾದರೂ ಕೆಲಸ ಕೊಡಿಸಿದರ, ಕೊನೆಯ ವರೆಗೂ ನಿನ್ನ ಆಳಾಗಿ ದುಡಿತೀನಿ"—ಪುಲ್ಲಯ್ಯ ಬೇಡಿಕೊಂಡ.

"ಸುಮ್ಮನೆ ಇಲ್ಲಿಂದ ಹೊಂಟಹೋಗು. ಇಲ್ಲಿ ನಿನ್ನಂತಹವರಿಗೆ ಕೆಲಸ ಸಿಗಾಣಿಲ್ಲ. ದೊಡ್ಡ ದೊಡ್ಡ ಎಂ.ಎ., ಬಿ.ಎ. ಆದವರಿಗೆ ಕೆಲಸ ಇಲ್ಲದಾಗ ನಿನಗ...... ಹೋಗು ಇಲ್ಲಿಂದ"—ಜವಾನ ದರ್ಪದಿಂದ ಹೇಳಿದ.

ಪುಲ್ಲಯ್ಯ ಬಹಳ ಹೊತ್ತಿನ ವರೆಗೂ ಅಲ್ಲೇ ಕುಳಿತಿದ್ದ. ಆದರೆ, ಯಾರೇ ಆಗಲಿ ಅವನನ್ನು ಮಾತನಾಡಿಸಲಿಲ್ಲ. ಮಲ್ಲೇಶಿ, ತಂದೆಯ ಬಳಿ ನಿಂತು ಏನೇನೊ ಕೇಳುತ್ತಿದ್ದ. ಮಧ್ಯಾಹ್ನದ ವೇಳೆಗೆ ಅಲ್ಲಿ ಸೇರಿದ್ದ ಜನರ ಗದ್ದಲ ಸ್ವಲ್ಪ ಕಡಿಮೆಯಾಯಿತು. ಮಲ್ಲೇಶಿಗೆ ಅಲ್ಲಿ ಕುಳಿತುಕೊಳ್ಳಲು ಬೇಸರವಾಯಿತೊ ಅಥವಾ ತಂದೆಯ ಬಾಧೆಯನ್ನು ಅವನೂ ಅರಿತುಕೊಂಡನೊ—ಏನೊ, ಸರಸರನೆ ಕಚೇರಿಯೊಳಗೆ ನುಗ್ಗಿದ. ಅಲ್ಲಿ ಒಬ್ಬಾತ ಕುರ್ಚಿಯ ಮೇಲೆ ಕುಳಿತು ಏನೊ ಬರೆಯುತ್ತಿದ್ದ. ಆತನೆ ತನ್ನ ತಂದೆಗೆ ಕೆಲಸ ಕೊಡಿಸುವವನೆಂದು, ಮಲ್ಲೇಶಿ ಭಾವಿಸಿದ. ನನ್ನ ತಂದೆಯಂತಹ ಒಳ್ಳೆಯವರು ಮತ್ತೊಬ್ಬರಿಲ್ಲ. ಆದರೂ ಆತನಿಗೆ ಕೆಲಸ ಸಿಗುತ್ತಿಲ್ಲ—ಎಂದುಕೊಂಡು, ಆ ವ್ಯಕ್ತಿಯ ಮುಂದೆ ನಿಂತು, "ನಮ್ಮಪ್ಪಗ ಕೆಲಸ ಕೊಡ್ತೀಯೊ ಇಲ್ಲೊ"—ಎಂದು ಗರ್ವದಿಂದ ಸವಾಲುಹಾಕಿದ. ಅಷ್ಟರಲ್ಲಿ, ಎಲ್ಲಿಗೊ ಹೋಗಿದ್ದ ಜವಾನ ಓಡಿಬಂದು ಅವನನ್ನು ಹಿಡಿದುಕೊಂಡ. ಆತನ ಕೈಯಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಲೇ, "ನಮ್ಮಪ್ಪಗ ಕೆಲಸ ಕೊಡದಿದ್ರ—ನಾಯಿ ತಂದು ಕಡಿಸ್ತೀನಿ"—ಎಂದು ಕೂಗಿದ.

ಮಲ್ಲೇಶಿಯ ಆಕ್ರೋಶ ಕಂಡು ಅಲ್ಲಿ ಸೇರಿದ್ದ ಜನರು ನಕ್ಕರು. ಆದರೆ, ಆ ಜವಾನನ ಸಿಟ್ಟು ತಾರಕಕ್ಕೇರಿ, "ಇಲ್ಲಿಂದ ಸುಮ್ನಾಕ ಹೋಗ್ತಿರೊ, ಏನು ಕುತ್ತಿಗೆಗೆ ಕೈಹಾಕಿ ದಬ್ಬಬೇಕೊ?"—ಎಂದು ಅರಚಿದ. ಮಲ್ಲೇಶಿ, ಅವನನ್ನೆ ಪಿಳಿಪಿಳಿ ನೋಡಿದಾಗ ಆ ಜವಾನ, "ನೋಡಲಿಕ್ಕೆ ಚೋಟು ಇದ್ದರೂ, ಊರ ತುಂಬ ಗಡಿಬಿಡಿ ಮಾಡೋ ಹಾಂಗ ಕಾಣ್ತಾನ. ಹೋಗು—ಹೋಗಿಲ್ಲಿಂದ"—ಎಂದು ಗದರಿಕೊಂಡ.

ಪುಲ್ಲಯ್ಯ, ಏನೇ ಆಗಲಿ, ಇವತ್ತು ಒಂದು ನಿರ್ಧಾರಕ್ಕೆ ಬಂದೇ ಇಲ್ಲಿಂದ ಹೋಗ ಬೇಕೆಂದು ತೀರ್ಮಾನಿಸಿ. ಕಚೇರಿಯ ಹೊರ ಅಂಗಳದಲ್ಲಿ ಹೋಗಿ ನಿಂತ. ಅಷ್ಟರಲ್ಲಿ ತುಂಬ ಒಳ್ಳೆಯವನಂತೆ ಕಾಣುತ್ತಿದ್ದ ಒಬ್ಬಾತ, ಅತ್ತನಿಂದ ಹೋಗುತ್ತಿರುವವನು ಅವರ ಮುಂದೆ ನಿಂತು, "ಯಾವ ಊರಪ್ಪಾ ನಿಮ್ಮದು?"—ಎಂದು ಕೇಳಿದ. ಪುಲ್ಲಯ್ಯ, ಸರಕ್ಕನೆದ್ದು ಅವನ ಬಳಿ ಹೋಗಿ, "ಧಣೇರ, ನಾನು ಪೂರ್ವದಿಂದ—ನವಿರಿ ಗ್ರಾಮದಿಂದ ಬಂದೀನ್ರಿ. ಅಲ್ಲಿ ಹೊಟ್ಟೆ ತುಂಬಿಕೊಳ್ಳಲಿಕ್ಕೆ ಗತಿ ಇಲ್ಲದ ಪಟ್ಟಣಕ್ಕ ಬಂದೀನ್ರಿ"—ಎಂದ ವಿನೀತನಾಗಿ.

"ಹಾಗೋ,...... ಪಾಪ......ಪಾಪ......" ಎನ್ನುತ್ತ ಆತ ಮುಂದೆ ಹೆಜ್ಜೆ ಹಾಕಿದ.

"ನನ್ನ ಮೇಲೆ ಕನಿಕರ ತೋರಿರೋ ಈ ವ್ಯಕ್ತಿಗೆ. ಈ ಕಚೇರಿಯಲ್ಲಿ ಕೆಲಸ ಇರಬೇಕು—ಈತನೆ ಏನಾದರೂ ಕೆಲಸ ಕೊಡಿಸಿದರೂ ಕೊಡಿಸಬಹುದು"—ಎಂದುಕೊಂಡು, ಪುಲ್ಲಯ್ಯ ಆತನ ಹಿಂದೆ ಹೊರಟ.

ಆತನ ಮನೆ ಅಲ್ಲಿಯೆ ಸಮೀಪದಲ್ಲಿತ್ತು. ಆತ. ಮನೆಯೊಳಗೆ ಕಾಲಿಡುತ್ತಾ, "ನನ್ನ ಹಿಂದ ಬಿದ್ದರ ನಿನಗ ಏನೂ ಸಿಗೋದಿಲ್ಲ. ಸುಮ್ಮನೆ ಹೊರಟುಹೋಗು"—ಎಂದು ಹೇಳಿ ಬಾಗಿಲು ಹಾಕಿಕೊಂಡ. ಆದರೆ ಪುಲ್ಲಯ್ಯ ಅಲ್ಲಿಂದ ಕದಲಲಿಲ್ಲ. ಆತ ಊಟ ಮಾಡಿ ಹೊರಬಂದಾಗ. ಪುಲ್ಲಯ್ಯ ಇನ್ನೂ ಅಲ್ಲಿಯೇ ಇದ್ದುದನ್ನು ನೋಡಿ, "ಯಾಕ ನನ್ನ ಬೆನ್ನು ಬಿದ್ದೀದಿ. ನಿನ್ನಂತಹವರಿಗೆ ಕೆಲಸ ಸಿಗೋದು ಬಹಳ ಕಷ್ಟ"—ಎಂದು ಹೇಳಿದ.

"ಧಣೇರ, ನೀವs ನಮಗ ಇಲ್ಲಾಂತ ಕೈ ತೋರಿಸಿದರ, ನಮ್ಮಂತಹವರು ಎಲ್ಲಿಗೆ ಹೋಗಬೇಕ್ರಿ. ನನಗ ನಿಮ್ಮನ್ನು ಬಿಟ್ಟರ ಮತ್ಯಾರೂ ಗತಿ ಇಲ್ಲ—ನೀವು ಕೆಲಸ ಕೊಡದಿದ್ದರ—ಭಿಕ್ಷೆ ಹಾಕದಿದ್ದರ ಉಪವಾಸ ಸಾಯ್ತೀನಿ."

ಪುಲ್ಲಯ್ಯನ ಈ ಮಾತು ಕೇಳಿ. ಆತ ಒಳಹೋಗಿ ಒಂದು ಕುರ್ಚಿಯ ಮೇಲೆ ಕುಳಿತು, ಪುಲ್ಲಯ್ಯನನ್ನೂ ಒಳಗೆ ಕರೆದ. ಪುಲ್ಲಯ್ಯ ಒಳಹೋಗಿ. ತಾನೂ ನಮಸ್ಕರಿಸಿ, ಮಗನಿಂದಲೂ ನಮಸ್ಕಾರ ಮಾಡಿಸಿದ.

"ನಾನು ನಿನಗ ಕೆಲಸ ಕೊಡಬಹುದು ಅಂತ ನೀನು ನಂಬೀದಿ. ಆದರ, ನನ್ನ ಕೈಯಾಗ ಯಾವ ಅಧಿಕಾರನೂ ಇಲ್ಲ. ಬಹಳಾಂದರ, ನಿನ್ನ ಹೆಸರು, ಆ ರಜಿಸ್ಟರ್‌ನ್ಯಾಗ ದಾಖಲು ಮಾಡಬಹುದು......"

"ಅಷ್ಟೇ ಮಾಡ್ರಿ ಸಾಹೇಬ್ರ. ಇವತ್ತಿಲ್ಲದಿದ್ದರ ನಾಳೆ ಆದರೂ ಕೆಲಸ ಸಿಕ್ಕೇತು."

"ಪೆದ್ದಪ್ಪ, ಆ ರಜಿಸ್ಟರ್‌ನ್ಯಾಗ ನಿನ್ನ ಹೆಸರು ದಾಖಲು ಮಾಡಿದ ಮಾತ್ರಕ್ಕ ನಿನಗ ಕೆಲಸ ಸಿಗ್ತದಂತ ತಿಳಿದಿ ಏನು? ನಿನ್ನ ಕೆಲಸಕ್ಕ ತೊಗೊಳ್ಳಬೇಕಾದರ, ಇದಕ್ಕೂ ಮುಂಚೆ, ಎಲ್ಲಿ, ಯಾವ ಸರ್ಕಾರಿ ಚಾಕರಿ ಮಾಡಿದಿ—ಅಂತ ಕೇಳ್ತಾರ. ಬರೆ ಹೆಸರು ಬರೆಸಿದರ ನಿನಗೇನು ಲಾಭ ಹೇಳು."

ಪುಲ್ಲಯ್ಯನ ಅರಳಿದ್ದ ಮುಖ ಮತ್ತೆ ವಿಚಾರಗ್ರಸ್ತವಾಯಿತು. ಆದರೂ, ಆತ ತನಗೆ ಕೆಲಸ ಕೊಡಿಸಬಹುದೆಂಬ ವಿಶ್ವಾಸದಿಂದ, "ನೀವು ಏನs ಹೇಳ್ರಿ. ನಿಮ್ಮ ಕಾಲು ಹಿಡಕೋತೀನಿ...... ಇವನ ಮುಖ ನೋಡಿ ಆದರೂ ಒಂದು ಕೆಲಸ ಕೊಡ್ಸ್ರಿ ಅತು. ಒಳ್ಳೆಯ ದಿನದಾಗ, ನನಗ ಈ ಮಗು ಹುಟ್ಟಿದ. ಇಂವ ಹುಟ್ಟಿದ ದಿವಸ ತುಂತುರು ಮಳೆಯಾಗಿ, ಎಲ್ಲಾ ಕಡೇನೂ ತಂಪು ಬಿದ್ದಿತ್ತು. ನೀವು ಈಗ ದೊಡ್ಡ ಮನಸ್ಸು ಮಾಡಿ ನನಗ ಕೆಲಸ ಕೊಡಿಸಿದ್ರಿ ಅಂದರ, ನನ್ನ ಮಗ ದೊಡ್ಡವನಾಗತಾನ. ನೀತಿ—ನಿಯಮಕ್ಕ ಕಟ್ಟುಬಿದ್ದು, ಕಳ್ಳರನ್ನು ಹಿಡಿಯೊ ರಾಜಕುಮಾರನಾಗ್ತಾನ. ನಿಮ್ಮಂತಹ ದೊಡ್ಡವರು ಕೇಳ್ತಿರೀಂತ, ನಮ್ಮಂತಹ ಬೀದಿಭಿಕಾರಿಗಳು ನಮ್ಮ ಕಷ್ಟ—ಸುಖ ಹೇಳಿ ಕೊಳ್ತೀವಿ. ನೋಡ್ರಿ ಸಾಹೇಬರ...... ಮೈಮ್ಯಾಲಿರೋದು ಇದೊಂದs ಬಟ್ಟೆ...... ಹೊಟ್ಟೆಗೇ ಇಲ್ಲದಾಗ, ಬಟ್ಟೆ ಎಲ್ಲಿಂದ ಬರ್ತದ...... ಅವರಿವರನ್ನು ಕಾಡಿಸಿ ಅರ್ಜಿ ಬರೆಸಿ ನಾಲ್ಕೈದು ಕಡೆ ಕೊಟ್ಟೆ. ಆದರ ಎಲ್ಲಿಂದಲೂ ಜವಾಬು ಬರಲಿಲ್ಲ...... ಅಯ್ತು, ಒಪ್ಪತ್ತಿಗಿದ್ದರ ಒಪ್ಪತ್ತಿಗಿಲ್ಲದ ಉಪವಾಸ ಬೀಳೊ ಪರಿಸ್ಥಿತಿ ಒದ್ಗ್ಯದ. ನನ್ನ ಮಾತು ಹಾಗಿರಲಿ, ಮಕ್ಕಳು ಹಸಿವಿಯಿಂದ ಕಂಗಾಲಾಗೋದನ್ನ ನೋಡಲಾರೆ. ಈಗ ಗಂಜಿ ಕುಡಿದರ ಮತ್ತ ನಾಳಿನ ವರೆಗೆ ಉಪವಾಸ. ನನ್ನ ನೋಡಿದವರು, ನನಗೇನೊ ರೋಗ ಅಂಟಿಕೊಂಡದಂತ ತಿಳೀತಾರ್ರಿ—ಆದರ, ಹೊಟ್ಟೆಗೆ ಹಿಟ್ಟು ಇರಲಾರದ್ದ ನನ್ನ ರೋಗ ಅಂತ ಯಾರಿಗೂ ಗೊತ್ತಿಲ್ಲ. ನಿಮ್ಮಂತಹ ಹರೆದವರು—ಮಹಾರಾಜರು, ನೀವs ನಮಗ ಗತಿ"—ಎಂದು ತನ್ನ ದುಃಖ ತೋಡಿಕೊಂಡ.

"ನನ್ನ ಕೈಯಾಗ ಏನೂ ಇಲ್ಲಪ್ಪ—ಖರೇನ ಹೇಳ್ತೀನಿ"—ಎಂದು ಆತ ನಿಜಸ್ಥಿತಿಯನ್ನು ಹೇಳಿದರೂ, ಪುಲ್ಲಯ್ಯ ಆತನನ್ನು ಬಿಡಲಿಲ್ಲ. ನಿಮಿಷ ನಿಮಿಷಕ್ಕೆ, ಆತನ ಮೇಲಿದ್ದ ಆಸೆ—ವಿಶ್ವಾಸ ಹೆಚ್ಚುತ್ತಾ ಹೋಯಿತು. ಅವನು ಮತ್ತಷ್ಟು ದೀನನಾಗಿ—"ಕೆಲಸ ಕೊಡೊ ಸಾಮರ್ಥ್ಯ ಇದ್ದವರೆಲ್ಲ ಹೀಂಗs ಅಂತಾರ್ರಿ ಧಣೇರ...... ನಾನು ಒಬ್ಬರಿಗೆ ಕೆಟ್ಟದು ಬಯಸಿಲ್ಲ. ನನ್ನ ಹೆಣ್ತಿ ವಿಷಯವಂತೂ ನಿಮಗ ತಿಳೀದು—ಅವಳ ಧರ್ಮ, ಅವಳ ನ್ಯಾಯ, ಇಂದಿಲ್ಲ ನಾಳೆ ನಮಗ ನೆರವಾಗ್ತದ. ಆ ಭಗವಂತ ನನ್ನಂತಹವರಿಗೆ ನಾನಾ ಕಷ್ಟ ಕೊಡತಾನ—ಕೊನೀಗೆ ಆತನೆ ಕನಿಕರದಿಂದ, ನಿಮ್ಮಂತಹ ಪುಣ್ಯಾತ್ಮರನ್ನ ತೋರಸ್ತಾನ. ನನಗೇನು ಬಂಗಲೆ ಬೇಕಾಗಿಲ್ಲ—ಬಂಗಾರ ಬೇಕಿಲ್ಲ. ಮೈಮುಚ್ಚಲಿಕ್ಕೆ ಮೂರು ಗೇಣು ಬಟ್ಟೆ, ಹೊಟ್ಟೆಗೆ ಎರಡು ಮುಷ್ಟಿ ಹಿಟ್ಟು ಸಿಕ್ಕರ ಸಾಕು. ನಾನೇನೂ ಸೋಮಾರಿ ಅಲ್ಲ—ಇಲ್ಲದ ಸೋಗು ಹಾಕಿ ಮಂದೀನ್ನ ಮೋಸ ಮಾಡಿಲ್ಲ. ಹೊಟ್ಟೆಗಿಲ್ಲದ ಸಾಯೊ ಪರಿಸ್ಥಿತಿ ಬಂದಾಗ ದೇವರು ನಿಮ್ಮ ಭೇಟಿ ಮಾಡಿಸಿದ. ನಿಮಗ ಸಾವಿರ ನಮಸ್ಕಾರ ಹಾಕ್ತೀನ್ರಿ. ಹೊಟ್ಟೆ ತುಂಬಿಕೊಳ್ಳಲಿಕ್ಕೆ ಒಂದು ಹಾದಿ ಮಾಡಿಕೊಡ್ರಿ"—ಎಂದು ಸಾಷ್ಟಾಂಗ ಹಾಕಿದ. ಮಲ್ಲೇಶಿ ತಂದೆಯನ್ನು ಅನುಸರಿಸಿದ. ಪುಲ್ಲಯ್ಯನ ಮುಖದ ಮೇಲಿನ ದೀನ ಮುದ್ರೆಯನ್ನು ನೋಡಿ ಆ

ವ್ಯಕ್ತಿಯ ಕಣ್ಣುಗಳಲ್ಲಿ ನೀರಾಡಿತು. ಒಳಗೆ ಅಡಿಗೆ ಮನೆಯಲ್ಲಿ ಕುಳಿತೆ ಇದನ್ನೆಲ್ಲಾ ಕೇಳಿದ ಆತನ ಹೆಂಡತಿಯ ಕಣ್ಣುಗಳಲ್ಲೂ ಸಹ ನೀರು ಹರಿಯಿತು.

ಆತ ಪುಲ್ಲಯ್ಯನನ್ನು ಎಬ್ಬಿಸಿದ. ಏನು ಹೇಳಬೇಕೆಂಬುದು ತೋಚದೆ, ಸ್ವಲ್ಪ ಹೊತ್ತು ಮೌನವಾಗಿ ಕುಳಿತ. ತಾನು ಏನಾದರೂ ಹೇಳಿದಲ್ಲಿ ಪುಲ್ಲಯ್ಯನ ಹೃದಯ ಒಡೆದು ಹೋಗುವುದೇನೋ—ಎನ್ನಿಸಿ, ಮರುದಿನ ಬೆಳಗ್ಗೆ ಹತ್ತು ಗಂಟೆಗೆ ಕಚೇರಿಯ ಬಳಿ ಬರುವಂತೆ ಹೇಳಿದ. ಪುಲ್ಲಯ್ಯ ಅಲ್ಲಿಂದೆದ್ದು ಹೊರಟಾಗ, "ನಿನ್ನ ಹೆಸರು ಹೇಳಲೇ ಇಲ್ಲಲ್ಲ?"—ಎಂದು ಆತ ಕೇಳಿದ.

"ಪುಲ್ಲಯ್ಯನ್ರಿ ಸಾಹೇಬರ."

"ಸರಿ, ತೊಗೊ ಈ ಎಂಟಾಣೆ, ನಿನ್ನ ಮಗಗ ಏನಾದ್ರು ಕೊಡಿಸು."

ಪುಲ್ಲಯ್ಯ, ಸಂತೋಷದಿಂದ ಅದನ್ನು ಪಡೆದು, "ನೀವು ಮಾಡೊ ಉಪಕಾರ, ನಿಮ್ಮ ಋಣ,–ಏನ್ಮಾಡಿದರೂ ತೀರಿಸಲಿಕ್ಕೆ ಆಗಾಣೆಲ್ರಿ...... ಏನಾದರೂ ಕೆಲಸ ಇದ್ದರ ಹೇಳ್ರಿ. ಕಟ್ಟಿಗೆ ಏನಾದರೂ ಒಡೆಯೊದಿದ್ರ, ಒಡದು ಕೊಡ್ತೀನಿ. ಇಲ್ಲಿ—ನಿಮ್ಮ ಮನಿ ಮುಂದ ಬೆಳೆದ ಈ ಹುಲ್ಲು–ಮುಳ್ಳು ತೆಗೆದುಹಾಕ್ತೀನಿ."

"ಈಗಾಗಲೇ ಬಿಸಿಲು ಏರಿ, ಹೊತ್ತು ಮುಳುಗಲಿಕ್ಕೆ ಬಂದದ—ಮತ್ತ ಯಾವಾಗಾದರೂ ಬಂದು ಮಾಡೀಯಂತ. ಈಗ ಮನೀಗೆ ಹೋಗು"—ಎಂದು ಆತ ಪುಲ್ಲಯ್ಯನನ್ನು ಕಳುಹಿಸಿದ. ಪುಲ್ಲಯ್ಯ ಅತ್ತ ಹೋದ ಕೂಡಲೆ ಅಡಿಗೆಮನೆಯಿಂದ ಹೊರಬಂದ ಆತನ ಹೆಂಡತಿ, "ಪಾಪ, ಕಷ್ಟದಾಗ ಇದ್ದಾನ. ಆದಷ್ಟು ಸಹಾಯಮಾಡ್ರಿ" —ಎಂದು ಶಿಫಾರ್ಸು ಮಾಡಿದಳು. ಆದರೆ ಆತ ಕೂಡಲೇ ಉತ್ತರ ಕೊಡದಾದ. ಆ ಮೇಲೆ ಮಾತ್ರ, "ಕಷ್ಟದಾಗ ಇರೋವರಿಗೆ ಕೈಎತ್ತಿ ಸಹಾಯ ಮಾಡಬೇಕೂ ಅಂತ ಹವಣಿಸುವವರಿಗೆ ಅಧಿಕಾರ ಇರಂಗಿಲ್ಲ. ನಾನು ಒಬ್ಬ ಬಡ ಗುಮಾಸ್ತ. ಈಗಾಗಲೇ ನಮ್ಮ ಆಫೀಸು ಅಂದರ, ನೂರು ಜನರು ನೂರು ತರಹ ಮಾತಾಡ್ತಾರ. ಹೇಗಾದರೂ ಮಾಡಿ, ಹತ್ತು ಮಂದಿ ಒಳಗ ಅವನ ಹೆಸರೂ ಸೇರಿಸಿ ಕಳಸ್ತೀನಿ ಆತು. ಕೆಲಸ ಸಿಗೋದು ಬಿಡೋದು ಅವನ ಹಣೆಯ ಬರಹ"—ಎಂದು ಹೆಂಡತಿಗೆ ಹೇಳಿದ.

ಇದನ್ನೇ ಆತ ಪುಲ್ಲಯ್ಯನಿಗೆ ಹೇಳಬೇಕೆಂದುಕೊಂಡಿದ್ದ. ಅಂತೂ ಮರುದಿನ ಹಾಗೂ ಹೀಗೂ ಒದ್ದಾಡಿ, ಪುಲ್ಲಯ್ಯನ ಹೆಸರನ್ನು ರಜಿಸ್ಟರ್‌ನಲ್ಲಿ ದಾಖಲು ಮಾಡಿದ. ಅಂದೇ ಸಂಜೆ ಪುಲ್ಲಯ್ಯನನ್ನು ಮುಂದೆ ಕೂಡಿಸಿಕೊಂಡು—"ಎಲ್ಲಿ ಆದರೂ ಕೆಲಸ ಖಾಲಿ ಇದ್ದರ ನಿನ್ನ ಕಳಿಸುವ ಜವಾಬ್ದಾರಿ ನನ್ನದು. ಆ ಮ್ಯಾಲೆ ಮಾತ್ರ ನಿನ್ನ ಅದೃಷ್ಟ" —ಎಂದು ಉಪದೇಶ ಮಾಡಿದ. ಪುಲ್ಲಯ್ಯ ತನ್ನ ಕೃತಜ್ಞತೆ ವ್ಯಕ್ತಪಡಿಸುತ್ತಾ, "ಇಷ್ಟಾದರೂ ಉಪಕಾರ ಮಾಡಿದಿರಲ್ಲಾ ಅದೇ ಸಾಕು. ಇವತ್ತು–ನಾಳಿನ ದಿನದಾಗ, ಹಸಿವು ಅಂತ ಹೊಟ್ಟೆ ಬಡಕೊಂಡರೂ ಯಾರೂ ಅನ್ನ ಹಾಕೋದಿಲ್ಲ. ಹಾಂಗಂತ, ದುಷ್ಟತನಕ್ಕ ಇಳಿದರೂ ಯಾರೂ ಸುಮ್ಮನಿರಾಣೆಲ್ಲ. ಅಲ್ಲಲ್ಲಿ ನಿಮ್ಮಂತಹ ಪುಣ್ಯಾ

ತ್ಮರು ಇದ್ದೀರಂತ, ಈ ಜಗತ್ತು ಸಾಗೇದ. ಇಲ್ಲದಿದ್ದರ, ಈ ಲೋಕ ಎಂದೊ ಪಾತಾಳ ಲೋಕದಾಗ ಲೀನವಾಗಿಹೋಗ್ತಿತ್ತು"—ಎಂದು ಹೇಳಿದ.

ಪುಲ್ಲಯ್ಯ, ವಾರಕ್ಕೆ, ಹತ್ತು ದಿನಕ್ಕೆ, ಹೋಗಿ, ಆ ಗುಮಾಸ್ತನನ್ನು ಭೇಟಿಯಾಗಿ ಬರುತ್ತಿದ್ದ. ಒಂದು ದಿನ ಆತ, "ಈ ಕಾಗದ ತೊಗೊ. ನಾಳೆ ಮುಂಜಾನೆ ಸರಿಯಾಗಿ ಹತ್ತು ಗಂಟೆಗೆ ಇಲ್ಲಿಗೆ ಬಾ. ನೀನು ಈಗ ಹ್ಯಾಂಗಿದ್ದೀಯೊ ಹಾಂಗ ಬಂದರ ಏನೂ ಉಪಯೋಗಿಲ್ಲ. ಒಂದು ನಿಕ್ಕರು, ಒಳ್ಳೆಯ ಅಂಗಿ ಹಾಕಿಕೊಂಡು ಬಾ.—ಅಂದ್ಹಾಂಗ ನಿನ್ನ, ಆ ಗಡ್ಡ–ಆ ಮೀಸೆ ಅಸಹ್ಯವಾಗಿ ಕಾಣಸ್ತಾವ. ಅದೆಲ್ಲಾ ಬೋಳಿಸಿಬಿಡು. ನೋಡಲಿಕ್ಕೆ ಅಸಹ್ಯವಾಗಿದ್ದರ ಯಾರೂ ಕೆಲಸ ಕೊಡಾಣಿಲ್ಲ. ಸುಮ್ಮನೆ, ನಾನು ಹೇಳಿದ್ಹಾಂಗ ಠೀಕು–ಠಾಕಾಗಿ ನಾ ಕಳಿಸಿದಲ್ಲಿಗೆ ಹೋಗು. ಅವರು ಏನು ಹೇಳಿದರ ಅದನ್ನ ಮಾಡು—ಏನಾದರೂ ಕೇಳಿದರ, ಹೆದರದ ಉತ್ತರಕೊಡು. ಅಲ್ಲಿನ ಅಧಿಕಾರಿಗಳ ಮುಂದ ಹೋದಾಗ, ಸೇಲ್ಯೂಟ್ ಮಾಡಿ ಎದಿ ಉಬ್ಬಿಸಿ ನಿಂತಕೊ"—ಎಂದೆಲ್ಲ ಹೇಳಿದ.

ಆ ದಿನವೂ ಬಂದಿತು. ಪುಲ್ಲಯ್ಯ ತನ್ನ ಗಿರಿಜಾಮೀಸೆಯನ್ನು ಹುಲುಸಾಗಿ ಬೆಳೆದಿದ್ದ ಗಡ್ಡವನ್ನೂ ಕ್ಷೌರಿಕನ ಹರಿತವಾದ ಕತ್ತಿಗೆ ಆಹುತಿಕೊಟ್ಟ. ಪಕ್ಕದ ಗುಡಿಸಲಿನ ಯುವಕನ ಬಳಿ ಹೋಗಿ, ಒಂದು ದಿನದ ಮಟ್ಟಿಗೆ ಅವನ ನಿಕ್ಕರು ಮತ್ತು ಅಂಗಿಯನ್ನು ಬೇಡಿದಾಗ, ಅವನು ಅವು ತನ್ನವಲ್ಲವೆಂದು ತಿಳಿಸಿದ. ಕೊನೆಗೆ ಅವನ ಸಲಹೆಯಂತೆ, ಅಗಸನ ಬಳಿ ಹೋಗಿ ಒಂದು ಕಾಕಿ ಚೆಡ್ಡಿ, ಒಂದು ಬಿಳಿಯ ಅಂಗಿ ಬಾಡಿಗೆಯ ಮೇಲೆ ಪಡೆದುಕೊಂಡು ಬಂದ. ಎಷ್ಟು ಸಿಂಗರಿಸಿಕೊಂಡರೂ, ಪುಲ್ಲಯ್ಯ ಸಣಕಲಾಗಿಯೇ ಕಂಡ. ಗಿರಿಜಾಮೀಸೆಯನ್ನು ತೆಗೆಸಿದ್ದರಿಂದ ಮುಖದ ಮೇಲಿದ್ದ ಅಲ್ಪಸ್ವಲ್ಪ ವರ್ಚಸ್ಸು ಕೂಡ ಅಳಿದು ಹೋಗಿತ್ತು. ಗಿರಿಜಾಮೀಸೆಗಳನ್ನು ತೆಗೆಸಲು ಮನಸ್ಸು ಹಿಂಜರಿದಿತ್ತಾದರೂ ವಿಧಿಯಿಲ್ಲದೆ ಅದನ್ನು ಬೋಳಿಸಿದ್ದ. ಕ್ಷೌರಿಕ ತನ್ನ ತಂದೆಯ ಗಿರಿಜಾಮೀಸೆಗಳ ಮೇಲೆ ಕತ್ತರಿ ಚಲಾಯಿಸಿದಾಗ, ಮಲ್ಲೇಶಿ ಅವನ ಮೇಲೆ ರೇಗಿದ್ದ. ಕೊನೆಗೆ ಪುಲ್ಲಯ್ಯನೆ ಅವನನ್ನು ಸಮಾಧಾನಮಾಡಿದ್ದ. ಪುಲ್ಲಯ್ಯ, ತನ್ನ ಹೊಲ ಕೈಬಿಟ್ಟುಹೋದಾಗಲೂ ಸಹ ಅಷ್ಟು ನೊಂದಿರಲಿಲ್ಲ. ಆದರೂ, ಹೊಟ್ಟೆಯ ಹಸಿವನ್ನು ಇಂಗಿಸಲು ಅದೊಂದೆ ಮಾರ್ಗವೆಂದು ನಂಬಿ ನೋವನ್ನು ನುಂಗಿಕೊಂಡ.

ಇತರ ಇಪ್ಪತ್ತೈದು ಮಂದಿಯ ಜೊತೆಗೆ ಪುಲ್ಲಯ್ಯನೂ ಸಂದರ್ಶನಕ್ಕೆ ಹೋದ. ಇವರು ಹೋದ ಸ್ಥಳ, ನಗರದಿಂದ ಐದು ಮೈಲು ದೂರದಲ್ಲಿತ್ತು. ಬಿಸಿಲಲ್ಲಿ ನಡೆದುಕೊಂಡು ಹೋಗುವುದರಲ್ಲಿ ಪುಲ್ಲಯ್ಯ ಆಯಾಸಗೊಂಡ. ಅಲ್ಲಿದ್ದ ಇಬ್ಬರು ಹಿರಿಯ ಅಧಿಕಾರಿಗಳು, ಕೆಲಸಕ್ಕಾಗಿ ಬಂದ ಈ ಜನರನ್ನು ಪರೀಕ್ಷಿಸುತ್ತಿದ್ದರು. ಪುಲ್ಲಯ್ಯ ಆಗಲೇ ಹಸಿದಿದ್ದ. ಕೈಯಲ್ಲಿ ಒಂದು ಕಾಸೂ ಇರಲಿಲ್ಲ. ಇದ್ದ ದುಡ್ಡನ್ನು, ಬಟ್ಟೆಗಳ ಬಾಡಿಗೆಗೆ ಕೊಟ್ಟುಬಿಟ್ಟಿದ್ದ. ಹಾಗೆಯೇ ಮುಖ ಬಣಗಿಸಿಕೊಂಡು ಕುಳಿತಿದ್ದ. ಎಷ್ಟೊ

ಹೊತ್ತಿನ ಮೇಲೆ ಪುಲ್ಲಯ್ಯನ ಪಾಳಿ ಬಂತು. ತನ್ನ ಹೆಸರನ್ನು ಕೂಗಿದಾಗ ಪುಲ್ಲಯ್ಯ, ಎದ್ದನಾದರೂ, ಹಸಿವಿನಿಂದ ಬಳಲಿದ್ದ ದೇಹದಲ್ಲಿ ಶಕ್ತಿಯೇ ಇರಲಿಲ್ಲ. ಆದರೂ, ಎಲ್ಲಿಲ್ಲದ ಉತ್ಸಾಹ ತಂದುಕೊಂಡು ಹೊರಟ. ಅಧಿಕಾರಿಗಳು ಕುಳಿತಿದ್ದ ಕೊಠಡಿಯಲ್ಲಿ ಕಾಲಿಡುತ್ತಿದ್ದ ಹಾಗೆ, ಅವನಿಗೆ ನಡುಕ ಬಂತು. ಅಂತಹ ದೊಡ್ಡ ಅಧಿಕಾರಿಗಳನ್ನು ಅವನು ಎಂದೇ ಆಗಲಿ ನೋಡಿರಲಿಲ್ಲ. ಒಬ್ಬ ಅಧಿಕಾರಿ ತೆಳ್ಳಗೆ ಎತ್ತರವಾಗಿದ್ದ. ಇನ್ನೊಬ್ಬ ಬಂಗಾಳಿ—ಕಪ್ಪಾಗಿದ್ದ—ದೊಡ್ಡ ಮುಖದ ಮೇಲಿನ ಆ ಕಪ್ಪು ಕನ್ನಡಕ ಅವನ ಮುಖದ ಗಾಂಭೀರ್ಯವನ್ನು ಹೆಚ್ಚಿಸಿತ್ತು.

ಬಂಗಾಳಿ ಅಧಿಕಾರಿ "ನಿನ್ನ ಹೆಸರೇನು?"—ಎಂದು ಹಿಂದಿಯಲ್ಲಿ ಕೇಳಿದಾಗ, ಪುಲ್ಲಯ್ಯನಿಗೆ ಅದು ಅರ್ಥವಾಗದೆ, ತಬ್ಬಿಬ್ಬಾದ. ಅಲ್ಲಿಯೇ ನಿಂತಿದ್ದ ತಮಿಳು ಅಧಿಕಾರಿಯೊಬ್ಬ, "ನಿನ್ನ ಹೆಸರೇನು—ಅಂತ ಕೇಳ್ತಾರ"—ಎಂದು ತಿಳಿಸಿದಾಗ, ಪುಲ್ಲಯ್ಯ, ಗಾಬರಿಯಿಂದಲೇ ತನ್ನ ಹೆಸರು ಹೇಳಿದ. ನಂತರ ವಿನೀತನಾಗಿ, "ಸಾಹೇಬ್ರು, ನೀವು ಕನಿಕರ ತೋರಿಸಬೇಕ್ರಿ. ಪೂರ್ವದಿಂದ ಬಂದವನು—ಮಕ್ಕಳೊಂದಿಗೆ. ಒಂದು ಕಾಲದಾಗ ಘನವಾಗಿ ಬಾಳಿದವನು...... ಈಗ ಮಾತ್ರ, ಹೊಟ್ಟೆಗೆ ಅನ್ನ ಇಲ್ಲದ ನಾನೂ, ನನ್ನ ಮಕ್ಕಳು ಉಪವಾಸ ಸಾಯೊ ಹೊತ್ತು ಬಂದದ......"—ಎಂದು ಅಂಗಲಾಚಿದ.

ಬಂಗಾಳಿ ಅಧಿಕಾರಿ, "ಅವನು ಏನಂತಾನ"—ಎಂದು ಪಕ್ಕದಲ್ಲಿದ್ದ ಅಧಿಕಾರಿಯನ್ನು ಕೇಳಿದ. "ಅವನೇನೊ ಒಂದು ಕಾಲದಾಗ ಘನವಾಗಿ ಬಾಳಿದವನಂತ...... ಅದನ್ನs ಹೇಳಿಕೊಂಡ"—ಎಂದು ಆತ, ಆ ಅಧಿಕಾರಿಗೆ ವಿವರಿಸಿದ.

"ಅದೆಲ್ಲಾ ಯಾರಿಗೆ ಬೇಕು. ನಿನ್ನ ಹೆಸರು ಹೇಳು ಸಾಕು"—ಎಂದು ಆ ಹಿರಿಯ ಅಧಿಕಾರಿ ಪುಲ್ಲಯ್ಯನಿಗೆ ತಿಳಿಸಿದ.

"ಪುಲ್ಲಯ್ಯ."

"ಪುಲ್ಲಯ್ಯ...... ಯಾವುದಾದರೂ ದೇವರ ಹೆಸರೇನು?"—ಆ ಬಂಗಾಳಿ ಅಧಿಕಾರಿ ಕೇಳಿದ.

"ಇಲ್ಲ. ತೆಲುಗಿನ್ಯಾಗ ಹುಳಿಗೆ ಪುಲುಪು ಅಂತಾರ್ರಿ. ಪುಲ್ಲಯ್ಯ ಅಂದರ, ಹುಳಿಯುಳ್ಳ ಮನುಷ್ಯ...... ಹುಳಿಮನುಷ್ಯ......" ಆ ತಮಿಳು ಅಧಿಕಾರಿ, ತನಗೇನೊ ಮಹಾ ತಿಳಿದಂತೆ ಇಂಗ್ಲೀಷ್‌ನಲ್ಲಿ ವಿವರಿಸಿದ.

"ಹೌದ್ಹಾದು, ಹಾಂಗs ಕಾಣಸ್ತಾನ. ಇರಲಿ, ಆ ಮೂಲಿ ಒಳಗಿರೊ ಪೆಟ್ಟಿಗೆ ಎತ್ತು ನೋಡೋಣ"—ಎಂದು ಆ ಬಂಗಾಳಿ ಅಧಿಕಾರಿ ಹೇಳಿದ. ಹಸಿವಿನಿಂದ ತುಂಬ ನಿತ್ರಾಣನಾಗಿದ್ದ ಪುಲ್ಲಯ್ಯ, ಭಾರವಾದ ಆ ಪೆಟ್ಟಿಗೆಯನ್ನು ಎತ್ತಲು ನಾನಾ ಪ್ರಯತ್ನ ಪಟ್ಟ. ಅವನು ಪ್ರಯಾಸಪಡುತ್ತಿರುವುದನ್ನು ನೋಡಿದ ಆ ಬಂಗಾಳಿ ಅಧಿಕಾರಿ, "ಇವನ ಕೈಲೆ ಆಗೋ ಕೆಲಸ ಅಲ್ಲ ಇದು"—ಎಂದು ಇಂಗ್ಲೀಷಿನಲ್ಲಿ ಹೇಳಿದ. ಪುಲ್ಲಯ್ಯ, ಅದು ಹೇಗೊ ಮೇಲೆತ್ತಿದ್ದ ಪೆಟ್ಟಿಗೆಯನ್ನು ಇಳಿಸಿ, ಆಯಾಸದಿಂದ

ತೀಕುತ್ತಲೇ, "ಸಾಹೇಬರ, ಬಹಳ ಕಷ್ಟದಾಗ ಇದ್ದೀನಿ. ಮೈಮ್ಯಾಲಿನ ಈ ಬಟ್ಟೆಗಳನ್ನು ಕೂಡ ಬಾಡಿಗೆಗೆ ತಂದೀನ್ರಿ. ಹೊಟ್ಟೆಗಿಲ್ಲದ, ನಾನೊಬ್ಬನೇ ಅಲ್ಲದ ನನ್ನ ಹೆಣ್ತಿ–ಮಕ್ಕಳು ಕೂಡ ಸೊರಗಿ ಕಡ್ಡಿ ಆಗೀವಿ. ಹತ್ತು ದಿನ ಸರಿಯಾಗಿ ಹೊಟ್ಟೆಗೆ ಅನ್ನ ಬಿದ್ದರ, ಇಂತಹ ಎರಡು ಪೆಟ್ಟಿಗೆಗಳನ್ನು ಸರಾಗವಾಗಿ ಎತ್ತಿತೋರಸ್ತೀನ್ರಿ"—ಎಂದು ಹೇಳುತ್ತಲೇ ಕಣ್ಣಲ್ಲಿ ನೀರು ತಂದುಕೊಂಡ.

"ಸರಿ, ಸರಿ. ಈಗ ನೀನು ಹೋಗು. ಉದ್ಯೋಗ ವಿನಿಮಯ ಕಚೇರಿಯೊಳಗ ಏನಂಬೋದು ತಿಳಿಸ್ತಾರ"—ಎಂದು, ತಮಿಳು ಅಧಿಕಾರಿ ಹೇಳಿದಾಗ, ಪುಲ್ಲಯ್ಯನಿಗೆ ಎಲ್ಲಿಲ್ಲದ ಧೈರ್ಯ ಬಂದಿತು. ಕೆಲಸ ಸಿಕ್ಕಿತೆಂದೆ ಅವನು ಭಾವಿಸಿದ. ಅದೇ ಗುಂಗಿನಲ್ಲೆ, ಅಲ್ಲಿಂದ ಹೊರಟ. ತುಂಬ ಆಯಾಸಗೊಂಡಿದ್ದ ಪುಲ್ಲಯ್ಯ ನಡೆದುಕೊಂಡು ಮನೆ ಸೇರುವ ಹೊತ್ತಿಗೆ ಕತ್ತಲಾಗಿತ್ತು. ಗುಡಿಸಲಿನಲ್ಲಿ ಕಾಲಿಡುತ್ತಿದ್ದಂತೆಯೇ ಮೂರ್ಛೆ ಬಂದವರಂತೆ, ನೆಲದ ಮೇಲೆ ಉರುಳಿಕೊಂಡ. ನೀಲಿ ಅರ್ಧಾಣೆ ಕೊಟ್ಟು ಸೊಪ್ಪು ತಂದು ಕುದಿಯಲು ಇಟ್ಟಳು. ಅದೇ ಓಣಿಯಲ್ಲಿದ್ದ ಒಬ್ಬಳ ಬಳಿ, ರೂಪಾಯಿಗೆ, ತಿಂಗಳಿಗೆ, ನಾಲ್ಕಾಣೆಯ ಬಡ್ಡಿಯ ಮೇಲೆ, ಒಂದು ರೂಪಾಯಿ ಸಾಲ ಪಡೆದು ಕಾಳು ತಂದು ಗಂಜಿ ಮಾಡಿದಳು. ಪುಲ್ಲಯ್ಯ ಹೊಟ್ಟೆ ತುಂಬ ಗಂಜಿ ಕುಡಿದು ಮತ್ತೆ ಉರುಳಿಕೊಂಡ.

ಬೆಳಗಾಗುತ್ತಲೇ, ಉದ್ಯೋಗ ವಿನಿಮಯ ಕೇಂದ್ರಕ್ಕೆ ಹೋಗಿ ಆ ಗುಮಾಸ್ತನನ್ನು ಭೇಟಿಯಾದ. ತನಗಾದ ಅನುಭವವನ್ನು ವಿವರಿಸಿ, "ಕೆಲಸಕ್ಕ ಎಂದಿನಿಂದ ಹೋಗಬೇಕು ಅಂಬೋದನ್ನ ನಿಮಗ ತಿಳಿಸ್ತಾರಂತೆ"—ಎಂದು ಹೇಳಿದ. ತನಗೆ ಕೆಲಸ ಸಿಗುವುದೆಂಬ ನಂಬಿಕೆ ಮತ್ತು ಧೈರ್ಯದಿಂದ, ನಾಲ್ಕು ದಿನ ಲವಲವಿಕೆಯಿಂದಿದ್ದ. ಅದೇ ಉತ್ಸಾಹದಲ್ಲಿ, ಅಲ್ಲಲ್ಲಿ ಕೂಲಿ ಕೆಲಸ ಮಾಡಿ, ಅಲ್ಪ–ಸ್ವಲ್ಪ ಸಂಪಾದನೆ ಮಾಡಿದ.

ಒಂದು ದಿನ, ಉದ್ಯೋಗ ವಿನಿಮಯ ಕೇಂದ್ರದಲ್ಲಿನ ಆ ಗುಮಾಸ್ತ, "ಅವರು ನಿನ್ನ ಕೆಲಸಕ್ಕ ತಗೊಳಿಲ್ಲ. ಇದರೊಳಗ ನಾನು ಏನೂ ಮಾಡಲಾರೆ"—ಎಂದು ಹೇಳಿದಾಗ, ಪುಲ್ಲಯ್ಯ, ಕುಸಿದು ಕುಳಿತ. ಗಟ್ಟಿಯಾಗಿ ಅತ್ತು, ದುಃಖದ ಹೊರೆಯನ್ನು ಹಗುರ ಮಾಡಿಕೊಳ್ಳಬೇಕೆಂದುಕೊಂಡ. ಆದರೆ, ಸ್ವಲ್ಪ ಹೊತ್ತಿನ ವರೆಗೆ, ಅವನ ಬಾಯಿಯಿಂದ ಒಂದು ಮಾತೂ ಹೊರಡಲಿಲ್ಲ. ಕೊನೆಗೆ, ಶೋಕತಪ್ತವಾದ ಧ್ವನಿಯಲ್ಲಿ, "ಧಣೇರ, ನನ್ನ ಗಿರಿಜಾಮಿಸೆ, ನಮ್ಮೂರಿನ ಸುತ್ತಮುತ್ತಲಿನ ನಾಲ್ಕು ಹಳ್ಳಿ ಒಳಗ ಪ್ರಸಿದ್ಧಿಯಾಗಿತ್ತು...... ನನಗ, ನನ್ನ ಪ್ರಾಣಕ್ಕಿಂತ, ಆ ಮಿಸೆಯ ಮೇಲೆ ಹೆಚ್ಚು ಅಭಿಮಾನ ಇತ್ತು...... ಏನೋ ಹೊಟ್ಟೆಗೆ ಅನ್ನ ಸಿಗ್ತದೇನೊ ಎಂಬ ಆಶೆಯಿಂದ, ಮನಸ್ಸು ಗಟ್ಟಿಮಾಡಿ, ಮಿಸೆ ಬೋಳಿಸಿದೆ...... ಬಾಯಿಗೆ ಬಂದ ತುತ್ತು, ಜಾರಿ ಮಣ್ಣಾಗ ಬಿತ್ತು...... ಆಯ್ತು, ನನಗ ಶನಿದೇವರ ಕಾಟ ಪ್ರಾರಂಭ ಆಗ್ಯದs ಅಂದಮ್ಯಾಲೆ ನೀವಾದರೂ ಏನು ಮಾಡ್ತೀರಿ?"—ಎಂದು ಹೇಳಿ, ನಿಧಾನವಾಗಿ ಅಲ್ಲಿಂದ ಹೊರಟ.

# [ 32 ]

ಚಳಿಗಾಲ ಬಂತು. ಅಲ್ಲಿ–ಇಲ್ಲಿ ಕೂಲಿ ಮಾಡಿಕೊಂಡು, ಒಪ್ಪತ್ತು ಇದ್ದರೆ, ಒಪ್ಪತ್ತು ಇಲ್ಲದೆ, ತಿರುಗುತ್ತಿದ್ದ ಪುಲ್ಲಯ್ಯನಿಗೆ, ಮತ್ತೆ ರಾಮಣ್ಣನ ಭೇಟಿ ಆಯಿತು. ರಾಮಣ್ಣ, ದಿನವೂ ಚುನಾವಣಾ ಸಭೆಗೆ ಬರುವಂತೆ ಪುಲ್ಲಯ್ಯನನ್ನು ಒತ್ತಾಯಪಡಿಸಿದ. ಅವನ ಒತ್ತಾಯಕ್ಕೆ ಮಣಿದ ಪುಲ್ಲಯ್ಯ, ಚುನಾವಣಾ ಸಭೆಗಳಿಗೆ ಹೋಗಹತ್ತಿದ.

"ನೋಡಣ್ಣಾ, ಈತಗ ಆಸ್ತಿ–ಪಾಸ್ತಿ ಏನೂ ಇಲ್ಲ. ಆದರೂ, ಚುನಾವಣೆಗೆ ನಿಂತು, ದುಡ್ಡಿದ್ದವರನ್ನ ಎದುರು ಹಾಕಿಕೊಂಡಾನ. ಅವರು ದುಡ್ಡು ಖರ್ಚುಮಾಡಿದ್ಹಾಂಗ ಈತನೂ ಮಾಡಬೇಕಂದರ ಆಗಾಣೆಲ್ಲ. ನಮ್ಮಂತಹವರ, ಬಡವರ ಸೇವಾ ಮಾಡ್ಯಾನ —ಮುಂದನೂ ಮಾಡ್ತೀನಿ ಅಂತ ಹೇಳ್ಯಾನ. ಈಗ ನಾವೆಲ್ಲಾ ಒಂದಾಗಿ ಆತನ್ನ ಗೆಲ್ಲಿಸೋದು ನಮ್ಮ ಕರ್ತವ್ಯ."

ರಾಮಣ್ಣನ ಈ ಬೋಧನೆಗಳಿಂದ ಪ್ರಭಾವಿತನಾದ ಪುಲ್ಲಯ್ಯ, ಊಟ–ತಿಂಡಿಗೂ ಲಕ್ಷ್ಯಕೊಡದೆ, ಓಟುಗಳಿಗಾಗಿ ಮನೆಮನೆ ತಿರುಗಿದ. ಚಿತ್ರ–ವಿಚಿತ್ರವಾದ ಜನರನ್ನು ಭೇಟಿಯಾದ. ಅವರಲ್ಲಿ ತಿಂಗಳು ಸಂಬಳ ಪಡೆಯುವವರೂ ಇದ್ದರು. ಸಂಬಳ ತಂದು ಕೊಂಡು ಕುಡಿದು ಬೀಳುವವರು; ಕುಡಿದ ಅಮಲಿನಲ್ಲಿ—ಹೊಟ್ಟೆಗಿಲ್ಲದೆ ಕಂಗಾಲಾದ ಹೆಂಡತಿ–ಮಕ್ಕಳ ಮೇಲೆ ಕೈಮಾಡುವವರು; ಬಂದ ಸಂಬಳವನ್ನು, ಇಸ್ಪೇಟು, ಬ್ರ್ಯಾಕೆಟ್ ನಲ್ಲಿ ಪೋಲುಮಾಡುವವರು ಇದ್ದರು. ದೇಶದಲ್ಲಿ ಅಭಾವ ತಲೆದೋರಿದ್ದಕ್ಕೆ ಕಾಳ ಸಂತೆಕೋರರು ಕಾರಣ. ಅವರ ಪಕ್ಷಪಾತಿಯಾದ ಸರ್ಕಾರ, ತಾನು ಮಾಡುವುದು ನ್ಯಾಯವಾದುದೆಂದು ನಿರೂಪಿಸಲು ಪ್ರಯತ್ನಿಸುತ್ತಿದೆ ಎಂದೂ; ಸರ್ಕಾರ ಪ್ರಜಾ ಪಕ್ಷಪಾತಿಯಾಗಿರದೆ, ದುಡ್ಡಿದ್ದವರ ಕೈಗೊಂಬೆಯಾಗಿದೆ ಎಂದೂ ಜನರು ಹೇಳುವಲ್ಲಿ ಹುರುಳಿದೆ—ಎಂದು, ಪುಲ್ಲಯ್ಯನೂ ನಂಬಿದ. ದುಡ್ಡಿದ್ದವರನ್ನು ವಿರೋಧಿಸುವ ಜನರನ್ನು ಸೇರಿಕೊಂಡು, ಅವರು ಕೂಗುವ ಘೋಷಣೆಗಳಲ್ಲಿ ತನ್ನ ಧ್ವನಿಯನ್ನೂ ಸೇರಿಸಿದ. "ಇವರೆಲ್ಲ ಹೇಳೋದು ಖರೇನss ಇರಬೇಕು. ಇಲ್ಲದಿದ್ದರ ನನ್ನಂತಹವರು ಹೊಟ್ಟಿ ತುಂಬಿಕೊಳ್ಳಲಿಕ್ಕೆ ಇಷ್ಟು ಪರದಾಡಬೇಕss"—ಎಂದು ಮನಸ್ಸಿನಲ್ಲೆ ಅಂದು ಕೊಳ್ಳುತ್ತಿದ್ದ. ಹೀಗೆಯೇ, ಮೂರು ದಿನ ಆ ಚುನಾವಣಾ ಸಭೆಗಳಿಗೆ ಹೋಗಿಬರುವಲ್ಲಿ, ಪುಲ್ಲಯ್ಯನ ವಿಚಾರಗಳಲ್ಲಿ ಹೆಚ್ಚಿನ ಪರಿವರ್ತನೆಯುಂಟಾಯಿತು. ಅವನ ಮಾತು ಗಳನ್ನು ಕೇಳಿ ನೀಲಿ, "ಇದಕ್ಕss ಏನು ನೀನು ಅಲ್ಲಿಗೆ ಹೋಗೋದು?"—ಎಂದು ಕೇಳಿದಳು.

"ನಿನಗ ಇದೆಲ್ಲಾ ತಿಳಿಯಾಣೆಲ್ಲ ಬಿಡು. ಈಗ ಹೊಸ ಜನರು, ಹೊಸ ವಿಚಾರ ವುಳ್ಳವರು ಮುಂದ ಬಂದಾರ. ಇನ್ನು ಕೆಟ್ಟ ಜನರಿಗೆ ಉಳಿಗಾಲ ಇಲ್ಲ. ಎಲ್ಲರೂ— ಅಂದರ, ರಾಜಾನಿಂದ ಹಿಡಿದು ಪ್ರಜೆಗಳ ವರೆಗೂ—ಸಮಾನರು."

"ಹೌದ್ಹೌದು, ನೀನು ಹೀಂಗ ಒದರಿಕೊಂಡ ಮಾತ್ರಕ್ಕ, ಎಲ್ಲಾನೂ ಸರಿಹೋಗ್ತ ದೇನು?"

"ಯಾಕ ಸರಿ ಹೋಗಾಣೆಲ್ಲ...... ಈ ಮುಖಂಡ ನಾಳೆ ಸರ್ಕಾರ ಸೇರಿಕೊಂಡರ ಎಲ್ಲಾನೂ ಆಗ್ತದ...... ಉಳುವವನಿಗೆ ಭೂಮಿ—ಕೂಲಿ ಕೆಲಸ ಮಾಡುವವನಿಗೆ, ದಿನಕ್ಕ ಮೂರು ರೂಪಾಯಿ ಕೂಲಿ...... ಇನ್ನು ಮುಂದ ಭಿಕ್ಷೆ ಬೇಡುವವರು ಯಾರೂ ಇರಾಣೆಲ್ಲ......"

"ಗೊತ್ತಾತು ಬಿಡು. ಕೆಲಸ ಮಾಡೋನು, ಎಂದs ಆಗಲಿ ಇಲ್ಲದ ಗದ್ದಲ ಮಾಡಾ ಣೆಲ್ಲಂತ."

"ನೀನ ನೋಡವಂತಿ. ದುಡ್ಡು ಇರೋವರಿಂದ ಅದನ್ನು ಕಿತ್ತುಕೊಂಡು ಎಲ್ಲರಿಗೂ ಹಂಚತಾರೊ—ಇಲ್ಲೊ ನೋಡು."

"ಆಗಲಿ, ದುಡ್ಡು ಇರೋವರಿಂದ ಅದನ್ನ ಕಿತ್ತುಕೊಂಡು ನಿನಗ ಕೊಟ್ಟರ, ನೀನೇನು ಖರ್ಚುಮಾಡದ ಅದನ್ನ ಹಾಂಗs ಇಟ್ಟಕೊತೀದೇನು? ನೀ ಏನs ಅನ್ನು ಯಾರು ಏನೇ ಮಾಡಿದರೂ, ಬೀದಿಯವನು ಕಡೀವರೆಗೂ ಬೀದಿಯವನಾಗಿ ಉಳೀತಾನ...... ಅದು ಏನರ ಆಗಲೀ, ನೀನು ಕೂಲಿ ಕೆಲಸ ಮಾಡಿಕೊಂಡು ಇರೋದನ್ನ ಬಿಟ್ಟು ಇಲ್ಲದ ಈ ರಗಳಿಯೊಳಗ ಯಾಕ ಬೀಳ್ತೀದಿ. ನಿನ್ನ ಕೈಯಾಗಿನ ಐದೂ ಬೆಟ್ಟು ಸಮನಾಗಿ ಅವ ಏನು? ಆದರೂ ಯಾವ ಒಂದು ಬೆಟ್ಟು ಇರದಿದ್ದರ ಕೆಲಸ ಮಾಡೋದು ಕಷ್ಟ...... ನಾಲ್ಕು ಜನರಿಗೆ ಒಳ್ಳೆಯದಾಗಲಿ ಅಂತ ಹರಸೊ ನಾಲಿಗೆ ಕೊಯ್ದು ಎರಡು ಮಾಡಿದರ ಏನು ಬಂತು?...... ಆಗೋದೆಲ್ಲಾ ಆಗೇ ಆಗ್ತದ. ವಿಧಿನಿಯಮ ನಿಲ್ಲಿಸಲಿಕ್ಕೆ ಯಾರಿಂದಲೂ ಆಗಾಣೆಲ್ಲ. ಇಲ್ಲದ ಹವ್ಯಾಸಕ್ಕ ಬಿದ್ದು ನಿನ್ನಂತಹವನೇ ಆದ ಮತ್ತೊಬ್ಬನನ್ನು ಕೊಂದರ ಯಾತಕ್ಕ ಬಂತು? ಹುಲಿಯ ಹಾಗೆ, ನೀನು ಇಂದು ಒಬ್ಬರನ್ನ ಕೊಂದರ, ನಾಳೆ ನಿನ್ನ ಮಗನ್ನ ಯಾರಾದರೂ ಕೊಲ್ಲಲಿಕ್ಕಿಲ್ಲೇನು......? ನೀನು ಏನs ಅನ್ನು, ನಿನ್ನ ವಾದ ನನಗ ಹಿಡಿಸಲಿಲ್ಲ"—ಎಂದು ಹೇಳಿದ ನೀಲಿ, ಮನಸ್ಸಿನಲ್ಲೆ ಅಜ್ಜಿಯನ್ನು ಸ್ಮರಿಸಿಕೊಂಡಳು. ಆಪತ್‌ಕಾಲ ಬಂದಾಗಲೆಲ್ಲಾ, ಆಕೆ, ಆ ಮುದುಕಿಯನ್ನು ನೆನೆಸುತ್ತಿದ್ದಳು.

ಆ ರಾತ್ರಿ ಚಳಿಯಾಗುತ್ತಿದ್ದರೂ ಕೂಡ, ಪುಲ್ಲಯ್ಯ ಅಂಗಳದಲ್ಲೆ ಮಲಗಿದ. ಅಂದೂ ಸಹ ಎಲ್ಲೊ ದೂರದಲ್ಲಿ. ಯಾರೊ ಭಾಷಣ ಮಾಡುತ್ತಿದ್ದುದು ಅವನಿಗೆ ಕೇಳಿಸು ತ್ತಿತ್ತು. ಎತ್ತ ನೋಡಿದರೂ ಚುನಾವಣೆಯ ಕೋಲಾಹಲ. ಸಭೆಗಳು. ಜನರು ತಂಡೋಪತಂಡವಾಗಿ ಹೋಗಿ, ಭಾಷಣ ಕೇಳಿಬರುತ್ತಿದ್ದರು. ಎಲ್ಲರಲ್ಲೂ ಒಂದು ತೆರನಾದ ಉತ್ಸಾಹ ತುಂಬಿತ್ತು. ಪ್ರತಿಯೊಬ್ಬರ ಮನೆಯಲ್ಲೂ ವಾದ–ವಿವಾದಗಳು ನಡೆಯುತ್ತಲೇ ಇದ್ದವು. ಪಕ್ಕದ ಗುಡಿಸಲಿನಲ್ಲಿದ್ದ ಯುವ ದಂಪತಿಗಳೂ ಸಹ ಆಗಾಗ ತೀವ್ರವಾಗಿ ವಾದಿಸುತ್ತಿದ್ದುದನ್ನು ಪುಲ್ಲಯ್ಯ ಕೇಳಿದ್ದ.

ಮತದಾನದ ದಿನ ಸಮೀಪಿಸಿದಂತೆ, ಚುನಾವಣಾ ಪ್ರಚಾರ ಕಾವೇರಿತು. ಹುಚ್ಚ ಆ ರಾತ್ರಿ ಬಂಗಲೆಗಳ ಪಕ್ಕದಲ್ಲಿನ ಮರದ ಕೆಳಗೆ ಕುಳಿತು, ನಾಯಿಮರಿಯ ಬಗ್ಗೆ ಪರಿತಪಿಸುತ್ತಿದ್ದ. ಅದನ್ನು ಕೇಳಿಸಿಕೊಂಡ ಪುಲ್ಲಯ್ಯ, ಮಲ್ಲೇಶಿಯ ನಾಯಿಮರಿಯನ್ನು ಆತನಿಗೆ ಕೊಟ್ಟುಬರಬೇಕೆಂದುಕೊಂಡ. ಅಷ್ಟರಲ್ಲಿ, ಆ ಹುಚ್ಚ ನಾಯಿಮರಿಯನ್ನು ಮರೆತು, ಚುನಾವಣೆಗಳ ಬಗ್ಗೆ, ಓಟುಗಳ ಬಗ್ಗೆ ಮಾತನಾಡತೊಡಗಿದ.

"ಓಟು, ಓಟು...... ಈ ಓಟುಗಳ ಕಾಲದಾಗ ಎಲ್ಲಾನೂ ಹಾಳು ಮಾಡಿಕೊಳ್ತಾರ ಆತು. ಇದನ್ನೆಲ್ಲ ನೋಡಿದ್ರ ದುಡ್ಡು ಕೊಟ್ಟು ಸೀಟು ಗಿಟ್ಟಿಸಿ, ಕೈ ಎತ್ತೋದೆ ಡೆಮಾಕ್ರಸಿ—ಏನೊ ಅನ್ನಿಸ್ತದ. ಈ ಡೆಮಾಕ್ರಸಿ, ಈ ಪ್ರಜಾರಾಜ್ಯದೊಳಗ, ಮಂತ್ರಿಗಳಿಂದ ಹಿಡಿದು, ಅವರ ಜವಾನನ ವರೆಗೂ, ಪ್ರತಿಯೊಬ್ಬರೂ ಒಂದಿಲ್ಲ ಒಂದು ಹೇಳಿಕೆ ನೀಡಲು ಪ್ರಯತ್ನಿಸ್ತಾರ ಆತು...... ಇನ್ನ ಈ ಚುನಾವಣೆಗಳ ಗದ್ದಲದಾಗ, ಪಂಗಡಗಳಾಗಿ, ಗುಂಪುಗಳಾಗಿ ಒಡೆದುಹೋದ ಜನರು, ಕಡೀವರೆಗೂ ಹಗೆತನ ಬೆಳೆಸಿಕೊಂಡು ಹೋಗ್ತಾರ—ಇಷ್ಟಕ್ಕೂ, ಸರ್ಕಾರ ಹೇಳೋದನ್ನೆಲ್ಲಾ—ಅದು ಸರಿ ಇರಲಿ ತಪ್ಪಿರಲಿ—ಪ್ರತಿಪಕ್ಷದವರು ವಿರೋಧಿಸುವುದೇ ಡೆಮಾಕ್ರಸಿ ಆಗ್ಯದ."

ಪುಲ್ಲಯ್ಯ ನಿಧಾನವಾಗಿ ಎದ್ದು, ಸಾರ್ವಜನಿಕರ ಮುಂದೆ ಭಾಷಣ ಮಾಡುವ ರೀತಿಯಲ್ಲಿ ನಿಂತು ದೊಡ್ಡ ಧ್ವನಿಯಲ್ಲಿ ಮಾತನಾಡುತ್ತಿದ್ದ ಆ ಹುಚ್ಚನ ಬಳಿ ಹೋಗಿ, "ಇದನ್ನೆಲ್ಲ ಯಾರಿಗೆ ಹೇಳ್ತೀದಿ?"—ಎಂದು ಕೇಳಿದ. ಆ ಹುಚ್ಚ, ಪುಲ್ಲಯ್ಯನನ್ನು ಅಲಕ್ಷ್ಯಮಾಡಿ, ತನ್ನಷ್ಟಕ್ಕೆ ತಾನು, "ಯಾರಿಗೆ ಹೇಳ್ತೀನಿ ಅಂತೀಯಾ—ಇಲ್ಲಿರೋ ಈ ಮರಕ್ಕ, ಈ ಸುತ್ತಮುತ್ತಲಿನ ಕಲ್ಲು–ಬಂಡೆಗಳಿಗೆ, ಯಾಕಂದರ, ಇನ್ನೂ ನಾಲ್ಕು ದಿನ ಆದರ, ಇವು ಕೂಡ ರಾಜಕೀಯಕ್ಕ ಇಳಿಯಬಹುದು ಅದಕ್ಕ.—ಗಿಡ–ಮರಗಳೂ ಸಹ ನಮ್ಮಂತೆ ಸಜೀವ ಅವಂತ ಹೇಳ್ತಾರಲ್ಲ?"

"ಇದನ್ನೆಲ್ಲ, ನೀನು ಆ ಚುನಾವಣಾ ಸಭೆ ಒಳಗ ಯಾಕ ಹೇಳಬಾರದು?"

"ಸಭೆ, ಪಾರ್ಲಿಮೆಂಟು...... ಇಂಗ್ಲೆಂಡಿನ್ಯಾಗ ಪ್ರಜಾಪ್ರಭುತ್ವ ಉಚ್ಛ್ರಾಯಸ್ಥಿತಿಯಲ್ಲಿರಲಿಕ್ಕೆ, ಅಲ್ಲಿನ ಪಾರ್ಲಿಮೆಂಟ್‌ನಲ್ಲಿ ನಡೆಯೊ ಪ್ರಸಂಗಗಳು ಕಾರಣವಲ್ಲ......" ಎಂದು ಹುಚ್ಚ ನಕ್ಕ. ಹಾಗೆ ನಗುತ್ತಲೆ, ನಿಂತವನು ಕುಳಿತುಕೊಂಡ.

ಆಗಲೇ ಗಾಳಿ ಬೀಸಲು ಪ್ರಾರಂಭವಾಗಿದ್ದರಿಂದ ಚಳಿಯಿಂದ ಮೈ ನಡುಗಹತ್ತಿತು. ಆದರೂ, ತನ್ನಷ್ಟಕ್ಕೆ ನಗುತ್ತಾ ಕುಳಿತಿದ್ದ ಆ ಹುಚ್ಚನನ್ನು ಬಿಟ್ಟು ಹೋಗಲು ಪುಲ್ಲಯ್ಯನಿಗೆ ಮನಸ್ಸಾಗಲಿಲ್ಲ. ಎದುರಿಗಿದ್ದ ಚರಂಡಿಯ ದುರ್ನಾತ ವಾತಾವರಣವನ್ನು ತುಂಬಿಕೊಂಡಿತ್ತು. ಹಾಗೆಯೇ ನಿಂತಿದ್ದ ಪುಲ್ಲಯ್ಯನ ಮನಸ್ಸಿನಲ್ಲಿ, ಇಲ್ಲದ ಆಸೆ ಮೂಡಿತು. ಈ ತಂಪು ಸಮಯದಲ್ಲಿ ಹುಚ್ಚನನ್ನು ಪುಸಲಾಯಿಸಿದಲ್ಲಿ, ಅವನು ತಾನು ಚಿನ್ನ ಬಚ್ಚಿಟ್ಟ ಸ್ಥಳ ತೋರಿಸಬಹುದು. "ಆಗ, ಆ ಚಿನ್ನ ತೊಗೊಂಡು, ಊರಿಗೆ ಹೋಗಿ ಗದ್ದಿ ತೊಗೊಂಡು ಈತನನ್ನೂ ಕರೆದೊಯ್ದು ಹಾಯಾಗಿದ್ತೀನಿ"—ಎಂದುಕೊಂಡ

ಫುಲ್ಲಯ್ಯ. ಮರುಕ್ಷಣದಲ್ಲೆ, ಅಂತಹ ದುಡ್ಡು ಎಷ್ಟು ದಿನ ಬಂದೀತು? ಊರಲ್ಲಿನ ದೇಸಾಯರಿಗೆ, ಅಷ್ಟು ದುಡ್ಡು ಎಲ್ಲಿಂದ ಬಂತು. ಅವರಪ್ಪ ರಂಗೂನ್‌ಗೆ ಹೋದ. ಮಗ, ಮನಿ ಕಟ್ಟಲಿಕ್ಕೆ ಅಡಿಪಾಯ ಹಾಕಬೇಕಂತ ನೆಲ ಅಗೆದಾಗ, ಪೆಟ್ಟಿಗೆ ತುಂಬ ಬಂಗಾರ ಸಿಕ್ಕಿತು. ಇನ್ನೇನು ಬೆಳಗಾಗುವುದರೊಳಗ ಕಿರಿಯ ದೇಸಾಯಿ, ಹಿರೆ ಮನುಷ್ಯನಾದ. ಆತನ ಹಾಂಗ ನಾನೂ ಯಾಕ ಆಗಬಾರದು? ಈ ಉಪವಾಸ–ವನ ವಾಸ ಎಲ್ಲಾ ಹೋಗಿಬಿಡ್ತಾವ—ಮಲ್ಲೇಶಿಗೆ ಓದು ಕಲಿಸಿ ದೊಡ್ಡವನನ್ನಾಗಿ ಮಾಡಿ, ದೊಡ್ಡ ಸಾಹೇಬನ್ನ ಮಾಡಬಹುದು...... ಫುಲ್ಲಯ್ಯ, ತನ್ನದೇ ಆದ ಒಂದು ಲೋಕದ ಕಲ್ಪನೆಯಲ್ಲಿದ್ದಾಗ, ಪುಟ್ಟ ಮತ್ತೆ ಮಾತನಾಡಲು ಪ್ರಾರಂಭಿಸಿದ......

"ಅವನು ಈ ಊರಿನ ಹಿರೆ ಮನುಷ್ಯ—ಗಣ್ಯ ವ್ಯಕ್ತಿ. ಅವನಿಗೆ ಯಾವಾಗಲೂ ನಾಲ್ಕು ಮಂದಿ ಕಾವಲುಗಾರರು ಬೇಕು. ಅವನೊಬ್ಬ ಮಹಾ ದೇಶಭಕ್ತ. ಮುಗ್ಧರಾದ ಪ್ರಜೆಗಳು, ಅವನನ್ನು ದೊಡ್ಡ ಮನುಷ್ಯ ಅಂತ ಗೌರವಿಸ್ತಾರ. ಆದರೆ, ಅವನಿಗೆ ಯಾವ ಯೋಗ್ಯತೆನೂ ಇಲ್ಲವಾದರೂ, ಅವನ ಹತ್ತಿರ ಇರೊ ದುಡ್ಡು ಅವನಿಗೆ ಸಾರ್ವಜನಿಕರ ಗೌರವ ಗಳಿಸಿಕೊಟ್ಟದ. ದಾನಶೂರ ಕರ್ಣನ ಮೊಮ್ಮಗನ್ಹಾಂಗ ದಾನಧರ್ಮ ಮಾಡ್ತೀನಿ ಅಂತ ತೋರಿಸಿಕೊಳ್ತಾನ. ಪ್ರತಿಯೊಂದು ಧರ್ಮಕಾರ್ಯ ದಲ್ಲೂ ತನ್ನ ಹೆಸರು ಮೊದಲು ಇರೋ ಹಾಂಗ ನೋಡಕೋತಾನ ಆತು. ಸಮಾಜದ ಘನ ವ್ಯಕ್ತಿ—ಎಂದು ಅವನನ್ನು ಗೌರವಿಸುವ ಈ ಕುರಿಗಳನ್ನು ನೋಡಿದರ, ಅಯ್ಯೋ ಪಾಪ ಅನ್ನಸ್ತದ. ನೀತಿ ನಿಯಮಕ್ಕ ಸಾಟಿಯಾಗಿ ನಿಲ್ಲೊ ಅಂಥಾದ್ದು ಮತ್ತೊಂದಿಲ್ಲ. ಆದರ ಈ ಮನುಷ್ಯನ ಹತ್ತಿರ ಆ ಗುಣಗಳ ಗಂಧವೂ ಇಲ್ಲ. ಅಂತಹವನಿಗೆ, ನಮ್ಮ ಕಷ್ಟ–ಸುಖ ನೋಡಿಕೊ ಅಂತ ಹೇಳಿದರ, ಅವನು ತನ್ನ ಸುಖ ನೋಡಿಕೋತಾನಾಗಲೀ, ಕಂಡವರ ಚಿಂತಿ ಯಾಕ ಮಾಡ್ತಾನ? ಜನರನ್ನ ಹ್ಯಾಂಗ ಮೋಸಮಾಡಬೇಕು—ಅಂಬೋದು ಮಾತ್ರ ಅವನಿಗೆ ಗೊತ್ತು...... ಈ ಓದಿದ ಮೂರ್ಖರಿಗಿಂತ, ಲವ ಲೇಶವೂ ವಿದ್ಯೆ ಇಲ್ಲದ ಬಡ ಜನರಲ್ಲಿ ಸಂಸ್ಕಾರ ಮನಿಮಾಡಿಕೊಂಡದಂತ ಹೇಳ ಬಹುದು. ಇಷ್ಟಾದರೂ, ದುಡ್ಡಿದ್ದ ದಡ್ಡಪ್ಪಗಳನ್ನು ಕೊಂದುಹಾಕಬೇಕಂತ ನಾನೇನು ಹೇಳಾಣಿಲ್ಲ. ರಕ್ತದ ದಾಹ ಇದ್ದವನು ಮನುಷ್ಯನಾಗಲಾರ. ರಕ್ತ ಹೀರುವ ಪ್ರವೃತ್ತಿ ಪಶುಗಳಲ್ಲಿ ಮಾತ್ರ ಇರ್ತದ. ಪಶುವಿಗೆ, ಮಾನವಸಂಘದಲ್ಲಿ ಸೇರಿಕೊಳ್ಳುವ ಅರ್ಹತೆ ಇಲ್ಲ. ಆದರೆ, ಪಶುವಿನಂತಹ ಈ ಜನರನ್ನು ಏನು ಮಾಡಬೇಕು......? ಹೆಚ್ಚಿನ ದೇನೂ ಮಾಡಬ್ಯಾಡ್ರಿ. ಈ ಕುರಿ–ಕ್ವಾಣಗಳಿಗೆ ಮರ್ಯಾದೆ ಕೊಡೋದನ್ನ ಬಿಡ್ರಿ. ನೀತಿಗೆಟ್ಟ ಮನುಷ್ಯನಿಂದ ದೂರವಿದ್ದು, ನೀತಿಯುಳ್ಳ ಮನುಷ್ಯನನ್ನು ಸಿಂಹಾಸನದ ಮ್ಯಾಲೆ ಕೂಡಸ್ರಿ. ಸತ್ಯ ಒಂದs ಶಾಶ್ವತ. ಸತ್ಯವೇ ಮನುಷ್ಯನನ್ನು ಕಾಪಾಡ್ತದ. ಸತ್ಯದ ಮ್ಯಾಲೆ ನೀತಿ–ನ್ಯಾಯಗಳ ಮೇಲೆ ಆಧಾರಗೊಂಡ ಸರ್ಕಾರ—ಅದಕ್ಕ ನೀವು ಬೇಕಾದ್ದ ಹೆಸರು ಇಡ್ರಿ—ಚಿರಕಾಲ ಉಳೀತದ. ಸತ್ಯಕ್ಕೆ ಕಟ್ಟು ಬೀಳದವರು, ತಾವು

ಮುಖಂಡರೂ ಅಂತ ಹೇಳಿಕೊಂಡರ, ಅದು ಆತ್ಮವಂಚನೆ ಆಗ್ತದ. ಅವರು ಬೇಕಾದರ ಆತ್ಮವಂಚನೆ ಮಾಡಿಕೊಳ್ಳಲಿ. ಇಂದಿಲ್ಲ–ನಾಳೆ, ಅವರು ಒಂದು ನಿಮಿಷದ ಮಟ್ಟಿಗಾದರೂ ತಮ್ಮ ಕೃತ್ಯಗಳ ಬಗ್ಗೆ ಪಶ್ಚಾತ್ತಾಪ ಪಡದೆ ಹೋದರ, ಅವರು ಮುಖಂಡರಲ್ಲ—ಮನುಷ್ಯರೂ ಅಲ್ಲ. ಮನಷ್ಯತ್ವವಿಲ್ಲದ ಈ ಜನರಿಗೆ, ಪಶುಗಳಾದ ಈ ಜನರಿಗೆ, ಅಂತಹುದೇ ಸಾವು ಬರ್‍ತದ...... ಸತ್ಯವೇ ದೇವರು. ದೇವರ ಈ ಅಂಶ ನಮ್ಮಲ್ಲಿರದಿದ್ದರ ನಾವು ಯಾವ ಘನಕಾರ್ಯವನ್ನೂ ಮಾಡಲಾರೆವು......"

ಮಂಜು ಬೀಳಲು ಪ್ರಾರಂಭವಾಗಿತ್ತು. ಜೊತೆಗೆ ಚಳಿಯೂ ಹೆಚ್ಚಿತ್ತು. ಅದಾವುದರ ಎಚ್ಚರವೂ ಇಲ್ಲದೆ, ಪುಲ್ಲಯ್ಯ ನಿಂತಿದ್ದ. ನಿಮಿಷನಿಮಿಷಕ್ಕೆ ಅವನ ಹೃದಯದಲ್ಲಿನ ಆಸೆ ಬೆಳೆದು ಹೆಮ್ಮರವಾಗಿತ್ತು. ಸ್ವಲ್ಪ ಹೊತ್ತು ಹಾಗೆಯೇ ಮೌನವಾಗಿ ನಿಂತವನು, ಸ್ವಲ್ಪ ಮುಂದೆ ಹೋಗಿ......

"ಬಂಗಾರ ಎಲ್ಲಿ ಬಚ್ಚಿಟ್ಟೀದಿ......?" ಎಂದು ಹುಚ್ಚನನ್ನು ಕೇಳಿದ.

"ಎಲ್ಲಿ?"

"ಬಂಗಾರ ಬಚ್ಚಿಟ್ಟೇನಿ ಅಂತೀದಲ್ಲಾ—ಎಲ್ಲಿಟ್ಟೀದಿ?"

"ಹೌದ್ಹೌದು, ಬಚ್ಚಿಟ್ಟೇನಿ—ನೆಲದಾಗ ಹೂಳಿಟ್ಟೇನಿ."

"ಎಲ್ಲಿ?"

"ತೆಂಗಿನ ಗಿಡದ ಕೆಳಗ."

"ಯಾವ ತೆಂಗಿನ ಗಿಡದ ಕೆಳಗ......ನಿನ್ನ ಮನಿ ಹಿತ್ತಲದಾಗಿರುವ ತೆಂಗಿನ ಗಿಡ ಏನು?"

"ಹೌದು."

"ತೆಂಗಿನ ಗಿಡದ ಕೆಳಗ, ಎತ್ತಲಾಗ ಹೂಳಿಟ್ಟೀದಿ?"

"ಮುಂದ......"

"ಎಷ್ಟು ಬಂಗಾರ ಬಚ್ಚಿಟ್ಟೀದಿ...... ಅದೆಲ್ಲಾ ನಿನ್ನದs ಏನು?"

"ಅಲ್ಲಲ್ಲ—ಆಕೀದು. ನನ್ನ ಖೂನಿ ಮಾಡಿಸಬೇಕೂಂತ ಹೊಂಚುಹಾಕಿದಳಲ್ಲ—ಆಕೀದು...... ಈಗ ಅದೆಲ್ಲಾ ಕಟ್ಟಿಕೊಂಡು ನೀ ಏನು ಮಾಡ್ತಿ ಹೋಗ್ಹೋಗು"—ಹುಚ್ಚ ಇದ್ದಕ್ಕಿದ್ದಂತೆ ಸಿಟ್ಟಿಗೆದ್ದ. ಆ ಮೇಲೆ ಪುಲ್ಲಯ್ಯ ಕೇಳಿದ ಯಾವ ಪ್ರಶ್ನೆಗೂ ಅವನು ಉತ್ತರ ಕೊಡಲಿಲ್ಲ.

"ಏನು ಲೋಕವೊ ಏನೊ...... ಎಲ್ಲಾ ಬರಿ ಮಾಯೆ—ಹೆಣ್ಣು ಮಾಯೆ...... ಗಂಡು ಮೋಸದ ಮುದ್ದೆ. ಎಲ್ಲಾರೂ ಕಳ್ಳರು. ನನ್ನ ನಾಯಿಮರಿಯನ್ನು ಕೂಡ ಕಿತ್ತುಕೊಂಡು ಹೋದರು"—ಎನ್ನುತ್ತಾ, ಹುಚ್ಚ ಎದ್ದು ನಿಂತ.

ಪುಲ್ಲಯ್ಯನಿಗೆ, ಅವನ ಮೇಲೆ ಕನಿಕರ ಬಂದು, ಸರಸರನೆ ಹೋಗಿ, ನಾಯಿಮರಿಯನ್ನು ತಂದು—"ಇಕ ತೊಗೊ ನಿನ್ನ ನಾಯಿಕುನ್ನಿ. ಮತ್ತ ಇಲ್ಲಿಗೆ ಬಂದರ, ಅದು ನಿನ್ನ ಕೈಗೆ ಸಿಗಾಣಿಲ್ಲ...... ತೊಗೊಂಡು ಹೋಗು......" ಎಂದು ಹೇಳಿದ.

ಹುಚ್ಚ, ಆ ನಾಯಿಕುನ್ನಿಯನ್ನು ನೋಡಿ, ಕೇಕೆಹಾಕಿದ. ಅದನ್ನು ಎತ್ತಿಕೊಂಡು, "ಬಂದೆಯಾ ನನ್ನಪ್ಪ...... ನಿನ್ನ ಮುಂದ ಏನೇನೊ ಹೇಳಬೇಕಂತ ಎಷ್ಟು ದಿನ ಕಾದೀನಿ"—ಎನ್ನುತ್ತಾ ಅದಕ್ಕೆ ಮುದ್ದಿಟ್ಟ. ನಾಯಿಮರಿ ಕುಂಯಿಗೊಡಹತ್ತಿದಾಗ, "ನಿನ್ನ ಮಾತು ನನಗ ಅರ್ಥ ಆಗ್ತದ. ಅಳಬ್ಯಾಡ ಮತ್ತs ನಾವಿಬ್ಬರೂ ಒಂದಾಗಿವಲ್ಲ" —ಎನ್ನುತ್ತ ಹೊರಟುಹೋದ.

ಇದಾದ ಮರುದಿನ, ಕೆಲಸಕ್ಕೆ ಬರ್ತೀಯಾ ಅಂತ, ಯಾರೋ ಪುಲ್ಲಯ್ಯನ ಗುಡಿಸಲಿನ ವರೆಗೂ ಬಂದ. ಕೆಲಸಕ್ಕಾಗಿ ಜನರನ್ನು ಹುಡುಕುತ್ತಾ ಮನೆಯ ವರೆಗೂ ಬರುವ ಪರಿಸ್ಥಿತಿ ಬಂತೆ—ಎಂದು ಪುಲ್ಲಯ್ಯ ಆಶ್ಚರ್ಯಪಟ್ಟ. ಜಗತ್ತು ಇಷ್ಟು ಬೇಗನೆ ಈ ರೀತಿ ಬದಲಾಯಿಸಿತೆ—ಎಂದು ಸಂತೋಷಪಟ್ಟು—

"ಏನು ಕೆಲಸ?"—ಎಂದು ಕೇಳಿದ.

"ದಿನಕ್ಕ ಎರಡು ರೂಪಾಯಿ. ನೀ ಏನೂ ಕಲ್ಲು ಎತ್ತಬೇಕಾಗಿಲ್ಲ—ನೆಲ ಅಗಿಬೇಕಾಗಿಲ್ಲ. ಬರೋದಿದ್ದರ, ಇಕs ಎರಡು ರೂಪಾಯಿ ಈಗಲೇ ತೊಗೊ."

ಪುಲ್ಲಯ್ಯ, ಅವನು ಕೊಟ್ಟ ದುಡ್ಡನ್ನು ನೀಲಿಯ ಕೈಯಲ್ಲಿಟ್ಟು ಅವನ ಹಿಂದೆ ಹೊರಟ. ಮಲ್ಲೇಶಿ ಕೂಡ ತಂದೆಯ ಬೆನ್ನು ಹಿಡಿದ. ಸುಮಾರು ಒಂದು ಮೈಲು ಹೋದ ನಂತರ, ಒಂದು ದೊಡ್ಡ ಬಂಗಲೆ ಸಿಕ್ಕಿತು. ಆ ಬಂಗಲೆಯ ಮುಂದಿನ ವಿಶಾಲ ವಾದ ಅಂಗಳದಲ್ಲಿ, ಪುಲ್ಲಯ್ಯನಂತಹವರು ಅನೇಕರು, ಹರಟೆಕೊಚ್ಚುತ್ತಾ ನಿಂತಿದ್ದರು. ಅವರೆಲ್ಲರೂ ಚುನಾವಣೆಯ ಬಗ್ಗೆ ಮಾತನಾಡುತ್ತಿದ್ದುದು ಸ್ಪಷ್ಟವಾಗಿತ್ತು. ಪುಲ್ಲಯ್ಯ ಆ ಜನರ ಗುಂಪಿನಲ್ಲಿ ಒಬ್ಬನಾಗಿ ಸೇರಿಕೊಂಡ.

ಅಷ್ಟರಲ್ಲಿ ಕರೆ ಬಂದಿತು. ಎಲ್ಲರೂ ಒಳಹೋದರು. ಬಂಗಲೆಯ ಒಳಗಿನ ವಿಶಾಲ ವಾದ ಕೋಣೆಯೊಂದರಲ್ಲಿ, ದೊಡ್ಡ ಮೀಸೆಯುಳ್ಳ ಒಬ್ಬ ಟೊಣಪ, ದರ್ಪದಿಂದ ಕುಳಿತಿದ್ದ. ಅವನಿಗೆ ಸುಮಾರು ಐವತ್ತು–ಐವತ್ತೈದು ವರ್ಷ ವಯಸ್ಸಿರಬಹುದು. ಬಲಗೈನ ನಾಲ್ಕು ಬಟ್ಟುಗಳಿಗೂ ಉಂಗುರ ತೊಟ್ಟಿದ್ದ. ಪಂಚೆ ಉಟ್ಟು ಸಿಲ್ಕಿನ ಜುಬ್ಬಾ ತೊಟ್ಟು ಕುಳಿತಿದ್ದ ಅವನ ಕೈಯಲ್ಲಿ ದೊಡ್ಡದಾದ ಫಳ–ಫಳ ಹೊಳೆಯುವ ಗಡಿಯಾರವಿತ್ತು.

ಎಲ್ಲರೂ ಒಳಗೆ ಬರುವವರೆಗೆ ಸುಮ್ಮನಿದ್ದ ಆ ಆಸಾಮಿ, ಎಲ್ಲರೂ ಬಂದುದನ್ನು ಗಮನಿಸಿ—"ಕೇಳಿರಿ–ಕೇಳಿರಿ"—ಎನ್ನುತ್ತಾ ಚಪ್ಪಾಳೆ ತಟ್ಟುತ್ತಾ ಎದ್ದುನಿಂತ. ಅಲ್ಲಿದ್ದವರೆಲ್ಲ ನಿಶ್ಶಬ್ದವಾಗಿ ನಿಂತು, ಅವನು ಹೇಳುವುದನ್ನು ಕೇಳತೊಡಗಿದರು.

"ನಾನು ಹೇಳಿದ ಮಾತುಗಳಲ್ಲಿ ಒಂದನ್ನೂ ಮರೆಯದೆ, ಹೇಳಿದ ಕೆಲಸ ಸರಿಯಾಗಿ ಮಾಡಿಕೊಂಡು ಬರುವವರಿಗೆ, ನಾಳೆ ರೂಪಾಯಿ ಕೊಡ್ತೀನಿ. ಆದ್ದರಿಂದ, ನಾ ಹೇಳೋದನ್ನ ಸರಿಯಾಗಿ ಕೇಳಿಸಿಕೊಳ್ರಿ."

"ಆಗಲ್ರಿ ಸಾಹುಕಾರ್ರ"—ಎಂದು ಎಲ್ಲರೂ ಗೋಣಾಡಿಸಿದರು.

ಆತ, ಭಾಷಣಕಾರರಂತೆ ಹೇಳಲುಪಕ್ರಮಿಸಿದ: "ಓದಿದವರ ಹತ್ತಿರ ನೀವು ಹೋಗ

ಬ್ಯಾಡ್ರಿ—ನಮ್ಮ ದೇಶದಾಗ ಓದಿದವರಿಗಿಂತ, ಒಲೆ ಊದುವವರು ಎಷ್ಟೊ ಗುಣ. ಅದಲ್ಲದ, ಓದಿದವನಿಗೆ ಒಣಗರ್ವನೂ ಇರ್ತದ. ಅದಕ್ಕ, ನೀವು ಓದಿದವರ ಹತ್ತಿರ ಹೋಗದ, ಬಡವರ ಮನೀಗೆ, ಕಷ್ಟಪಟ್ಟು, ಬೆವರು ಸುರಿಸಿ ಹೊಟ್ಟೆತುಂಬಿಕೊಳ್ಳೊ ಪ್ರಾಮಾಣಿಕ ಜನರ ಮನೀಗೆ ಹೋಗ್ರಿ. ಅವನ ಕಷ್ಟ ಸುಖ ಏನಂಬೋದು ನಿಮಗೂ ಗೊತ್ತು...... ನನಗೂ ಗೊತ್ತು...... ತಿಳೀತಾ?"

"ಹೂಂನ್ರಿ...... ತಿಳೀತ್ರಿ"—ಎಲ್ಲರೂ ಗೋಣಗಿದರು.

"ನಾನು ಇಲ್ಲಿ ನಿಮಗ ಏನು ಹೇಳ್ತೀನೊ, ಹ್ಯಾಂಗ ಮಾತಾಡ್ತೀನೊ, ನೀವೂ ಅವರ ಮುಂದ ಹಾಂಗ ಮಾತಾಡ್ರಿ...... ನನಗ ಇಂಗ್ಲೀಷ್ ಬರಾಣಿಲ್ಲಾ ಅಂದ್ರ, ನನ್ನ ಮಾತೃಭಾಷೆ ಬರಾಣಿಲ್ಲೇನು? ನಾನು ಈಗ ನಿಮ್ಮೆದುರಿಗೆ, ನಿಮ್ಮ ಜೊತಿಗೆ ಯಾವ ಭಾಷಾದಾಗ ಮಾತಾಡ್ತೀನೊ, ಅಸೆಂಬ್ಲಿ ಒಳಗೂ ಅದೇ ಭಾಷಾ ಮಾತಾಡ್ತೀನಿ. ಇಂಗ್ಲೀಷೇನು ಇವತ್ತು ಅದ, ನಾಳೆ ಹೋಗಬಹುದು. ನನ್ನ ಸುತ್ತಮುತ್ತಲಿನ ಜನರ ಪೈಕಿ ಯಾರಿಗೇ ಆಗಲಿ ಇಂಗ್ಲೀಷ್ ಬರಾಣಿಲ್ಲ. ಅವರೂ ನನ್ನ ಹಾಂಗ ಪಂಚೆ ಉಟ್ಟು, ಜುಬ್ಬ ಹಾಕಿಕೊಂಡು ಸರಳವಾದ ಜೀವನ ನಡಸ್ತಾರ. ಅದಕ್ಕಽ ನನ್ನೊಳಗ ನಿಮ್ಮೊಳಗ ಯಾವ ಭೇದವೂ ಇಲ್ಲ. ಹಾಂಗ ನೋಡಿದರ ಓದಿದವರಿಗಿಂತ ನಾನೇನೂ ಕಡಿಮೆ ಇಲ್ಲ......" ಎಂದು ಆತ ಒಮ್ಮೆ ಮೀಸೆ ತೀಡಿಕೊಂಡ.

"ಈ ಸರ್ಕಾರದ ನೀತಿ, ಧೋರಣೆ, ಏನೇನೊ ಸರಿಯಾಗಿಲ್ಲ. ಸರ್ಕಾರದ ಅಳಬುರುಕ ತನದಿಂದ, ಕಳ್ಳಬಟ್ಟಿ ವ್ಯಾಪಾರ ಹಿಡಿತಡಿಯಿಲ್ಲದ ಮುನ್ನಾಗಿರೋದು ನಿಮಗ ತಿಳಿದದ. ಎಂತಹ ಅಧಿಕಾರಿ ಬಂದರೂ, ಎಡಗೈ ಏಟುತಿಂದು ಮಣ್ಣುಮುಕ್ಕತಾನಽ ಆತ. ಕಾಳಸಂತೆಕೋರರು, ಲಕ್ಷಾನುಗಟ್ಟಲೆ ದುಡ್ಡು ಮಾಡಿಕೊಂಡರೂ, ಅವರನ್ನ ಯಾರೂ ಕೇಳಾಣಿಲ್ಲ. ಅದೇ ಒಬ್ಬ ಬಡವ ತನ್ನ ಹೊಟ್ಟೆಪಾಡಿಗಾಗಿ ನಾಲ್ಕು ಕಾಸು ಮಾಡಿ ಕೊಳ್ಳಲು ಪ್ರಯತ್ನಿಸಿದರ, ಸರ್ಕಾರ ಅವನ ತಲೆಯ ಮೇಲೆ ಮೆಣಸು ಅರೀತದ. ಇದು ಅನ್ಯಾಯ. ನಾನು ಅಸೆಂಬ್ಲಿಗೆ ಹೋಗಿ, ಇದನ್ನಽ ವಾದಸ್ತೀನಿ. ಕಳ್ಳಭಟ್ಟಿ ಸರಾಯಿ ಬದಲು, ಸರ್ಕಾರ ತನ್ನದೇ ಭಟ್ಟಿಗಳನ್ನು ಪ್ರಾರಂಭಿಸಿ, ಬಡವರಿಗೆ, ತಂಗಳು ಮೊಸರನ್ನ ದಂತಹ ತಂಪಾದ ಸಾರಾಯಿ ಕೊಡಬೇಕೆಂದು ಸರ್ಕಾರಕ್ಕ ತಿಳಿಸ್ತೀನಿ. ಈ ಸರಾಯಿ ಮಾಡುವುದರಿಂದ ಬರುವ ದುಡ್ಡು, ಕಳ್ಳರ ಕಲ್ಯಾಣಕ್ಕ ಬಳಸಬೇಕೂ ಅಂತ ಒತ್ತಾಯ ಪಡಸ್ತೀನಿ. ಇಷ್ಟು ಮಾಡಲಿಕ್ಕೆ ಇಂಗ್ಲೀಷ್ ಯಾಕ ಬರಬೇಕು? ನಮ್ಮಪ್ಪಗ, ನಮ್ಮ ತಾತಗ, ಇಂಗ್ಲೀಷಿನ ಒಂದು ಅಕ್ಷರಾನೂ ಬರತಿರಲಿಲ್ಲ. ಆದರೂ, ನಮ್ಮ ಊರಾಗಿನ ಛಾವಡಿಯೊಳಗ ಕೂತು, ಪಂಚಾಯಿತಿ ನಡೆಸಿ, ಯಾವುದಾದರೂ ತೀರ್ಪು ಕೊಟ್ಟರ, ಯಾರಪ್ಪ ಬಂದರೂ ಅದನ್ನು ತಿರುವು-ಮುರುವು ಮಾಡಲಿಕ್ಕೆ ಆಗ್ತಿರಲಿಲ್ಲ...... ಹೂಂ, ಎಲ್ಲಾನೂ ಸರಿಯಾಗಿ ಕೇಳಿಸಿಕೊಂಡ್ರಿ ಹೌದಲ್ಲೊ—ಇನ್ನ ಹೇಳ್ರಿ—ಗಟ್ಟಿಯಾಗಿ ಕೂಗರಿ—ನಿಮ್ಮ ಓಟು ಯಾರಿಗೆ......"

ಯಾರಿಂದಲೇ ಆಗಲಿ, ಪ್ರತಿಕ್ರಿಯೆ ವ್ಯಕ್ತವಾಗಲಿಲ್ಲವಾದ್ದರಿಂದ ಕೋಪಗೊಂಡ ಆ ಆಸಾಮಿ, "ಒದರ್‍ರೊ, ನಮ್ಮ ಓಟು ಬಂಗಾರಯ್ಯನಿಗೆ—ಅಂತ" ಎಂದು ಹೇಳಿಕೊಟ್ಟು, ಸಾಹುಕಾರ ಮತ್ತೆ ಕೂಗಿದ—"ನಿಮ್ಮ ಓಟು ಯಾರಿಗೆ?"

"ಬಂಗಾರಯ್ಯನಿಗೆ"—ಅಲ್ಲಿ ಸೇರಿದವರೆಲ್ಲಾ ಒಕ್ಕೊರಲಿನಿಂದ ಕೂಗಿದರು. ಪುಲ್ಲಯ್ಯನೂ ಕೂಗಿದ. ಆ ವೇಳೆಗೆ ಈ ಸಾಹುಕಾರ ಹೇಳಿದ್ದರಲ್ಲಿ ಸ್ವಲ್ಪವಾದರೂ ಸತ್ಯಾಂಶ ಎದೆ ಎಂದು ಅವನಿಗನ್ನಿಸಿತ್ತು. ಆದರೂ...... ಸಾಹುಕಾರ ಕೊಟ್ಟ ಹಣ ಪಡೆದು, ಅಲ್ಲಿ ಸೇರಿದ್ದ ಜನರೆಲ್ಲ, ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಹೊರಟರು.

ದಿನದಿನಕ್ಕೆ ಚಳಿ ಹೆಚ್ಚಾದಂತೆ, ಚುನಾವಣೆಯ ಪ್ರಚಾರಕ್ಕೆ ಕಾವೇರಿತು. ಎಲ್ಲೆಡೆಯಲ್ಲೂ ಅದರ ಕೋಲಾಹಲವೇ ಆಗಿತ್ತು. ಬಂಗಾರಯ್ಯನ ಚುನಾವಣಾ ಕ್ಷೇತ್ರದಲ್ಲಿ ಮೂರು ಪಕ್ಷಗಳ ಉಮೇದುವಾರರು ಮತ್ತು ಒಬ್ಬ ಪಕ್ಷೇತರನೂ ಸ್ಪರ್ಧೆಗೆ ಇಳಿದಿದ್ದರು. ಬಂಗಾರಯ್ಯನೇ ಆ ಪಕ್ಷೇತರ ಉಮೇದುವಾರನಾಗಿದ್ದ. ಬಂಗಾರಯ್ಯ, ತನ್ನ ತಾತ ಮುತ್ತಾತ ಗಳಿಸಿಟ್ಟ ಆಸ್ತಿಯನ್ನು ಬಂಡವಾಳ ಮಾಡಿಕೊಂಡು ಗುತ್ತಿಗೆ ಕೆಲಸಗಳನ್ನು ಹಿಡಿದು, ಅಷ್ಟಿಷ್ಟು ಸಂಪಾದಿಸಿದ್ದ. ಯುದ್ಧದ ದಿನಗಳಲ್ಲಿ ಗುತ್ತಿಗೆ ಕೆಲಸಕ್ಕೆ ಇದ್ದ ಹೆಚ್ಚಿನ ಬೇಡಿಕೆಯಿಂದ ಬಂಗಾರಯ್ಯ ಸಾಕಷ್ಟು ದುಡ್ಡು ಮಾಡಿಕೊಂಡಿದ್ದ. ಈಚೆಗೆ ಹದಿನಾಲ್ಕು ಸಾವಿರ ಕೊಟ್ಟು ಕಾರು ಕೊಂಡಿದ್ದ. ಈಗ ಹತ್ತಿಪ್ಪತ್ತು ಸಾವಿರ ಕೈಬಿಟ್ಟು ಹೋದರೂ ಚಿಂತೆಯಿಲ್ಲ—ಸ್ವಜಾತೀಯರಲ್ಲಿ ಗೌರವ ಸಂಪಾದಿಸಿ ಕೀರ್ತಿ ಗಳಿಸಬೇಕೆಂಬ ಹುಚ್ಚು ವ್ಯಾಮೋಹಕ್ಕೆ ತುತ್ತಾಗಿದ್ದ. ಹಗಲಿರುಳು, ಶಾಸನಸಭೆಯ ಸದಸ್ಯನಾಗುವ ಕನಸುಕಾಣುತ್ತಿದ್ದ. "ನಾನು ಎಂ.ಎಲ್.ಎ.—ಆದರ, ಒಳ್ಳೆ ಸಾರಾಯಿ ಸಿಗೊ ಹಾಂಗ ಮಾಡ್ತೀನಿ. ಒಂದು ಊರಿನಿಂದ ಬರುವ ವರಮಾನವನ್ನು, ಅದೇ ಊರಿನ ಅಭಿವೃದ್ಧಿಗಾಗಿ, ಆ ಊರಿನ ಜನರ ಕಲ್ಯಾಣಕ್ಕಾಗಿ ಉಪಯೋಗಿಸ್ತೀನಿ. ನಾಲ್ಕು ತಿಂಗಳೊಳಗ ಈ ಅಭಾವ ಪರಿಸ್ಥಿತಿ ದೂರ ಮಾಡ್ತೀನಿ"—ಎಂದೆಲ್ಲ ಬಂಗಾರಯ್ಯ ತನ್ನ ಪ್ರಚಾರ ಕೈಗೊಂಡಿದ್ದ. ಆಯಾ ಊರಿನ ಜನರು, ತಮ್ಮೂರಿನ ಗಣ್ಯವ್ಯಕ್ತಿಗಳು ಹೇಳಿದಂತೆ ಕೇಳಿಕೊಂಡು, ಅವರು ಹೇಳಿದವರಿಗೆ ಮತ ನೀಡುವರೆಂಬುದು ಬಂಗಾರಯ್ಯನ ವಿಶ್ವಾಸವಾಗಿತ್ತು. ಅಂತಲೇ, ಊರಿನ ಹಿರಿಯರನ್ನು ಹಿಡಿದು, ಅವರಿಗೆ ಬೇಕಾದ್ದು ಕೊಟ್ಟರಾಯಿತು—ಅವರು ತನ್ನ ಪರವಾಗಿ ಪ್ರಚಾರ ಮಾಡುವರೆಂದು ಬಂಗಾರಯ್ಯ ನಂಬಿದ್ದ. ಅವನು, ತನ್ನ ಈ ನಂಬಿಕೆಗೆ ಅನುಗುಣವಾಗಿ, ಸುತ್ತಮುತ್ತಲಿನ ಹಳ್ಳಿಗಳ ಹಿರಿಯರನ್ನು ಕರೆಸಿ, ಅವರನ್ನು ಸಂತೋಷಗೊಳಿಸಿ, ತನ್ನ ಪರವಾಗಿ ಪ್ರಚಾರ ನಡೆಸುವಂತೆ ಬೇಡಿಕೊಂಡ. ಅಷ್ಟಕ್ಕೆ, ಹಳ್ಳಿಗಳಲ್ಲಿನ ಮತಗಳ ಪೈಕಿ ಕನಿಷ್ಠಪಕ್ಷ ನೂರಕ್ಕೆ ಎಪ್ಪತ್ತೈದಾದರೂ ತನಗೆ ಬರುವವೆಂದು ಬಂಗಾರಯ್ಯ ಎಣಿಕೆಹಾಕಿದ್ದ.

ಬಂಗಾರಯ್ಯನ ಎಲ್ಲಾ ಹುಳುಕುಗಳನ್ನು ಅರಿತ ಪ್ರತಿ–ಪಕ್ಷದವರು, ಅವನ ವಿರುದ್ಧ ಸಲ್ಲದ ಪ್ರಚಾರ ಕೈಗೊಂಡಿದ್ದರು. ಇದರ ಪರಿಣಾಮವಾಗಿ, ಸಮಾಜದಲ್ಲಿನ ಮಧ್ಯಮ

ವರ್ಗದವರು, ಬಂಗಾರಯ್ಯನೆಂದರೆ ಮೂಗುಮುರಿಯುವಂತಾಗಿತ್ತು. ಇನ್ನು ಮೇಲಿನ ವರ್ಗದವರು ಸಿರಿವಂತರು, ಬಂಗಾರಯ್ಯನನ್ನು ನೋಡಿ, ಅವನ ಮುಂದಲ್ಲದಿದ್ದರೂ, ಹಿಂದೆ, "ಇವನಿಗ್ಯಾಕ ಇದ್ದೀತು—ಇಲ್ಲದ ಹವ್ಯಾಸ"—ಎಂದು ನಗುತ್ತಿದ್ದರು. "ಇದ್ದುದ ನ್ನೆಲ್ಲಾ ಹೀಂಗ ಹಾಳುಮಾಡಿಕೊಳ್ತಾನ ಆತು"—ಎಂದೂ ಸಹ ಅವರು ತಮ್ಮತಮ್ಮಲ್ಲೆ ಆಡಿಕೊಳ್ಳುತ್ತಿದ್ದರು. ಬಂಗಾರಯ್ಯನ ಬುದ್ಧಿಯ ಮಟ್ಟವನ್ನು, ಅವನ ದಡ್ಡತನವನ್ನು ಎತ್ತಿ ತೋರಿಸುವ ಉದ್ದೇಶದಿಂದ, ಚಿತ್ರ-ವಿಚಿತ್ರವಾದ ಕತೆಗಳನ್ನು ಹರಡಲಾಗಿತ್ತು. ಕಾರು ಕೊಂಡ ಹೊಸದರಲ್ಲಿ, ಬಂಗಾರಯ್ಯ ಹಿಂದಿನ ಸೀಟಿನಲ್ಲಿ ಕುಳಿತಿದ್ದನಂತೆ; ಡ್ರೈವರು ಕಾರು ನಡೆಸುತ್ತಿದ್ದನಂತೆ. ಒಮ್ಮೆ ಓಡುತ್ತಿದ್ದ ಕಾರಿನಲ್ಲಿ ಗರರ್......ಗರರ್ —ಎಂಬ ಸಪ್ಪಳ ಬಂದಿತಂತೆ...... ಬಂಗಾರಯ್ಯ ಗಾಬರಿಯಾಗಿ—"ಅದೇನು-ಅದೇನು"—ಎಂದು ಕೂಗಿಕೊಂಡಾಗ, "ಏನಿಲ್ರಿ ಧಣೇರ. ಕಾರು ಹೊಸಾದದ. ಗೇರು ಹಾಕಿದ್ರ ಹಾಂಗ ಸಪ್ಪಳಾಗ್ತದ"—ಎಂದು ಡ್ರೈವರ ವಿವರಿಸಿದನಂತೆ. ಬಂಗಾರಯ್ಯ ತಕ್ಷಣ, "ಹಾಂಗಾದ್ರ ಇಲ್ಲಿ ಯಾಕ ಹಾಕಿದಿ. ಮನಿಯಿಂದ ಹೊರಟಾಗs ಯಾಕ ಹಾಕಲಿಲ್ಲ."—ಎಂದು ಗದರಿಕೊಂಡನಂತೆ. ಒಂದು ಸಲ, ಡ್ರೈವರ, ಕಾರನ್ನು ನಡುರಸ್ತೆ ಯಲ್ಲಿ ನಿಲ್ಲಿಸಿದನಂತೆ. ಹಿಂದಿನ ಸೀಟಿನಲ್ಲಿ ಕುಳಿತಿದ್ದ ಬಂಗಾರಯ್ಯ, "ಯಾಕ ನಿಂತಿ"—ಎಂದು ಕೇಳಿದ್ದಕ್ಕೆ, ಡ್ರೈವರ್, "ರಸ್ತೆದೊಳಗ ದೊಡ್ಡ ಕಲ್ಲು ಬಿದ್ದದರಿ ಯಜಮಾನ್ರ"—ಎಂದು ಹೇಳಿದನಂತೆ. ಬಂಗಾರಯ್ಯ, "ಹಾರ್ನ್ ಮಾಡು, ತಾನs ಬಗಲಿಗೆ ಸರೀತದ"—ಎಂದನಂತೆ. ಪಟ್ಟಣದಲ್ಲಿನ ಪೇಟೆಗೆ ಹೋಗಿ, ತನ್ನ ಚುನಾವಣಾ ಪ್ರಚಾರ ಪ್ರಾರಂಭಿಸಿ, ತಾನು ಎಂ.ಎಲ್.ಎ. ಆದಲ್ಲಿ, ಕೊಳಾಯಿಗಳಲ್ಲಿ ಸಾರಾಯಿ ಬರುವಂತೆ ಮಾಡ್ತೀನಿ—ಎಂದು ಹೇಳಿದನಂತೆ. ಅಸೆಂಬ್ಲಿಯಲ್ಲಿ ತನಗೆ ಮಾತನಾಡಲು ಬರದಿದ್ದಲ್ಲಿ, ತನ್ನ ಪರವಾಗಿ ವಾದಿಸಲು, ದುಡ್ಡು ಕೊಟ್ಟು ಊರಿನ ಹಿರಿಯ ವಕೀಲರನ್ನು ನೇಮಿಸ್ತೀನಿ—ಎಂದು ಹೇಳಿದ್ದನಂತೆ.

ಪ್ರತಿಪಕ್ಷದವರು, ಇಂತಹ ಕಟ್ಟುಕತೆಗಳನ್ನು ಪ್ರಚಾರಮಾಡಿದಾಗ್ಯೂ, ಬಂಗಾರಯ್ಯ ಹಿಂಜರಿಯಲಿಲ್ಲ. "ನನಗ, ಬಡವರ, ಶ್ರಮಜೀವಿಗಳ ಬೆಂಬಲ ಅದ. ಈ ಚುನಾವಣೆ ಯೊಳಗೆ ನಾನು ಗೆದ್ದಿದ್ದೆ ಇದ್ದರ ಮತ್ತು ಯಾರು ಗೆದಿತಾರೊ ನೋಡ್ತೀನಿ"—ಎಂದು ಮೀಸೆ ತಿರುವಿಕೊಳ್ಳುತ್ತಿದ್ದ ಬಂಗಾರಯ್ಯ, ದುಡ್ಡನ್ನು ನೀರಿನಂತೆ ಖರ್ಚು ಮಾಡಲು ಪ್ರಾರಂಭಿಸಿದ್ದ. ಅಂದು ಸಂಜೆ, ತನ್ನ ಪರವಾಗಿ ಪ್ರಚಾರ ಮಾಡಿ ಹಿಂದಿರುಗಿದ ಜನರಿಗೆ ಹೊಟ್ಟೆತುಂಬ ತಿಂಡಿಕೊಟ್ಟ.

"ತಿನ್ನರೊ, ಹೊಟ್ಟೆತುಂಬ ತಿನ್ನರೊ. ನಿಮ್ಮ ಕಷ್ಟ-ಸುಖಗಳೆಲ್ಲ ನನಗ ಗೊತ್ತು"—ಎಂದು ಹೇಳಿದ.

ಎಲ್ಲರೂ ಹೊಟ್ಟೆತುಂಬ ತಿಂದುಂಡು ಕೈತೊಳೆದು ಬಂದಾಗ, "ಇವತ್ತ ರಾತ್ರಿ, ಆ ಕಾಂಗ್ರೆಸ್ಸಿನವರು ಮೆರವಣಿಗಿ ಹೊರಡಸ್ತಾರಂತ. ನೀವು ಈಗ ಇಲ್ಲೆ ಇದ್ದು, ಅವರ

ಮೆರವಣಿಗೆಗೆ ಭಂಗ ತರಬೇಕು. ಅವರಿಗಿಂತ ಜೋರಾಗಿ ಘೋಷಣೆಗಳನ್ನು ಕೂಗ ಬೇಕು—ಇದರಾಗ ಛಲೊ ಕೆಲಸ ಮಾಡಿದವರಿಗೆ, ತಲಾ ಎರಡೆರಡು ರೂಪಾಯಿ ಕೊಡ್ತೀನಿ"—ಎಂದು ಆಸೆ ತೋರಿಸಿದ.

ಅಲ್ಲಿದ್ದವರೆಲ್ಲರೂ, ರಾತ್ರಿಯ ವರೆಗೂ ಅಲ್ಲೇ ಇದ್ದು, ಕಾಂಗ್ರೆಸ್ಸಿನವರ ಮೆರವಣಿಗೆಗೆ ಎದುರಾಗಿ ಮೆರವಣಿಗೆ ತೆಗೆಯಲು ಒಪ್ಪಿಕೊಂಡರು. ಪುಲ್ಲಯ್ಯ, ಅದೆಷ್ಟೊ ದಿನಗಳ ಬಳಿಕ ಹೊಟ್ಟೆತುಂಬ ಉಂಡಿದ್ದ. "ಈ ಯಜಮಾನಗ, ನಮ್ಮ ಸುಖ–ದುಃಖ ಗೊತ್ತಿದ್ದಾಂಗ ಅದ. ಈತನಂತಹವರು ಸರ್ಕಾರದೊಳಗಿದ್ದರ, ನಮ್ಮಂತಹವರ ಕಷ್ಟಗಳು ಪರಿಹಾರ ಆಗ್ತಾವೇನು? ಮೀಟಿಂಗ್–ಮೀಟಿಂಗ್—ಅಂತ ಆ ಪುಢಾರಿಯ ಸಭೆಗೆ ನಾಲ್ಕು ದಿನ ಹೋಗಿಬಂದೆ. ಆದರೂ ಮಹಾರಾಯ ಒಂದು ದಿನಾನಾದರೂ ಒಂದು ಬಟ್ಟಲು ಗಂಜಿ ಕೂಡ ಹಾಕಸಲಿಲ್ಲ......." ಎಂದೆಲ್ಲ ಯೋಚಿಸುತ್ತಿದ್ದ ಕುಳಿತಿದ್ದ ಪುಲ್ಲಯ್ಯ.

ಅಂದು ರಾತ್ರಿ, ಪೆಟ್ರೋಮ್ಯಾಕ್ಸ್‌ಗಳ ಬೆಳಕಿನಲ್ಲಿ, ದೊಡ್ಡ ಮೆರವಣಿಗೆ ಹೊರಟಿತ್ತು. ಬಾಜ–ಬಜಂತ್ರಿಯ ಜೊತೆಗೆ, ನೂರಾರು ಕಂಠಗಳು, ಘೋಷಣೆಗಳನ್ನು ಕೂಗುತ್ತಿದ್ದವು. ಅದಕ್ಕೆ ಎದುರಾಗಿ ಮತ್ತೊಂದು ಮೆರವಣಿಗೆ ಬಂತು. ಇವೆರಡೇ ಸಾಲದೆಂಬಂತೆ, ಮೂರನೆಯ ಒಂದು ಮೆರವಣಿಗೆಯೂ ಅದೇ ಸ್ಥಳಕ್ಕೆ ಬಂದಿತು. ಪುಲ್ಲಯ್ಯನಿದ್ದ ಗುಂಪಿಗೆ ಎದುರಾಗಿದ್ದ ಮೆರವಣಿಗೆ, ಆತ ಈ ಮುಂಚೆ ನಾಲ್ಕು ದಿನ ಹೋಗಿಬಂದ ಪಕ್ಷದ ಮೆರವಣಿಗೆಯಾಗಿತ್ತು. ಅದರಲ್ಲಿ, ಪಕ್ಕದ ಗುಡಿಸಲಿನ ಜೇಬುಗಳ್ಳನಿದ್ದ. ತನ್ನನ್ನು ಮೊದಲ ಸಲ ಚುನಾವಣಾ ಸಭೆಗೆ ಕರೆದೊಯ್ದ ಹಳೆಯ ಸ್ನೇಹಿತ ರಾಮಣ್ಣನೂ ಇದ್ದ. ಅವರನ್ನು ನೋಡಿ, ಮೊದಲು ಪುಲ್ಲಯ್ಯ ನಾಚಿಕೊಂಡ. ಮರುಘಳಿಗೆಯಲ್ಲೆ, "ನನ್ನ ಹೊಟ್ಟೆ ಮುಂದ ಯಾವ ಪಕ್ಷವೂ ನಿಲ್ಲಲಾರದು. ನಾಳೆ ನಾನು ಉಪವಾಸ ಬಿದ್ದರ, ಇವರೇನು ನನಗ ಅನ್ನ ಹಾಕ್ತಾರೇನು?"—ಎಂದುಕೊಂಡು, ಧೈರ್ಯವಾಗಿ ಮುನ್ನಡೆದ. ಮೂರು ಮೆರವಣಿಗೆಗಳು ಒಂದೆಡೆ ಸೇರಿದ್ದರಿಂದ ಗದ್ದಲ ಹೆಚ್ಚಾಗಿತ್ತು. ಒಬ್ಬರ ಮಾತು, ಇನ್ನೊಬ್ಬರಿಗೆ ಕೇಳಿಸುತ್ತಿರಲಿಲ್ಲ. ಕೇಕೆ ಹಾಕುವುದು, ಧ್ವನಿವರ್ಧಕಗಳ ಮೂಲಕ ಘೋಷಣೆಗಳನ್ನು ಕೂಗುವುದು ಹೆಚ್ಚಾಯಿತು. ಒಂದು ಗುಂಪಿನ ಜನರು, ಇನ್ನೊಂದು ಗುಂಪಿನ ಜನರ ಮೇಲೆ ಅವಾಚ್ಯ ಶಬ್ದಗಳ ಬಾಣ ಬಿಟ್ಟರು. ಇದ್ದಕ್ಕಿದ್ದಂತೆ ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಅಲ್ಲಿದ್ದ ಕೆಲವರು, ಪರಿಸ್ಥಿತಿ ಹತೋಟಿ ಮೀರದಂತೆ ತಡೆಗಟ್ಟಲು ಪ್ರಯತ್ನಿಸಿದರು. ಆದರೆ, ನಿಮಿಷ–ನಿಮಿಷಕ್ಕೆ ಪರಿಸ್ಥಿತಿ ಹದಗೆಟ್ಟು, ಮಾತುಗಳ ಚಕಮಕಿ ನಿಂತು, ಕೈಗೆ ಕೈ ಹತ್ತಿತು. ರಸ್ತೆ ದುರುಸ್ತಿಗಾಗಿ ತಂದು ಹಾಕಲಾಗಿದ್ದ ಕಲ್ಲುಗಳನ್ನು ಕೈಗೆತ್ತಿಕೊಂಡರು...... ಪುಲ್ಲಯ್ಯನ ಬಳಿ ಕಲ್ಲುಗಳು ಬಂದುಬಿದ್ದಾಗ, ಆತನ ಪಿತ್ತ ನೆತ್ತಿಗೇರಿ, ಆತನೂ ಕಲ್ಲು ಎತ್ತಿಕೊಂಡ. ಆದರೆ, ಅದನ್ನು ಎಸೆಯಲು ಅವನ ಕೈ ಏಳಲಿಲ್ಲ. ನೀಲಿಯ ಮುಖ ಕಣ್ಣುಮುಂದೆ ಬಂದು, ಕೈಯಲ್ಲಿದ್ದ ಕಲ್ಲನ್ನು ಕೆಳಗೆ ಹಾಕಿದ.

ಅಷ್ಟರಲ್ಲಿ, ಪೋಲೀಸರು ಬರುತ್ತಿದ್ದಾರೆಂಬ ಸುದ್ದಿ ಹರಡಿತು...... ಅದನ್ನು ಕೇಳಿದ ಕೆಲವರು, ಅಲ್ಲಿಂದ ಪಲಾಯನ ಮಾಡಿದರು. ಒಂದೆಡೆ ಸೇರಿ ಕೋಲಾಹಲವನ್ನು ಎಬ್ಬಿಸಿದ್ದ ಮೂರು ಗುಂಪುಗಳು, ಮೂರು ದಿಕ್ಕು ಹಿಡಿದವು.

ಅಲ್ಲಿಯೇ ಇದ್ದ ಹುಚ್ಚ ಇದನ್ನೆಲ್ಲ ಅರಳಿದ ಕಣ್ಣುಗಳಿಂದ ನೋಡುತ್ತಲೇ ಇದ್ದ. ಎಲ್ಲವನ್ನೂ ನೋಡಿ, ರಸ್ತೆಯ ಒಂದು ಪಕ್ಕದಲ್ಲಿ ಕುಳಿತು, ಪಕಪಕನೆ ನಗತೊಡಗಿದ. ಆ ಮೇಲೆ, ತಾನೇನೊ ಮಹಾ ಹೇಳುವವನಂತೆ, "ನೋಡಿದಿಲ್ಲೊ, ಈ ಹುಚ್ಚರು ಹ್ಯಾಂಗ ತಮ್ಮತಮ್ಮೊಳಗ ಕಚ್ಚಾಡಿಕೊಳ್ತಾವ ಅಂತ...... ಇದೆಲ್ಲಾ ಯಾಕ ಮಾಡ್ತಾರs ಅಂತಿ ಏನು?—ಪ್ರಜೆಗಳನ್ನ ಸುಖವಾಗಿ ಇಡಬಲ್ಲ ಸರ್ಕಾರದ ರಚನೆಗಾಗಿ. ಒಬ್ಬರಿಗೊಬ್ಬರು ಮರ್ಯಾದೆ ಕೊಟ್ಟು ಮಾತನಾಡಲು ಬಾರದವರು, ಅಸೂಯೆಯ ಹುಳುವಿನಿಂದ ಮಾನವತ್ವವನ್ನು ಕಳೆದುಕೊಂಡವರು—ಸರ್ಕಾರ ರಚಿಸ್ತಾರಂತ, ದೇಶ ಆಳ್ತಾರಂತ...... ಇಂತಹ ಮನುಷ್ಯರಿರುವ, ಇಂತಹ ಪ್ರಜೆಗಳಿರುವ ದೇಶ, ನಾಶ ವಾಗದ ಮತ್ತೇನಾಗ್ತದ"—ಎಂದು ಮಾತನಾಡಿಕೊಳ್ಳುತ್ತಾ ಎದ್ದು ನಿಂತ.

ಆಮೇಲೆ, "ನಾನು ಹಾಳಾದದ್ದು ಯಾಕಂತ ನಿನಗ ಗೊತ್ತೇನು? ಇತರರಲ್ಲಿನ ಒಳ್ಳೆಯತನವನ್ನ ನಾನು ಕಂಡುಕೊಳ್ಳದಾದೆ. ಪತಿತರಾದವರನ್ನ, ಸದ್‌ಭಕ್ತರನ್ನ ಪ್ರೀತಿಸುವ—ಆದರದಿಂದ ಕಾಣುವ ಒಳ್ಳೆಯತನ ನನ್ನಲ್ಲಿರಲಿಲ್ಲ. ಎಲ್ಲಾನೂ ನನ್ನದೆಂಬ ಅಹಂಕಾರದಿಂದ, ಸೊಕ್ಕಿನಿಂದ ಬಾಳಿ, ಈಗ ಈ ದುರ್ಗತಿ ತಂದುಕೊಂಡೆ. ಈ ಪ್ರಪಂಚ ದಾಗ ದಿನದಿನಕ್ಕ ಕಷ್ಟ-ಕಾರ್ಪಣ್ಯಗಳು ಹೆಚ್ಚಾಗುತ್ತಿವೆ. ಯಾಕಂತ ಗೊತ್ತೇನು ನಿನಗ? ಎಲ್ಲಾನೂ ನನ್ನದು ಎಂಬ ಮೋಹದೊಳಗ, ಮನುಷ್ಯ ತನ್ನ ಮಾನವತ್ವವನ್ನು ಕಳೆದು ಕೊಂಡಾನ. ಈ ಮಾಯೆ, ಈ ವ್ಯಾಮೋಹವನ್ನು ಯಾರು ದೂರಮಾಡಬಲ್ಲರೊ, ಅವರೇ ದೇಶದಲ್ಲಿ ರಾಮರಾಜ್ಯವನ್ನು ಸ್ಥಾಪಿಸಬಲ್ಲರು. ಮನುಷ್ಯರಲ್ಲಿ ಈ ಮಾಯೆ, ಈ ವ್ಯಾಮೋಹ, ದುರಾಶೆಯ ರೂಪದಲ್ಲಿ ಮನೆಮಾಡಿಕೊಂಡಿದೆ. ಕುದುರೆಗೆ ಲಗಾಮು ಹಾಕುವಂತೆ, ಸರ್ಕಾರ ತನ್ನ ಪ್ರಜೆಗಳ ಈ ದುರಾಶೆಗಳಿಗೆ ಲಗಾಮು ಹಾಕದೆ ಹೋದಲ್ಲಿ, ಪ್ರಜೆಗಳು ಹುಚ್ಚೆದ್ದು ಕುಣೀತಾರ. ಆದರ, ಸರ್ಕಾರವನ್ನು ನಡೆಸುವವರು ಸರ್ಕಾರದಲ್ಲಿ ಇರುವವರು, ಲಂಗುಲಗಾಮಿಲ್ಲದ ಕುದುರೆಯ ಹಾಗೆ ವರ್ತಿಸಿದಲ್ಲಿ ಆಗೇ ಹೋಯಿತು. ಸರ್ಕಾರದ ಸಾರಥಿ, ನ್ಯಾಯದೃಷ್ಟಿಯನ್ನು ಹೊಂದಿರುವುದರ ಜೊತೆಗೆ, ಬುದ್ಧಿಮತ್ತೆಯನ್ನೂ, ವಿವೇಚನೆಯನ್ನೂ ಹೊಂದಿರುವುದು ಅಗತ್ಯ. ಒಬ್ಬನ ಬುದ್ಧಿಶಕ್ತಿ, ಒಬ್ಬನ ಮೇಧಾವಿತನ, ಕೋಟಿಕೋಟಿ ಜನರಿಗೆ ಸುಖ ನೀಡಬಲ್ಲದು. ಹಿಂದಿನ ಕಾಲದಲ್ಲಿ ರಾಜರ ನ್ಯಾಯದೃಷ್ಟಿ, ಮಂತ್ರಿಗಳ ವಿವೇಚನಾಶಕ್ತಿ, ಎರಡೂ ಒಂದಕ್ಕೊಂದು ಪೂರಕವಾಗಿದ್ದುವು. ಆದ್ದರಿಂದಲೇ, ಹಿಂದಿನ ಕಾಲದಲ್ಲಿ ಜನರು ಹಾಯಾಗಿದ್ದರು. ಮನುಷ್ಯರಾಗಿ ಹುಟ್ಟಿದವರೆಲ್ಲರೂ ಒಂದೇ, ಎಲ್ಲರೂ ಸಮಾನರೂ— ಎಂಬೊ ಹುಚ್ಚು ಅಹಂಭಾವವನ್ನು ಜನರಲ್ಲಿ ಮೂಡಿಸಿ, ನಂತರ ಅವರನ್ನು ನಿರಾಶೆ

ಗೊಳಿಸಿ, ಅವರನ್ನು ಪತನಮಾಡುವುದು ನನ್ನ ದೃಷ್ಟಿಯಲ್ಲಿ ಘೋರಾತಿಘೋರವಾದ ಸಂಗತಿಯಾಗಿದೆ—ಮಗು, ನೀನು ತುಂಬ ವಿಶ್ವಾಸವುಳ್ಳ ಜಾತಿಗೆ ಸೇರಿದವನು. ಅಂತಲೇ ನಿನ್ನ ಮುಂದ ಇದನ್ನೆಲ್ಲಾ ಹೇಳ್ತೀನಿ...... ತಿಳೀತs......"—ಎಂದು ಹುಚ್ಚ ಹೇಳಿದಾಗ, ನಾಯಿಕುನ್ನಿ ಕುಂಯಿಗುಟ್ಟಿತು.

ಹುಚ್ಚ ತನ್ನಷ್ಟಕ್ಕೆ ತಾನು ನಗಹತ್ತಿದ. ಅಷ್ಟರಲ್ಲಿ ಯಾರೊ ಅಳುತ್ತಿರುವುದು ಅವನಿಗೆ ಕೇಳಿಸಿತು. ನಾಯಿಮರಿ ಈಗ ಸ್ವಲ್ಪ ದೊಡ್ಡದಾಗಿದ್ದರೂ, ಕೆಳಗೆ ಬಿಟ್ಟಲ್ಲಿ ಯಾರಾದರೂ ಅದನ್ನು ಎತ್ತಿಕೊಂಡು ಹೋಗಬಹುದೆಂಬ ಭಯದಿಂದ, ಅದನ್ನು ಕಂಕುಳಲ್ಲಿಟ್ಟುಕೊಂಡೆ, ಹುಚ್ಚ ಅಳುವಿನ ಧ್ವನಿ ಬಂದ ಕಡೆಗೆ ಹೆಜ್ಜೆಹಾಕಿದ. ಅಲ್ಲೊಂದು ಗುಡಿಸಲು. ಗುಡಿಸಲಿನಲ್ಲಿ ಒಂದು ಶವ. ಆ ಶವದ ಮೇಲೆ ಇಬ್ಬರು ಮಕ್ಕಳು ಮತ್ತು ಸತ್ತವನ ಹೆಂಡತಿ ಬಿದ್ದು ಅಳುತ್ತಿದ್ದರು. ಅವರ ಗೋಳನ್ನು ನೋಡಲು ಆಗದೆ, ಅಕ್ಕಪಕ್ಕದ ಮನೆಯವರೂ ಸಹ ಕಣ್ಣೀರು ಸುರಿಸುತ್ತಾ ನಿಂತಿದ್ದರು.

ಹುಚ್ಚ, ಅಲ್ಲಿಯೇ ನಿಂತು ನೋಡಿದ. "ಸತ್ತೆಯಾ ತಮ್ಮಾ"—ಎಂದು ಹುಚ್ಚ ಅಂದಾಗ, ಅಲ್ಲಿದ್ದವರೆಲ್ಲ ಗೌರವದಿಂದ ಅವನ ಮುಖವನ್ನೆ ನೋಡತೊಡಗಿದರು. ಅವನ ಬೆಳೆದ ಗಡ್ಡ, ನೆರೆತ ಕೂದಲು, ಅವನ ಮುಖದ ಮೇಲಿನ ವರ್ಚಸ್ಸು ನೋಡಿ, ಅಲ್ಲಿದ್ದವರಲ್ಲಿ ಅವನ ಬಗ್ಗೆ ಒಂದು ತೆರನಾದ ಗೌರವ ಮೂಡಿತ್ತು. ಹುಚ್ಚ ಇನ್ನೂ ಸ್ವಲ್ಪ ಮುಂದೆ ಹೋಗಿ:

"ಯಾಕ ಇಷ್ಟು ಗೋಳಾಡ್ತೀರಿ. ಇಲ್ಲಿ ನೋಡ್ರಿ"—ಎಂದು, ಟಾರು ರಸ್ತೆಯ ಮೇಲೆ, ಇಟ್ಟಿಗೆಯ ಒಂದು ಚೂರಿನಿಂದ ತ್ರಿಕೋಣ ಬರೆದ. ಆ ತ್ರಿಕೋಣದ ಮೂರು ಭುಜಗಳ ಮೇಲೆ ನಾಲ್ಕು ಚೌಕಗಳನ್ನು ಗೀಚಿದ. ಆ ಮೇಲೆ, ಆ ಚೌಕಗಳನ್ನು ತೋರಿಸುತ್ತಾ, "ಇದು ಹೃದಯ, ಇದು ಆತ್ಮ, ಇವೆರಡೂ ಕಲೆತಾಗ ಪರಮಾತ್ಮ. ಇವೆರಡೂ ಕಲೆಯದಿದ್ದರ, ಆತ್ಮ ಪರಮಾತ್ಮನಿಗೆ ಸಮಾನವಾಗಲಾರದು. ಮನಸ್ಸನ್ನೂ ಆತ್ಮವನ್ನೂ, ಒಂದೆಡೆ ಏಕೀಕೃತಗೊಳಿಸಲಾಗದ—ಸತ್ತುಹೋದ. ಆತ್ಮ, ಮನಸ್ಸಿನೊಡನೆ, ಹೃದಯದೊಡನೆ ಏಕೀಕೃತಗೊಳ್ಳುವ ವರೆಗೆ, ಈತ ಹೀಗೆಯೇ ಹುಟ್ಟತಾನ—ಮತ್ತs ಸಾಯ್ತಾನ. ಈ ಹುಟ್ಟು-ಸಾವು ನಡದೆ ಇರ್ತದ"—ಎಂದು ಹೇಳಿ ಸ್ವಲ್ಪ ಹೊತ್ತು ಮೌನವಾಗಿ ಕುಳಿತ. ಆ ಮೇಲೆ ಎದ್ದು, ಅಲ್ಲಿಯೇ ಸ್ವಲ್ಪ ಹೊತ್ತು ಮೌನವಾಗಿ ಸುತ್ತಾಡಿದ. ಹುಚ್ಚ, ಇನ್ನೂ ಏನನ್ನಾದರೂ ಹೇಳಬಹುದು, ಏನಾದರೂ ಮಹಾತ್ಮೆಯನ್ನು ತೋರಿಸಬಹುದೆಂದು ಅಲ್ಲಿ ಸೇರಿದ್ದ ಜನರು ನಿರೀಕ್ಷಿಸಿದ್ದರು. ಆದರೆ, ಆತ, ಯಾವ ಮಾತೂ ಆಡದೆ, ಅಲ್ಲಿಂದ ಹೊರಟುಹೋದ.

## [ 33 ]

ಚುನಾವಣೆಯ ಸಡಗರ ಮುಗಿಯಿತು. ಅದರೊಡನೆ, ಪುಲ್ಲಯ್ಯನ ಕೆಲವು ದಿನಗಳ ಸೌಖ್ಯವೂ ಕೊನೆಗೊಂಡಿತು. ಬಂಗಾರಯ್ಯ ಚುನಾವಣೆಯಲ್ಲಿ ಸೋತರೂ, "ಹೊಟ್ಟೆಗಿಲ್ಲದ ಬಡವರ ಮೇಲೆ ಆತನಿಗೆ ಅಪಾರ ಕರುಣೆ ಅದ. ಆತ ಸಹಾಯ ಮಾಡ್ತಾನ"—ಎಂದುಕೊಂಡು, ಪುಲ್ಲಯ್ಯ ಆತನ ಬೆನ್ನು ಬಿಡಲಿಲ್ಲ. ಓಟು ಕೊಡುವುದಾಗಿ ದುಡ್ಡು ಪಡೆದವರು ಮೋಸಮಾಡಿದರೆಂದು ಕೋಪಗೊಂಡಿದ್ದ ಬಂಗಾರಯ್ಯ, ಪುಲ್ಲಯ್ಯನನ್ನು ಮನುಷ್ಯನಂತೆ ಕಾಣದೆ, ನಾಯಿಯನ್ನು ಹೊರಗಟ್ಟುವಂತೆ ತನ್ನ ಮನೆಯಿಂದ ಹೊರ ಹಾಕಿದ. ನಿರ್ವಾಹವಿಲ್ಲದೆ, "ಕಾಲ ಕೆಟ್ಟಿದೆ"—ಎಂದುಕೊಂಡು ಪುಲ್ಲಯ್ಯ ಮನೆಸೇರಿದ.

ಈ ನಡುವೆ ಕೈಗೆ ಬಂದ ದುಡ್ಡು, ಅಲ್ಲಿಲ್ಲಿ ಪಡೆಯಲಾಗಿದ್ದ ಸಾಲಗಳನ್ನು ತೀರಿಸಿ, ಎರಡೊಪ್ಪತ್ತು ಗಂಜಿ ಕುಡಿಯುವುದಕ್ಕೆ ಸಾಕಾಗಿತ್ತು. ನೀಲಿ, ಹಾಗೂ–ಹೀಗೂ ಮಾಡಿ ಉಳಿಸಿದ ಹಣದಲ್ಲಿ, ಮಗಳಿಗೆ ಎರಡು ಗೌನು, ಮಲ್ಲೇಶಿಗೆ ಎರಡು ಚಿಡ್ಡಿ–ಅಂಗಿಗಳನ್ನು ಹೊಲಿಸಿಯಾಗಿತ್ತು. ಪುಲ್ಲಯ್ಯನಿಗೆ ಇದೇ ರೀತಿ, ಒಂದಲ್ಲ ಒಂದು ಕೆಲಸ ದೊರೆತಲ್ಲಿ, ಬಂದುದರಲ್ಲಿ ದುಡ್ಡು ಉಳಿಸಿ ಒಂದು ರಾಟೆ ಕೊಳ್ಳಬೇಕೆಂದು ನೀಲಿ ಲೆಕ್ಕಹಾಕಿದ್ದಳು. ಆ ರಾಟೆಯ ಮೇಲೆ ಸಂಪಾದನೆ ಮಾಡಿಕೊಂಡು, ಒಂದು ಎಮ್ಮೆಯನ್ನು ಕೊಂಡಲ್ಲಿ, ನ್ಯಾಯವಾದ ರೀತಿಯಲ್ಲಿ ಹಾಲು ಮಾರಿ ಜೀವನ ಸಾಗಿಸಬಹುದೆಂದು ಅವಳು ಅಂದುಕೊಂಡಿದ್ದಳು. ಆದರೆ, ಅವಳ ಈ ಆಶೆಗಳೆಲ್ಲಾ, ನಿರಾಶೆಯಾದವು.

ಬುಟ್ಟಿ ಹಿಡಿದುಕೊಂಡು, ಮಜೂರಿಗಾಗಿ ಬಜಾರಿಗೆ ಹೋಗಲು ಪುಲ್ಲಯ್ಯನಿಗೆ ನಾಚಿಕೆಯಾಯಿತು. ಈ ಮಧ್ಯೆ, ಕೆಲವು ದಿನಗಳ ಮಟ್ಟಿಗಾದರೂ ಹೊಟ್ಟೆ ತುಂಬ ಆಹಾರ ಸಿಕ್ಕಿದ್ದರಿಂದ, ಪುಲ್ಲಯ್ಯನ ಆರೋಗ್ಯ ಸುಧಾರಿಸಿತ್ತು. ಈಗ, ತನ್ನಂತಹವರು ಕೂಲಿ ಕೆಲಸಕ್ಕಾಗಿ ಬಜಾರಿನಲ್ಲಿ ಕಾದುಕುಳಿತುಕೊಳ್ಳುವುದು ಸಾಧುವಲ್ಲವೆಂಬುದು ಅವನ ವಿಶ್ವಾಸವಾಗಿತ್ತು. ಎರಡು ದಿನ, ಎಲ್ಲಿಯಾದರೂ ಕೆಲಸ ಸಿಗಬಹುದೆಂಬ ಆಶೆಯಿಂದ ಊರೆಲ್ಲಾ ಸುತ್ತಾಡಿದ. ಅದರಲ್ಲಿ ಒಂದು ದಿನ, ಸ್ಟೇಷನ್ನಿನಿಂದ ಮೂಟೆ ಹೊತ್ತು ಎಂಟಾಣೆ ಸಂಪಾದಿಸಿದ. ಆ ಮೇಲೆ, ಮೊದಲಿನ ಮಾಮೂಲು ಪರಿಸ್ಥಿತಿಯೇ ಏರ್ಪಟ್ಟಿತ್ತು. ಮುಂದಿನ ಗತಿ ಏನೆಂಬ ವಿಚಾರ, ಈಗ ಮತ್ತೆ ಅವನನ್ನು ಕಾಡಹತ್ತಿತು.

ಒಂದು ದಿನ, ಮನಸ್ಸನ್ನು ಕಲ್ಲುಮಾಡಿಕೊಂಡು, ಬುಟ್ಟಿ ಹಿಡಿದು ಬಜಾರಿಗೆ ಹೋದ. ಅವನು ಮತ್ತೆ ಬಂದನೆಂದು, ಅಲ್ಲಿದ್ದ ಹುಡುಗರು ಒಟ್ಟಿಗೆ ಸೇರಿ, ಅವನನ್ನು ಪೀಡಿಸ ಹತ್ತಿದರು. ಹುಚ್ಚ–ಹುಚ್ಚ—ಎಂದು ಗೋಳುಹುಯ್ದು, ಹಿಂದಿನಿಂದ ಬಂದು ಕೂದಲು ಹಿಡಿದೆಳೆದು ಗದ್ದಲ ಮಾಡಿದರು. ಬಾಯಿಗೆ ಬಂದಂತೆ ಬಯ್ದರು. ಪುಲ್ಲಯ್ಯನಿಗೆ ಇದನ್ನು ಭರಿಸಲಾಗಲಿಲ್ಲ. ಅಲ್ಲಿಂದೆದ್ದು ಬಂದುಬಿಟ್ಟ.

ಮನೆಯಲ್ಲಿ ಮೊದಲಿನ ಪರಿಸ್ಥಿತಿ ತಲೆದೋರಿತ್ತು. ಹುಡುಗರು ಹಸಿವಿನಿಂದ ಕಿರಿಕಿರಿ

ಮಾಡಹತ್ತಿದ್ದರು. ಒಂದು ರಾತ್ರಿ, ಪುಲ್ಲಯ್ಯ ಗುಡಿಸಲಿನ ಮುಂದಿನ ಅಂಗಳದಲ್ಲಿ ಮಲಗಿದ್ದ. ಮಲ್ಲೇಶಿ ಹಸಿವು—ಎಂದು ಅತ್ತು ಅತ್ತು ನಿದ್ರೆಹೋಗಿದ್ದ. ಎಲ್ಲವೂ ಸ್ತಬ್ಧವಾಗಿದ್ದಾಗ, ರೈಲು, ಕಬ್ಬಿಣದ ಹಳಿಗಳ ಮೇಲೆ ಕರ್ಕಶ ಸೊಪ್ಪಳಮಾಡುತ್ತಾ ಹೋಯಿತು. ಅದರ ಜೊತೆಗೆ, ಪುಲ್ಲಯ್ಯನ ಎದೆಯ ಮೇಲೆ ಗರಗಸ ಆಡಿಸಿದಂತಾಯಿತು. "ನನ್ನ ಬದುಕು ಇಂತಹ ಹೀನ ಸ್ಥಿತಿಗೆ ಬಂತ. ನಮ್ಮಪ್ಪ ಘನವಾಗಿ ಬದುಕಿ, ನಾಲ್ಕು ಜನರ ಮರ್ಯಾದೆ ಸಂಪಾದಿಸಿಕೊಂಡು, ದೊಡ್ಡ ಮನುಷ್ಯನ ಹಾಂಗ ಸತ್ತ—ನನ್ನ ಹೆಣ್ತಿ ಒಳ್ಳೆಯವಳಾದರೂ, ನನಗ ಹೊಟ್ಟೆತುಂಬ ಗಂಜಿ ಹಾಕಲಾರಳು...... ಈ ಪ್ರಪಂಚದಾಗ, ಎಲ್ಲಕ್ಕೂ ಹೊಟ್ಟೆಯೇ ದೊಡ್ಡದು. ಹೊಟ್ಟೆ ತುಂಬದಿದ್ದಾಗ, ಏನು ಮಾಡಿದರೂ ಅದು ನ್ಯಾಯವೇ—ಆ ಹುಚ್ಚನ ಮನಿ ಎಲ್ಲಿ ಅದನೊ ತಿಳಕೊಂಡು...... ಅವನ ಮನೆಯ ಹಿತ್ತಲಿನಲ್ಲಿರುವ ತೆಂಗಿನ ಗಿಡದ ಕೆಳಗ ನೆಲ ಅಗೆದು, ಅವನು ಬಚ್ಚಿಟ್ಟ ಬಂಗಾರ ಯಾಕ ತೊಗೊಳ್ಳಬಾರದು"—ಎಂದು ಯೋಚಿಸುತ್ತಾ ಎದುರಿಗಿದ್ದ ಮರದತ್ತ ನೋಡಿದ. ಹುಚ್ಚ, ಅಂದು ಆ ನಾಯಿಕುನ್ನಿಯನ್ನು ತೊಗೊಂಡು ಹೋದವನು, ಮತ್ತೆ ಅತ್ತ ಬಂದಿರಲೇ ಇಲ್ಲ. ಪುಲ್ಲಯ್ಯ ಯಾವುದೊ ಯೋಚನೆಯಲ್ಲಿ ಮಗ್ನನಾಗಿದ್ದಾಗಲೇ ಅವನಿಗೆ ನಿದ್ದೆಹತ್ತಿತ್ತು. ನಡುರಾತ್ರಿ ಕಳೆದ ಮೇಲೆ ಚಳಿ ಹೆಚ್ಚಾದಾಗ, ಒಳಗೆ ಹೋಗಿ ಮಲಗಿದ.

ಆ ರಾತ್ರಿ, ಕುಡ್ತ ವೆಂಕಣ್ಣ ಸತ್ತು ಸ್ವರ್ಗ ಸೇರಿದಂತೆ ಪುಲ್ಲಯ್ಯ ಕನಸು ಕಂಡ. ಫಕ್ಕನೆ ಎಚ್ಚರವಾದಾಗ, ತನಗೆ ಬಿದ್ದ ಕನಸನ್ನು ನೆನಸಿಕೊಂಡ. ಆ ಮೇಲೆ ಮಾತ್ರ, ಅವನಿಗೆ ನಿದ್ದೆಯೇ ಬರಲಿಲ್ಲ. ಭಜನೆಯ ಮಂದಿರದ ಬಳಿ ಕುಡ್ತ ವೆಂಕಣ್ಣ ಹೇಳಿದ ಮಾತುಗಳು ನೆನಪಾಗಿ, ಆಗಲೇ ಊರಿಗೆ ಹೊರಟುಬಿಡಬೇಕೆಂದು ಪುಲ್ಲಯ್ಯನ ಮನಸ್ಸು ಚಡಪಡಿಸಿತು.

ಬೆಳಗಾಯಿತು. ಬೆಳಗ್ಗಿನಿಂದ ನಡುಮಧ್ಯಾಹ್ನದವರೆಗೆ ತಿರುಗಿದರೂ, ಅವನಿಗೆ ಯಾವ ಕೆಲಸವೂ ಸಿಗಲಿಲ್ಲ. ಹುಚ್ಚ, ಮೂರು ಅಂತಸ್ತಿನ ಮನೆಯ ಮುಂದಿನ ಹಾಳುಬಿದ್ದ ಮನೆಯ ಜಗುಲಿಯ ಮೇಲೆ ಕುಳಿತಿದ್ದು ಪುಲ್ಲಯ್ಯನಿಗೆ ಕಾಣಿಸಿತು. ಪುಲ್ಲಯ್ಯ, ಅವನು ಕುಳಿತ ಮನೆಯ ಹಿತ್ತಲಿನಲ್ಲಿ ತೆಂಗಿನ ಮರವೇನಾದರೂ ಇದೆ ಏನೊ ನೋಡಿದ—ಆದರೆ ಇರಲಿಲ್ಲ. ಆ ಮನೆಗಳ ಸಾಲಿನಲ್ಲಿ ಮತ್ತೆಲ್ಲಿಯಾದರೂ ತೆಂಗಿನಮರವಿದೆ ಏನೊ—ಎಂದು ನೋಡತೊಡಗಿದಾಗ, ಎಲ್ಲಾ ಮನೆಗಳು ಒಂದೇ ತೆರನಾಗಿರುವಂತೆ ಅವನಿಗೆ ತೋಚಿತು. ಇದರ ಜೊತೆಗೆ, ಬಹುಶಃ ಹುಚ್ಚನ ಮನೆ ಈ ಊರಲ್ಲಿ ಇಲ್ಲವೇನೊ—ಎಂದೂ ಸಹ ಅವನು ಯೋಚಿಸಿದ. ಮಧ್ಯಾಹ್ನ ಮನೆಗೆ ಹಿಂದಿರುಗಿದವನು ನೀಲಿ ಕೊಟ್ಟ ಗಂಜಿ ಕುಡಿದ. ಹೊಟ್ಟೆ ಕಾದಿದ್ದರಿಂದ, ಇದ್ದ ಗಂಜಿಯನ್ನೆಲ್ಲಾ ಕುಡಿದನಾದರೂ, ನೀಲಿ ಒಪ್ಪತ್ತು ಉಪವಾಸವಿರಬೇಕಾಗುವದೆಂಬ ಅರಿವು ಬಂದಾಗ ಹೊಟ್ಟೆಯಲ್ಲಿ ತಳಮಳವಾಯಿತು.

ಕಾಲುನೋವು—ಎಂದು ಮಧ್ಯಾಹ್ನ ಹೊರಗೆ ಎಲ್ಲಿಯೂ ಹೋಗದೆ ಮಲಗಿದ್ದ ಪುಲ್ಲಯ್ಯನಿಗೆ ಎಚ್ಚರವಾದಾಗ ಸಂಜೆಯಾಗಿತ್ತು. ಕತ್ತಲಾಗುತ್ತಿರುವಂತೆ, ಮಗನನ್ನು ಕರೆದುಕೊಂಡು ಬೀದಿಗೆ ಇಳಿದ. ರಸ್ತೆಯಲ್ಲಿ ಜನಸಂದಣಿ ಹೆಚ್ಚಾಗಿತ್ತು. ಅಂಗಡಿಗಳಲ್ಲಿ ತುಂಬಿದ್ದ ಜನರು, ವಿಧವಿಧವಾದ ವಸ್ತುಗಳನ್ನು ಕೊಳ್ಳುತ್ತಿರುವುದನ್ನು ನೋಡಿದರೆ ಕಣ್ಣು ತಿರುಗುತ್ತಿದ್ದವು. ಮಲ್ಲೇಶಿಗೆ, ಆಡಲು ಒಂದು ಚೆಂಡು ಕೊಡಿಸಿದರೆ...... ಅದೊ, ಆ ಹುಡುಗ ರಸ್ತೆಯ ಮೇಲೆ ಚೆಂಡು ಒಗೆದ...... ಅದನ್ನು ನೋಡಿದ ಮಲ್ಲೇಶಿ, "ಅಪ್ಪಾ—ಅಪ್ಪಾ......" ಎನ್ನುತ್ತಾ ಅತ್ತ ಕೈ ತೋರಿಸಿದ. ಇನ್ನೊಂದು ಹುಡುಗಿ ಬಾಯಲ್ಲಿ ಪೀಪಿ ಇಟ್ಟುಕೊಂಡು ಊದುತ್ತಾ ಹೊರಟಿದ್ದನ್ನು ನೋಡಿ, ಮಲ್ಲೇಶಿ, ಅದೂ ಬೇಕೆಂದ...... ಸಣ್ಣ ಮಗುವೊಂದು ಕೈಯಲ್ಲಿ ರಬ್ಬರಿನ ನಾಯಿಯನ್ನು ಹಿಡಿದುಕೊಂಡು ಹೋಗುತ್ತಿತ್ತು. ಮಲ್ಲೇಶಿಗೆ ಅದು ಬೇಕೆನಿಸಿತು.

"ನೀ ಏನೊ ಒಳ್ಳೆಯ ದಿನದಂದು, ಶುಭದಿನದಂದು ಹುಟ್ಟಿದಿ. ಆದರೆ ದಿನ ಬಹಳ ಕೆಟ್ಟಾವಪ್ಪಾ"—ಎಂದು ಮನಸ್ಸಿನಲ್ಲೆ ನೊಂದುಕೊಂಡ ಪುಲ್ಲಯ್ಯ. ಹಾಗೆಯೇ ಸ್ವಲ್ಪ ದೂರ ಹೋದಾಗ ರಸ್ತೆಯ ಪಕ್ಕದಲ್ಲಿನ ದೀಪ ಒಂದರ ಕೆಳಗೆ ಒಬ್ಬ ಜ್ಯೋತಿಷಿ ಕುಳಿತಿದ್ದ. ಪುಲ್ಲಯ್ಯ ಆತನನ್ನು ನೋಡಿದ. ತನ್ನ ಕೈ ಆದರೂ ತೋರಿಸಿ ತನ್ನ ಭವಿಷ್ಯ ತಿಳಿದುಕೊಳ್ಳುವ ಆಸೆ ಆಯ್ತು. ತನ್ನ ಈ ಕಷ್ಟಗಳು ದೂರವಾಗಿ, ಎಂದು ಹಾಯಾಗಿರುವೆನೊ—ಎಂಬುದನ್ನು ಅರಿಯುವ ಮನಸ್ಸಾಯಿತು.

"ಕೈ ನೋಡಿ ಭವಿಷ್ಯ ಹೇಳಲಿಕ್ಕೆ ಏನು ತಗೊತೀದಿ"—ಎಂದು ಕೇಳಿದ.

"ದೇವರ ಹೆಸರಿನಲ್ಲಿ ನೀನು ಎಷ್ಟು ಕೊಟ್ಟರೂ ಸರಿಯೇ"—ಎಂದ ಆ ಜ್ಯೋತಿಷಿ. ಆದರೆ ಪುಲ್ಲಯ್ಯನ ಜೇಬು ಖಾಲಿಯಾಗಿತ್ತು. ಅವನು ಬೇಸರದಿಂದ ಸ್ವಲ್ಪ ಮುಂದೆ ಹೋಗಿ, ಕಾಲು ನೋಯುತ್ತಿದ್ದರಿಂದ, ಕಾಲುವೆಯ ಎತ್ತರವಾದ ಕಟ್ಟೆ ಏರಿ ಕುಳಿತ. ಹಸಿವಿನಿಂದ ಹೊಟ್ಟೆ ಚುರುಗುಟ್ಟುತ್ತಿತ್ತು. ತನಗೇ ಹೀಗಿರುವಾಗ, ಮಲ್ಲೇಶಿಯ ಗತಿ ಏನೆಂದು ಪುಲ್ಲಯ್ಯ ಯೋಚಿಸತೊಡಗಿದ. ಎದ್ದು ನಿಲ್ಲಲೂ ಸಹ ಶಕ್ತಿ ಇಲ್ಲದಂತೆ ಭಾಸವಾದಾಗ, ಗೊತ್ತುಗುರಿಯಿಲ್ಲದವರಂತೆ ಹಾಗೆಯೆ ಕುಳಿತ. ರಸ್ತೆಯಲ್ಲಿ ಬರುವ–ಹೋಗುವವರು ಕಡಿಮೆಯಾದರು. ರಸ್ತೆಯ ಅಕ್ಕಪಕ್ಕದಲ್ಲಿದ್ದ ಅಂಗಡಿಗಳು, ಒಂದೊಂದಾಗಿ ಮುಚ್ಚಿದವು. ಇದ್ದಕ್ಕಿದ್ದಂತೆ, ದೊಡ್ಡ ಗಾಳಿ ಬೀಸಲು ಪ್ರಾರಂಭವಾದ್ದರಿಂದ ಪೊರಕೆಯಿಂದ ರಸ್ತೆಯನ್ನು ಬಳಿದಂತಾಯಿತು...... ಮಲ್ಲೇಶಿ, ಆಯಾಸದಿಂದ ತಂದೆಯ ತೊಡೆಯ ಮೇಲೆ ತಲೆ ಇಟ್ಟು ಮೌನವಾಗಿ ಮಲಗಿದ್ದ. ಪುಲ್ಲಯ್ಯ, ಮಗನ ತಲೆಯನ್ನು ನೇವರಿಸುತ್ತಾ, ತನ್ನ ಯೋಚನೆಗಳಲ್ಲಿ ಮುಳುಗಿದ್ದ. ಯೋಚಿಸಿ ಯೋಚಿಸಿ, ಅವನ ನರನರವೂ ಎಳೆಯತೊಡಗಿದ್ದವು. ಮಗನ ಮೇಲೆ ಎಲ್ಲಿಲ್ಲದ ಕನಿಕರ ಬಂದು, ಹೃದಯ ತುಂಬಿಬಂತು. ಮಗ ಹುಟ್ಟಿದಾಗಿನ ಸಮಯ, ಆಗಿನ ಪರಿಸ್ಥಿತಿ ಅವನ ಸ್ಮೃತಿಪಟಲದ ಮೇಲೆ ಮೂಡಿದವು...... "ನಮ್ಮ ಊರಿನಾಗ,

ಇವನಂತಹವನು ಹುಟ್ಟೆ ಇಲ್ಲ...... ಹುಟ್ಟಿದಾಗಿನಿಂದ ಸುಖದಲ್ಲಿ ಬೆಳೆದ ನನ್ನ ಮಗ, ಈಗ ಚರಂಡಿಯ ನೀರಿನಿಂದ ತುಂಬಿದ ಕಾಲುವೆಯ ಬಳಿ, ಹಸಿವಿನಿಂದಾಗಿ ಕಂಗಾಲಾಗಿ, ಕಣ್ಣುಕಣ್ಣು ಬಿಡುವ ಪರಿಸ್ಥಿತಿ ಬಂದಿತಲ್ಲಾ"—ಎಂದು ನೊಂದುಕೊಂಡ ಪುಲ್ಲಯ್ಯ. ತನ್ನ ಹಸಿವನ್ನು ಮರೆತು, ಮಗನಿಗಾಗಿ ಮರುಗಹತ್ತಿದ....... ಎದುರಿಗಿದ್ದ ರೊಟ್ಟಿಯ ಅಂಗಡಿ ಅದೇ ಮುಚ್ಚುತ್ತಿರುವುದನ್ನು ನೋಡಿ, ಹೋಗಿ ಒಂದು ರೊಟ್ಟಿ ಯಾದರೂ ತರಬೇಕೆಂದುಕೊಂಡು ಸರಕ್ಕನೆ ಮೇಲೆದ್ದ. ಕೈಯಲ್ಲಿ ದುಡ್ಡಿಲ್ಲ— ಹಾಗಾದರೆ...... ಕಳವು ಮಾಡುವುದೆ? ಒಂದು ವೇಳೆ ಸಿಕ್ಕಿಹಾಕಿಕೊಂಡರೆ? ಅವರು ನನ್ನನ್ನು ಹಿಡಿದು ಪೋಲೀಸರಿಗೆ ಕೊಟ್ಟರೆ......?

ಸುಮ್ಮನೆ ಮನೆಗೆ ಹೋಗಿಬಿಡಬೇಕೆಂದುಕೊಂಡ...... ಮನೆಗೆ ಹೋಗದೆ, ಚಳಿಯಲ್ಲಿ ಹೀಗೆಯೇ ನಡುಗುತ್ತಾ ಕುಳಿತರೆ...... ರಾತ್ರಿ ಯಾರಾದರೂ ನೋಡಿ, ನನ್ನನ್ನು ಕಳ್ಳನೆಂದು ತಿಳಿದರೆ......? ಮನೆಗೆ ಹೋಗದಿದ್ದಲ್ಲಿ ನೀಲಿ ಎಷ್ಟು ನೊಂದು ಕೊಳ್ಳುತ್ತಾಳೊ—ಏನೊ...... ಪುಲ್ಲಯ್ಯ ಯೋಚಿಸಿದ.

ಅಲ್ಲಿಂದೆದ್ದು ಹೊರಟಾಗ, ಮಲ್ಲೇಶಿ ಆತನನ್ನು ಅನುಸರಿಸಿದ...... ಆದಷ್ಟು ಸಮೀಪದ ರಸ್ತೆಯಿಂದ ಮನೆಗೆ ಹೋಗಬೇಕೆಂದುಕೊಂಡು, ಮುಖ್ಯ ರಸ್ತೆಯನ್ನು ಬಿಟ್ಟು, ಪಕ್ಕದ ಓಣಿಗಳಲ್ಲಿ ಹೊರಟ. ಓಣಿಗಳೆಲ್ಲ ಬರಿದಾಗಿದ್ದವು. ನಾಲ್ಕು ಹೆಜ್ಜೆ ಹೋದ ಮೇಲೆ, ಹಾಗೆಯೇ ಮುಂದೆ ಹೋಗಲು ಬೇಜಾರಾಯಿತು. ಅಷ್ಟರಲ್ಲಿ, ಎದುರಿಗಿನ ರಸ್ತೆಯ ದೀಪದ ಕೆಳಗೆ ಕಣ್ಣುಕಾಣದ ಮುದುಕಿಯೊಬ್ಬಳು ಕುಳಿತಿರುವುದು ಕಾಣಿಸಿತು. ಮಾಸಿಹೋದ ಹರಕಲು ಬಟ್ಟೆಗಳು...... ಸೊರಗಿದ ದೇಹ...... ಅವಳ ಹರಿದ ಬಟ್ಟೆಗಳಿಂದ ಅವಳ ದೇಹದ ಎಲುಬುಗಳು ಕಾಣುತ್ತಿದ್ದವು. ಮುಂದೆ ಒಂದು ಹಳತಾದ ಬಟ್ಟೆಯ ತುಂಡನ್ನು ಹಾಕಿಕೊಂಡು, ದೀನವಾದ ಸ್ವರದಲ್ಲಿ "ಅಮ್ಮಾ...... ಅಪ್ಪ...... ಕಷ್ಟಪಟ್ಟು ಕೆಲಸ ಮಾಡಲಾಗದ ಪಾಪಿಷ್ಠೆ...... ಯಾವ ಜನ್ಮದಲ್ಲಿ ಏನು ಪಾಪ ಮಾಡಿದ್ದೆನೊ ಏನೊ, ಈಗ ನನ್ನ ಹೊಟ್ಟೆ ನಾನು ತುಂಬಿಕೊಳ್ಳಲಿಕ್ಕೆ ಆಗದ, ಒದ್ದಾಡ್ತಿದ್ದೀನಿ...... ನೀವೆ ನನ್ನ ತಾಯಿ–ತಂದೆ ಅಂತ ಕೈಚಾಚ್ತೀನಿ...... ಈ ಕುರುಡಿಯ ಮೇಲೆ ಕನಿಕರ ತೋರಿ."

ಪುಲ್ಲಯ್ಯ, ಅವಳನ್ನು ನೋಡಿ, "ಅಯ್ಯೊ ಪಾಪ, ಯಾವ ಜನ್ಮದಾಗ ಏನು ಪಾಪ ಮಾಡಿದ್ದಳೊ ಏನೊ, ಈಗ ಹೀಗಾಗ್ಯದ"—ಎಂದುಕೊಂಡ. ಇಂತಹವರಿಗೂ ಸಹ ಜೀವನದ ಮೇಲೆ ಆಸೆಯೆ—ಎಂದು ಪುಲ್ಲಯ್ಯ ಆಚ್ಚರಿಪಟ್ಟ. ಹಾಗೆಯೇ ಹೋಗಿ, ಅವಳಿಂದ ಸ್ವಲ್ಪ ದೂರದಲ್ಲಿ ಕುಳಿತ. ಆ ಕುರುಡಿ, ತನ್ನ ಗೋಳಿನ ಕತೆಯನ್ನು ಹೇಳುತ್ತಾ, ಮುಂದಿದ್ದ ಬಟ್ಟೆಯ ಮೇಲೆ ಕೈ ಆಡಿಸುತ್ತಲೇ ಇದ್ದಳು. ಬಟ್ಟೆಯ ಒಂದು ಮೂಲೆಯಲ್ಲಿ ಒಂದಾಣೆ ಬಿದ್ದಿತ್ತು. ಅದು ಅವಳ ಕೈಗೆ ಎಟುಕಲಿಲ್ಲ. ಆದರೆ ಪುಲ್ಲಯ್ಯನಿಗೆ ಅದು ಸ್ಪಷ್ಟವಾಗಿ ಕಾಣಿಸುತ್ತಿತ್ತು...... ಹಾಗಾದರೆ, ಈ ಹೆಂಗಸು ನಿಜವಾಗಿಯೂ ಕುರುಡಿ...... ಭಿಕ್ಷೆಗಾಗಿ ಈ ಸೋಗು ಹಾಕಿದವಳಲ್ಲ—ಎಂದು

ಪುಲ್ಲಯ್ಯ ತೀರ್ಮಾನಿಸಿದ. ಅಲ್ಲಿಂದ ಸ್ವಲ್ಪ ಮುಂದಕ್ಕೆ ಹೋದಲ್ಲಿ, ಒಂದು ಚಿತ್ರ ಮಂದಿರವಿತ್ತು. ಚಿತ್ರ ಬಿಟ್ಟ ಮೇಲೆ, ಅನೇಕರು, ಅದೇ ದಾರಿಯಲ್ಲಿ ಬರುತ್ತಿದ್ದರು. ಆ ಕುರುಡಿ ಅವರಿಗಾಗಿಯೇ, ಆರ್ತವಾದ ಧ್ವನಿಯಲ್ಲಿ ಕೂಗಿಕೊಳ್ಳುತ್ತಿದ್ದಳು...... ಚಿತ್ರ ಇನ್ನೂ ಬಿಟ್ಟಿರಲಿಲ್ಲ...... ಪುಲ್ಲಯ್ಯ ಅಲ್ಲಿ ಕುಳಿತಿರುವಾಗಲೇ, ಇಬ್ಬರು–ಮೂವರು ಆ ದಾರಿಯಲ್ಲಿ ಹೋದರು.

ಸ್ವಲ್ಪ ಹೊತ್ತು, ಆ ರಸ್ತೆಯಲ್ಲಿ, ಅವರು ಮತ್ತು ಆ ಭಿಕ್ಷುಕಿಯನ್ನು ಬಿಟ್ಟು ಇನ್ನಾರೂ ಇರಲಿಲ್ಲ. ಆ ಕೆಲವು ನಿಮಿಷಗಳಲ್ಲಿ ಪುಲ್ಲಯ್ಯನ ತಲೆಯಲ್ಲಿ ಸಾವಿರಾರು ವಿಚಾರಗಳು ಸುಳಿದವು...... ಆ ಹೆಂಗಸಿನ ಮುಂದಿದ್ದ ಬಟ್ಟೆಯ ತುಂಡಿನ ತುದಿಯಲ್ಲಿ ಬಿದ್ದಿರುವುದು ಆಣೆಯೊ—ರೂಪಾಯಿಯೊ—ಎಂದು ಪುಲ್ಲಯ್ಯ ಊಹಿಸುತ್ತಿರುವಾಗಲೇ ಅವಳು ಪುನಃ ತನ್ನ ಗೋಳನ್ನು ಪ್ರಾರಂಭಿಸಿದಳು...... ಅವಳ ಕೂಗು ಹೆಚ್ಚಿದಂತೆ, ಪುಲ್ಲಯ್ಯನ ಆವೇಶವೂ ಹೆಚ್ಚಿತು. ಹೊಟ್ಟೆಯ ಹಸಿವು, ಅವನಿಗೆ ಎಲ್ಲಿಲ್ಲದ ಧೈರ್ಯ ನೀಡಿತ್ತು. ಹೇಗಾದರೂ ಮಾಡಿ, ಈಗ ಆ ಒಂದಾಣೆಯನ್ನು ತೆಗೆದುಕೊಂಡು, ಮುಂದೆ ಎಂದಾದರೂ ಅದನ್ನು ಬಡ್ಡಿ ಸಹಿತ ಆಕೆಗೆ ಹಿಂದಿರುಗಿಸಬಹುದೆಂದುಕೊಂಡ. ಮರುಕ್ಷಣ, "ನನ್ನ ಮಗನ ಕಣ್ಣುಮುಂದೆಯೇ ಕಳವು ಮಾಡಬೇಕೆ? ಈಗಾಗಲೇ ಕಳವು ಮಾಡಲು ಹೋಗಿ ಸಿಕ್ಕಿಕೊಂಡುದ್ದಾಗಿದೆ—ನಾನು ಕಳ್ಳನಾದರೆ, ನನ್ನ ಮಗನೂ ಕಳ್ಳನಾಗಬಹುದೆ?"—ಪುಲ್ಲಯ್ಯ ಮತ್ತೆ ಚಿಂತೆಗೊಳಗಾದ.

ದೂರದಿಂದ ಯಾವುದೊ ಒಂದು ಮೇಳ ಬರುತ್ತಿತ್ತು. ಯಾವುದೊ ರಥೋತ್ಸವ. ರಥದ ಮುಂದೆ ತಾಳಹಾಕುತ್ತಾ, ಹಾಡುಹಾಡುತ್ತಾ ಅನೇಕರು ಹೊರಟಿದ್ದರು. ಅವರ ಹಾಡು ಕೇಳಿ, ಪುಲ್ಲಯ್ಯನಿಗೆ ಜೀವ ಬಂದಂತಾಯಿತು. ತಾನು ಹಳ್ಳಿಯಲ್ಲಿ, ಕುಯ್ಲಿನ ಸಮಯದಲ್ಲಿ ಆಗಾಗ ಹಾಡುತ್ತಿದ್ದುದನ್ನು ನೆನೆಸಿಕೊಂಡ. ತಾನೂ, ತನ್ನ ಮಗ, ಅವರಿಗಿಂತ ಚೆನ್ನಾಗಿ ಹಾಡಬಲ್ಲೆವೆಂದುಕೊಂಡ...... ಆದರೆ......

ಆ ರಥೋತ್ಸವವನ್ನು ನೋಡಿಯೂ, ಮಲ್ಲೇಶಿ ಯಾವ ಉತ್ಸಾಹವನ್ನೂ ವ್ಯಕ್ತಪಡಿಸಲಿಲ್ಲ. ಆ ಪುಟ್ಟ ಜೀವ ಹಸಿವಿನಿಂದ ಬತ್ತಿಹೋಗುತ್ತಿದೆ ಎಂಬುದನ್ನೂ ಪುಲ್ಲಯ್ಯ ಆಗಲೇ ಅರ್ಥಮಾಡಿಕೊಂಡ.

ಅತ್ತನಿಂದ, ಮಿಠಾಯಿಗಳಿಂದ ತುಂಬಿದ ಒಂದು ಬಂಡಿ ಬಂತು. ಈ ಊರಲ್ಲಿ ಕಾಲಿಟ್ಟಾಗ ಎದುರಾದ ಮಿಠಾಯಿ ಬಂಡಿಯೇ ಅದು—ಎಂಬುದನ್ನು ಪುಲ್ಲಯ್ಯ ಗುರುತಿಸಿದ. ಬಂಡಿಯವನು, ಬಂಡಿಗೆ ಕಟ್ಟಲಾದ ಗಂಟೆಯನ್ನು ಬಾರಿಸಿದಾಗ ಮಾತ್ರ. ತಲೆಕೆಳಗೆ ಹಾಕಿಕೊಂಡು ಕುಳಿತಿದ್ದ ಮಲ್ಲೇಶಿ ಅತ್ತ ನೋಡಿದ. ಆ ಮಿಠಾಯಿ ಬಂಡಿ, ಅವರು ಕುಳಿತ ಕಡೆಗೆ ಬಂತು. ಬಂಡಿಯವನು, "ಮಿಠಾಯಿ, ಸಿಹಿಯಾದ ಮಿಠಾಯಿ, ಬಿಸಿಬಿಸಿ ಪಕೋಡ"—ಎಂದು ಕೂಗಿದ. ಅವನ ಕೂಗು, ಅವನ ಮಿಠಾಯಿಯಷ್ಟೆ ಸಿಹಿಯಾಗಿತ್ತು; ಪಕೋಡಗಳಷ್ಟೆ ಬಿಸಿಬಿಸಿಯಾಗಿತ್ತು.

ಮಿಠಾಯಿಯ ಬಂಡಿ ಎದುರಿಗೆ ಬಂದಾಗ, ಮಲ್ಲೇಶಿ, ಕೈ ಎತ್ತಿ ಅದನ್ನು ತೋರಿಸಿದ. ಬಂಡಿ ಮುಂದಕ್ಕೆ ಹೋದಾಗ, ಮಲ್ಲೇಶಿಯ ಕೈ ಅತ್ತಲೇ ತಿರುಗಿತು...... ಪುಲ್ಲಯ್ಯ ನಿಗೆ ದುಃಖ ಉಮ್ಮಳಿಸಿ ಬಂತು—"ನನ್ನ ಮಗನಿಗೆ ಹಸಿವು...... ನನಗೆ ಹಸಿವು...... ನನ್ನ ಮಗ ಹಸಿವಿನಿಂದ ಸತ್ತರೆ, ನನ್ನ ಆಶೆ–ಅಭಿಮಾನಗಳು ಅವನನ್ನು ಉಳಿಸಲಾರವು" —ಎಂದು ಯೋಚಿಸಿ, "ಹೋಗ ಮಗ, ಮುಂದ ಹೋಗಿ ಅವನ್ನ ನಿಲ್ಲಿಸು"—ಎಂದ. ಮಲ್ಲು ಎದ್ದು ಅತ್ತ ಹೋದ ಕೂಡಲೇ, ಭಿಕ್ಷುಕಿಯ ಬಟ್ಟೆಯ ಮೂಲೆಯಲ್ಲಿ ಬಿದ್ದಿದ್ದ, ಬೀದಿ ಬೆಳಕಿನಲ್ಲಿ ಮಿರಮಿರನೆ ಹೊಳೆಯುತ್ತಿದ್ದ ಆ ಒಂದಾಣೆಯನ್ನು ಪುಲ್ಲಯ್ಯ ಎತ್ತಿಕೊಂಡ. ಹಾಗೆಯೇ ಎದ್ದು ಹೋಗಿ, ಆ ಒಂದಾಣೆ ಕೊಟ್ಟು ಪಕೋಡ ಕೊಂಡ. ಪೊಟ್ಟಣ ಬಿಚ್ಚುತ್ತಿದ್ದಂತೆಯೇ ಮಲ್ಲೇಶಿ ಕೈಮುಂದೆ ಮಾಡಿದ. ಹಸಿದ ಮಲ್ಲೇಶಿ, ಗಬಗಬನೆ ತಿನ್ನಲು ಪ್ರಾರಂಭಿಸಿದ. ಪುಲ್ಲಯ್ಯ, ಇನ್ನೂ ಬಾಯಿಯಲ್ಲಿನ ಚೂರನ್ನು ಅಗಿಯುತ್ತ ಕುಳಿತಿದ್ದಾಗಲೇ ಪೊಟ್ಟಣ ಖಾಲಿಯಾಗಿತ್ತು. ಪಕೋಡ ತಿಂದ ಮಲ್ಲೇಶಿಯ ಮುಖದ ಮೇಲೆ ಮತ್ತೆ ಮೊದಲಿನ ಕಳೆ ಬಂದಿತ್ತು. ಅವನು, ಮೊದಲಿನಂತೆ ಮುಗ್ಧವಾದ ನಗೆ ಬೀರಿದಾಗ, ಪುಲ್ಲಯ್ಯ ಅವನನ್ನು ಎತ್ತಿಕೊಂಡು ಮುದ್ದಾಡುತ್ತಿದ್ದಾಗ...... ದೂರದಿಂದ, ಆ ಭಿಕ್ಷುಕಿ ಕೂಗಿಕೊಳ್ಳುತ್ತಿರುವುದು ಕೇಳಿಸಿತು...... ಬರುಬರುತ್ತಾ, ದೀನವಾದ ಅವಳ ಸ್ವರ ಏರುತ್ತಾ ಹೋಗಿ, ಅದನ್ನು ಕೇಳಲು ಪುಲ್ಲಯ್ಯನಿಗಾಗಲಿಲ್ಲ. ಮರುಗಳಿಗೆಯಲ್ಲೆ, "ಅಯ್ಯೋ, ನಾನೆಂತಹ ಹೀನ ಕೆಲಸ ಮಾಡಿದ"—ಎಂದು ಪಶ್ಚಾತ್ತಾಪಪಟ್ಟ. "ಭಿಕ್ಷೆ ಬೇಡುವ ಕುರುಡಿಯ ಬಳಿ ಕಳ್ಳತನ...... ಅಬ್ಬಾ, ನಾನು ಕಳುವುಮಾಡಿದೆ...... ಎಂತಹ ಪರಿಸ್ಥಿತಿ ಬಂದರೂ ಕಳ್ಳತನಕ್ಕೆ ಇಳಿಯುವುದಿಲ್ಲವೆಂದುಕೊಂಡ ನಾನು, ಈಗ ಭಿಕ್ಷುಕಿಯೊಬ್ಬಳ ದುಡ್ಡನ್ನು ಅಪಹರಿಸಿದೆ. ನಾನು ಕಳ್ಳನಾದೆ"—ಪುಲ್ಲಯ್ಯನ ಕಣ್ಣುಗಳಲ್ಲಿ ನೀರು ತುಂಬಿತು. ಜೊತೆಗೆ, ಹೊಟ್ಟೆ ತೊಳಸಿದಂತಾಯಿತು. ತೋರುಬೆರಳನ್ನು ಬಾಯಲ್ಲಿಟ್ಟುಕೊಂಡು ಪುಲ್ಲಯ್ಯ ವಾಂತಿ ಮಾಡಿಕೊಂಡಾಗ, ಮಗನೂ ತಂದೆಯನ್ನು ಅನುಸರಿಸಿದ.

"ಅಪ್ಪಾ, ಅಪ್ಪಾ...... ಥೂ......" ಎನ್ನುತ್ತಾ ಅವನೂ ಕಕ್ಕತೊಡಗಿದ. ಕೆಲವೇ ನಿಮಿಷಗಳ ಹಿಂದೆ ಆನಂದದಿಂದ ತಿಂಡಿ ತಿಂದ ಮಗ, ಕಾರಿಕೊಳ್ಳಲು ಪ್ರಾರಂಭಿಸಿದಾಗ, ಪುಲ್ಲಯ್ಯನ ದುಃಖದ ಕಟ್ಟೆಯೊಡೆದುಹೋಯಿತು. ಮಗನನ್ನು ಎತ್ತಿಕೊಳ್ಳುವ ಶಕ್ತಿ ಉಳಿದಿರದಿದ್ದರೂ, ಪ್ರಯಾಸದಿಂದ ಅವನನ್ನು ಎತ್ತಿಕೊಂಡ. ಆದರೆ ಮಲ್ಲೇಶಿ, ತಂದೆಯ ಬನಿಯನ್ನು ನೋಡಿ, "ಅಪ್ಪಾ, ನಿನ್ನ ಬನೀನು ಹರದದ"—ಎನ್ನುತ್ತಾ ಕೆಳಗಿಳಿದ. ಹಾಗೆ ಕೆಳಗಿಳಿದವನು ಮುಂದೆ ಮುಂದೆ ಹೆಜ್ಜೆಹಾಕತೊಡಗಿದ. ಅವನ ಹಿಂದೆ, ಹಿಂದೆ, ಪುಲ್ಲಯ್ಯ ಕಾಲೆಳೆದುಕೊಂಡು ಹೊರಟ.

"ಅಪ್ಪಾ, ನಿನ್ನ ಈ ಬನೀನು ಹರದದ. ಹೊಸಾದ ತೊಗೊ."

"ಇಲ್ಲಪ್ಪಾ—ಈಗ ಆಗಾಣಿಲ್ಲ."

"ಯಾಕ ಆಗಾಣೆಲ್ಲ? ನಾನು ದೊಡ್ಡವನಾದ ಮೇಲೆ ನಿನಗ ಕೊಡಸ್ತೀನಿ".

ಮಲ್ಲೇಶಿಯ ಈ ಮಾತನ್ನು ಕೇಳಿ, ಪುಲ್ಲಯ್ಯನಿಗೆ ಒಂದು ಕಡೆ ದುಃಖವಾದರೆ, ಮತ್ತೊಂದು ಕಡೆ ಆನಂದವಾಯಿತು. "ಮಗನs, ನೀನು ಅದು ಹ್ಯಾಂಗಾದರೂ ದೊಡ್ಡವನಾಗ್ತೀಯೊ"—ಎಂದು ಮರುಗಿದ.

"ಆಗ್ತೀನಿ, ಆಗ್ತೀನಿ—ಎರಡೂ ಕೈಗಳಿಂದ ಮುಷ್ಟಿಮುಷ್ಟಿ ಅನ್ನ ಉಂಡು ದೊಡ್ಡವನಾಗ್ತೀನಿ"—ಎಂದು ಮಲ್ಲೇಶಿ ಹೇಳಿದಾಗ ಪುಲ್ಲಯ್ಯನ ಕಣ್ಣುಗಳಿಂದ ಗಂಗೆ ಹರಿದು ಬಂದಳು.

## [ 34 ]

ಪುಲ್ಲಯ್ಯನ ಗತಿ ಮೊದಲಿದ್ದಂತೆಯೆ ಆಯಿತು. ನಿರ್ವಾಹವಿಲ್ಲದೆ ಪುಟ್ಟಿ ಹಿಡಿದುಕೊಂಡು ಬಜಾರಿಗೆ ಹೋದ. ಈ ಸಲ ಹುಡುಗರ ಜೊತೆಗೆ, ಅಲ್ಲಿರುತ್ತಿದ್ದ ಮುದುಕಿಯರೂ ಸಹ ಪುಲ್ಲಯ್ಯನನ್ನು ಹಂಗಿಸತೊಡಗಿದರು. ಅವರ ಪೀಡೆ ಸಹಿಸಿಕೊಳ್ಳಲಾಗದೆ, ಹಿಂದಿರುಗಬೇಕೆಂದುಕೊಂಡನಾದರೂ, "ಇದೊಂದು ದಿನ ಇಲ್ಲಿ ಕೂಡ್ತೀನಿ. ಆಮ್ಯಾಲೆ ಇತ್ತಲಾಗ ಬರಾಣೆಲ್ಲ"—ಎಂದು ಅವರಿಗೆ ಮಾತುಕೊಟ್ಟು ಕುಳಿತ. ಮಧ್ಯಾಹ್ನದ ವೇಳೆಗೆ ನಾಲ್ಕಾಣೆ ಕೂಲಿ ಸಿಕ್ಕಾಗ, ಅದನ್ನೆ ತೆಗೆದುಕೊಂಡು ಹೊರಟ.

ನಾಲ್ವರಿದ್ದ ಸಂಸಾರಕ್ಕೆ ನಾಲ್ಕಾಣೆಯಿಂದ ಏನಾದೀತು? ಅದರಿಂದ ಹೊಟ್ಟೆ ತುಂಬದಿದ್ದರೂ, ತಾನು ಅಂದುಕೊಂಡ ಕೆಲಸವಾದರೂ ಆದೀತೆಂದು ಮನೆಗೆ ಹೋದ. ಸಂಜೆಯಾಗುತ್ತಲೆ, ಮತ್ತೆ ಬೀದಿಗಿಳಿದ. ಅವನು ಅಂದುಕೊಂಡಂತೆ, ಆ ಜ್ಯೋತಿಷಿ ಅಲ್ಲಿಯೇ ಕುಳಿತಿದ್ದ. ಪುಲ್ಲಯ್ಯ ನೇರವಾಗಿ ಅವನ ಬಳಿಹೋಗಿ, ವಿನಯದಿಂದ ನಮಸ್ಕರಿಸಿದ. ಮಲ್ಲೇಶಿ ಕೂಡ ಜ್ಯೋತಿಷಿಗೆ ನಮಸ್ಕರಿಸಿ ತಂದೆಯ ಪಕ್ಕದಲ್ಲಿ ನಿಂತ. ಕಪ್ಪು ಮೊಸಡಿಯ ಆ ಜ್ಯೋತಿಷಿ, ಸ್ವಲ್ಪ ಹೊತ್ತು ಅವನ ಕೈಯನ್ನು ಪರೀಕ್ಷಿಸಿ, "ಹೊಳ್ಯಾಗ ನೀರು ಇರದಿದ್ದರೂ, ಹೃದಯದಾಗ ತುಂಬಿಕೊಂಡದ...... ನಿನ್ನ ಮಗ ಸತ್ಯಸಂಧನಾಗತಾನ...... ನಿನ್ನ ಹೆಸರು, ನಿನ್ನ ಪ್ರತಿಷ್ಠೆ ಕಾಪಾಡ್ತಾನ"—ಎಂದ.

ಪುಲ್ಲಯ್ಯನ ಮುಖ ಸಂತೋಷದಿಂದ ಅರಳಿತು. ಅದರೊಡನೆ, ಜ್ಯೋತಿಷಿಯ ಮೇಲಿನ ವಿಶ್ವಾಸ ಮತ್ತಷ್ಟು ಗಾಢವಾಯಿತು. ಜ್ಯೋತಿಷಿ ಮತ್ತೆ ಅವನ ಕೈಯನ್ನು ಪರೀಕ್ಷಿಸಿ, "ಕಮಲದ ಮ್ಯಾಲಿನ ಗುಳ್ಳಿ ಹಾಂಗದ ನಿನ್ನ ಹೃದಯ. ಕೈಗೆ ಬಂದದ್ದು ಬಾಯಿಗೆ ಬರವಲ್ದು. ಇದಕ್ಕ ಈಗ ನಿನಗ ಶನಿಕಾಟ ಇರೋದs ಕಾರಣ. ನಿನ್ನ ಕೈಯಾಗಿನ ರೇಖೆಗಳಿಗೆ ಅನುಸಾರವಾಗಿ ನಿನ್ನ ಆಯುಷ್ಯ ಎಂಬತ್ತು ವರ್ಷ...... ದುಡ್ಡು ತಾನೇತಾನಾಗಿ ಬರ್ತದ—ಮುಂದ ನೀನೂ ಸುಖಪಡ್ತೀದಿ. ನಿನ್ನ ಈ ಕಷ್ಟ

ಗಳೆಲ್ಲ ದೂರ ಆಗ್ತಾವ...... ಏಕಚಕ್ರ—ಒಂದೇ ಮಾತು—ಒಂದೇ ಧ್ಯಾನ—ಒಂದೇ ಬುದ್ಧಿ. ಗಂಡು ಎಷ್ಟಾದರೂ ಗಂಡೇ. ಹೆಣ್ಣು ಹೂವಿಗೆ ಸಮಾನಾದರ, ಗಂಡು ದುಂಬಿಗೆ ಸಮಾನ. ಏಳು ಗುಡ್ಡದ ಎಲ್ಲಮ್ಮನನ್ನು ನಿನ್ನ ಹೆಸರಿನಲ್ಲಿ ಪೂಜಸ್ತೀನಿ...... ನಿನ್ನ ಕಷ್ಟಗಳನ್ನೆಲ್ಲಾ ತೊಡೆದುಹಾಕ್ತಾಳ...... ನಿನಗ ಒಳ್ಳೆಯ ದಿನ ಬರ್‍ತಾವ...... ಈ ಕುಂಕುಮ ಹಚ್ಚಿಕೊ......" ಎನ್ನುತ್ತಾ ಆ ಜ್ಯೋತಿಷಿ, ಪುಲ್ಲಯ್ಯ ಮತ್ತು ಮಲ್ಲೇಶಿಯ ಹಣೆಗೆ ಕುಂಕುಮ ಹಚ್ಚಿದ. ಪುಲ್ಲಯ್ಯ, ಉತ್ಸಾಹದಿಂದ, ತನ್ನ ಮಗನನ್ನು ಕುರಿತು ನಾನಾ ಪ್ರಶ್ನೆಗಳನ್ನು ಹಾಕಿದ. "ಅವನ ಮುಖ ನೋಡಿದರ ಗೊತ್ತಾಗ್ತದ. ಹುಲೀನ್ನ ಎದುರು ಹಾಕಿಕೊಳ್ಳೊ ಧೈರ್ಯ ಅದ ಅವನಿಗೆ. ಎಲುಬು ಇಲ್ಲದ ನಾಲಿಗೆಯಾದರೂ, ನ್ಯಾಯವಾದುದನ್ನ, ಸತ್ಯವಾದುದನ್ನ ಹೇಳ್ತಾನ—ಸತ್ಯವನ್ನು ಎತ್ತಿ ಹಿಡೀತಾನ...... ಇಂತಹವನು ನೂರಿಗೆ, ಸಾವಿರಕ್ಕಲ್ಲ, ಲಕ್ಷಕ್ಕ ಒಬ್ಬರು ಹುಟ್ಟತಾರ......" ಜ್ಯೋತಿಷಿ ಹೇಳಿದಾಗ, ಪುಲ್ಲಯ್ಯನಿಗೆ ಅತ್ಯಾನಂದವಾಯಿತು.

ಕೈಯಲ್ಲಿದ್ದ ಪಾವಲಿಯಲ್ಲಿ ಎರಡಾಣೆ ಆ ಜ್ಯೋತಿಷಿಗೆ ಕೊಟ್ಟು, ಮತ್ತೊಮ್ಮೆ ನಮಸ್ಕರಿಸಿ, ಪುಲ್ಲಯ್ಯ ಅಲ್ಲಿಂದ ಹೊರಟ. ಆಗಲೇ ಬೀದಿ ದೀಪಗಳು ಹತ್ತಿಕೊಂಡವು. ಪುಲ್ಲಯ್ಯನ ಸಂತೋಷ, ಉತ್ಸಾಹ ಉಕ್ಕಿ ಹರಿಯತೊಡಗಿತ್ತು. ದಾರಿಯಲ್ಲಿ ಹೋಗುತ್ತಿದ್ದನಾದರೂ ಪದೆಪದೆ ಮಗನನ್ನೆ ನೋಡುತ್ತಿದ್ದ.

"ನನ್ನ ಆಯುಷ್ಯ ಎಂಬತ್ತು ವರ್ಷ. ನನಗ ಈಗ ಶನಿಕಾಟ ಇದ್ದರೂ, ಎಷ್ಟು ದಿನ ಇದ್ದೀತು? ನನ್ನ ಮಗನ್ನ ಸಾಲೀಗೆ ಹಾಕ್ತೀನಿ, ಹ್ಯಾಂಗಿದ್ದರೂ ಪಟ್ಟಣ ಸೇರೀನಿ. ನಾಲ್ಕು ಜನರ ಕಾಲು ಹಿಡಿದು, ಮಗನ್ನ ಓದಸ್ತೀನಿ—ನನ್ನ ಮಗ ದೊಡ್ಡವನಾಗಿ ದೊಡ್ಡ ದೊಡ್ಡ ಪುಸ್ತಕ ಓದತಾನ. ಓದಿ ನ್ಯಾಯ ನೀಡೊ ನ್ಯಾಯಮೂರ್ತಿ ಆಗ್ತಾನ. ನನ್ನ ಮಗ ಕೋಟಿ ಜನರೊಳಗ ಒಬ್ಬನಾಗಿರೋದು ಕಡಿಮೆ ಏನು? ನಮ್ಮಪ್ಪ ಪುಣ್ಯಾತ್ಮ. ದೊಡ್ಡ ಜೀವ ಆತನದು. ಆತನೇ ಹುಟ್ಟಿಬಂದಾನ ಅಂದಮ್ಯಾಲೆ ಕಡಿಮೆ ಏನು?"—ಅಂದುಕೊಳ್ಳುತ್ತಲೆ, ಪುಲ್ಲಯ್ಯ ಬೀದಿಯ ತಿರುವಿಗೆ ಬಂದಿದ್ದ.

ಆ ಕುರುಡು ಭಿಕ್ಷುಕಿ, ಅದೇ ಬೀದಿಯ ಅದೇ ಸ್ಥಳದಲ್ಲಿ ಕುಳಿತಿದ್ದಳು. ಆವಳನ್ನು ನೋಡಿದೊಡನೆ, ನಿನ್ನೆ ತಾನು ಮಾಡಿದ ಅಪರಾಧದ ನೆನಪಾಗಿ, ಪುಲ್ಲಯ್ಯ ಆಸಹ್ಯಪಟ್ಟು ಕೊಂಡ. ಆ ಕುರುಡು ಭಿಕ್ಷುಕಿಯ ಒಂದಾಣೆ ಕಳವು ಮಾಡಿದಾಗಿನಿಂದ ಅವನ ಮನಸ್ಸು ಒಂದು ತೆರನಾಗಿತ್ತು. ರಾತ್ರಿ ನಿದ್ರೆ ಕೂಡ ಮಾಡಿರಲಿಲ್ಲ. ಈಗ ಒಂದಾಣೆಗೆ ಒಂದಾಣೆ ಬಡ್ಡಿ ಹಾಕಿ, ಕುರುಡು ಭಿಕ್ಷುಕಿಯ ಕೈಯಲ್ಲಿಟ್ಟ. ಅವಳು ಅದನ್ನು ಸವರಿ, ಸಂತೋಷ ದಿಂದ ಹರಸಿದಳು. ಆದರೆ ಪುಲ್ಲಯ್ಯನಿಗೆ ಅವಳ ಹರಕೆ ಶಾಪದಂತೆ ತಟ್ಟಿತು. ತಾನು ಮಾಡಿದ ಅಪರಾಧವನ್ನು ಹೇಳಿಕೊಂಡಲ್ಲಿ ಪಾಪ ಪರಿಹಾರವಾಗುತ್ತದೆಂದುಕೊಂಡ. ಆದರೆ, ತಾನು ಮಾಡಿದ್ದನ್ನು ಹೇಳಿಕೊಳ್ಳದೆ, "ಹಾಗೆ ಹರಿಸಬ್ಯಾಡ...... ನಿನ್ನ ಋಣ ನಾನು ತೀರಸೀನಿ"—ಎಂದಷ್ಟೆ ಹೇಳಿದ.

"ಶ್ರೀಳಿವಳಿಕಿ ಇದ್ದವರು ಹಾಂಗ ಅಂತಾರ...... ನಿಮ್ಮ ಗಳಕಿ ಒಳಗ ನಮ್ಮಂತಹ ಅನಾಥರಿಗೆ ದಾನ ಕೊಟ್ಟರ ಅದು ನಮ್ಮದಾಗಾಣೆಲ್ಲ. ಅದು ನಿಮ್ಮ ಪುಣ್ಯದ ಪ್ರತೀಕ ಆಗಿ, ನಿಮಗ ಪುಣ್ಯ ಗಳಿಸಿಕೊಡ್ತದ"—ಭಿಕ್ಷುಕಿ ನಕ್ಕು ನುಡಿದಳು.

"ಏನು ಪುಣ್ಯಾನೊ, ಏನು ಪಾಪನೊ......" ಪುಲ್ಲಯ್ಯ ತಕ್ಷಣವೇ ಹೇಳಿದ.

"ಹಂಗ್ಯಾಕ ಅಂತೀಯಪ್ಪ. ಒಂದು ಕಾಲದಾಗ ನಾನು ಘನವಾಗಿ ಬಾಳಿದೆ. ಯಾವ ಜನ್ಮದಾಗ ಏನು ಪಾಪ ಮಾಡಿದ್ದೆನೊ ಏನೊ, ಈಗ ನನಗ ಈ ಗತಿ ಬಂದದ. ಅನ್ನಕ್ಕ ಗತಿ ಇರಲಾರದವರಿಗೆ ಆಯುಷ್ಯ ಹೆಚ್ಚಿರ್ತದಂತ ಹೇಳ್ತಾರ. ಒಂದಲ್ಲ ಒಂದು ದಿನ ಎಲ್ಲರೂ ಈ ಲೋಕ ಬಿಟ್ಟು ಹೋಗಬೇಕಾದ್ದ—ಆದರ, ಆ ದಿನ ಬರೋವರೆಗೆ ಹ್ಯಾಂಗಾದರೂ ಮಾಡಿ ಹೊಟ್ಟಿ ತುಂಬಿಕೊಳ್ಳಬೇಕು. ಹೊಟ್ಟಿ ಹಸಿವು ಮನುಷ್ಯನಿಂದ ಮಾಡಬಾರದ್ದನ್ನೆಲ್ಲ ಮಾಡಸ್ತದ. ಕೊಡುವವನು, ಯಾವಾಗಲೂ ಪಡೆಯುವವನಿಗಿಂತ ಮೇಲು. ಅಂತಹವರಿಗೆ ಪುಣ್ಯ ಬಂದೇ ಬರತದ."

ಪುಲ್ಲಯ್ಯ ಯಾವ ಮಾತೂ ಆಡದೆ ಅವಳನ್ನೆ ನೋಡುತ್ತಾ ಕುಳಿತ. ನಿನ್ನೆ ಅವಳನ್ನು ನೋಡಿದಾಗ ಅವನಿಗೆ ಅಸಹ್ಯವಾಗಿತ್ತು. ಅವಳಂತೆ ಹೀನವಾಗಿ ಬಾಳುವುದಕ್ಕಿಂತ ಸಾಯುವುದು ಮೇಲೆಂದು, ಆಗ ಆತ ಅಂದುಕೊಂಡಿದ್ದ. ಆದರೆ, ಈಗ, ಆಕೆಯಂತಹವರು ಕೆಲವು ದಿನ ಬದುಕಿರುವುದು ಒಳ್ಳೆಯದೆನಿಸಿತು. ಆ ಜ್ಯೋತಿಷಿ ಹೇಳಿದಂತೆ, ಹೊಳೆಯ ನೀರು ಹರಿದುಹೋದರೂ, ಹೃದಯ ತುಂಬಿರ್ತದ—"ನಾನು ಹ್ಯಾಂಗಿದ್ದರ ಏನು? ನನ್ನ ನೀಲಿ, ಆ ಹೊಲಸಿನಲ್ಲಿ, ಹಂದಿಗಳ ದೊಡ್ಡಿಯಂತಿರುವ ಆ ಕೊಳಚೆ ಪ್ರದೇಶದಲ್ಲಿದ್ದರೂ, ಅವಳ ಧಾರಾಳತನಕ್ಕೆ, ಅವಳ ಘನತೆ–ಗೌರವಗಳಿಗೆ ಯಾವ ಚ್ಯುತಿಯೂ ಬಂದಿಲ್ಲ"—ಎಂದುಕೊಂಡ ಪುಲ್ಲಯ್ಯ. ಅದರ ಜೊತೆಗೆ, ಇದುವರೆಗೆ ತಾನು ನೋಡಿದ ಜನರ, ಪರಿಚಿತರ ನೆನಪು ಬಂತು. ಅವರಲ್ಲಿ ದುಡ್ಡಿನ ಅಹಂಕಾರದಿಂದ ಸೊಕ್ಕಿಕೊಂಡಿದ್ದ ರಾಜಣ್ಣನ ನೆನಪಾಯಿತು. ದುಡ್ಡಿದ್ದ ರಾಜಣ್ಣ ಒಂದು ದಿನವಾದರೂ ಸುಖಪಡಲಿಲ್ಲ. ದುಡ್ಡಿರದೆ, ಬಡತನದಲ್ಲಿ ಹುಟ್ಟಿ, ಬಡತನದಲ್ಲೆ ಬೆಳೆದ ಮುದುಕಿ—ನೀಲಿಯ ಅಜ್ಜಿ—ಹಾಯಾಗಿ ಬಾಳಿಬದುಕಿ, ನಗುನಗುತ್ತಲೇ ಸ್ವರ್ಗ ಸೇರಿದಳು. ದುಡ್ಡು ಕೊಡಲು ಗೊಡ್ಡು ನೆಪ ಹೇಳುತ್ತಿದ್ದ ರಾಜಣ್ಣನೆ ಅವಳ ಅಂತಿಮ ಸಂಸ್ಕಾರಗಳಿಗಾಗಿ ದುಡ್ಡು ಖರ್ಚು ಮಾಡಿದ. ಈ ಪ್ರಪಂಚಕ್ಕ ಒಂದು ಒಳ್ಳೆಯ ಮುಖವಾಡ ಇದ್ದರ, ಇನ್ನೊಂದು ಕೆಟ್ಟ ಮುಖವಾಡ ಅದ. ಒಳ್ಳೆಯತನಕ್ಕ ಒಳ್ಳೆಯದಕ್ಕ ಸಾವು ಇಲ್ಲ. ಕೆಟ್ಟದು ಸತ್ತರೂ ಪುನಃ ಪುನಃ ಜನ್ಮ ತಳೀತದ. ಕೆಟ್ಟದಕ್ಕ, ದಿನವೂ ಸಾವು ದಿನವು ಜನ್ಮ !!

ನಿರ್ಮಲ ಹೃದಯದ ಆ ಕುರುಡು ಭಿಕ್ಷುಕಿ ಬಳಿ ಕುಳಿತಿರುವಾಗಲೇ, ಪುಲ್ಲಯ್ಯನಿಗೆ ಈ ಎಲ್ಲ ಯೋಚನೆಗಳು ಬಂದವು. ಅಲ್ಲಿಂದೆದ್ದು, ಮನೆಮುಟ್ಟಿ, ಆ ಜ್ಯೋತಿಷಿ ಹೇಳಿದ್ದನ್ನು ಹೆಂಡತಿಯ ಮುಂದೆ ವಿವರಿಸಿದ. "ಆ ಜ್ಯೋತಿಷಿಗೆ ಕೊಟ್ಟ ದುಡ್ಡು ಈಗ

ಕೈಯಾಗಿದ್ದಿದ್ದರ, ಈ ಒಪ್ಪತ್ತಿಗೆ ಹೊಟ್ಟಿಗಾಗ್ತಿತ್ತು"—ಎಂದು ನೀಲಿ ಅಂದಾಗ, ಪುಲ್ಲಯ್ಯನಿಗೆ ಕೋಪ ಬಂತು. "ಪಾಪ ನಮ್ಮಂತಹವರು ಅವನಿಗೆ ಕೈ ತೋರಿಸಿ ಜ್ಯೋತಿಷ್ಯ ಕೇಳದಿದ್ದರ, ಅವನು ಬದುಕೋದಾದರೂ ಹ್ಯಾಂಗ?"—ಎಂದು ಸವಾಲು ಹಾಕಿದ.

ಇದಾದ ಮರುದಿನ, ಅವನು ಪುಟ್ಟಿ ಹಿಡಿದು ಬಜಾರಿಗೆ ಹೋಗಲಿಲ್ಲ. ಮತ್ತೆ, ಕೂಲಿ ಗಾಗಿ ಬಜಾರಿಗೆ ಹೋಗಬಾರದೆಂದು ಪುಲ್ಲಯ್ಯ ಆಗಲೇ ನಿರ್ಧರಿಸಿದ್ದ. ಈ ನಡುವೆ ನೀಲಿ ತುಂಬ ಸೊರಗಿದ್ದಳು. ಅವಳಿಗೆ ಎಲ್ಲಿ ಯಾವ ರೋಗ ಬಡಿದುಕೊಳ್ಳುವುದೊ—ಎಂದು ಪುಲ್ಲಯ್ಯ ದಿಗಿಲುಗೊಂಡಿದ್ದ. ಇಂತಹುದರಲ್ಲಿ, ಅಕ್ಕಪಕ್ಕದವರು ತಾವು ಕೊಟ್ಟಿದ್ದ ಕೈಗಡಕ್ಕಾಗಿ ಅವಸರ ಮಾಡತೊಡಗಿದ್ದರು; ಬಾಡಿಗೆ ಕೊಡಲಿಲ್ಲವೆಂದು, ಇದ್ದ-ಬದ್ದ ಸಾಮಾನುಗಳನ್ನು ಕೊಟ್ಟು ಹೊರಹೋಗುವಂತೆ ಮನೆಯವಳು ಪೀಡಿಸ ತೊಡಗಿದ್ದಳು. ನೀಲಿ, ಯಾರ ಮನೆಯಲ್ಲಾದರೂ ಪಾತ್ರೆ ತಿಕ್ಕುವ ಕೆಲಸ ಸಿಕ್ಕೀತೇನೊ—ಎಂದು ಪರದಾಡತೊಡಗಿದಳು. ಆದರೆ, "ನೀನು ಕಂಡವರ ಮನಿ ಮುಸುರೆ ತಿಕ್ಕೋದು ನಾನು ನೋಡಲಾರೆ. ಸತ್ತರ ಹೀಂಗ ಸಾಯೋಣ—ಅಂತಹ ಕೆಲಸಕ್ಕ ಮಾತ್ರ ನೀನು ಹೋಗಬ್ಯಾಡ"—ಎಂದು ಪುಲ್ಲಯ್ಯ ಖಂಡಿತವಾಗಿ ಹೇಳಿದ್ದ. ಎಲ್ಲಿ ಹೋದರೂ, ಹೊಟ್ಟೆತುಂಬಿಕೊಳ್ಳಲು ಬೇಕಾದಷ್ಟು ಸಂಪಾದನೆ ದೊರೆಯಲಿಲ್ಲ. ಪುಲ್ಲಯ್ಯ ಏನೂ ಮಾಡಲಾಗದೆ ಬೇಸತ್ತ.

ಒಂದು ದಿನ ಸಂಜೆ, ಹಸಿದ ಮಗನನ್ನು ಕರೆದುಕೊಂಡು ಯಾವುದಾದರೂ ಅಂಗಡಿ ಯಲ್ಲಿ ಕೆಲಸ ಸಿಕ್ಕೀತೆ ಎಂದು ನೋಡಲು ಹೊರಟ. ಒಂದು ಅಂಗಡಿಯವನು, "ನಿನ್ನ ಒಳ್ಳೆಯತನ-ಕೆಟ್ಟತನ ನಮಗ ಹ್ಯಾಂಗ ಗೊತ್ತಾಗಬೇಕು? ಇದಕ್ಕೂ ಮೊದಲು, ನಿನ್ನಂತಹವನನ್ನ ಒಬ್ಬನನ್ನು ಕೆಲಸಕ್ಕ ಇಟ್ಟುಕೊಂಡಿದ್ದೆ. ನನ್ನ ಕೈಗೆ ಸಿಕ್ಕದ್ದು ತೊಗೊಂಡು ಓಡಿಹೋದ"—ಎಂದು ವಿವರಿಸಿದ. ಪುಲ್ಲಯ್ಯ, ಎಷ್ಟು ಬೇಡಿಕೊಂಡರೂ, ಅವರು ಅವನಿಗೆ ಕೆಲಸ ಕೊಡಲು ನಿರಾಕರಿಸಿದರು. ರಸ್ತೆಯ ಒಂದು ತುದಿಯಿಂದ ಮತ್ತೊಂದು ತುದಿಯ ವರೆಗೆ ಹೋದರೂ, ಯಾರೂ ಅವನಿಗೆ ಕೆಲಸ ಕೊಡಲಿಲ್ಲ. ಹಸಿವೆಯಿಂದಾಗಿ ನಿತ್ರಾಣರಾಗಿದ್ದ ತಂದೆ-ಮಗ, ಕಾಲೆಳೆದುಕೊಂಡು ಹಿಂದಿರುಗುತ್ತಿದ್ದಾಗ, ಹಿಂದಿನಿಂದ ಯಾರೊ ಕೂಗಿದರು. ಪುಲ್ಲಯ್ಯ, ಹಿಂತಿರುಗಿ ನೋಡಿದಾಗ, ರಾಮಣ್ಣ ಕಂಡ. ಆತ ನನ್ನು ನೋಡಿದೊಡನೆ ಪುಲ್ಲಯ್ಯನಿಗೆ ನಾಚಿಕೆಯಾಯಿತು. ಚುನಾವಣೆಯ ಸಮಯದಲ್ಲಿ ಅವನ ಸ್ನೇಹ ತೊರೆದು ಬಂಗಾರಯ್ಯನ ಗುಂಪನ್ನು ಸೇರಿಕೊಂಡದ್ದು, ಅವನ ಹೃದಯ ವನ್ನು ಚುಚ್ಚುತ್ತಿತ್ತು.

ರಾಮಣ್ಣ, ಮಾಮೂಲಾಗಿ ಪುಲ್ಲಯ್ಯನ ಹೆಗಲ ಮೇಲೆ ಕೈಹಾಕಿ, "ಏನು ತಮ್ಮ ಹ್ಯಾಂಗಿದ್ದೀರಿ? ಬಹಳ ದಿನ ಆತು ನಿನ್ನ ನೋಡಿ. ಆ ಬಂಗಾರಯ್ಯ ಏನಾದರೂ ಕೆಲಸಕ್ಕ ಇಟ್ಟುಕೊಂಡನೇನು?"

"ಎಲ್ಲಿ ಕೆಲಸ ಏನು ಕತಿ? ಆತ ತನಗ ಬೇಕಾದಷ್ಟು ದಿನ ನಮ್ಮ ಬೆನ್ನು ಬೆಡದ. ತನ್ನ ಕೆಲಸಾತು, ನಮ್ಮನ್ನ ಹೊರಹಾಕಿದ. ಆಯ್ತು, ನನ್ನ ಹಣೆಬರಹನss ಹೀಗದ...... ಶನಿದೇವರು ಬೆನ್ನು ಏರಿ ಕೂತಾನ—ಒಳ್ಳೆ ಕೆಲಸ ಮಾಡಿದರೂ, ಕೆಟ್ಟದಾಗಿ ಪರಿಣಮಿಸ್ತದ...... ನಿನ್ನ ಬುದ್ಧಿ ಮಾತೂ ಕೇಳಲಿಲ್ಲ."

"ಇರಲಿ ಬಿಡು. ನಾನು ಸಾಕಷ್ಟು ಕಷ್ಟ ಅನುಭವಿಸೀನಿ. ನಿನ್ನ ಸುಖ-ದುಃಖ ನನಗೂ ಅರ್ಥ ಆಗ್ತದ...... ಬಾ, ಬಾ, ಚಹಾ ಕುಡಿಯೋಣ ಬಾ."

ಪುಲ್ಲಯ್ಯ, ಆತನ ಆಹ್ವಾನವನ್ನು ನಿರಾಕರಿಸದಾದ. ರಸ್ತೆಯ ಪಕ್ಕದಲ್ಲಿದ್ದ 'ಕಾಕಾ' ಹೋಟಲನ್ನು ಹೊಕ್ಕರು. ಅಲ್ಲಿದ್ದ ಬೆಂಚುಗಳಿಂದ ಹಿಡಿದು, ಗೋಡೆಗಳು—ಅಷ್ಟೇ ಏಕೆ ಅಲ್ಲಿ ಕೆಲಸ ಮಾಡುವವರೂ ಸಹ ಕಪ್ಪಾಗಿದ್ದರು. ಒಂದು ಮೂಲೆಯಲ್ಲಿ ಇಡಲಾಗಿದ್ದ ಅಲ್ಯುಮಿನಿಯಂ ತಟ್ಟೆಯಲ್ಲಿ ತರತರದ ತಿಂಡಿಗಳನ್ನು ಇಡಲಾಗಿತ್ತು. ಇನ್ನೊಂದು ಮೂಲೆಯಲ್ಲಿ ಚಹಾ ಮಾಡುವ ಏರ್ಪಾಡಿತ್ತು. ಹೋಟಲಿನ ಯಜಮಾನ, ಮಾಸಿದ ಬನಿಯನ್ನು ತೊಟ್ಟು, ಲುಂಗಿಯುಟ್ಟು ತನ್ನ ಬೊಜ್ಜಿನ ಮೇಲೆ ಕೈ ಆಡಿಸುತ್ತಾ ಕುಳಿತಿದ್ದ. ಅವನ ಪಕ್ಕದಲ್ಲಿದ್ದ ಟೇಬಲ್‌ನ ಮೇಲೆ ಪುಟ್ಟದಾದ ಒಂದು ಗ್ರಾಮಫೋನು ಇತ್ತು. ಅದರಿಂದ ಹಿಂದಿ ಹಾಡುಗಳು ಕೇಳಿಬರುತ್ತಿದ್ದವು.

ರಾಮಣ್ಣ, ಬೊಂಡಾ ಮತ್ತು ರೊಟ್ಟಿ ತರಿಸಿ ಹೊಟ್ಟೆತುಂಬ ತಿನ್ನಿಸಿದ. ಬಲವಂತ ಮಾಡಿ ಚಹಾ ಕುಡಿಸಿದ. ನಾಲ್ಕು ಬೊಂಡಾ ಕಟ್ಟಿಸಿ, "ಅಮ್ಮಗ ಕೊಡು"—ಎಂದು ಮಲ್ಲೇಶಿಯ ಕೈಯಲ್ಲಿಟ್ಟ. ರಾಮಣ್ಣನ ಖರ್ಚಿನಲ್ಲಿ ಪುಲ್ಲಯ್ಯ ತಿಂಡಿ ತಿಂದದ್ದು ಅದು ಮೂರನೆಯ ಸಲವಾಗಿತ್ತು. ಅದರಿಂದ ಅವನಿಗೆ ಮುಜುಗರವಾಯಿತಾದರೂ ಸುಮ್ಮನಿದ್ದ. ಹೊಟ್ಟೆತುಂಬಿದ್ದರಿಂದ ಮೈಯಲ್ಲಿ ಸ್ವಲ್ಪ ಶಕ್ತಿ ಬಂದಂತಾಗಿತ್ತು.

ಮೂವರೂ ಮತ್ತೆ ಬೀದಿಗಿಳಿದರು. ಪುಲ್ಲಯ್ಯ, "ನಿನಗೆಲ್ಲಿಯಾದರೂ ಕೆಲಸ ಸಿಕ್ಕದ ಏನಣ್ಣಾ?"—ಎಂದು ಕೇಳಿದ.

"ಕೆಲಸಕ್ಕೇನು ಕಡಿಮಿ?—ನನ್ನ ತಂಗಿ ಈಗ ಜಡ್ಡಿನಿಂದ ಹಾಸಿಗೆ ಹಿಡಿದಾಳ...... ಈಗ ಎಲ್ಲಾರೂ ಬೊಟ್ಟು ಮಾಡಿ ತೋರಸ್ತಾರ—ನಮ್ಮನ್ನ ಅಪಹಾಸ್ಯ ಮಾಡ್ತಾರ. . . . ಹೊಟ್ಟೆಗೆ ಹಿಟ್ಟಿಲ್ಲದ ಸಾಯೋವಾಗ, ಒಬ್ಬರಾದರೂ ಒಂದು ಬದುಕೀಯಾ-ಸತ್ತೀಯಾ ಅಂತ ಕೇಳಲಿಲ್ಲ—ಒಬ್ಬರೂ ಒಂದು ಕೆಲಸ ಕೊಡಲಿಲ್ಲ. ಕೆಲಸಾನೂ ಇಲ್ಲದ, ತಿನ್ನಲಿಕ್ಕೆ ಕೂಳೂ ಇಲ್ಲದ, ಹೊಟ್ಟೆಗೇನು ಕೇರು ಹಾಕಿಕೊಬೇಕss?"

"ನಿನ್ನ ಹಾಂಗ, ನಾನೂ ಆತನ ಬೆನ್ನು ಬಿಡದ ಇದ್ದರ, ಈ ಹೊತ್ತಿಗೆ ಏನಾದರೂ ಕೆಲಸ ಕೊಡಸ್ತಿದ್ನೇನೊ?"

"ಆತಾದರೂ ಏನು ಕೆಲಸ ಕೊಡಸ್ತಾನ? ಆತನದೂ ಎಲ್ಲಾ ತೊಳಕೊಂಡು ಹೋಗ್ಯದ."

"ಅದು ಹ್ಯಾಂಗಾತು?"

"ಎಲ್ಲಾ ಹೇಳ್ತೀನಿ—ಕೂತ್ಕೊ ಬಾ......" ಎನ್ನುತ್ತಾ ರಾಮಣ್ಣ ಪಕ್ಕದಲ್ಲಿದ್ದ ಕಾಲುವೆಯ ಕಟ್ಟೆಯ ಮೇಲೆ ಕುಳಿತ. ಪುಲ್ಲಯ್ಯನೂ ಆತನ ಬಳಿ ಹೋಗಿ ಕುಳಿತಾಗ, "ನಾಳೆ ಮುಂಜಾನೆ ಬಾ, ಸಿರಿವಂತರ ಆಸೆ, ಬಡವರ ನಿರಾಶೆ—ಎಂಬುದು ಹ್ಯಾಂಗಿರ್ತದ ಅನ್ನೋದನ್ನ ತೋರಸ್ತೀನಿ...... ಇದನ್ನೆಲ್ಲಾ ನೋಡಿದರ, ಈ ಲೋಕದಾಗ, ನೀತಿ–ನ್ಯಾಯಕ್ಕ ಬೆಲೆ ಇಲ್ಲಾ ಅಂಬೋದು ನಿನಗೂ ತಿಳೀತದ."

"ನೀತಿಗೆಟ್ಟ ಬಾಳು ಅದೆಂತಹ ಬಾಳು?"

"ನೋಡು ತಮ್ಮ, ನೀನು ನೀತಿ–ನ್ಯಾಯಕ್ಕ ದುಂಬಾಲು ಬಿದ್ದು ಉಪವಾಸ ಸತ್ತರ, ಅದು ಬಂದು ನಿನ್ನ ಉಳಿಸಲಾರದು. ನೀನು ಬದುಕಿದ್ದರ, ಈ ರೀತಿ–ನೀತಿ...... ಇಲ್ಲಾಂದರ ಏನದ...... ಅಧಿಕಾರದಿಂದ, ದುಡ್ಡಿನಿಂದ ಮದಾಂಧರಾಗಿರುವವರು ರಾಜಕಾರಣಕ್ಕ ಇಳಿದರ ಇನ್ನೇನು ಆಗ್ತದ......? ತನಗಾಗದವರ ಮೇಲೆ ಬಾಂಬ್ ಹಾಕಬೇಕಂತಾನ. ಆದರ, ಆ ಬಾಂಬ್ ಬೀಳುವ ಜಗಾದಾಗ ತನ್ನ ಹೆಂಡತಿ ಮಕ್ಕಳ ಹಾಂಗ ಇತರರ ಹೆಂಡಿರು ಮಕ್ಕಳು ಇರ್ತಾರ—ಅಂಬೋದು ಅವನ ಲಕ್ಷ್ಯಕ್ಕ ಬರಾಂಗಿಲ್ಲ. ಪ್ರಜೆಗಳನ್ನು ತನ್ನ ಮಕ್ಕಳಂತೆ ನೋಡಿಕೊಳ್ಳುವ ಸರ್ಕಾರ ನಮಗೆ ಬೇಕು. ಅಂತಹ ಸರ್ಕಾರ ಬಂದರ, ನಾವೂ ನೀತಿವಂತರಾಗಿ ಬಾಳಬಹುದು...... ನಮ್ಮ ಕಷ್ಟ–ಸುಖಗಳನ್ನು ಕೇಳುವವರು ಯಾರೂ ಇಲ್ಲದಾಗ ನಾವಾದರೂ ನೀತಿವಂತರಾಗಿ ಹ್ಯಾಂಗ ಬಾಳ್ತೀವಿ?"

"ಸುಮ್ಮನ ನಮ್ಮ ಸರ್ಕಾರಕ್ಕ ಯಾಕ ಬಯ್ತಿದಿ? ನಮ್ಮ ಸರ್ಕಾರ ಇನ್ನೂ ಕಿರಿದು. ಅದು ಎಷ್ಟೂಂತ ಕೆಲಸ ಮಾಡಬಲ್ಲುದು ನೀನs ಹೇಳು?"

"ಏ ನೀನೊಬ್ಬ, ದೊಡ್ಡೂರಿನ ವಿಷಯ ನಿನಗ ಗೊತ್ತಿಲ್ಲ. ನಾವು ಸಣ್ಣವರಿದ್ದಾಗ. ನಮ್ಮ ಹಿರೇರಿಗೆ ಹೊಟ್ಟೆತುಂಬ ಊಟ, ಮೈತುಂಬ ಬಟ್ಟೆ ಸಿಕ್ಕರ, ತೃಪ್ತಿಯಿಂದ ಬಾಳುತ್ತಿದ್ದರು. ಈಗ ಹಾಂಗಿಲ್ಲ. ತಿನ್ನಲಿಕ್ಕೆ–ತೊಡಲಿಕ್ಕೆ ಎಲ್ಲಾನೂ ಇದ್ದರೂ, ಕಾರು ಬೇಕು, ಅದು–ಇದು ಬೇಕು...... ಅಂತೂ ಈ ಜನರಿಗೆ ತ್ರಿಪ್ತಿ ಅಂಬೋದs ಇಲ್ಲ. ಇವರ ಆಸೆಗಳಿಗೆ ಕೊನೆಮೊದಲಿಲ್ಲ. ಭೋಗಲಾಲಸೆ ಹೆಚ್ಚಾದಾಗ, ಮನುಷ್ಯನಲ್ಲಿನ ಒಳ್ಳೆಯತನ ಮಣ್ಣುಮುಕ್ಕತದ. ಆಗ, ಇದ್ದವನು, ಇಲ್ಲದವನ ಮ್ಯಾಲೆ ತನ್ನ ಅಧಿಕಾರ ನಡಸ್ತಾನ. ಅವನಿಗೆ ಕಾರು—ಇವನಿಗೆ ಹಸಿವು."

"ಅವನಿಗೆ ಕಾರು ಇದ್ದ ಮಾತ್ರಕ್ಕ, ಇವನಿಗೂ ಕಾರು ಇರಬೇಕಂತಿ ಏನು?"

"ಹಾಂಗೇನಿಲ್ಲ. ಅವನಿಗೆ ಬೇಕಾದರ ಕಾರು ಕೊಡ್ರಿ. ಆದರ ಇವನಿಗೆ ಮೊದಲು ಅನ್ನ ಕೊಡ್ರಿ. ಇವನ ಆಶೆ–ಆಕಾಂಕ್ಷೆಗಳು, ಅವನಷ್ಟು ಉಲ್ಬಣವಾಗಿಲ್ಲ. ಹಾಂಗ ನೋಡಿದರ, ಇವನಲ್ಲೆ ಒಳ್ಳೆಯತನ ಇರೋದು. ಹೊತ್ತು ಬಂದರ, ಇವನs ಟೊಂಕಕಟ್ಟಿ ದುಡೀತಾನ. ಎಲ್ಲರ ಒಳಿತಿಗಾಗಿ ದುಡಿಯಲು ಮುಂದೆ ಬರುವವನೆ ನಿಜವಾದ ಪ್ರಜೆ. ಅದಕ್ಕs ದುಡಿಯುವವರದ ಈ ಲೋಕ."

"ಸರ್ಕಾರ ನೀ ಹೇಳೊ ಹಾಂಗ ಯಾಕ ಮಾಡವಲ್ಲದು?"

"ಈ ಸರ್ಕಾರದೊಳಗ ಇರೋರೆಲ್ಲಾ ಕುಡ್ಡರು—ಕಣ್ಣಿದ್ದೂ ಕುರುಡರು. ಅದಕ್ಕs ನಮಗ, ಈ ಸಂಕಟ ಬಂದದ. ಆಗಿನ ಕಾಲದಾಗ ಶ್ರೀರಾಮ ಏನು ಮಾಡಿದ? ಯಾವನೊ ಅಗಸ ಅಂದುದನ್ನು ಕೇಳಿಸಿಕೊಂಡು, ಮಹಾತಾಯಿ ಸೀತೆಯನ್ನು ಅಡವಿಗೆ ಅಟ್ಟಿದ—ಅಂತಹ ನೀತಿವಂತ ಜನರು ಅಧಿಕಾರಕ್ಕ ಬಂದರ ಗಂಜಿನೀರು ಕುಡಿದರೂ ಅದು ಅಮೃತ ಆಗ್ತದ......"

"ನೀ ಹೇಳ್ಳೋದು ಖರೆ ನೋಡು—ಆದರ, ಅಂತಹ ದಿನಗಳು ಅದು ಯಾವಾಗ ಬರ್‍ತಾವೊ?"

"ಆ ಜಗದೊಡೆಯ ಶ್ರೀರಾಮಚಂದ್ರ, ಲಂಕೆಯಿಂದ ಬಂದ ಮ್ಯಾಲೆ ಏನು ಮಾಡಿದ? ಈಗಿನ ಹಾಂಗ ಆಗೂ, ಎಷ್ಟೋ ಜನ ದುಡ್ಡು ಮಾಡಿಕೊಂಡಿದ್ದರು. ಶ್ರೀರಾಮ ಅವರನ್ನು ಶಪಿಸಲಿಲ್ಲ, ದಂಡಿಸಲಿಲ್ಲ. ಆಂಜನೇಯನನ್ನು ಕಳುಹಿಸಿ, ದುಡ್ಡಿದ್ದವರಿಂದ ಅದನ್ನು ಪಡೆದು ಬಡವರಿಗೆ ಹಂಚಿಕೊಟ್ಟ. ನಮ್ಮ ಈ ಸರ್ಕಾರ ಕಾಳಸಂತೆ ವ್ಯಾಪಾರಸ್ಥರ ಹತ್ತಿರ ಇರೊ ದುಡ್ಡು ಕಿತ್ತುಕೊಂಡು, ನಮಗ ಜೀವನೋಪಾಯ ಕಲ್ಪಿಸಿಕೊಡಬಹುದು."

"ನಮ್ಮೂರಾಗ ಆದದ್ದು ಹೇಳ್ತೀನಿ ಕೇಳು ರಾಮಣ್ಣಾ. ಹತ್ತು ಪಲ್ಲ ಧಾನ್ಯ ಬೆಳೆದ ರಾಜಣ್ಣ, ಪ್ರೊಕ್ಯೂರಮೆಂಟಿಗೆ ಧಾನ್ಯ ಕಡಿಮೆ ಕೊಟ್ಟರೂ, ಒಂದು ಪಲ್ಲ ಬೆಳೆದ ನಾನು, ಎಲ್ಲಾನೂ ಕೊಡಬೇಕಂದರು. ದುಡ್ಡಿದ್ದವನು ಎಲ್ಲಾರಿಗೂ ಒಳ್ಳೆಯವನಾಗೇ ಇರ್‍ತಾನ. ಎಲ್ಲಾರೂ ದುಡ್ಡಿದ್ದವನ ಮರ್ಜಿ ಹಿಡಿಯೋರs...... ಇದಕ್ಕೆಲ್ಲ ಈ ನಡುವಿನ ಜನರೇ ಕಾರಣ. ಈ ಜನರಲ್ಲಿ ನ್ಯಾಯ ಇದ್ದರ, ಇಂದ ನಮ್ಮ ಗತಿ ಹೀಗಾಗ್ತಿರಲಿಲ್ಲ."

ಪುಲ್ಲಯ್ಯನ ಮಾತಿಗೆ ರಾಮಣ್ಣ ತಲೆದೂಗಿದ.

"ನೋಡು ತಮ್ಮ, ಈ ಜಗತ್ತs ಹೀಗದ. ನಾವು ಈ ಲೋಕಕ್ಕ ತಕ್ಕ ಹಾಂಗ ನಡೆದುಕೊಳ್ಳದಿದ್ದರ, ಬದುಕು ಸಾಗಿಸೋದು ಕಷ್ಟ ಆಗ್ತದ.—ನ್ಯಾಯ ದೊರಕಿಸಿ ಕೊಡುವ ಸರ್ಕಾರ ಬರಬೇಕೆಂದು ನಾವು ಕಾದು ಕೂತರ, ಅದು ಬರೋದರೊಳಗ ನಮ್ಮ ಜೀವ ಹೋಗ್ತಾವ...... ನನ್ನ ಮಾತು ಕೇಳು. ಸುಮ್ಮನೆ, ಹೊಟ್ಟಿಗಿಲ್ಲದ ನೀನೂ ಸಾಯಬ್ಯಾಡ, ನಿನ್ನ ಹೆಂಡ್ತಿ ಮಕ್ಕಳನ್ನೂ ಕೊಲ್ಲಬ್ಯಾಡ. ರಾತ್ರಿ ನನ್ನ ಜತಿ ಬಂದಿ ಅಂದರ......"

"ರಾತ್ರಿ? ಎದಕ್ಕ?" ಪುಲ್ಲಯ್ಯ ಸಂಶಯದಿಂದಲೇ ಕೇಳಿದ. ರಾಮಣ್ಣ, ನೀತಿ-ನ್ಯಾಯದ ಬಗ್ಗೆ ಗೌರವ ಇಟ್ಟುಕೊಂಡಿದ್ದ ಪುಲ್ಲಯ್ಯನನ್ನು ಒಮ್ಮೆ ನೋಡಿ, "ಕಳವು ಮಾಡಲಿಕ್ಕಲ್ಲೇಳು...... ರಾತ್ರಿ ಪಡಗಿನಿಂದ ಗೋಧಿ ಇಳಸ್ತಾರ, ಹೋದರ ಕೂಲಿ ಸಿಕ್ಕೀತು...... ಈಗಂತೂ ನೀನು ನಿಮ್ಮೂರಿಗೆ ಹೋಗಲಾರೆ—ಆದಷ್ಟು ಸಂಪಾ

ದಿಸಿಕೊ—ಸಾಕಷ್ಟು ದುಡ್ಡು ಮಾಡಿಕೊಂಡು ಊರಿಗೆ ಹೋಗು"—ಎಂದು ಉಪ ದೇಶಿಸಿದ.

"ರಾತ್ರಿ ಕೆಲಸ ಮಾಡಿದರ ಅಷ್ಟು ದುಡ್ಡು ಸಿಗತದ?" ಪುಲ್ಲಯ್ಯ ಆಶ್ಚರ್ಯದಿಂದ ಕೇಳಿದ.

"ಆ ದೇವರು ನಮ್ಮ ಕಷ್ಟ ನೋಡಿ, ಕನಿಕರ ತೋರಿದರ, ನೂರು ರೂಪಾಯಿ ಆದರೂ ಸಿಗ್ತಾವ. ನಸೀಬು ಛಲೊ ಇದ್ದರ, ಸಾವಿರ ರೂಪಾಯಿ ಆದರೂ ಸಿಗ ಬಹುದು. ನಾಳೆ ರಾತ್ರಿ, ಈ ಹೊತ್ತಿಗೆ, ನಾನು ಇಲ್ಲೇ ಇರ್ತೀನಿ. ಬರತೀ ಹೌದಲ್ಲೊ . . . ಆದರ, ನೀ ಒಬ್ಬನೇ ಬಾ."

"ಇವನು ನನ್ನ ಬೆನ್ನು ಬಿಡಾಣಿಲ್ಲ"—ಪುಲ್ಲಯ್ಯ ಮಲ್ಲೇಶಿಯನ್ನು ತೋರಿಸಿ ಹೇಳಿದ.

"ಬದುಕಬೇಕಾಗಿದ್ದರ, ಹ್ಯಾಂಗಾದರೂ ಮಾಡಿ, ಅವನ್ನ ಬಿಟ್ಟು ಬಾ."

ಪುಲ್ಲಯ್ಯ, ಅಲ್ಲಿಂದ ಸಂತೋಷದಿಂದಲೇ ಮನೆಸೇರಿದ. ನೀಲಿ ಎದುರಾದಾಗ, "ಇಂದಿಗೆ ನಮ್ಮ ಎಲ್ಲಾ ಕಷ್ಟಗಳೂ ದೂರವಾದವು"—ಎಂದು ಸಾರಿದ. "ನಾಳೆ ರಾತ್ರಿ ಯಿಂದ, ಗೋಧಿ ಚೀಲ ಇಳಿಸಲಿಕ್ಕೆ ಹಾರ್ಬರ್‌ಗೆ ಹೋಗ್ತೀನಿ...... ಬಂದುದರಲ್ಲಿ ಅಷ್ಟಿಷ್ಟು ಉಳಿಸಿಕೊಂಡು ಗಂಟುಮಾಡಿದಿ ಅಂದರ, ಮತ್ತ ನಮ್ಮ ಊರಿಗೆ ನಾವು ಹೋಗಬಹುದು"—ಎಂದು ಸಂತೋಷದಿಂದಲೇ ಹೇಳಿದ. ಆದರೆ, ನೀಲಿ, "ಸುಮ್ಮನೆ ಗಾಳಿ ಒಳಗ ಗೋಪುರ ಕಟ್ಟಬ್ಯಾಡ. ಬಂದದ್ದರೊಳಗ ಹೊಟ್ಟೆತುಂಬಿಕೊಂಡು ಮರ್ಯಾದೆಯಿಂದಿದ್ದರ ಸಾಕು"—ಎಂದು ಸಮಾಧಾನದಿಂದಲೇ ಹೇಳಿದಳು.

ಪುಲ್ಲಯ್ಯ, ಪಟ್ಟಣವನ್ನು ಸೇರಿದ ಮೇಲೆ, ಅದೇ ಮೊದಲಸಲವಾಗಿ ಹಾಯಾಗಿ ನಿದ್ರಿಸಿದ.

## [ 35 ]

ಮರುದಿನ ರಾತ್ರಿ ಪುಲ್ಲಯ್ಯ ಮನೆಯಿಂದ ಹೊರಟಾಗ, ಅಂದುಕೊಂಡಂತೆ, ಮಲ್ಲೇಶಿ ಅವನ ಹಿಂದೆ ಬಿದ್ದ. ಎಷ್ಟು ತಿಳಿಹೇಳಿದರೂ ಅವನು ಕೇಳಲಿಲ್ಲ. ನೀಲಿ ಕೂಡ, ಅವನನ್ನು ಸಮಾಧಾನ ಮಾಡಲು ಪ್ರಯತ್ನಿಸಿ ಸೋತಳು. ಕೊನೆಗೆ ನೀಲಿ ಅವನನ್ನು ಹಿಡಿದುಕೊಂಡು, ಗಂಡನಿಗೆ ಹೋಗುವಂತೆ ಹೇಳಿದಳು. ಪುಲ್ಲಯ್ಯ ಹೊರಟಾಗ, ಮಲ್ಲೇಶಿ ತಾಯಿಯಿಂದ ಬಿಡಿಸಿಕೊಂಡು ಓಡಿಹೋಗಲು ಚಡಪಡಿಸಿದ. ಬೇಸರಗೊಂಡ ನೀಲಿ, ಹಳೆಯ ಬಟ್ಟೆಯೊಂದನ್ನು ತೆಗೆದುಕೊಂಡು ಅವನ ಕೈಕಾಲುಗಳನ್ನು ಕಟ್ಟಿ ಒಂದು ಮೂಲೆಯಲ್ಲಿ ಕೂಡಿಸಿದಳು. ಮಲ್ಲೇಶಿ, ಕಟ್ಟಿದ ಗಂಟುಗಳನ್ನು ಬಿಚ್ಚಿಕೊಂಡು ಮೇಲೇಳಲು ಪ್ರಯತ್ನಿಸಿದಾಗ, ನೀಲಿ ಅವನನ್ನು ಹಿಡಿದು, ಹಗ್ಗದಿಂದ ಕೈಕಾಲುಗಳನ್ನು

ಕಟ್ಟಿ ಕೂಡಿಸಿದಳು. ಹಗ್ಗದ ಗಂಟುಗಳನ್ನು ಬಿಡಿಸಲಾಗದೆ ಅಳುತ್ತ ಕುಳಿತ ಮಲ್ಲೇಶಿ. ಕೊನೆಗೆ ನಿದ್ರಾದೇವಿಗೆ ಶರಣಾದ.

ಪುಲ್ಲಯ್ಯ ಬಂದ ಕೂಡಲೇ, ರಾಮಣ್ಣ, ಅವನನ್ನು ಮೊದಲು ತನ್ನ ಮನೆಗೆ ಕರೆದೊಯ್ದ. ಪುಲ್ಲಯ್ಯ ಆತನ ಮನೆಗೆ ಹೋದದ್ದು ಅದೇ ಮೊದಲಸಲವಾಗಿತ್ತು. ಹಾಲು ಚೆಲ್ಲಿದಂತಹ ಬೆಳದಿಂಗಳಿನಲ್ಲಿ ಸುತ್ತಮುತ್ತಲಿನ ಮನೆಗಳನ್ನು ನೋಡಿದ ಪುಲ್ಲಯ್ಯ. ಎಲ್ಲವೂ ಕಸ-ಕಡ್ಡಿಗಳಿಂದ ತುಂಬಿದ್ದು ಅಸಹ್ಯವಾಗಿತ್ತು. ಆ ಕೊಳಚೆ ಪ್ರದೇಶದ ಒಂದು ಮೂಲೆಯಲ್ಲಿ ರಾಮಣ್ಣನ ಗುಡಿಸಲಿತ್ತು. ಒಂದೇ ಒಂದು ಅಂಕಣ—ಅದರಲ್ಲಿ ರಾಮಣ್ಣ, ಆತನ ತಂಗಿ, ಮತ್ತು ಮೂರು ಮಕ್ಕಳು ಸಂಸಾರ ಸಾಗಿಸುತ್ತಿದ್ದರು. ಕಿರಿದಾದ ಆ ಅಂಕಣದಲ್ಲಿ, ಪುಟ್ಟದಾದ ಕಂದೀಲನ್ನು ಬೆಳಗಿಸಿಡಲಾಗಿತ್ತು. ಮಂದವಾದ ಆ ಬೆಳಕಿನಲ್ಲಿ ರಾಮಣ್ಣನ ತಂಗಿ ನೆಲದ ಮೇಲೆ ಮಲಗಿದ್ದು ಪುಲ್ಲಯ್ಯನಿಗೆ ಕಾಣಿಸಿತು. ರಾಮಣ್ಣನ ಮಗ, ಮಲ್ಲೇಶಿಗಿಂತ ಮೂರು ವರ್ಷ ದೊಡ್ಡವನಿದ್ದಂತೆ ಕಾಣುತ್ತಿತ್ತು. ಅವನು ಅಲ್ಲಿಯೇ ಕುಳಿತು ಗಟ್ಟಿಯಾಗಿ ತನ್ನ ಪಾಠಗಳನ್ನು ಓದಿಕೊಳ್ಳುತ್ತಿದ್ದ. ಹಿರಿಯ ಹುಡುಗಿ, ಚಿಕ್ಕವಳನ್ನು ಜೋಳಿಗೆಯಲ್ಲಿ ಹಾಕಿತೂಗುತ್ತಿದ್ದಳು.

ರಾಮಣ್ಣನ ಮಗ ಓದುತ್ತಿರುವುದನ್ನು ನೋಡಿ, ಪುಲ್ಲಯ್ಯನಿಗೆ ತನ್ನ ಮಗನ ಓದಿನ ನೆನಪಾಯಿತು. "ಹುಡುಗ ಹುಷಾರ ಇದ್ದಾನ ಬಿಡು"—ಎಂದ.

ರಾಮಣ್ಣ, ತನ್ನ ಮಗನ ಗುಣಗಾನ ಮಾಡಿ, ಆತನ ಮೇಲಿನ ಆಶೆಯಿಂದಲೇ ತಾನು ಬದುಕುತ್ತಿರುವುದಾಗಿ ತಿಳಿಸಿದ. ಪುಲ್ಲಯ್ಯ ಅದನ್ನು ಕೇಳಿಸಿಕೊಂಡು, ತನ್ನಂತೆಯೇ ತಮ್ಮ ಮಕ್ಕಳ ಮೇಲೆ ಏನೆಲ್ಲ ಆಶೆಗಳನ್ನು ಇಟ್ಟುಕೊಂಡು ಜೀವಿಸುತ್ತಿರುವವರು ಇತರರೂ ಇದ್ದಾರೆಂಬುದನ್ನು ಅರಿತ. ರೋಗಗ್ರಸ್ತಳಾದ ರಾಮಣ್ಣನ ತಂಗಿಯನ್ನು ಅಳುತ್ತಿದ್ದ ತಾಯಿಯಿಲ್ಲದ ತಬ್ಬಲಿಯನ್ನು ನೋಡಿ, ಅವನ ಹೃದಯ ತುಂಬಿಬಂದು, "ತಾಯಿ ಇಲ್ಲದ ಮಕ್ಕಳ ಗೋಳು, ಹೇಳಲು ಅಸಾಧ್ಯ. ಹ್ಯಾಂಗಾದರೂ ಸಂಭಾಳಿಸ್ತಿಯೊ"—ಎಂದ.

ರಾಮಣ್ಣ, ಅಲ್ಲಿಯೇ ನೆಲದ ಮೇಲೆ ಕುಳಿತು ತನ್ನ ಕಥೆ ಹೇಳಲು ಪ್ರಾರಂಭಿಸಿದ. "ಕೂಲಿ-ನಾಲಿ ಮಾಡದ, ಹ್ಯಾಂಗಾದರೂ ಗೌರವದಿಂದ ಬಾಳಬಹುದೆಂದುಕೊಂಡು, ಕಡಲಿ, ಶೇಂಗಾದ ವ್ಯಾಪಾರಕ್ಕಿಳಿದೆ. ಅದರಲ್ಲಿ ಲಾಭ ಬರಲಿಲ್ಲಾ ಅಂತ ಬ್ಯಾರೆ ವ್ಯವಹಾರಕ್ಕೂ ಕೈಹಾಕಿ, ಬಟ್ಟುಸುಟ್ಟುಕೊಂಡೆ. ನನ್ನ ಹೆಣ್ತಿ ಸತ್ತ ದಿವಸ, ನನ್ನ ಕೈಯಾಗ ಒಂದು ಕಾಸೂ ಇರಲಿಲ್ಲ. ಆಕಿ ಬದುಕಿರೋವರೆಗೂ, ಸರಿಯಾಗಿ ಒಂದೊಪ್ಪತ್ತು ಊಟ ಹಾಕಲಿಲ್ಲ—ಹಾಂಗ ನೋಡಿದರ, ಆಕೀನ್ನ ಉಪವಾಸ ಹಾಕಿ ನಾನs ಕೊಂದೆ. ಸಾಯೋವರೆಗೂ, ಒಂದು ದಿನಾನಾದರೂ ನನಗ ಅದು ಬೇಕು-ಇದು ಬೇಕು—ಅಂತ ಕೇಳಲಿಲ್ಲ. ಏನೂ ಇರದಿದ್ದಾಗ ಕೂಡ, ಎಲ್ಲಾನೂ ಇದ್ದವರ ಹಾಂಗ ತ್ರಿಪ್ತಿಯ ಬಾಳು ಬದುಕಿದಳು. ಅವಳು ಸತ್ತ ದಿನ, ನಾನೂ ಸತ್ತೆ."

ಪುಲ್ಲಯ್ಯ ಕೆಲಸದ ವಿಷಯ ಮರೆತು, ರಾಮಣ್ಣನ ದಾರುಣ ಕಥೆ ಕೇಳುತ್ತಾ ಕುಳಿತ. "ನಮ್ಮ ಕೈಯಾಗ ಏನದ—ನಮ್ಮ ಧೈರ್ಯನs ನಮಗ ರಕ್ಷಣೆ. ಧೃತಿಗೆಡದ, ಮನಸ್ಸು ಕಲ್ಲುಮಾಡಿಕೊಂಡು, ಈ ಹುಡುಗರ್ನ ನೋಡಿಕೊಂಡು ದಿನ ಕಳೀತೀನಿ ಆತು."—ರಾಮಣ್ಣ ತನ್ನ ಆತ್ಮಕಥೆ ಮುಗಿಸಿದ.

ಆ ವೇಳೆಗೆ ಇನ್ನೊಬ್ಬ ವ್ಯಕ್ತಿ ಅಲ್ಲಿಗೆ ಆಗಮಿಸಿದ. ನೋಡಲು ಕುಳ್ಳನಾಗಿದ್ದರೂ, ಕಪ್ಪುಬಣ್ಣದ ಭೀಕರ ಆಸಾಮಿ. ಆತ ಬಂದ ಕೂಡಲೆ, ರಾಮಣ್ಣ ಮೇಲೆದ್ದ. ಮೂವರೂ ಮೌನವಾಗಿ ಸ್ವಲ್ಪ ದೂರ ಹೋಗಿ, ರಸ್ತೆಯ ಬದಿಯಲ್ಲಿನ ಕಾಲುವೆಯ ಕಟ್ಟೆಯ ಮೇಲೆ ಕುಳಿತರು. "ಇವನೂ ನಮ್ಮವನs—ನೋಡಲಿಕ್ಕೆ ಹೀಂಗ ಕಾಣಸ್ತಾನಾದರೂ, ಬಡವರೂ ಅಂದರ ಏನು ಬೇಕಾದ್ದು ಮಾಡಲಿಕ್ಕೆ ಸಿದ್ಧ. ಹ್ಯಾಂಗ ಗಳಸ್ತಾನೊ ಹಾಂಗs ಎಲ್ಲರಿಗೂ ಹಂಚಿಕೊಡ್ತಾನ"—ಎಂದು ರಾಮಣ್ಣ, ಆ ಕುಳ್ಳವ್ಯಕ್ತಿಯ ಪರಿಚಯ ಮಾಡಿಸಿದ.

ದೂರದಲ್ಲಿನ ಬಂದರಿನಲ್ಲಿ, ಸಾಲುದೀಪಗಳು ಮಿನುಗುತ್ತಿರುವುದು ಕಾಣಿಸಿದಾಗ, ಪುಲ್ಲಯ್ಯನ ತವಕ ಹೆಚ್ಚಾಯಿತು. "ಕೆಲಸಕ್ಕ ಯಾವಾಗ ಹೋಗ್ಬೇಕು?"—ಎಂದು ಕೇಳಿಯೇಬಿಟ್ಟ.

"ಹೋಗೋಣಂತೇಳು...... ಆದರೂ, ಇವತ್ತು ರಾತ್ರಿ ಮಾತ್ರ, ನಮ್ಮ ಕಾರ್ಯ ನಡೆಯೊ ಹಾಂಗ ಕಾಣೆಸವಲ್ಲದು."

"ಹಾಂಗಂದರ?"

"ಅಕs, ಆಕಾಶದ ಮ್ಯಾಲೆ ಯಾರಿದ್ದಾರ ನೋಡು. ......ಆತ ಕೆಳಗಿಳಿದು ಕತ್ತಲಾಗದ ಹೊರತು, ನಾವೇನೂ ಮಾಡೊ ಹಾಂಗಿಲ್ಲ."

ಪುಲ್ಲಯ್ಯ, ಸಂಶಯದೃಷ್ಟಿಯಿಂದ ರಾಮಣ್ಣನನ್ನು ನೋಡಿದ. ಹಾಗೆಯೇ, "ಹಡಗುಗಳಲ್ಲಿನ ಮಾಲು ಇಳಿಸಬೇಕು ಅಂದಿ......" ಎಂದು ಮಾತು ಎಳೆದು ತನ್ನ ಸಂಶಯವನ್ನು ವ್ಯಕ್ತಪಡಿಸಿದ.

"ಹೌದು ಹೇಳಿದೆ...... ಆದರ—ಆ ಬಂದರಿನ್ಯಾಗ ನಮ್ಮಂತಹವರಿಗೆ ಕೂಲಿ ಸಿಗೋದು ಸುಲಭವಲ್ಲ."

"ಹಾಂಗಿದ್ದರ...... ಏನಂಬೋದು ಸರಿಯಾಗಿ ಹೇಳು ರಾಮಣ್ಣ."

"ಈಗ ನಿನಗ ಕಷ್ಟದ ದಿನಗಳು ಬಂದಾವ. ನಮಗ ಎಲ್ಲಿಯಾದರೂ ಕೆಲಸ ಸಿಕ್ಕಾಗ, ಕೆಲಸ ಮಾಡೋಣ. ಇಲ್ಲದಾಗ...... ಇದರೊಳಗ ತಪ್ಪೇನದ? ನಾವು ಈ ಒಂದು ಸಣ್ಣ ಕೆಲಸಕ್ಕ ಇಳಿದ ಮಾತ್ರಕ್ಕ ಯಾರದೇನೂ ಮುಳುಗಿಹೋಗಾಣಿಲ್ಲ......"

"ಅಂದರ...... ಕಳವು ಮಾಡಬೇಕs......?"

"ಏ, ಚಂದ್ರಯ್ಯಾ, ನೋಡು ಇವನ್ನ. ಕೈಲೆ ಆಗಲಾರದವನ್ಹಾಂಗ ಹೊಟ್ಟೆಗಿಲ್ಲದ ಉಪವಾಸ ಸಾಯ್ತೀನಿ ಅಂತಾನಾಗಲಿ, ಹ್ಯಾಂಗಾದರೂ ಮಾಡಿ ಹೊಟ್ಟೆ ತುಂಬಿಕೊಳ್ಳ

ತೀನಿ ಅನಾಣೆಲ್ಲ...... ನೋಡು ಪುಲ್ಲಯ್ಯ, ಎಲ್ಲಿಯಾದರೂ ಕೆಲಸ ಹುಡುಕಿಕೊಂಡು ಬದುಕಿಕೊಳ್ಳುತೀನಿ ಅಂಬೋ ಧೈರ್ಯ ನಿನಗದ ಏನು ಹೇಳು?"

ಪುಲ್ಲಯ್ಯ, ರಾಮಣ್ಣನ ಈ ಪ್ರಶ್ನೆಗೆ ಉತ್ತರ ನೀಡಲಾಗದೆ ತಲೆ ಕೆಳಗೆ ಹಾಕಿದ.

"ಹೇಳು, ನೀನು ನಿಯತ್ತಿನಿಂದ ಏನಾದರೂ ಸಂಪಾದಿಸಬಲ್ಲೆ ಏನು?"

"ಇಲ್ಲ—ಅದು ಆಗಾಣೆಲ್ಲ."

"ಹಾಂಗಿದ್ದರ, ಹೊಟ್ಟೆಪಾಡಿಗಾಗಿ ಕಳವು ಮಾಡತೀಯಾ?"

"ಇಲ್ಲ...... ಕಳವು ಮಾಡೋದು ನನ್ನಿಂದ ಆಗಾಣೆಲ್ಲ."

"ಹೋಗ್ಲಿ, ದುಡ್ಡಿದ್ದ ಹೆಣ್ಣೊಂದು ನಿನ್ನ ಬೆನ್ನು ಬಿದ್ದರ?......"

"ಛೆ, ಛೆ...... ಅದಂತೂ ಮಹಾಪಾಪ."

"ಒಟ್ಟಿನ್ಯಾಗ, ನೀನು ಕೆಲಸಕ್ಕ ಬಾರದ ಶುಂಭ ಅಂತ ಹೇಳಬೇಕು...... ನೀನು ಗಳಿಸಲಾರಿ...... ಇನ್ನೊಬ್ಬರು ಕೊಟ್ಟದ್ದನ್ನ ಪಡೆಯಲಾರಿ...... ಹೋಗಲಿ, ನಿನ್ನ ಕೈಲಿಂದ ಯಾವ ಕೆಲಸ ಆಗ್ತದ ಅದನ್ನಾದರೂ ಹೇಳು."

"ಏ ಬಿಡೊ, ಅವನೇನು ನೆರವಾದಾನು ನಮಗ...... ನೀತಿ ನಿಯತ್ತಿಗೆ ದುಂಬಾಲು ಬಿದ್ದು ಉಪವಾಸ ಸಾಯೊ ಜಾತಿ ಅವನದು...... ನೋಡಪ್ಪ, ನಿನ್ನ ನ್ಯಾಯ ನನಗ ಬೇಕಾಗಿಲ್ಲ....... ಹೊಟ್ಟೆಗಿಲ್ಲದ ಸಾಯೊ ಪರಿಸ್ಥಿತಿ ಬಂದರೂ, ನೀತಿ–ನಿಜಾಯಿತಿ ಅಂತ ಸುಮ್ಮನೆ ಕೂಡ್ತಿ ಏನು ಹೇಳು? ಆ ಧರ್ಮರಾಜ ಏನು ಮಾಡಿದ? ಆತ ಏನು ಸುಳ್ಳು ಹೇಳಲೇ ಇಲ್ಲೇನು? ಆ ಧರ್ಮರಾಜನಿಗಿಂತ ನೀನು ದೊಡ್ಡವನೇನು......? ನೀನು ಕೈಲಾಗದ ಹೇಡಿಯಲ್ಲದಿದ್ದರೂ, ಮೊದ್ದು ಶಿಖಾಮಣಿ ಇದ್ದಿ—ನೀನು, ಈಗ ನಮ್ಮ ಮಾತು ಕೇಳದಿದ್ದರ, ನಾಲ್ಕು ದಿನ ಆದ ಮ್ಯಾಲೆ, ನಿನ್ನ ಹೆಸರಲೆ ಅಳೋರು ಕೂಡ ಇರಾಣೆಲ್ಲ"—ಚಂದ್ರಯ್ಯ ಕಡ್ಡಿ ತುಂಡುಮಾಡಿದ ಹಾಗೆ ಹೇಳಿದ.

ಪುಲ್ಲಯ್ಯ ಮೌನವಾಗಿದ್ದುದನ್ನು ನೋಡಿ, "ನಾವು ಯಾರನ್ನೂ ಖೂನಿ ಮಾಡಾಣೆಲ್ಲ. ಒಬ್ಬರ ರಕ್ತ ಹೀರೋದಿಲ್ಲ. ನೂರಾರು ಜನರಿಗೆ ಮೋಸಮಾಡಿ ದುಡ್ಡು ಮಾಡಿ ಕೊಂಡವರಿಂದ, ಭಿಕ್ಷೆ ಬೇಡಿದರೂ ಏನೂ ಪಡೆಯಲು ಸಾಧ್ಯವಿಲ್ಲ. ಅಂತಲೇ ಅನ್ಯಾಯದ ಅವರ ಸಂಪಾದನೆಯನ್ನು, ಅನ್ಯಾಯದಿಂದಲೇ ಕಿತ್ತುಕೊಳ್ತೀವಿ ಆತು...... ಆಕಾಶದಲ್ಲಿ ತೇಲಿಬರುವ ಈ ಮೋಡಗಳು ಎಲ್ಲರಿಗೂ ಸೇರಿದ್ದು, ಎಲ್ಲರ ಸುಖಕ್ಕಾಗಿ ಮಳೆಗರೆಯುತ್ತವೆ. ಈ ಭೂಮಿಯ ಮೇಲಿನ ಪ್ರತಿ ವಸ್ತುವಿನ ಮೇಲೂ ನಾವೆಲ್ಲರೂ ಸಮಾನ ಅಧಿಕಾರ ಪಡೆದಿದ್ದೇವೆ—ದೊಡ್ಡವರು, ದೊಡ್ಡ ಕುಟುಂಬದವರು ಸ್ವಲ್ಪ ಹೆಚ್ಚು, ಸಣ್ಣವರು ಸಣ್ಣ ಕುಟುಂಬದವರು ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಭೂದೇವಿಯ ಸಿರಿಯನ್ನು ನಾವೆಲ್ಲರೂ ಹಂಚಿಕೊಂಡರ ಯಾವ ತಂಟೇನೂ ಇರಾಣೆಲ್ಲ. ನಮ್ಮಂತಹವ ರಿಗೆ ಏನೂ ಕೊಡದ, ಎಲ್ಲಾ ಕಬಳಿಸಲು ಹವಣಿಸುವ ಈ ಮುಖಂಡರ ಮ್ಯಾಲೆ, ಈ ದೊಡ್ಡವರ ಮ್ಯಾಲೆ ಮುಗಿಬಿದ್ದು, ನಮ್ಮ ಪಾಲು ನಾವು ಕಿತ್ತುಕೊಳ್ಳದs,

ಉಪವಾಸ ಸಾಯೋದರೊಳಗ ಏನು ಅರ್ಥ ಅದ?"—ರಾಮಣ್ಣ ಉಪದೇಶಿಸಿದ.

ಪುಲ್ಲಯ್ಯ ಆಗಲೂ ಸಹ ಮೌನವಾಗಿಯೇ ಇದ್ದ.

"ನಮ್ಮ ಹಾಂಗ ರಾತ್ರಿಹೊತ್ತಿನ್ಯಾಗ ಕನ್ನಹಾಕೋದು ಒಂದs ಕಳ್ಳತನ ಅಂತ ತಿಳಿದಿ ಏನು? ಮಂದೀನ್ನ ಮೋಸಮಾಡಿ ದುಡ್ಡು ಕಿತ್ತುಕೊಳ್ಳೋರು, ಲಾಭ ಕೋರರು, ಲಂಚ ತಿನ್ನೋರು—ಅವರೇನು ಸಂಬಾಹಿತರೇನು? ಅವರು ಕಳ್ಳರಲ್ಲೇನು? ಹೊಟ್ಟಿ ಪಾಡಿಗೆ ಈ ದುರ್ವ್ಯವಹಾರಕ್ಕ ಇಳಿದ ನಾವು ಕಳ್ಳರೊ—ತಿಂದು ಉಡಲಿಕ್ಕೆ ಎಲ್ಲಾನೂ ಇದ್ದರೂ ಕೂಡ, ನಮ್ಮಂತಹವರ ರಕ್ತ ಹೀರುವ ಈ ಸಮಾಜಘಾತುಕರು ಕಳ್ಳರೊ—ಯೋಚಿಸು. ನೀನು ಬರಲಿಲ್ಲ ಅಂದರ, ನಮ್ಮ ಕೈಲೆ ಆಗಾಣಲ್ಲಾ ಅಂತ ತಿಳೀಬ್ಯಾಡ—ಏನೊ ಮಕ್ಕಳೊಂದಿಗ—ಉಪವಾಸ ಸಾಯ್ತೀದಿ ಅಂತ ಕರದೆ...... ಈ ಪರಪಂಚ ದಾಗ, ಕಳ್ಳತನ–ಸುಳ್ಳತನ ಮಾಡದ, ಅನ್ಯಾಯ ಮಾಡದ ಯಾರೂ ಮುಂದ ಬಂದಿಲ್ಲ. ಹೋಗ್ಲಿ, ನೀನೇನೂ ಕಳುವುಮಾಡಬ್ಯಾಡ—ದೂರ ನಿಂತು, ನಿನ್ನ ಪಾಲು ನೀನು ತಗೊ......"

ನೆತ್ತಿಯ ಮೇಲಿನ ಚಂದಿರ ಕೆಳಗಿಳಿಯುವವರೆಗೂ ಅವರು ಹಾಗೆಯೇ ಮಾತ ನಾಡುತ್ತಾ ಕುಳಿತಿದ್ದರು. ಆ ಹೊತ್ತಿನಲ್ಲಿ ಅವರನ್ನು ಬಿಟ್ಟು ಹಿಂದಿರುಗಲು ಪುಲ್ಲಯ್ಯ ನಿಗೆ ಮನಸ್ಸಾಗಲಿಲ್ಲ. ಸಾಲ ಪಡೆದದ್ದನ್ನು ಹಿಂದಿರುಗಿ ಕೊಡಬೇಕು—ಬಾಡಿಗೆ ಕೊಡ ದಿದ್ದರ ಆ ರಕ್ಕಸಿ ನಿಂತ ಕಾಲಮ್ಯಾಲೆ ಮನಿಯಿಂದ ಹೊರಗ ಹಾಕ್ತಾಳ—ನೀಲಿ ಮುಂದ ಏನೆಲ್ಲಾ ಬಡಾಯಿ ಕೊಚ್ಚಿಕೊಂಡು ಬಂದೀನಿ, ಈಗ ಅದೆಲಾ ಬರೀ ಸುಳ್ಳು ಅಂತ ಹ್ಯಾಂಗ ಹೇಳಲಿ?—ಮಗನ್ನ ಓದಿಸಿ ದೊಡ್ಡವನನ್ನಾಗಿ ಮಾಡೋದು ಹ್ಯಾಂಗ—ಅವನಿಗೆ, ಪಾಟಿ–ಪುಸ್ತಕ, ಬಟ್ಟೆ–ಬರಿ ಎಲ್ಲಿಂದ ತರಬೇಕು? ನಾನು ಈಗ ಇವರ ಜತಿ ಸೇರಿಕೊಳ್ಳದಿದ್ದರ, ನಾಳಿನಿಂದ ಉಪವಾಸ ತಪ್ಪಿದ್ದಲ್ಲ...... ಸುಮ್ಮನೆ ಊರಿಗೆ ಹೊಂಟುಹೋದರ?? ಬಂಗಾರದಂತಹ ಭೂಮಿ, ಜುಳುಜುಳು ಹರಿಯುವ ನದಿ, ದೊಡ್ಡದಾದ ಮನಿ, ಎತ್ತುಗಳು, ವ್ಯವಸಾಯ—ಮನೋಹರವಾದ ನೋಟ—ಆಹ್ಲಾದ ಕರವಾದ ವಾತಾವರಣ, ನೀಲಮ್ಮದೇವಿಯ ಉತ್ಸವ, ಗರಡಿ, ಎಲ್ಲೆಲ್ಲೂ ಸಂತಸ ತುಂಬಿತುಳುಕುವ ಪರಿಸರ—ಇವೆಲ್ಲವೂ ವಿಕಟಾಟ್ಟಹಾಸ ಮಾಡಿದಂತಾಯಿತು ಪುಲ್ಲಯ್ಯ ನಿಗೆ. "ಪುಲ್ಲಯ್ಯ, ನೀನು ಊರು ಬಿಟ್ಟು ಬಂದುದೇಕೆಂಬುದನ್ನು ಮರೆತೆಯಾ? ನೀನು ಈ ದೊಡ್ಡೂರಿಗೆ ಬಂದು ಏನು ಮಾಡಬೇಕೆಂದುಕೊಂಡಿದ್ದಿ...... ಬದುಕು ಕಂಡು ಕೊಳ್ಳಬೇಕೆಂದು ಊರು ಬಿಟ್ಟು ಈ ಊರಿಗೆ ಬಂದಿ...... ಆದರ ಈಗ, ಹಳ್ಳಿಗೆ ಹಿಂದಿರುಗಿದರೂ ಅಲ್ಲೇನದ...... ನಿನ್ನದೂ ಅಂತ ಒಂದು ಮನೆ ಇಲ್ಲ. ಒಂದು ಅಂಗುಲ ಭೂಮಿನೂ ಇಲ್ಲ...... ಊರಿನ ಜನರು ನಿನ್ನ ನೋಡಿ ನಗಲಿಕ್ಕಿಲ್ಲ–ಅಪ ಹಾಸ್ಯ ಮಾಡಲಿಕ್ಕಿಲ್ಲ? ಅಲ್ಲಿಗೆ ಹೋದರೂ ಏನು ತಿಂದು ಬದುಕುತ್ತಿ? ಏನು ಮಾಡ್ತಿ? ಯಾವ ಮುಖ ಇಟ್ಟುಕೊಂಡು ಆ ಊರಿಗೆ ಹೋಗ್ತೀದಿ?"—ಪುಲ್ಲಯ್ಯ

ತನ್ನನ್ನು ತಾನೇ ಪ್ರಶ್ನಿಸಿಕೊಂಡ. ಹೃದಯದಲ್ಲಿನ ತಳಮಳ ಹೆಚ್ಚಾಗಿ, ಕಣ್ಣಲ್ಲಿ ನೀರಾಡಿತು. ಆ ದುಃಖದಲ್ಲಿ, "ಅಮ್ಮಾ ನೀಲಮ್ಮದೇವಿ...... ನನ್ನ ಮೇಲೆ ಕನಿಕರ ತೋರು...... ಈ ಕೆಲಸ ನನ್ನಿಂದ ಆಗಾಣೆಲ್ಲ...... ಸನ್ಮಾರ್ಗದಲ್ಲಿ ನಡೆದು ನ್ಯಾಯವಾಗಿ ಬದುಕುವ ದಾರಿ ತೋರು ತಾಯಿ"—ಎಂದು ದೇವಿಯನ್ನು ಸ್ಮರಿಸಿದ.

ಪುಲ್ಲಯ್ಯ ಕಣ್ಣು ಒರೆಸಿಕೊಳ್ಳುತ್ತಿರುವುದನ್ನು ನೋಡಿದ ಚಂದ್ರಯ್ಯ, "ಅಳತಿ ಏನೊ—ನಮಗೂ ಮೊದಲು ಮೊದಲು ಹೀಗೆ ಅನ್ನಿಸಿತ್ತು. ಈ ಹೊಲಸಿನೊಳಗ ಬೀಳೋದಕ್ಕೂ ಮುಂಚೆ ನಾವೂ ಮನುಷ್ಯರಾಗೇ ಇದ್ವಿ. ಒಂದು ಸರೆ ಈ ಹೊಲಸಿ ನೊಳಗ ಬಿದ್ದರಾತು ಆಮ್ಯಾಲೆ ಹಂದಿಗಳಾಗ್ತೀವಿ. ಅಲ್ಲಿಂದೇನು, ಇಂತಹ ವಿಚಾರಾನಃ ಬರಾಣೆಲ್ಲ ತಲಿ ಒಳಗ"—ಎಂದ.

ಮುವ್ವರು ಸ್ವಲ್ಪ ಹೊತ್ತು ಮೌನವಾಗಿದ್ದರು. ಅನಂತರ ರಾಮಣ್ಣ ಮೇಲೆದ್ದು, "ಏಳು ತಮ್ಮ, ನೀನು ಕಳವು ಮಾಡೋದು ಬ್ಯಾಡ. ನಾವಿಬ್ಬರಃ ಅದನ್ನು ಮಾಡ್ತೀವಿ. ನೀನು ದೂರ ಇದ್ದುಬಿಡು. ನಿನಗ ಎಲ್ಲಿಯಾದರೂ ಕೆಲಸ ಸಿಗುವವರೆಗೂ, ನಿನ್ನ ಮತ್ತು ನಿನ್ನ ಕುಟುಂಬದ ಜೀವನ ನಿರ್ವಹಣೆಗೆ ಎಷ್ಟು ಬೇಕೊ ಅಷ್ಟು ನಮ್ಮ ಹತ್ತಿರ ತಗೊ— ನಾವು ಕೊಡ್ತೀವಿ. ಆದರ......" ಎನ್ನುತ್ತಾ, ಚಂದ್ರಯ್ಯನ ಕೈಯನ್ನು ತನ್ನ ಕೈ ಮೇಲಿಟ್ಟುಕೊಂಡು, ಪುಲ್ಲಯ್ಯನ ಕೈಯನ್ನು ಆತನ ಕೈಮೇಲಿಟ್ಟು—"ಹೇಳ್ರಿ...... ದೇವರಾಣೆಗೂ, ನಮ್ಮ ನಸೀಬು ಕೆಟ್ಟು ನಾವು ಮುವ್ವರ ಪೈಕಿ ಯಾರಾದರೂ ಒಬ್ಬರು ಪೋಲೀಸರ ಕೈಗೆ ಸಿಗಿಬಿದ್ದರ, ಉಳಿದವರ ಗುಟ್ಟನ್ನು, ಏನು ಮಾಡಿದರೂ ಬಿಟ್ಟು ಕೊಡಾಣೆಲ್ಲ"—ಎಂದು ಪ್ರತಿಜ್ಞೆ ಮಾಡಿಸಿದ. ಆಮೇಲೆ, ಮತ್ತೆ ಎರಡು ಸಲ, ಇವೇ ಮಾತು ಹೇಳಿ ಪ್ರತಿಜ್ಞೆ ಕೈಗೊಂಡರು. ಪುಲ್ಲಯ್ಯ, ಮೊದಮೊದಲು ಅಧೈರ್ಯದಿಂದ ಮತ್ತು ಅವಿಶ್ವಾಸದಿಂದ ಈ ಪ್ರತಿಜ್ಞೆ ಕೈಗೊಂಡನಾದರೂ, ಆ ಮೇಲೆ ಮಾತ್ರ ಧೈರ್ಯ ದಿಂದ ಹಾಗೂ ವಿಶ್ವಾಸದಿಂದಲೇ ಪ್ರತಿಜ್ಞೆ ಮಾಡಿದ.

ಇದಾದ ನಂತರ ಮೂವರೂ ಸೇರಿ ಅಲ್ಲಿಂದ ಹೊರಟರು. ಚಂದ್ರಯ್ಯ, ಅಂದು ರಾತ್ರಿ ಯಾರ ಮನೆಗೆ ಕನ್ನ ಹಾಕಬೇಕೆಂಬುದನ್ನು ಮೊದಲೇ ನಿರ್ಧರಿಸಿದಂತಿತ್ತು. ಮೂವರೂ ಒಂದು ಓಣಿಯನ್ನು ತಲುಪಿದರು. ಅಲ್ಲಿದ್ದ ಒಂದೇ ಒಂದು ರಸ್ತೆದೀಪಕ್ಕೆ ಚಂದ್ರಯ್ಯ ಕಲ್ಲುಹೊಡೆದ. ಅದರೊಡನೆ, ಆ ರಸ್ತೆ ಮತ್ತು ಅಲ್ಲಿನ ಪ್ರದೇಶ ಕತ್ತಲಲ್ಲಿ ಮುಳುಗಿತು. ರಾಮಣ್ಣ, ಪುಲ್ಲಯ್ಯನನ್ನು ಕಸದ ಡಬ್ಬಿ ಇದ್ದ ಒಂದು ಮೂಲೆಯಲ್ಲಿ ನಿಲ್ಲಿಸಿ ಗಸ್ತು ತಿರುಗುವ ಪೋಲೀಸರು ಬಂದಲ್ಲಿ ಅಥವಾ ಇತರ ಯಾವುದೇ ಅಪಾಯ ತಲೆದೋರಿದಲ್ಲಿ, ಯಾವ ರೀತಿಯ ಸಂಕೇತ ನೀಡಬೇಕು ಮತ್ತು ಯಾವ ರೀತಿ ಪಾರಾಗಿ ಹೋಗಬೇಕೆಂಬುದನ್ನು ತಿಳಿಸಿದ.

ಚಂದ್ರಯ್ಯ, ಈ ವ್ಯವಹಾರದಲ್ಲಿ ಪಳಗಿದಂತಿತ್ತು. ಪುಲ್ಲಯ್ಯ, ದೂರದಲ್ಲಿ ಒಂದು

ಮೂಲೆಯಲ್ಲಿ ಕುಳಿತಿದ್ದನಾದರೂ ಅವನ ಕಾಲುಗಳು ಗಡಗಡ ನಡುಗುತ್ತಿದ್ದವು. ತಾನು ಊರಲ್ಲಿದ್ದಾಗ, ಯಾರಾದರೂ ಹೀಗೆ ಕನ್ನ ಹಾಕಲು ಬಂದಲ್ಲಿ ಸುಮ್ಮನಿರುತ್ತಿದ್ದನೆ?—ಎಂದು ಪುಲ್ಲಯ್ಯ ಯೋಚಿಸಿದ. ಊರಲ್ಲಿ ರಾತ್ರಿ ಎಲ್ಲಾ ಗಸ್ತು ತಿರುಗಿ ಕಳ್ಳರನ್ನು ಹಿಡಿದಿದ್ದ. ಆದರೆ, ಈಗ ಕಣ್ಣಾರೆ ಎಲ್ಲವನ್ನೂ ನೋಡಿಯೂ ಸುಮ್ಮನಿರಬೇಕೆ—ಎಂಬ ಜಿಜ್ಞಾಸೆ ಹುಟ್ಟಿ, "ಕಳ್ಳರು–ಕಳ್ಳರು......" ಎಂದು ಕೂಗಬೇಕೆಂದುಕೊಂಡ. ಆದರೆ, ರಾಮಣ್ಣನ ಒಳ್ಳೆಯತನ, ಗೇಣು ಹೊಟ್ಟೆಗಾಗಿ ತಾನು ಪಡೆಯುತ್ತಿರುವ ಬವಣೆಗಳು ಅವನ ಬಾಯಿ ಕಟ್ಟಿಹಾಕಿದ್ದವು.

ರಾಮಣ್ಣ ಮತ್ತು ಚಂದ್ರಯ್ಯ, ಪುಲ್ಲಯ್ಯನ ನಿರೀಕ್ಷಣೆಗಿಂತ ಬೇಗನೆ ಬಂದರು. ಮೂವರೂ ಸೇರಿ, ಮತ್ತೆ ಅದೇ ಕಾಲುವೆಯ ಕಟ್ಟೆಗೆ ಬಂದರು. ಚಂದ್ರಯ್ಯನಿಗೆ ಅಂದಿನ ಕೆಲಸದಿಂದ ತೃಪ್ತಿಯಾಗಲಿಲ್ಲ. ಅವನು ತನ್ನ ಬನಿಯನ್ನಿನ ಜೇಬಿನಿಂದ ಒಂದು ಚಿನ್ನದ ಸರವನ್ನು ಮತ್ತು ಭಾರವಾದ ಇನ್ನೇನನ್ನೊ ಹೊರತೆಗೆದ. ಅದು ಹರಿತವಾದ ಚೂರಿ—ಎಂಬುದು ಪುಲ್ಲಯ್ಯನಿಗೆ ತಿಳಿದಾಗ, ಅವನು ನಿಜವಾಗಿ ಗಾಬರಿಗೊಂಡ.

ಬೆಳಗಿನ ಜಾವ. ರಾಮಣ್ಣ, ನಾಳೆ ಮತ್ತೆ ಭೇಟಿ ಆಗೋಣ—ಎಂದು ಹೇಳಿ ಹೊರಟುಹೋದ. ಪುಲ್ಲಯ್ಯ ಸೋತ ಕಾಲುಗಳನ್ನು ಎಳೆದುಕೊಂಡು, ಮನೆಯ ಕಡೆ ಹೆಜ್ಜೆ ಹಾಕಿದ.

ದಾರಿಯಲ್ಲಿ ಏನೇನೊ ಕನಸು ಕಾಣಹತ್ತಿದ. ತನಗೆ ಬರುವ ದುಡ್ಡನ್ನು ನೀಲಿಯ ಕೈಗೆ ಕೊಡಬೇಕು. ಆ ದುಡ್ಡು ಎಲ್ಲಿಂದ ಬಂತೆಂದು ಅವಳು ಕೇಳಿದಲ್ಲಿ ಏನೆಂದು ಹೇಳಬೇಕು—ಎಂದೆಲ್ಲ ಅವನು ಯೋಚಿಸಿದ. ಆಗ ಅವನಿಗೆ ತನ್ನ ಮದುವೆಯ ದಿನದ ನೆನಪಾಯಿತು. ನನ್ನ ಗಳಿಕೆಯಲ್ಲಿ ಅರ್ಧವನ್ನು ಅವಳಿಗೆ ಕೊಡುವುದಾಗಿ ಆಗ, ಅಗ್ನಿಸಾಕ್ಷಿಯಾಗಿ ಪ್ರತಿಜ್ಞೆಮಾಡಿದ್ದ.—ಆ ಪ್ರತಿಜ್ಞೆಗೆ ಅನುಸಾರವಾಗಿ ನಡೆದುಕೊಳ್ಳದಿದ್ದರೆ...... ಛೆ—ನಾಳೆ ಈ ಪಾಪಕೃತ್ಯಕ್ಕೆ, ಪಾಪದ ಲೇಪನ ಹೊತ್ತ ಈ ದುಡ್ಡಿಗಾಗಿ ಹೋಗಬಾರದೆಂದುಕೊಂಡ.

## [ 36 ]

ಬೆಳಿಗ್ಗೆ ತಂದೆಯನ್ನು ನೋಡಿ, ಮಲ್ಲೇಶಿ ದೂರ ಓಡಿಹೋದ. ಪುಲ್ಲಯ್ಯ ಮಾತನಾಡಿಸಿದರೂ, ಅವನು ಮಾತನಾಡಲಿಲ್ಲ. ನೀಲಿ, "ಕೂಲಿ ಎಷ್ಟು ಕೊಟ್ಟರು?"—ಎಂದು ಕೇಳಿದಾಗ, ಕೂಡಲೇ ಜವಾಬು ಕೊಡದಿದ್ದಲ್ಲಿ ಸಂಕಟಕ್ಕಿಟ್ಟುಕೊಂಡೀತೆಂದು, "ಮೂರು ರೂಪಾಯಿ"—ಎಂದು ಹೇಳಿದ. ಆಕೆ ಸಂತೋಷದಿಂದ, "ದಿವಸ ರಾತ್ರಿ

ಹೋಗಬೇಕೇನು?"—ಎಂದು ಕೇಳಿದಾಗ, "ಏನೊ, ಸಿಕ್ಕಿದ ದಿನಾ ಹೋಗ್ತೀನಿ—ಇಲ್ಲದ ದಿನ ಇಲ್ಲ"—ಎಂದು ಪುಲ್ಲಯ್ಯ ಜವಾಬು ಕೊಟ್ಟ.

ತಾನು ಸುಳ್ಳು ಹೇಳುತ್ತಿರುವೆನೆಂಬ ಅರಿವು ಪುಲ್ಲಯ್ಯನಿಗಿತ್ತು. ಆದರಿಂದ ಅವನಲ್ಲಿ ಭಯವೂ ಹುಟ್ಟಿತ್ತು. ಆದರೆ, ಅನ್ಯಮಾರ್ಗವಿರಲಿಲ್ಲ. ನೀಲಿ ಸ್ವಲ್ಪ ಹೊತ್ತು ಕಾದು, "ಕೂಲಿ ಕೊಡಲಿಲ್ಲೇನು?"—ಎಂದು ಕೇಳಿದಳು.

"ಕೊಡ್ತಾರ."

"ಯಾವಾಗ?"

"ಇವತ್ತ......" —ಎನ್ನುತ್ತಾ, ಪುಲ್ಲಯ್ಯ ಹಾಗೆಯೆ ನೆಲದ ಮೇಲೆ ಉರುಳಿಕೊಂಡು. ಮಲ್ಲೇಶಿಯನ್ನು ಕರೆದ. ಆದರೆ ಅವನು ಬರಲೇ ಇಲ್ಲ. ಮಗಳು ಮಾತ್ರ ಪಕ್ಕದಲ್ಲೆ ಕುಳಿತು ಆಡುತ್ತಿದ್ದಳು.

"ಇವತ್ತು ಕರಕೊಂಡು ಹೋಗ್ತೀನಿ ಬಾ......" ಎಂದು ಹೇಳಿದಾಗ ಮಾತ್ರ, ಮಲ್ಲೇಶಿ ಗಂಟುಮೋರೆ ಮಾಡಿಕೊಂಡೆ ಅವನ ಬಳಿ ಹೋದ.

ಮಲ್ಲೇಶಿಯನ್ನು ಸಮಾಧಾನಪಡಿಸಲು, ಅವನನ್ನು ನಗಿಸಲು ಪುಲ್ಲಯ್ಯ ಪ್ರಯತ್ನಿಸಿದ. ಅಷ್ಟರಲ್ಲಿ ಪಕ್ಕದ ಗುಡಿಸಲಿನವಳು ನೀಲಿಯನ್ನು ಕೂಗಿ, ದುಡ್ಡಿಗಾಗಿ ತಗಾದೆ ಮಾಡಹತ್ತಿದಳು. ಕೂಡಲೆ ಬಾಡಿಗೆಯ ದುಡ್ಡು ಮೂರು ರೂಪಾಯಿ ಕೊಡಬೇಕೆಂದು ಬಾಯಿಮಾಡತೊಡಗಿದಳು. ಅವಳ ಆ ಕೂಗಾಟ ಕೇಳಿ, ಪುಲ್ಲಯ್ಯನಿಗೆ ಸುಮ್ಮನಿರಲಾಗಲಿಲ್ಲ. ಸರಕ್ಕನೆ ಎದ್ದುಬಂದು,

"ನಾವು ನಿನಗ ಮೋಸಮಾಡಿ ಓಡಿಹೋಗೊ ಹಾಂಗ ಯಾಕ ಒದರಾಡ್ತೀದಿ......" ಎಂದು ಸಿಟ್ಟಿನಿಂದಲೇ ಕೇಳಿದ.

"ಅಯ್ಯ, ಅಷ್ಟು ಪೌರುಷ ಇದ್ದರ, ನನ್ನ ದುಡ್ಡು ನನಗ ಕೊಟ್ಟು ಇಲ್ಲಿಂದ ತೊಲಗಬಾರದs......"

"ನಿನ್ನ ದುಡ್ಡು ಕೊಡದ ಎಲ್ಲಿಗೂ ಹೋಗಾಣಿಲ್ಲೇಳು."

"ಯಾವಾಗಲೋ ಕೊಟ್ಟರ ಎದಕ್ಕ ಬಂತು? ನೀನು ಕೊಡೋ ವರೆಗೂ ಕೈಕಟ್ಟಿಕೊಂಡು ಕೂಡಲಿಕ್ಕ ನನಗೇನು ನಿಂತದ. ಎಷ್ಟೊ ಮಂದಿ ಮನಿ ಮನಿ ಅಂತ ಪರದಾಡಲಿಖತ್ಯಾರ—ನಿನಗ ಅಷ್ಟು ದಿಮಾಕು ಇದ್ದರ, ತಿಂಗಳಾದ ಕೂಡಲೆ ಬಾಡಗಿ ಒಗದು ಹೋಗು."

ನೀಲಿ ಗಂಡನನ್ನು ಸಮಾಧಾನ ಮಾಡಿ ಒಳ ಕಳುಹಿಸಿದಳು. ಆದರೂ, ಆ ಹೆಣ್ಣುಮಗಳ ಸೊಲ್ಲು ಅಡಗಲಿಲ್ಲ. ಪುಲ್ಲಯ್ಯನ ಅಭಿಮಾನ ಕೆರಳಿತ್ತು. ಅವನು ನೇರವಾಗಿ ರಾಮಣ್ಣನ ಮನೆಗೆ ಓಡಿ, "ಮೂರು ರೂಪಾಯಿ ಬೇಕು"—ಎಂದು ಕೇಳಿದ. ರಾಮಣ್ಣ, ಚಂದ್ರಯ್ಯನ ಬಳಿ ಹೋಗಿ ದುಡ್ಡು ತಂದುಕೊಟ್ಟು, "ರಾತ್ರಿ ಸರಕು ಇನ್ನೂ ಮಾರಿಲ್ಲ. ಕಳವಿನ ಸರಕಿಗೆ ಅರ್ಧಕ್ಕರ್ಧ ಬೆಲೆ ಕೊಡ್ತಾರ. ಆ ಅಕ್ಕಸಾಲಿಗನಿಗೆ ಭಯ......

ಎಲ್ಲಾರಿಗೂ ಒಂದಿಲ್ಲ ಒಂದು ಭಯ...... ಇರಲಿ, ನಿನ್ನ ಪಾಲಿಗೆ ಹತ್ತು ರೂಪಾಯಿ ಬರ್‍ತದಂತ ಚಂದ್ರಯ್ಯ ಹೇಳ್ಯಾನ"—ಎಂದು ತಿಳಿಸಿದ.

"ಈಗಂತೂ ಮೂರು ರೂಪಾಯಿ ಕೊಟ್ಟೆಯಲ್ಲ—ಸಾಕು. ಇನ್ನು ದುಡ್ಡಿನ ಮಾತು ಯಾಕಿದ್ದೀತು?"—ಎಂದು ಹೇಳಿ ಪುಲ್ಲಯ್ಯ ಮನೆಗೆ ಹಿಂದಿರುಗಿದ.

ತಾನು ತಂದ ದುಡ್ಡನ್ನು ನೀಲಿಯ ಕೈಗೆ ಕೊಟ್ಟು, "ಅಕಿ ಮಾರಿ ಮ್ಯಾಲೆ ಒಗದು ಬಾ"—ಎಂದು ಹೇಳಿದ. ಅದನ್ನು ಕೇಳಿಸಿಕೊಂಡ ಪಕ್ಕದ ಮನೆಯ ಆ ಹೆಂಗಸು, ಮತ್ತೆ ಧ್ವನಿ ಏರಿಸಿದಳು. "ಯಾಕಮ್ಮಾ ಹಾಂಗ ಕೂಗಾಡ್ತಿದಿ. ನಾಲ್ಕು ದಿನ ಕಲೆತು ಇರೋರು—ನಗುನಗುತ್ತ ಇರಬೇಕು—ನಾವಾದರೂ ಇಲ್ಲಿ ಎಷ್ಟು ದಿನ ಇರ್‍ತೀವಿ...... ಸುಮ್ಮನೆ ಮನಸ್ತಾಪ ಮಾಡಿಕೊಂಡರ ಏನು ಬಂತು? ಒಳ್ಳೇದಕ್ಕಾಗಲೀ ಕೆಟ್ಟದ ಕ್ಕಾಗಲೀ ನೆರೆಹೊರೆಯವರು ಬರದ ಮತ್ಯಾರ ಬರ್‍ತಾರು?"—ಎಂದು ನೀಲಿ ಸಮಾ ಧಾನ ಹೇಳಿದಳು. ಆದರೂ ಸ್ವಲ್ಪ ಹೊತ್ತು ಕೂಗಾಡಿ, ಕೊನೆಗೆ ತಾನೇ ಬೇಸತ್ತು ಆ ಹೆಂಗಸು ತೆಪ್ಪಗಾದಳು.

ಅಂದು ಸಂಜೆ ಪುಲ್ಲಯ್ಯ, ಮಲ್ಲೇಶಿಯನ್ನು ಕರೆದುಕೊಂಡು ರಾಮಣ್ಣನ ಮನೆಗೆ ಹೋದ. ರಾಮಣ್ಣ ಅವರಿಬ್ಬರನ್ನೂ ಬಲವಂತದಿಂದ ಸಿನೆಮಾಕ್ಕೆ ಕರೆದೊಯ್ದ. ಚಿತ್ರಪಟದ ಮೇಲೆ ಬಂದ ಗೊಂಬೆಗಳನ್ನು ನೋಡಿ ಮಲ್ಲೇಶಿ ಕುಣಿದಾಡಿದ. ಅವನು ಕೇಕೆ ಹಾಕಲು ಪ್ರಾರಂಭಿಸಿದಾಗ, ಪಕ್ಕದವರು ಪುಲ್ಲಯ್ಯನನ್ನು ಗದರಿಕೊಂಡರು. ಪುಲ್ಲಯ್ಯ ಸಿನೆಮಾ ನೋಡುತ್ತಿದ್ದಂತೆಯೇ ಏನೇನೊ ಕನಸು ಕಾಣತೊಡಗಿದ್ದ. ಅದರಲ್ಲಿದ್ದಂತೆ; ತನಗೂ ಸಹ ಬಂಗಲೆಗಳು, ಬಟ್ಟೆಗಳು, ದುಡ್ಡು ತನ್ನಲ್ಲಿದ್ದಲ್ಲಿ ಸುಖ ವಾಗಿ ಜೀವಿಸಬಹುದು—ಎಂದೆಲ್ಲಾ ಯೋಚಿಸಿದ. ಒಂದು ಸಲ ನೋಡಿದ ಮೇಲೆ, ಮತ್ತೆ ಮತ್ತೆ ಸಿನೆಮಾ ನೋಡಬೇಕೆಂಬ ಆಸೆ, ಅದರಲ್ಲಿನ ಹಾಡುಗಳನ್ನು ಕೇಳಬೇಕೆಂಬ ಆಸೆ ಅವನಲ್ಲಿ ಮೂಡಿತು. ಮೂರು ಗಂಟೆಯಾದರೂ, ಜೀವನದ ಎಲ್ಲಾ ಜಂಜಾಟ ಗಳನ್ನು ಮರೆತು ಸಂತೋಷವಾಗಿದ್ದೆನೆಂಬ ತೃಪ್ತಿಯೂ ಅವನಲ್ಲಿ ಮೂಡಿತು.

ಪುಲ್ಲಯ್ಯ, ಅಂದು ರಾತ್ರಿ ಮನೆಯಲ್ಲೆ ಕುಳಿತದ್ದನ್ನು ನೋಡಿ, "ಇವತ್ತು ಕೆಲಸಕ್ಕ ಹೋಗಾಣಿಲ್ಲೇನು?" —ಎಂದು ನೀಲಿ ಕೇಳಿದಳು. "ಇಲ್ಲ, ಇವತ್ತು ಸರಕು ಇಳಿಸಾ ಣಿಲ್ಲಂತ"—ಎಂದು ಹೇಳಿ ತಪ್ಪಿಸಿಕೊಂಡ. ಮಲ್ಲೇಶಿ ತಾನು ನೋಡಿ ಬಂದ ಸಿನೆಮಾದ ಸುದ್ದಿಯನ್ನು ಉತ್ಸಾಹದಿಂದ ಹೇಳಿದ. ಇದಾದ ಮರುದಿನ ರಸ್ತೆಯಲ್ಲಿ ಸಿಕ್ಕ ಚಂದ್ರಯ್ಯ, ಪುಲ್ಲಯ್ಯನನ್ನು ತನ್ನ ಜೊತೆ ಕರೆದುಕೊಂಡು ಹೊರಟ. ಸಂದುಗೊಂದಿ ಯಲ್ಲಿ ಹೆಜ್ಜೆ ಹಾಕುತ್ತಾ ಹೋಗಿ, ಅವರು ಒಂದು ಮನೆ ತಲುಪಿದರು. ಆ ಮನೆಯ ಅಂಗಳದಲ್ಲಿ, ಹತ್ತು ಜನ ಕುಳಿತು ಇಸ್ಪೇಟು ಆಡುತ್ತಿದ್ದರು. ಚಂದ್ರಯ್ಯ ಅವರನ್ನು ಸೇರಿಕೊಂಡು, "ಕೂತ್ಕೊ, ನೋಡು ಈ ಆಟ ಹ್ಯಾಂಗಿರ್‍ತದಂತ"—ಎಂದು ಪುಲ್ಲಯ್ಯ ನನ್ನು ಕೂಡಿಸಿದ. ಚಂದ್ರಯ್ಯ ದುಡ್ಡು ಕಟ್ಟಿ ಇಸ್ಪೇಟಾಡುವುದನ್ನು ಪುಲ್ಲಯ್ಯ ತೀರ

ಆಶ್ಚರ್ಯದಿಂದ ನೋಡತೊಡಗಿದ. ಮಲ್ಲೇಶಿ ಕೂಡ, ಉತ್ಸಾಹದಿಂದಲೇ ಇದ್ದ. ಮಧ್ಯಾಹ್ನವಾದರೂ ಚಂದ್ರಯ್ಯ ಸ್ಥಳ ಬಿಟ್ಟು ಕದಲಲಿಲ್ಲ. ಪುಲ್ಲಯ್ಯ, ತಾನಿನ್ನು ಹೊರಡುವುದಾಗಿ ತಿಳಿಸಿದಾಗ ಮಾತ್ರ, ಆತ ಎದ್ದು ಬಂದು, "ಇವತ್ತು ರಾತ್ರಿ ಬಾ...... ಈಗಲೇ ಹೋಗಿ ರಾಮಣ್ಣಗೂ ಹೇಳು"—ಎಂದು ತಿಳಿಸಿ, ಮತ್ತೆ ಹೋಗಿ ಆಟಕ್ಕೆ ಕುಳಿತ.

ಪುಲ್ಲಯ್ಯ ಸರಿ—ಎಂದು ತಲೆಹಾಕಿದನಾದರೂ ರಾಮಣ್ಣನ ಮನೆಗೆ ಹೋಗದೆ, ಮನೆ ತಲುಪಿದ. ಮನೆ ಮುಟ್ಟಿದಾಗ ಮನೆಯಲ್ಲಿ ಏನೂ ಇರಲಿಲ್ಲ. "ಕೊಡೋರು ಎಷ್ಟು ದಿನ ಅಂತ ಕೊಡ್ತಾರ...... ಸಾಲ ಕೊಟ್ಟವರು ಈಗ ಮನೀಗ ಬರಾಕ ಹತ್ಯಾರು......" ಎಂದು ನೀಲಿ ಹೇಳಿದಾಗ, ಪುಲ್ಲಯ್ಯ ಅಲ್ಲಿಯೇ ಕುಸಿದು ಕುಳಿತ. ಕೂಸು, ಹಸಿವೆ ಎಂದು ಅಳಲು ಪ್ರಾರಂಭಿಸಿದಾಗ, ಏನೂ ಮಾಡಲು ತೋಚದೆ, ನೀಲಿ ಹಿತ್ತಲಿಗೆ ಹೋದಳು.

ಪುಲ್ಲಯ್ಯ, ಕುಳಿತುಕೊಂಡೆ ಯೋಚಿಸತೊಡಗಿದ...... "ನನಗಂತೂ ಕೆಲಸ ಸಿಗ ವಲ್ದು...... ಹೊಟ್ಟೆಹೊರೆಯೋದು ಆಗವಲ್ದು....... ಒಳ್ಳೇದೊ–ಕೆಟ್ಟದೊ, ರೊಚ್ಚಿನಲ್ಲಿ ಕಾಲಿಟ್ಟೇನಿ ಅಂದಮ್ಯಾಲೆ—ಅದರೊಳಗ ಇಳಿದsಬಿಡ್ತೇನಿ. ನಾನು ರೊಚ್ಚಿನ್ಯಾಗ ಬಿದ್ದು ಮುಳುಗೋದರೊಳಗ, ಇವರಿಗೆ ಒಂದು ದಾರಿ ಮಾಡಿಕೊಡ್ತೇನಿ ......ಈ ಲೋಕದಾಗ, ಹಸಿದ ಹೊಟ್ಟೆ ಮುಂದ ಹನುಮಪ್ಪನೂ ನಿಲ್ಲಲಾರ. ಆ ವಿಶ್ವಾಮಿತ್ರ ಕೂಡ, ಹಸಿವಿ ಹಿಂಗಿಸಿಕೊಳ್ಳಲು ನಾಯಿ ಮಾಂಸ ತಿಂದನಂತ ಹರಿಕಥೆ ಒಳಗ ಹೇಳ್ತಾರ—ಅಂದಮ್ಯಾಲೆ ನಮ್ಮಂತಹವರ ಪಾಡೇನು? ನನಗ ಇಂತಹ ಪರಿಸ್ಥಿತಿ ಯಾಕಾದರೂ ಬಂತೊ–ಏನೊ? ಆಯ್ತು, ಮಾಡಬಾರದ ಕೆಲಸಕ್ಕ ಕೈ ಹಾಕೇನಿ, ಈಗಾದರೂ ನನ್ನ ಸಂಕಷ್ಟಗಳು ದೂರ ಆದರ ಸಾಕು...... ಈ ತಪ್ಪಿಗಾಗಿ ಯಮಧರ್ಮರಾಜ ನನ್ನ ಕುದಿಯುವ ಎಣ್ಣೆಯೊಳಗ ಹಾಕಲಿ—ಬೀಳ್ತೇನಿ—ನಾನು ಸತ್ತಮ್ಯಾಲೆ, ಕುದಿಯುವ ಎಣ್ಣೆಯೊಳಗ ಬಿದ್ದರೂ ಒಂದs ನರಕದಾಗ ಇದ್ದರೂ ಒಂದs. ಅದನ್ನು ನೋಡಲಿಕ್ಕೆ ಅಲ್ಲಿ ಯಾರಿರ್ತಾರ......?"—ಎಂದುಕೊಂಡು ಪುಲ್ಲಯ್ಯ ಎದ್ದು, ಸರಸರನೆ ರಾಮಣ್ಣನ ಮನೆಗೆ ಹೊರಟ.

"ಎಂತಹ ಪರಿಸ್ಥಿತಿ ಬಂದರೂ ಅದನ್ನು ಎದುರಿಸು. ದುಡ್ಡೇನು, ಹೀಂಗ ಬರತದ, ಹಾಂಗ ಹೋಗ್ತದ. ಕೈಯಾಗ ದುಡ್ಡಿದ್ದಾಗ ಹೊಟ್ಟೆತುಂಬ ತಿಂದುಂಡು ಮೈ ಗಟ್ಟಿ ಮಾಡಿಕೊ. ಆಮ್ಯಾಲೆ ಅವರಿವರಿಗೆ ಲಂಚ ಕೊಟ್ಟು ಕೆಲಸ ಸಂಪಾದಿಸು"—ಎಂದು ರಾಮಣ್ಣ ಹೇಳಿದಾಗ, ಪುಲ್ಲಯ್ಯ ಆತನ ಮಾತು ಒಪ್ಪಿಕೊಂಡ.

"ಚಂದ್ರಯ್ಯ, ಇವತ್ತ ಬಾ—ಅಂತ ಹೇಳ್ಯಾನ"—ಪುಲ್ಲಯ್ಯ ಪಿಸುಗುಟ್ಟಿದ.

"ಇಲ್ನೋಡು, ಆ ಚಂದ್ರಯ್ಯ ಇರದಿದ್ದರ ನಮ್ಮ ಕೈಯಿಂದೇನೂ ಆಗಾಣಿಲ್ಲ. ಅದಕ್ಕ, ಅವನು ಕೊಟ್ಟದ್ದು ಇಸಕೊಂಡು ಸುಮ್ಮನಿರೋಣ. ಆ ಘಟಿಂಗನಿಗೆ ಇಬ್ಬರು

ಹೆಂಡಂದಿರು—ಅದರ ಮ್ಯಾಲೆ ಇಸ್ಪೇಟು, ಜೂಜು, ಕುಡಿಯೋದು—ಎಲ್ಲಾ ಹವ್ಯಾಸಾನೂ ಇಟ್ಟುಕೊಂಡಾನ. ಅವನ ಈ ಇತರ ವ್ಯವಹಾರದಾಗ, ನೀನೂ ಸೇರಿದಿ ಅಂದರ, ಮೂರು ದಿನದಾಗ ನಿನ್ನ ಬಣ್ಣನ ಬದಲಾಯಿಸಿಬಿಡ್ತಾನ. ಅದಕ್ಕ, ನಮ್ಮ-ಅವನ ಸಂಬಂಧ ನಮ್ಮ ಈ ಕೆಲಸದ ಮಟ್ಟಿಗಿರೋದು ಒಳ್ಳೇದು"—ಎಂದು ರಾಮಣ್ಣ ಬುದ್ಧಿ ಹೇಳಿದ.

ರಾತ್ರಿ ಎಲ್ಲಿ ಮತ್ತು ಯಾವಾಗ ಭೇಟಿ ಆಗಬೇಕೆಂಬುದನ್ನು ನಿರ್ಧರಿಸಿದ ನಂತರ, ಪುಲ್ಲಯ್ಯ, ಪಕ್ಕದಲ್ಲಿ ನಿಂತಿದ್ದ ಮಗನನ್ನು ತೋರಿಸಿ, "ಇವನು ನನ್ನ ಬೆನ್ನ ಬಿಡಾಂಗಿಲ್ಲ. ಚಂದ್ರಯ್ಯ ಅದು ಯಾವುದೊ ಗುಳಿಗಿ ಕೊಟ್ಟಾನ. ಅದನ್ನು ಕೊಟ್ಟು ಮಲಗಿಸ್ತೀನಿ"—ಎಂದು ತಿಳಿಸಿದ.

"ಹಾಂಗs ಮಾಡು. ನಾನೂ, ಮೊದಮೊದಲು, ನನ್ನ ಮಗಗ ಗುಳಿಗಿ ಕೊಟ್ಟು ಮಲಗಸ್ತಿದ್ದೆ"—ರಾಮಣ್ಣ ತಿಳಿಸಿದ.

ತನಗೆ ಬಂದ ದುಡ್ಡೆಲ್ಲಾ ನೀಲಿಯ ಕೈಗೆ ಹಾಕಿದಲ್ಲಿ, ಅಷ್ಟೊಂದು ದುಡ್ಡು ಒಟ್ಟಿಗೆ ಹ್ಯಾಂಗ ಬಂತು—ಎಂದು ಶಂಕಿಸಬಹುದೆಂದುಕೊಂಡು, ಆ ಬಗ್ಗೆಯೂ ಸಹ ಯೋಚಿಸಿದ ಪುಲ್ಲಯ್ಯ. ಕೊನೆಗೆ, ಹೆಚ್ಚು ದುಡ್ಡು ಬಂದಾಗಲೆಲ್ಲಾ, ಅವಳ ಕೈಗೆ ಎರಡು ರೂಪಾಯಿ ಹಾಕಿ ಯಾರಿಂದಲೊ ಸಾಲ ತಂದೀನಿ—ಅಂತ ಹೇಳಿದರಾಯಿತೆಂದು ನಿರ್ಧರಿಸಿದ.

## [ 37 ]

ಕೆಲಸದ ನೆಪ ಹೇಳಿ ಕಳ್ಳತನಕ್ಕೆ ಹೋಗುವುದು ಪುಲ್ಲಯ್ಯನಿಗೆ ಅಭ್ಯಾಸವಾಗಿಹೋಯಿತು. ಒಂದು ದಿನವೂ ಸಹ ಮನೆಯಲ್ಲಿ ಮಲಗಲು ಅವನಿಗೆ ಮನಸ್ಸಾಗಲಿಲ್ಲ. ದಿನದಿನಕ್ಕೆ, ಕಳ್ಳತನದಲ್ಲಿ ಪ್ರವೀಣನಾದ. ಈಗಂತೂ, ಮಲ್ಲೇಶಿ ಬೆನ್ನಟ್ಟಿ ಬರುವನೆಂಬ ಭಯವೂ ಅವನಿಗಿರಲಿಲ್ಲ. ಅಗತ್ಯವೆನಿಸಿದಾಗಲೆಲ್ಲಾ, ಚಂದ್ರಯ್ಯ ಕೊಟ್ಟ ಗುಳಿಗೆ ಹಾಕಿ ಅವನನ್ನು ಮಲಗಿಸಿಬಿಡುತ್ತಿದ್ದ. ಮಲ್ಲೇಶಿಗೂ, ತಂದೆಯನ್ನು ಬಿಟ್ಟು ಮಲಗುವ ಅಭ್ಯಾಸವಾಗಿತ್ತು. ಆದರೆ, ನಿದ್ದೆ ಬರುವವರೆಗೆ ಮಾತ್ರ, ಏನಾದರೂ ತಂದೆಯನ್ನು ಬಿಟ್ಟು ಇರುತ್ತಿರಲಿಲ್ಲ.

ಈಗ ಪುಲ್ಲಯ್ಯನ ಪರಿಸ್ಥಿತಿ ತಕ್ಕಮಟ್ಟಿಗೆ ಸುಧಾರಿಸಿತ್ತು. ತಾನೊಬ್ಬನೇ ಅಲ್ಲದೆ, ಕುಟುಂಬದ ಎಲ್ಲರೂ ಹೊಟ್ಟೆತುಂಬ ಉಂಡು ಹಾಯಾಗಿದ್ದರು. ಮಲ್ಲೇಶಿ ಈಗ ಶಾಲೆಗೂ ಸಹ ಹೋಗುತ್ತಿದ್ದ. ಶಾಲೆಗೆ ಹೋಗಿಬರುವುದರಿಂದ ಮತ್ತು ಇತರ ಹುಡುಗರ ಸಹವಾಸದಿಂದಲಾದರೂ, ಮಲ್ಲೇಶಿ ತನ್ನಿಂದ ದೂರವಾಗಬಹುದೆಂದು

ಪುಲ್ಲಯ್ಯ ಎಣಿಕೆ ಹಾಕಿದ್ದ. ತನ್ನ ಮಗ ಓದಿ ದೊಡ್ಡ ಸಾಹೇಬನಾಗುವನೆಂಬ ಆಶೆ ಕಟ್ಟಿಕೊಂಡಿದ್ದ.

ಪುಲ್ಲಯ್ಯ ಈಗ ಇತರರಂತೆ, ವಾರಕ್ಕೆ ಮೂರು ಸಲವಾದರೂ ಸಿನೆಮಾ ನೋಡಲು ಹೋಗುತ್ತಿದ್ದ. ಚಂದ್ರಯ್ಯ ಈಗ ಅವನ ಆಪ್ತ ಗೆಳೆಯನಾಗಿದ್ದ. ಮತ್ತು ರಾಮಣ್ಣ ಸ್ವಲ್ಪ ದೂರವಾಗಿದ್ದ. ಚಂದ್ರಯ್ಯನ ಸಹವಾಸದಲ್ಲಿ ಬ್ರ್ಯಾಕೆಟ್ ಆಡುವುದನ್ನು ಕಲಿತಿದ್ದ ಪುಲ್ಲಯ್ಯ, ಒಂದೊಂದು ದಿನ ಐದು, ಆರು ರೂಪಾಯಿಗಳಾದರೂ ಪೋಲು ಮಾಡುತ್ತಿದ್ದ. ದುಡ್ಡು ಕಳೆದುಕೊಂಡಾಗ ಅದನ್ನು ಹಿಂದಿರುಗಿ ಪಡೆಯಬೇಕೆಂಬ ಛಲದಿಂದ ಮತ್ತೆ ಜೂಜಾಡುತ್ತಿದ್ದ. ಸಾವಿರ ಬಂದೀತು, ಎರಡು ಸಾವಿರ ಬಂದೀತೆಂಬ ಆಶೆ ದಿನದಿನಕ್ಕೆ ಹೆಚ್ಚಿತು...... ದೈವ ಒಲಿದರೆ, ಊರಿಗೆ ಹಿಂದಿರುಗಿ ಒಂದು ಎಕರೆ ಭೂಮಿ ಕೊಂಡು ಹಾಯಾಗಿರಬಹುದೆಂಬ ದುರಾಶೆ ಅವನಲ್ಲಿ ಬಲವಾಗಿ ಬೇರೂರಿತ್ತು. ಕಳ್ಳತನವನ್ನು ಬಿಟ್ಟು ಬೇರೆ ಯಾವ ಕಸುಬನ್ನೆ ಆಗಲಿ ಹಿಡಿಯಲು ಅವನು ಯೋಚಿಸಲಿಲ್ಲ. ಈ ಮುಂಚೆ ಕಳ್ಳತನಕ್ಕೆ ಇಳಿಯುವುದಿಲ್ಲವೆಂದು ಅದೆಷ್ಟೋ ಸಲ ಪ್ರತಿಜ್ಞೆ ಕೈಗೊಂಡಿದ್ದನಾದರೂ ಈಗ ಆ ಮಾತನ್ನೇ ಮರೆತಿದ್ದ. ಈ ನಡುವೆ ಒಂದು ಸಲ ಸಿಕ್ಕಿಹಾಕಿಕೊಳ್ಳುವ ಪರಿಸ್ಥಿತಿ ಬಂದಿತ್ತಾದರೂ ಅವನ ಅದೃಷ್ಟ ಚೆನ್ನಾಗಿದ್ದರಿಂದ ಹೇಗೊ ಪಾರಾಗಿದ್ದ. ಅದಾದ ಮೇಲೆ ಒಂದು ವಾರ ತುಂಬ ಎಚ್ಚರಿಕೆಯಿಂದಿದ್ದ.

ಪುಲ್ಲಯ್ಯ, ಚಂದ್ರಯ್ಯನ ಜೊತೆ ಸೇರಿಕೊಂಡು ಆರು ತಿಂಗಳುಗಳ ಮೇಲಾಗಿತ್ತು. ಈ ಆರು ತಿಂಗಳುಗಳಲ್ಲಿ ಅವರು ಸಣ್ಣ-ಪುಟ್ಟ ಕಳವುಗಳನ್ನು ಮಾತ್ರ ಮಾಡಿದ್ದರು. ಇದರಿಂದ ಅವರ ದಾಹ ಹೆಚ್ಚಿತ್ತೆ ವಿನಃ ಕಡಿಮೆಯಾಗಿರಲಿಲ್ಲ. ಪುಲ್ಲಯ್ಯ, ಆಗೊಮ್ಮೆ ಈಗೊಮ್ಮೆ ನೀಲಿಯ ಕೈಗೆ ಎರಡು-ಮೂರು ರೂಪಾಯಿ ಕೊಡುತ್ತಿದ್ದನಾದರೂ, ಜೂಜಾಟದಲ್ಲಿ ಹೆಚ್ಚಿನ ದುಡ್ಡು ಕಳೆದುಕೊಂಡಲ್ಲಿ ಏನನ್ನೂ ಕೊಡುತ್ತಿರಲಿಲ್ಲ. ನೀಲಿಯ ಮುಂದೆ ಸುಳ್ಳು ಹೇಳುವುದೂ ಸಹ ಈಗ ಅವನಿಗೆ ಪರಿಪಾಠವಾಗಿಹೋಗಿತ್ತು. ಆ ರೀತಿ ಸುಳ್ಳು ಹೇಳುವುದು ಸರಿಯಲ್ಲವೆಂಬ ಯೋಚನೆಯೇ ಅವನಿಗೆ ಬರುತ್ತಿರಲಿಲ್ಲ. ಕೈಯಲ್ಲಿ ಹೆಚ್ಚು ದುಡ್ಡಿದ್ದಾಗಲೂ ಕೂಡ, ನೀಲಿಗೆ ಒಂದು ತುಂಡು ಬಟ್ಟೆಯನ್ನೂ ಸಹ ಅವನು ಕೊಳ್ಳಲಿಲ್ಲ. ಒಂದು ದಿನ ಮಾತ್ರ, ಅವಳ ಹರಿದ ಬಟ್ಟೆಗಳನ್ನು ನೋಡಲಾಗದೆ ಒಂದು ಸೀರೆ ತಂದುಕೊಟ್ಟ.

"ಇದಕ್ಕ ಈಗ ದುಡ್ಡು ಎಲ್ಲಿಂದ ಬಂತು?—ರಾತ್ರಿ, ಕೂಲಿ ಕೊಟ್ಟಿಲ್ಲಾ ಅಂತ ಬ್ಯಾರೆ ಹೇಳದಿ."—ನೀಲಿ ಕೇಳಿದಳು.

"ಆ ಹಡಗಿನ ಕಪ್ತಾನ ಫಿರಂಗಿಯವನು—ತುಂಬ ಒಳ್ಳೆಯವನು. ಹುಲಿಕುಣಿತ ತೋರಿಸಿದೆ—ಮೆಚ್ಚಿ ಐದು ರೂಪಾಯಿ ಕೊಟ್ಟು ನಿನ್ನ ಹೆಣ್ತಿಗೆ ಸೀರಿ ಕೊಡಿಸು—ಎಂದು ಹೇಳಿದ. ಆತ ಹೇಳಿದ್ಹಾಂಗ ಸೀರಿ ತಂದೆ"—ಪುಲ್ಲಯ್ಯ ಸುಳ್ಳು ಹೇಳಿ ಜಾರಿಕೊಂಡ.

ನೀಲಿ, ಗಂಡ ತಂದುಕೊಟ್ಟ ಸೀರೆಯನ್ನು ಉಟ್ಟುಕೊಂಡಳಾದರೂ—ಅದೇಕೊ

ಅವಳಿಗೆ ಅದರಿಂದ ಯಾವುದೇ ಸಂತೋಷವಾಗಲೀ, ಸಮಾಧಾನವಾಗಲೀ ಆಗಲಿಲ್ಲ. ಈಚೆಗೆ ಅವಳಿಗೆ ಏನು ತಿಂದರೂ, ಏನು ಉಟ್ಟರೂ ಸರಿಬರುತ್ತಿರಲಿಲ್ಲ. ಗಂಡ ಆಗಾಗ ದುಡ್ಡು ತಂದುಕೊಟ್ಟರೂ, ಅದರಿಂದಲೂ ಸಹ ಅವಳಿಗೆ ಸಮಾಧಾನವಾಗುತ್ತಿರಲಿಲ್ಲ. ಪುಲ್ಲಯ್ಯನ ಮುಖದ ಮೇಲೆ ಅದುವರೆಗಿದ್ದ ಕಳೆ, ವರ್ಚಸ್ಸು, ಈಗ ಮರೆಯಾದದ್ದನ್ನು ಅವಳು ಗಮನಿಸಿದ್ದಳು. ಪುಲ್ಲಯ್ಯನ ಕಣ್ಣುಗಳಲ್ಲಿ ಅದುವರೆಗಿದ್ದ ಮುಗ್ಧತನ ಈಗಿಲ್ಲ ವೆಂಬುದನ್ನು ಅವಳು ಆಗಲೇ ಕಂಡುಕೊಂಡಿದ್ದಳು. ಅವನ ದಿಟ್ಟವಾದ ನಡಿಗೆ, ಈಗ ಬದಲಾಗಿದ್ದನ್ನೂ ಸಹ ಅವಳು ಗಮನಿಸಿದ್ದಳು.

ಉಟ್ಟುಕೊಂಡಿದ್ದ ಹೊಸ ಸೀರೆಯನ್ನು ಬಿಚ್ಚುವವರೆಗೆ ನೀಲಿಗೆ ಸಮಾಧಾನವಾಗಲಿಲ್ಲ. ನಾಳೆ ಉಟ್ಟುಕೊಂಡರೆ ಸರಿಹೋಗಬಹುದೇನೊ ಎಂದುಕೊಂಡಳು.

ಪುಲ್ಲಯ್ಯ ಮತ್ತು ಆತನ ಸ್ನೇಹಿತರು, ಒಂದು ದಿನ, ಪುಲ್ಲಯ್ಯ ಆ ಊರಿಗೆ ಬಂದಾಗ ಇಳಿದುಕೊಂಡಿದ್ದ ಛತ್ರಕ್ಕೆ ಹೋದರು. ಪುಲ್ಲಯ್ಯನಿಗೆ ಅಲ್ಲಿ ನಡೆದುದೆಲ್ಲವೂ ಜ್ಞಾಪಕಕ್ಕೆ ಬಂತು. ಆಗಿದ್ದ ಪುಲ್ಲಯ್ಯ, ಈಗಿನ ಪುಲ್ಲಯ್ಯನ ನಡುವೆ ಅಜಗಜಾಂತರ ವಿರುವುದನ್ನು ಅವನ ಮನಸ್ಸು ಒಪ್ಪಿಕೊಂಡಿತು. "ಅಂದಿನ ಪುಲ್ಲಯ್ಯ ಎಂದೊ ಸತ್ತ. ಸತ್ತವನ ಬಗ್ಗೆ ಯೋಚಿಸಬಾರದು"—ಎಂದು ಪುಲ್ಲಯ್ಯ ತಲೆ ಝಾಡಿಸಿಕೊಂಡ.

ಒಂದು ದಿನ ರಾಮಣ್ಣ, ಬಲವಂತವಾಗಿ ಪುಲ್ಲಯ್ಯನನ್ನು ತನ್ನ ಮನೆಗೆ ಕರೆದೊಯ್ದ. ರಾಮಣ್ಣ ಏನಾದರೂ ಹೇಳಬಹುದು, ತನ್ನನ್ನು ಗದರಿಸಬಹುದೆಂದು ಪುಲ್ಲಯ್ಯ ಅಂದುಕೊಂಡಿದ್ದ. ಪುಲ್ಲಯ್ಯ, ಈಚೀಚೆಗೆ ಚಂದ್ರಯ್ಯನ ಜೊತೆ ಸೇರಿ, ರಾಮಣ್ಣನ ಬುದ್ಧಿಮಾತುಗಳನ್ನು ಅಲಕ್ಷಿಸಿದ್ದ. ರಾಮಣ್ಣ ಅದೂ–ಇದೂ ಮಾತನಾಡುತ್ತಾ ಪುಲ್ಲಯ್ಯನನ್ನು ಕಾಲುವೆಯ ಬಳಿ ಕರೆದುಕೊಂಡು ಹೋದ. ಆಗಲೆ ಸಂಜೆಯಾಗಿತ್ತು. ಆದರೂ ಸಹ ಬಿಸಿಲಿನ ಧಗೆ ಕಡಿಮೆಯಾಗಿರಲಿಲ್ಲ. ರಾಮಣ್ಣ ಎತ್ತಲೊ ನೋಡುತ್ತಾ "ಎಲ್ಲಿಯಾದರೂ ಕೆಲಸ ಹಿಡಿಯೊ ಯೋಚನೆ ಬಿಟ್ಟೇನು?"—ಎಂದು ಸಾವಧಾನ ವಾಗಿಯೇ ಕೇಳಿದ.

"ಹಾಂಗೇನಿಲ್ಲ. ಆದರ ನಮಗೆಲ್ಲಿಂದ ಕೆಲಸ ಸಿಗ್ತದ ಏನು......?"

"ಯಾಕ ಸಿಗಾಣೆಲ್ಲ? ಪ್ರಯತ್ನಿಸಿದರ ಒಳ್ಳೆಯ ಕೆಲಸನs ಸಿಗಬಹುದು...... ಇನ್ನು ಮುಂದ ನಿನಗ ಸಿಗುವ ಪಾಲಿನೊಳಗ ಉಳಿದದ್ದನ್ನು ನನ್ನ ಕೈಯಾಗ ಕೊಡು. ನಾನು ಅದನ್ನು ಜಮಾ ಮಾಡಿ ಸುರಕ್ಷಿತವಾಗಿ ಇಡ್ತೀನಿ. ಅನುಕೂಲ ಆದಾಗ, ಆ ದುಡ್ಡು ಖರ್ಚು ಮಾಡಿ, ಯಾರಿಗಾದರೂ ಲಂಚ ಕೊಟ್ಟಾದರೂ ಕೆಲಸ ಗಿಟ್ಟಿಸಿಕೊ."

"ಅಯ್ಯೋ ಬಂದದ್ದು ಹೊಟ್ಟೀಗೂ ಸಾಲವಲ್ದು...... ಉಳೀತದೇನು? ಒಂದು ವೇಳೆ ನಮಗ ಕೆಲಸ ಸಿಕ್ಕರೂ ಅಂತಹ ಒಳ್ಳೇದೇನು ಸಿಗಲಿಕ್ಕಿಲ್ಲ."

"ಯಾಕ ಸಿಗಾಣೆಲ್ಲ? ಪ್ರಯತ್ನ ಮಾಡಿ ಆದರೂ ನೋಡು."

"ಏನು ಸಿಗ್ತದೊ. ಏನು ಬಿಡ್ತದೊ. ನೋಕರಿ ಹಿಡಿದು ಬಂದದ್ದರೊಳಗ ಹೊಟ್ಟೆ

ತುಂಬಿಕೊಂಡು ಈ ಊರಾಗ ಎಷ್ಟು ದಿನ ಅಂತ ಇರಲಿ? ಮತ್ತ ನಾ ನಮ್ಮೂರಿಗೆ ಹೋಗಿ, ಆ ಠಾಜಣ್ಣಗ ಎದುರಾಗಿ ನಿಲ್ಲಬೇಕು. ಮೊತ್ತಮೊದಲಿನ ಹಾಂಗ ಘನವಾಗಿ ಬಾಳ್ವಿ ನಡೆಸಬೇಕು......" ಪುಲ್ಲಯ್ಯ ಉದ್ರಿಕ್ತನಾಗಿ ಹೇಳಿದ.

ರಾಮಣ್ಣ ಆತನ ಉದ್ರೇಕ ಕಂಡು, "ನೋಡು ಪುಲ್ಲಯ್ಯ, ಗೋಡೆಗೆ ಹಚ್ಚಿದ ಸುಣ್ಣ ತಿರುಗಿ ಕೈಗೆ ಬರಾಣಿಲ್ಲ. ಅದೇ ರೀತಿ ಜೂಜು ಆಡಿದ ಮುಡ್ಡೂ ಕೂಡ ಕೈಗೆ ಬರಾಣಿಲ್ಲ. —ಕೈಯಾಗ ಒಂದೆರಡು ಸಾವಿರ ಇಟ್ಟುಕೊಂಡು ಊರಿಗೆ ಹೋಗಬೇಕಂತ ನೀನೇನೊ ಬಹಳ ಆಸೆ ಇಟ್ಟುಕೊಂಡೀದಿ—ಆದರ ಅದು ಅಷ್ಟು ಸುಲಭವಾಗಿ ಆಗಾಣಿಲ್ಲ, ನೀನೂ ಸರಿಯಾಗಿ ಬದುಕಾಣಿಲ್ಲ"—ಎಂದು ತಿಳಿಹೇಳಲು ಪ್ರಯತ್ನಿಸಿದ.

"ಕಾಲ ಒಂದs ರೀತಿ ಇರತದೇನು? ಇವತ್ತು ಇದ್ದದ್ದು ನಾಳಿಲ್ಲ. ಇವತ್ತ ಇರದದ್ದು ನಾಳೆ ಕೈಗೆ ಹತ್ತಬಹುದು."

"ನೋಡು ತಮ್ಮ, ಚಂದ್ರಯ್ಯನ ವೃತ್ತಿಯೇ ಕಳ್ಳತನ. ನಾನೂ, ನೀನೂ ಹೊಟ್ಟಿ ತುಂಬಿಕೊಳ್ಳಲಿಕ್ಕೆ ಈ ವೃತ್ತಿಗೆ ಇಳಿದೀವಿ. ಬೇರೆ ಕಡೆ ಕೆಲಸ ಸಿಕ್ಕರೂ ಅದನ್ನು ಧಿಕ್ಕರಿಸಿ ಕಳ್ಳತನಕ್ಕ ಹೋದರ, ನಾವೂ ಅವನ್ಹಾಂಗ ಪಕ್ಕಾಕಳ್ಳರಾಗ್ತೀವಿ. ನಾವೇ ಕಳ್ಳರಾಗಿ, ಸರ್ಕಾರನ್ನ ಟೀಕಿಸಲಿಕ್ಕೆ ಬರಾಣಿಲ್ಲ. ಪೋಲೀಸರ ಕೈಗೆ ಸಿಗಿಬೀಳದೇ ಇರೋ ತನಕ, ನಮ್ಮ ದಿನಗಳು ಒಳ್ಳೆಯವಂತ ನೀನು ಭಾವಿಸಿದ್ದರ ಅದು ತಪ್ಪು.—ನನ್ನ ಮಾತು ಕೇಳು. ಆ ಇಸ್ಪೇಟು, ಜೂಜಾಟ ಬಿಡು. ಒಳ್ಳೆ ಹಾದಿ ಹಿಡೀಲಿಕ್ಕೆ ಪ್ರಯತ್ನಿಸು."

"ನನ್ನ ಪಾಲಿನ ದುಡ್ಡಿನ್ಯಾಗ ಬಹಳ ಕಳಕೊಂಡೀನಿ. ಕಳಕೊಂಡ ಮುಡ್ಡು ನನ್ನ ಕೈಗೆ ಬಂದರ, ನಾನು ಊರಿಗೆ ಹೋಗ್ತೀನಿ....... ಆಯ್ತು, ಈಗ ನೀನು ಏನು ಹೇಳಿದರೂ ಅದು ನನ್ನ ತಲೀಗೆ ಏರಾಣಿಲ್ಲ"—ಎಂದು ಪುಲ್ಲಯ್ಯ ಕಟುವಾಗಿ ಹೇಳಿದ.

"ನಾನು ಅಂದು ಹೇಳಿದ್ಹಾಂಗಾತು ಬಿಡು. ಈ ಹೊಲಸಿನೊಳಗ ಇಳದಿ—ಇಳದು ಹಂದಿಯಾದಿ"—ರಾಮಣ್ಣ ಭಾರವಾದ ಧ್ವನಿಯಿಂದ ಹೇಳಿದ.

ಪುಲ್ಲಯ್ಯ, ಯಾವ ಮಾತೂ ಆಡದೆ ಅಲ್ಲಿಂದೆದ್ದು ಹೊರಟುಹೋದ.

## [ 38 ]

ಬೇಸಿಗೆಯ ಕಾಲದಲ್ಲಿ, ಒಂದು ದಿನ, ಪುಲ್ಲಯ್ಯ ಚಂದ್ರಯ್ಯನ ಜೊತೆ ಹೊರಟಿದ್ದಾಗ, ಹುಚ್ಚ ತನ್ನ ಮಾಮೂಲು ಸ್ಥಳದಲ್ಲಿ ನಾಯಿಯೊಡನೆ ಕುಳಿತುಕೊಂಡು ಏನೇನೊ ಗೊಣಗಿಕೊಳ್ಳುತ್ತಿದ್ದ. ಪುಲ್ಲಯ್ಯ, ಆ ಹುಚ್ಚನನ್ನು ಚಂದ್ರಯ್ಯನಿಗೆ ತೋರಿಸಿ, "ಅವನು ಯಾರು ನಿನಗ ಗೊತ್ತೇನು? ಅವನ ಕಥೆ ನಿನಗ ಗೊತ್ತೇನು?"—ಎಂದು ಕೇಳಿದ.

"ಅವನು ದೇವರಿಗೆ ಸಮಾನ. ನೀನು ಏನು ಕೊಟ್ಟರೂ ತೆಗೆದುಕೊಳ್ಳೊಲ್ಲ. ಅವನು ನಮ್ಮಿಂದ ಏನಾದರೂ ಪಡೆದನಂದರ, ನಮಗ ಒಂದಲ್ಲಾ ಒಂದು ರೀತಿ ಲಾಭ ಆಯ್ತುಂತs ತಿಳಿ"—ಚಂದ್ರಯ್ಯ ಹೇಳಿದ.

"ತನ್ನ ಬಂಗಾರ ಒಯ್ದು, ತೆಂಗಿನ ಮರದ ಕೆಳಗೆ ಬಚ್ಚಿಟ್ಟೇನಿ ಅಂತಾನ. ಈ ಗುಟ್ಟು ನಾನು ಅವನಿಂದs ತಿಳಿದುಕೊಂಡೆ. ಆದರ, ಅವನ ಮನೆ ಯಾವುದೊ ಎಲ್ಲಿ ಅದನೊ......"

"ಅಲ್ಲಿ ಕಾಣಸ್ತದಲ್ಲ ಮೂರು ಅಂತಸ್ತಿನ ಆ ಬಂಗಲೆ—ಅದೇ ಅವನ ಮನೆ. ಆ ಹುಚ್ಚ ಏನು ಕಡಿಮೆ ಆಸಾಮಿ ಅಲ್ಲ. ದೊಡ್ಡ ದೊಡ್ಡ ಪುಸ್ತಕ ಓದಿ ಮಹಾ ಬುದ್ಧಿವಂತ ಅಂತ ಅನ್ನಿಸಿಕೊಂಡ...... ತಾನು ಚಿನ್ನ ಬಚ್ಚಿಟ್ಟದ್ದು ಅವನಾಗಿಯೇ ಹೇಳಿದನೇನು?"

"ಹೌದು, ಆ ಬಂಗಲೆ ಹಿಂದೆ ಏನಾದರೂ ತೆಂಗಿನ ಗಿಡ ಅದs ಏನು?"

"ಎರಡು ವರ್ಷದ ಹಿಂದ ಆ ಬಂಗಲೆಯ ಹಿಂದ ತೆಂಗಿನ ಗಿಡ ನೋಡಿದ್ದಾಂಗ ನೆನಪದ. ಆದರ, ಈಗ ಅದರ ಜಾಗದಾಗ ಬನೆಗಳನ್ನ ಕಟ್ಟಿಬಿಟ್ಟಾರ—ಬಂಗಾರ ಎಷ್ಟು ಅದ ಅಂತ ಹೇಳ್ಯಾನೇನು?"

"ಅದೇನೂ ಹೇಳಿಲ್ಲ. ಆದರೂ ಆ ಬಂಗಾರ ನಮಗ ಸಿಕ್ಕರ, ನಾವು ಈ ವ್ಯಾಪಾರ ಬಿಟ್ಟುಬಿಡಬಹುದು."

"ನನಗೆಲ್ಲಾ ತಿಳೀತೇಳು. ನಾನು ಆ ಗುಟ್ಟು ಹೊರಗ ಹಾಕ್ತೇನಿ. ಆ ಬಂಗಾರ ನಮ್ಮ ಕೈಗೆ ಪತ್ತಿದರ, ನಮ್ಮ ಈ ದಾರಿದ್ರ್ಯ ದೂರ ಆಗ್ತದ"—ಎಂದು ಚಂದ್ರಯ್ಯ ಸಂತೋಷ ದಿಂದಲೇ ಹೇಳಿದ.

ಇದಾದ ಮೂರು ದಿನಗಳ ನಂತರ, ಫುಲ್ಲಯ್ಯ, ಚಂದ್ರಯ್ಯ ಮತ್ತು ರಾಮಣ್ಣ ಒಂದೆಡೆ ಸಭೆ ಸೇರಿದರು. ಕಾಲುವೆಯ ಕಟ್ಟೆಯ ಮೇಲೆ ಕುಳಿತು ತಮ್ಮತಮ್ಮಲ್ಲೆ ಮುಂದೇನು ಮಾಡಬೇಕೆಂಬುದನ್ನು ಚರ್ಚಿಸುತ್ತಿದ್ದರು. ಚಂದ್ರಯ್ಯ—"ಆ ಹುಚ್ಚನ ಮನೆಯ ಎಲ್ಲಾ ಗುಟ್ಟುಗಳನ್ನು ತಿಳಿದುಕೊಂಡು ಬಂದೀನಿ. ಆ ಮನೆಯ ಯಜಮಾನ ಮಾತ್ರ ಮಹಾ ಗಟ್ಟಿಗ. ಆ ಬಂಗಲೆಯ ಮೂರನೆಯ ಅಂತಸ್ತಿನ ಮ್ಯಾಲೆ ಒಂದು ಖೋಲಿ ಅದ. ಆ ಕೊಠಡಿ ಒಳಗ ಒಂದು ಕಬ್ಬಿಣದ ಪೆಟ್ಟಿಗಿ ಅದ. ಆ ಪೆಟ್ಟಿಗಿಯ ಕೀಲಿಕೈ, ಆ ಯಜಮಾನನ ತಲೆದಿಂಬಿನ ಕೆಳಗ ಇರ್‍ತದಂತ. ಆತಗ ಯಾರ ಮ್ಯಾಲೇ ಆಗಲಿ ನಂಬಿಕಿ ಇಲ್ಲಂತ. ಸಂಜಿ ಆದರ ಆತ, ಯಾರನ್ನೇ ಆಗಲಿ ತನ್ನ ಬಳಿ ಸುಳಿಯ ಗೊಡೋದಿಲ್ಲಂತ......"

"ಅದೆಲ್ಲಾ ಇರಲಿ, ಆ ಬಂಗಾರ ಎಲ್ಲಿ ಅದ ಅದು ಹೇಳು."

"ಕೇಳ್ರಿಲ್ಲೆ...... ಮನಿ ಕಟ್ಟಲಿಕ್ಕೆ ಅಂತ ಆ ತೆಂಗಿನ ಗಿಡ ಕಿಡವಿ, ಅಡಿಪಾಯ ಹಾಕ ಲಿಕ್ಕೆ ನೆಲ ಅಗದರಂತ. ಆಗ, ಚಿನ್ನದ ಆಭರಣಗಳಿಂದ ತುಂಬಿದ ಆ ಕಬ್ಬಿಣದ ಪೆಟ್ಟಿಗಿ

ಸಿಕ್ಕಿತು. ಅಂದಿನಿಂದ ಆ ಮನಿ ಯಜಮಾನನ ಬಣ್ಣನs ಬ್ಯಾರೆ ಆತು. ಅಂದಿನಿಂದ ಆತ ಯಾರನ್ನೂ ನಂಬವಲ್ಲ. ಮನುಷ್ಯರನ್ನ ತನ್ನವರನ್ನs ನಂಬದವನು ಬಂಗಾರ ಎಲ್ಲಿ ಇಡತಾನ—ತನ್ನ ಮನಿ ಬಿಟ್ಟು ಬ್ಯಾರೆ ಕಡೆ ಇಡಲಿಕ್ಕೆ ಅಂತಹವರಿಗೆ ಆಗೋದೇ ಇಲ್ಲ. ಅದಕ್ಕ, ಆತ ತನ್ನ ಸಿಕ್ಕ ಆ ಬಂಗಾರದ ಪೆಟ್ಟಿಗೀನ್ನ ತನ್ನ ಹತ್ತಿರ ಇಟ್ಟುಕೊಂಡು, ಯಾವಾಗಲೂ ಅದರ ಹತ್ತಿರ ಇರ್ತಾನ. ಯಾರನ್ನೇ ಆಗಲಿ, ಆ ಪೆಟ್ಟಿಗಿ ಹತ್ತಿರ ಹೋಗಗೊಡಾಣಿಲ್ಲಂತ."

"ಹಾಂಗಾದರ, ಆ ಪೆಟ್ಟಿಗಿ ಹೊತ್ತುಕೊಂಡು ಬರೋದರೊಳಗ ಏನೇನೂ ತಪ್ಪಿಲ್ಲ. ಹ್ಯಾಂಗೂ ಅದು ಅವನ ಆಸ್ತಿ ಅಲ್ಲ. ನಾವು ಅದನ್ನ ಪಡದರೂ ಅದರೊಳಗ ಏನೂ ತಪ್ಪಿಲ್ಲ–ಪಾಪಿಲ್ಲ"—ಫುಲ್ಲಯ್ಯ ಆ ಮನೆಗೆ ಕನ್ನ ಹಾಕಿ ಪೆಟ್ಟಿಗೆ ಹೊತ್ತು ತರುವ ಯೋಜನೆಯನ್ನು ಸಮರ್ಥಿಸಿದ.

"ಕೇಳ್ರಿ ಹಾಂಗಾರ. ನಾವು ಸುಮ್ಮಸುಮ್ಮನೆ ಅವಸರ ಪಟ್ಟರ ಪ್ರಯೋಜನ ಇಲ್ಲ. ಇದುವರಿಗೂ ನಾವು ಇಂತಹ ದೊಡ್ಡ ಕೆಲಸಕ್ಕ ಕೈಹಾಕಿಲ್ಲ—ಮುಂದನೂ ಹಾಕಾಣಿಲ್ಲ. ಅದಕ್ಕ, ನಾವು ಏನು ಮಾಡಿದರೂ ಹುಷಾರಾಗಿ ಮಾಡಬೇಕು. ಸ್ವಲ್ಪ ಹೆಚ್ಚೂ ಕಡಿಮಿ ಆದರೂ ನಮ್ಮ ಕಥೆ ಮುಗೀತದ. ಅದಕ್ಕ ಆ ಮನಿ ನೌಕರನ್ನ ಬುಟ್ಟಿ ಒಳಗ ಹಾಕಿಕೊಂಡೀನಿ."

"ಅಂದರ, ನೀನು ಈಗಾಗಲೇ ಆ ನೌಕರನ್ನ ಮಾತಾಡಿಸಿ ಬಂದಿ ಅಂತಾಯಿತು. ಹಾಂಗಿದ್ದರ, ನಾಳೆ ಅವನು ಪೋಲೀಸರ ಜತಿ ಶಾಮೀಲಾಗಿ ನಮ್ಮನ್ನ ಅವರಿಗೆ ಒಪ್ಪಿಸಿದರ ನಾವು ಬದುಕಿ ಉಳಿದ್ಹಾಂಗ ಬಿಡು"—ರಾಮಣ್ಣ ತನ್ನ ಸಂದೇಹವನ್ನು ವ್ಯಕ್ತಪಡಿಸಿದ.

ಚಂದ್ರಯ್ಯ ಫಕ್ಕನೆ ನಕ್ಕು, "ನೀನು ಹೊಟ್ಟಿಗೆ ಗತಿ ಇಲ್ಲದ ಕಳ್ಳತನಕ್ಕ ಇಳಿದೀದಿ. ನಾನೊ, ಹ್ಯಾಂಗಾದರೂ ಮಾಡಿ, ಶ್ರೀಮಂತನಾಗಬೇಕು—ಸುಖಪಡಬೇಕು—ಅಂಬೊ ಆಸೆಯಿಂದ ಕಳ್ಳ ಆಗೀನಿ. ನಾನು ಈಗಾಗಲೇ ಅದೆಷ್ಟೊ ಸಲ ಪೋಲೀಸರ ಕಣ್ಣಾಗ ಮಣ್ಣು ಹಾಕೀನಿ...... ನಾನೇನು ಹೀಂಗs, ಇದೇ ವೇಷದಾಗs ಹೋಗಿ ಆ ನೌಕರನ್ನ ಮಾತಾಡಿಸಿ ಬಂದೆ ಅಂತ ತಿಳಿದಿ ಏನು? ದೊಡ್ಡ ಸನ್ಯಾಸಿ ವೇಷ ಹಾಕಿಕೊಂಡು ಆ ನೌಕರನ ಹತ್ತಿರ ಹೋಗಿ, ಅವನ ಪೂರ್ವಾಪರ ಎಲ್ಲಾ ಹೇಳಿ ಬಿಟ್ಟೆ. ಅದನ್ನ ಕೇಳಿ, ದಂಗಾಗಿ, ನನ್ನ ಕಾಲಮ್ಯಾಲೆ ಬಿದ್ದು, ನಾನು ಹಾಕಿದ ಪ್ರಶ್ನೆಗಳಿಗೆಲ್ಲಾ ಇದ್ದದ್ದು ಇದ್ದ ಹಾಂಗ ಉತ್ತರ ಕೊಟ್ಟ. ಈಗ ನಾನು ನನ್ನ ನಿಜ ಸ್ವರೂಪದಾಗ ಅವನ ಎದುರಿಗೆ ಹೋಗಿ ನಿಂತರೂ, ಅವನೇನೂ ನನ್ನ ಗುರುತು ಹಿಡೀಲಿಕ್ಕಿಲ್ಲ. ಈ ಬಗ್ಗೆ ನಾವು ಯೋಚಿಸಬೇಕಾಗಿಲ್ಲ. ಎಲ್ಲಾನೂ ನಾವು ಅಂದುಕೊಂಡ ಹಾಂಗ ಸುಗಮವಾಗಿ ನಡೀತದಂಬೊ ವಿಶ್ವಾಸ ನನಗದ...... ಆ ಮನೆಯ ಈಗಿನ ಯಜಮಾನ ತನ್ನನ್ನು ಒಲಿದುಬಂದ ಹೆಣ್ಣನ್ನೂ ಸಹ ನಂಬೋದಿಲ್ಲಂತ. ನಿನ್ನ 'ಗಂಡಗs ಮೋಸಮಾಡಿದವಳು, ನನಗ

ಮೋಸಾ ಮಾಡೋದಿಲ್ಲಾಂತ ಹ್ಯಾಂಗ ನಂಬಲಿ?'—ಎಂದು ಅವಳ್ನ ದೂರ ಇಟ್ಟಾ ನಲ್ಲದ, ದಿನಬೆಳಗಾದರ ಆಕೀನ್ನ ಪೀಡಿಸಿ ಜೀವ ತಿಂಡತಾನಂತ. ಪಾಪ, ಆ ಹೆಂಗಸು, ತನ್ನ ಗಂಡನ್ನ ನೆನಸಿಕೊಂಡು ಅಳ್ತಾಳಂತ—ಸಾವಾದರೂ ಯಾಕ ಬರವಲ್ಲದೊ—ಅಂತ ಗೋಳಾಡ್ತಾಳಂತ. ಇನ್ನ ಅವನ ಗೋಳು ಬ್ಯಾರೇನ ಅದ. ತನಗ ಸಿಕ್ಕ ಸಂಪತ್ತು ಎಲ್ಲಿ ಹಾರಿಹೋಗ್ತದೊ ಅಂತ ಯಾವಾಗಲೂ ಅಲ್ಲೆ ಬಿದ್ದಿರ್ತಾನಂತ. ಒಂದು ದಿವಾನಾದರೂ ಸರಿಯಾಗಿ ನಿದ್ರೆನs ಮಾಡೋದಿಲ್ಲಂತ. ಮಲಗಿದರೂ, ಮಾತು—ಮಾತಿಗೆ ಏಳ್ತಾನಂತ. ಆದರೂ, ಒಂದೊಂದು ದಿನ ಭಯಗೊಂಡವನಂತಾಗಿ, ಕಂಠಪೂರ್ತಿ ಕುಡಿದು ಬಿದ್ದುಕೊತಾನಂತ—ನಾವು ಅದೇ ಹೊತ್ತಿನ್ಯಾಗ—ಅಂದರ—ಅವನು ಕುಡಿದು ಎಚ್ಚರ ತಪ್ಪಿ ಬಿದ್ದ ಹೊತ್ತಿನ್ಯಾಗ ಅವನ ಮನೀಗೆ ಕನ್ನ ಹಾಕಬೇಕು"—ಎಂದು ವಿವರಿಸಿದ.

"ಅದೆಲ್ಲಾ ಖರೆ, ಆದರ, ಮೂರು ಅಂತಸ್ತಿನ ಮನಿ ಹತ್ತೋದ ಹ್ಯಾಂಗ?"—ಪುಲ್ಲಯ್ಯ ಕೇಳಿದ.

"ಕೈಲಾಗದವರ್ಹಾಂಗ ಇಲ್ಲದ್ದು ಸಂದೇಹ ತಲಿ ಒಳಗ ಹಾಕಿಕೊಂಡ ಕೂತರ ಎದಕ್ಕ ಬಂತು? ಆಕಾಶ ಕಳಚಿ ಬಿದ್ದರೂ, ಅದನ್ನ ಎದುರಿಸೊ ತಾಕತ್ತು ಇಟ್ಟುಕೊಬೇಕು. ಅಂದರs ನಾವು ಈ ಪರಪಂಚದಾಗ ಬದುಕತೀವಿ. ಇಲ್ಲಾಂದರ ಮಣ್ಣುಮುಕ್ಕತೀವಿ. ......ಅಂದಹಾಂಗ ನೀನು ಒಮ್ಮೆಯಾದರೂ ಆ ಮನಿ ಪರೀಕ್ಷಿಸಿ ನೋಡಿ ಏನು?" ಚಂದ್ರಯ್ಯ, ಪುಲ್ಲಯ್ಯನನ್ನು ಕೇಳಿದ.

"ಓ, ಬೇಕಾದಷ್ಟು ಸರೆ ನೋಡೀನಿ"

"ಹಾಂಗಾದರ ಹೇಳು, ಆ ಮನಿ ಹ್ಯಾಂಗ ಹತ್ತಿ?"

"ಆ ಮನಿ ಅತ್ಲಾಗ ಮತ್ತ ಇತ್ಲಾಗ ಸಣ್ಣಸಣ್ಣ ಸಂದಿಗಳವ. ಮನಿ ಮುಂದಿನ ರಸ್ತೆದೊಳಗ ದೀಪ ಇದ್ದರೂ ಸಂದಿಗಳೊಳಗ ದೀಪ ಇಲ್ಲ. ಮನಿ ಹಿಂದಿನ ಸಂದಿ ಒಳಗೂ ದೀಪ ಅದ. ಅಂದಮ್ಯಾಲೆ......" ಪುಲ್ಲಯ್ಯ ಮುಂದೇನೆಂಬುದನ್ನು ಹೇಳಲಾಗದೆ ತಲೆ ತುರಿಸಿಕೊಂಡ.

"ಕೇಳಿಲ್ಲೆ—ಮನಿ ಮುಂದಿನ ದೀಪ ಮತ್ತು ಹಿಂದಿನ ಸಂದಿ ಒಳಗಿನ ದೀಪಕ್ಕ ಕಲ್ಲು ಹೊಡದು ಕತ್ತಲು ಮಾಡ್ಬೇಕು. ಬಂಗಲೆಯ ಪಶ್ಚಿಮಕ್ಕ, ಸಿಮೆಂಟಿನ ದೊಡ್ಡ ಹರನಾಳಗಿ ಅದ. ರಾತ್ರಿ ಒಂಬತ್ತು ಆದಮ್ಯಾಲೆ, ಆ ರಸ್ತೆದೊಳಗ ಯಾರೂ ಬರೋದಿಲ್ಲ. ಕತ್ತಲಾಗ, ಸರಿರಾತ್ರಿ ಆದ ಮ್ಯಾಲೆ ಆ ಸಿಮೆಂಟಿನ ಹರನಾಳಗಿ ಹಿಡಕೊಂಡು ಮ್ಯಾಲೆ ಹತ್ತಬೇಕು...... ನಮ್ಮ ಕೆಲಸ ಮುಗಿದ ಮ್ಯಾಲೆ, ಮತ್ತ ಅದೇ ಹರನಾಳಗಿ ಹಿಡಕೊಂಡು ಇಳಿದರಾತು......"

"ಅತ್ಲಾಗಿನ ಓಣಿಯಿಂದ ಹತ್ತಿದರ......?"

"ಬ್ಯಾಡ. ಆ ಓಣಿ ಸ್ವಲ್ಪ ದೊಡ್ಡದದ...... ಆದಲ್ಲದ, ಅಲ್ಲಿ ಆಗಾಗ ಗಸ್ತು

ತಿರುಗುವ ಪೋಲೀಸರು ಬರ್‍ತಾರ...... ಅಷ್ಟ ಅಲ್ಲದ, ಹೊತ್ತು ಬಂದರ ಅಡಗಿ ಕೂತುಕೊಳ್ಳಲಿಕ್ಕ ಅಲ್ಲಿ ಅವಕಾಶ ಇಲ್ಲ...... ಅದಽ ಆ ಸಂದಿ ಒಳಗ ಸರಕ್ಕನ ತಲೆಮರೆಸಿಕೊಳ್ಳಲಿಕ್ಕೆ ಬೇಕಾದಷ್ಟು ಮನಿಗಳವ...... ಹಿತ್ತಲವ."

"ಇರಬಹುದು. ಆದರ ಆ ಮನಿಗಳೇನು ನಮಗಾಗಿ ತಗದಿರತಾವೇನು?"

"ಆ ಬಾಗಿಲುಗಳನ್ನು ತೆಗಿಯೋದು ಏನು ಮಹಾ. ಒಂದು ವೇಳೆ ಅದೂ ಆಗಲಿಲ್ಲ ಅಂದರ, ಸಮೀಪದ ಸಂದಿ ಹೊಕ್ಕು ಓಡಿದರ, ಸೀದಾ ಸಮುದ್ರದಂಡಿ ಮುಟ್ಟತೀವಿ. ಬ್ಯಾಸಗಿ ಅಂತ, ನಮ್ಮಂತಹವರು ಎಷ್ಟೋ ಮಂದಿ ಅಲ್ಲಿ ಮಲಗಿರ್‍ತಾರ...... ಓಡಿಹೋಗಿ, ನಾವು ಅಲ್ಲಿ ಉರುಳಿಕೊಂಡು ನಿದ್ದಿ ಬಂದವರ್‍ಹಾಂಗ ಸೋಗು ಮಾಡಿದ ರಾತು...... ಅಂದ್ಹಾಂಗ ಇದನ್ನೆಲ್ಲಾ ನೆನಪು ಇಟ್ಟುಕೊಳ್ರಿ...... ಅನುಕೂಲ ಆದಾಗ ನಾನಽ ನಿಮ್ಮ ಮನೀಗೆ ಬಂದು ಕರಕೊಂಡು ಹೋಗ್ತೀನಿ......" ಎಂದು ಚಂದ್ರಯ್ಯ ಹೇಳಿದಾಗ ಉಳಿದವರಿಬ್ಬರು ತಲೆ ಹಾಕಿದರು.

ಈ ಮಾತು ನಡೆದು ಹದಿನೈದು ದಿನಗಳಾದರೂ ಚಂದ್ರಯ್ಯನಿಂದ ಯಾವ ಸೂಚನೆಯೂ ಬರಲಿಲ್ಲ. ಪಾಲಿಗೆ ಬಂದದ್ದನ್ನು ಪಡೆದು ಊರಿಗೆ ಹಿಂದಿರುಗುವ ಕನಸು ಕಾಣುತ್ತಿದ್ದ ಪುಲ್ಲಯ್ಯನ ಕಳವಳ ದಿನದಿನಕ್ಕೆ ಹೆಚ್ಚುತ್ತಾ ಹೋಯಿತು. ಮೂರು ದಿನವಾದರೂ, ಕೆಲಸವಿಲ್ಲವೆಂದು ಹೇಳಿ ಮನೆಯಲ್ಲೆ ಕುಳಿತಿದ್ದ.

ಅಂದು ಶನಿವಾರ. ಬೆಳಗ್ಗಿನಿಂದಲೇ ಒಂದು ತೆರನಾಗಿದ್ದ ಪುಲ್ಲಯ್ಯ ಮನಸ್ಸಿನಲ್ಲೆ ಏನೇನೊ ಲೆಕ್ಕ ಹಾಕತೊಡಗಿದ್ದ. ಈ ಒಂದು 'ಕೆಲಸ' ಮುಗಿದಲ್ಲಿ, ಊರಿಗೆ ಹಿಂದಿರುಗಿ ಎಲ್ಲವನ್ನೂ ಸರಿಹೊಂದಿಸಿಕೊಳ್ಳಬೇಕು...... ಈಗ ಆ ಊರು ಎಷ್ಟು ಬದಲಾಗ್ಯದೊ ಏನೊ? ಊರಿಗೆ ಹೋಗಿ ಒಂದೆರಡು ಎಕರೆ ಭೂಮಿ ಕೊಂಡು ಬೆವರು ಸುರಿಸಿ ದುಡಿದರ ತನ್ನ ಜನ್ಮ ಸಾರ್ಥಕವಾಗುವದೆಂದು ಅವನು ನಂಬಿದ್ದ. ಈ ಆಸೆಯಿಂದಾಗಿಯೇ, ಈ ವಿಳಂಬವನ್ನು ಅವನು ಸಹಿಸದಾಗಿದ್ದ. ಗುಡಿಸಲಿನ ಮುಂದಿನ ಅಂಗಳದಲ್ಲಿ ಮಲಗಿದ್ದ ಪುಲ್ಲಯ್ಯ, ನಿದ್ದೆ ಬಾರದೆ ಹೊರಳಾಡುತ್ತಿದ್ದ. ಎದುರಿಗಿದ್ದ ಮರದ ಎಲೆಗಳು ಗಾಳಿಗೆ ಅಲುಗಾಡಹತ್ತಿದ್ದವು. ಚರಂಡಿಯ ನೀರಿನ ಕಾಲುವೆಯಿಂದ ಗಬ್ಬು ವಾಸನೆ ಹರಡಿತ್ತು. ದೂರದಲ್ಲಿ ರೈಲು ಶಿಳ್ಳೆ ಹಾಕಿತು.

ನೀಲಿ, ಪಕ್ಕದ ಗುಡಿಸಲಿನ ಹೆಣ್ಣುಮಗಳು ಬಂದದ್ದರಿಂದ ಬಾಗಿಲ ಮುಂದೆ ಕುಳಿತು ಆಕೆ ಹೇಳುತ್ತಿದ್ದ ಮಾತುಗಳಿಗೆ ಕಿವಿಗೊಟ್ಟಿದ್ದಳು. ಮಲ್ಲೇಶಿ, ತಾಯಿಯ ಬಳಿ ಕುಳಿತು ಆಕೆಯ ಮಾತುಗಳನ್ನು ಕೇಳುತ್ತಿದ್ದ. ಬೇಸರವಾದಾಗ ಅಲ್ಲಿಂದ ಎದ್ದು ಬಂದು ತಂದೆಯ ಪಕ್ಕದಲ್ಲಿ ಮಲಗಿದ. ತಂದೆ, ತನ್ನ ಭವಿಷ್ಯದ ಬಗ್ಗೆ ಕನಸುಕಾಣುತ್ತಾ, ಕಣ್ಣುಬಿಟ್ಟುಕೊಂಡು ಮಲಗಿದ್ದ. ಮಗ, ಮಧ್ಯಾಹ್ನ ನಿದ್ದೆ ಮಾಡಿದ್ದರಿಂದ, ನಿದ್ರೆ ಬಾರದೆ ಕಣ್ಣು ಬಿಟ್ಟುಕೊಂಡು ಮಲಗಿದ್ದ.

ಬೆಕ್ಕು ಸತ್ತಿತೆಂದು ದೊಡ್ಡದಾಗಿ ಗೋಳಿಟ್ಟ ಹೆಂಗಸು, ಅದು–ಇದು ಮಾತನಾಡುತ್ತಾ

ಕುಳಿತವಳು, ತನ್ನ ಸ್ವಂತ ವಿಷಯಗಳನ್ನು ಹೇಳತೊಡಗಿದಳು. ಅವಳು, ಬಹುಶಃ ಯಾರ ಮುಂದೆಯೂ ಹೇಳದಂತಹ ತನ್ನ ರಹಸ್ಯಗಳನ್ನು, ನೀಲಿಯ ಮುಂದೆ ಹೇಳ ತೊಡಗಿದಳು—"ನೀಲಮ್ಮ, ನೀವು ಈ ಗುಡಿಸಲಿಗೆ ಬಂದ ಹೊಸದಾಗ ನಾನು ಅತ್ತದ್ದು ಆ ಬೆಕ್ಕು ಸತ್ತಿತೆಂದಲ್ಲ—ನಾನೇ ಆ ಬೆಕ್ಕಿನ್ನ ಕೊಂದು, ಅದರ ಹೆಸರು ಹೇಳಿಕೊಂಡು ನನ್ನ ಮನಸ್ಸಿನೊಳಗಿನ ದುಃಖ ಕಡಿಮಿ ಮಾಡಿಕೊಂಡೆ ಅಂತ ಮಂದಿ ಹೇಳ್ತಾರ...... ಅದು ಏನs ಇರಲಿ, ನೀನು ಇಲ್ಲಿಗೆ ಬಂದು ಸುಮಾರು ಒಂದು ವರ್ಷ ಆಯಿತಲ್ಲ...... ನನ್ನ ಗಂಡನ ಸಂಗತಿ ಈಗಾಗಲೇ ನಿನಗ ತಿಳಿದಿರಬಹುದು...... ಹೆಣ್ಣಿಗಿಂತ ಅಧ್ವಾನ —ನಾನು ಆ—ಅಂದರ ಸಾಕು, ಬೆಕ್ಕಿನ ಹಾಂಗ ಮೂಲಿಹಿಡೀತಾನ...... ಈಗ ನೀನು ಇರೊ ಗುಡಿಸಲಿನ್ಯಾಗ ಮೊದಲ ಒಬ್ಬಾತ ಇದ್ದ...... ಅವನಿಗೆ ಹಿಂದs-ಮುಂದs ಯಾರೂ ಇರಲಿಲ್ಲಂತ ಕಾಣಸ್ತದ. ಒಬ್ಬನೇ ಇದ್ದ. ಬೇಕಾದಷ್ಟು ಗಳಿಸ್ತಿದ್ದ —ಸುಖಾನೂ ಪಡತಿದ್ದ. ತಿನ್ನೋದು, ಕುಡಿಯೋದು—ಒಂದs, ಎರಡs...... ಎಲ್ಲಾ ಚಟಾನೂ ಇಟ್ಟುಕೊಂಡಿದ್ದ. ನನ್ನ ಕಂಡರ, ಈ ವಠಾರಕ್ಕ ವಠಾರನs ನಡಗತದ. ಆದರ ಅದೇನೊ-ಎಂತೊ, ಆತನ ಮುಂದ ಮಾತ್ರ ನಾನು ಸೋತು ತಲಿ ಬಗ್ಗಿಸಿದೆ. ಆತ, ಆಗಾಗ ಕುಡಿದ ಅಮಲಿನಲ್ಲಿ ಹೊಡೀತಿದ್ದ, ಬಡೀತಿದ್ದ; ಸಿಟ್ಟುಮಾಡಿಕೊಂಡು ಒದೀತಿದ್ದ. ಆದರ, ಅವನಿಂದ ಹಾಂಗ ಏಟು ತಿನ್ನೋದರೊಳಗೂ ಒಂದು ಸುಖ ಇತ್ತು...... ಈಗ ಸಿಟ್ಟಿಗೆದ್ದು ಹೊಡೆದರ, ಇನ್ನೊಂದು ತಾಸಿಗೆ, ತಿನ್ನಿಸಿ-ಉಣ್ಣಿಸಿ ಸುಖ ಕೊಡತಿದ್ದ...... ಅವನು ಸತ್ತಾಗ, ನಾನೂ ಸಾಯಬೇಕಂತ ಮಾಡಿದ್ದೆ. ಆದರ, ನೋಡಿದವರು ಏನಂದುಕೊಂಡಾರು ಅಂತ ಆ ಯೋಚಿನಿ ಬಿಟ್ಟೆ...... ಒತ್ತರಿಸಿ ಬಂದ ದುಃಖ ತಡಕೊಳ್ಳಲಿಕ್ಕೆ ಆಗದ, ಎಲ್ಲಾರ ಮುಂದ ಆತನ ಸಾವಿಗಾಗಿ ಅಳಲು ನಾಚಿಕಿ ಆಗಿ, ಬೆಕ್ಕಿನ ನೆಪ ಮಾಡಿ ಗೋಳಾಡಿದೆ...... ನಾನು ಎಂದೇ ಆಗಲಿ ಕಣ್ಣಾಗ ನೀರು ತಂದುಕೊಂಡವಳಲ್ಲ...... ಆದರ ಆತ ಸತ್ತ ದಿನ ಮಾತ್ರ ಹುಚ್ಚಿ ಯಾಗಿದ್ದೆ......"

ಆಗಲೆ ರಾತ್ರಿ ಬಹಳವಾಗಿತ್ತು. "ಆಗಲೆ ಬಹಳ ಹೊತ್ತಾಯ್ತು. ಮಲಕೊ ನೀಲಿ"—ಎಂದು ಹೇಳಿ ಆಕೆ ಎದ್ದುಹೋದಾಗ, ನೀಲಿ ಒಳಗೆ ಹೋದಳು.

ದಿನಗಳು ಉರುಳಿದವು. ಆದರೆ ಪುಲ್ಲಯ್ಯ ನಿರೀಕ್ಷಿಸಿದ ದಿನ ಮಾತ್ರ ಬರಲಿಲ್ಲ. ಎದುರಿಗಿದ್ದ ಮರ ನೋಡಿದಾಗಲೆಲ್ಲಾ, ಆ ಹುಚ್ಚ ಹೇಳಿದ ಬಂಗಾರದ ನೆನಪಾಗಿ, ಪುಲ್ಲಯ್ಯನ ಕಣ್ಣಿಗೆ ಬರೀ ಅದೇ ಕಾಣುತ್ತಿತ್ತು. ಆಸೆಯಿಂದ, ಆಲೋಚನೆಗಳಿಂದ ಪುಲ್ಲಯ್ಯ ಹಲುಬಹತ್ತಿದ. ಮಲ್ಲೇಶಿ, ತಂದೆಯ ಎದೆಯ ಮೇಲೆ ಮಲಗಿ ತನಗೆ ಬಂದ ಹಾಡುಗಳನ್ನು ಗುಣುಗುತ್ತಿದ್ದ. ಸ್ವಲ್ಪ ಹೊತ್ತಿಗೆಲ್ಲಾ ಅವನು ನಿದ್ರೆಹೋದ.

ಅದೇ ಹೊತ್ತಿಗೆ, ಪುಲ್ಲಯ್ಯನ ಗುಡಿಸಲಿನಿಂದ ಮುಂದೆ, ಸ್ವಲ್ಪ ದೂರದಲ್ಲಿ ಇಬ್ಬರು ಬಂದು ನಿಂತರು. ಅವರನ್ನು ನೋಡಿದೊಡನೆ, ಅವರ ಆಕಾರಗಳಿಂದಲೇ, ಅವರು

ಯಾರೆಂಬುದು ಪುಲ್ಲಯ್ಯ ಕೂಡಲೇ ತಿಳಿದುಕೊಂಡ. ಅವರ ಗುರುತು ಸಿಕ್ಕೊಡನೆ ಮಗನನ್ನು ಪಕ್ಕದಲ್ಲಿ ಮಲಗಿಸಿ ಮೇಲೇಳಲು ಪ್ರಯತ್ನಿಸಿದ ಪುಲ್ಲಯ್ಯ. ಆದರೆ ಮಲ್ಲೇಶಿ ಕಣ್ಣು ಹೊಸೆಯುತ್ತ ಎದ್ದು ಕುಳಿತ. ಅವನನ್ನು ತಟ್ಟಿ ಮಲಗಿಸಿ ಪುಲ್ಲಯ್ಯ ಮೇಲೆದ್ದಾಗ, ಅವನೂ ಎದ್ದುಬಂದ. ಪುಲ್ಲಯ್ಯನಿಗೆ ಎಲ್ಲಿಲ್ಲದ ಕೋಪ ಬಂತು. ನೀಲಿ ಎಲ್ಲಿ ಎದ್ದುಬಿಡುವಳೊ ಎಂಬ ಭಯದಿಂದ ಏನೂ ಮಾಡದಾದ. ಕೊನೆಗೆ, ಅವರಿಗೆ ಬರುವುದಾಗಿ ಸನ್ನೆ ಮಾಡಿ ಮಲ್ಲೇಶಿಯನ್ನು ಭುಜದ ಮೇಲೆ ಹಾಕಿಕೊಂಡು ತಟ್ಟತೊಡಗಿದ.

ಆಗಲೇ, ಆ ಪುಟ್ಟ ಹೃದಯದಲ್ಲಿ ಸಂಶಯದ ಬೀಜ ಮೊಳಕೆಯೊಡೆಯಿತು. ಇಂದು ಏನಾದರೂ ಸರಿ, ತಂದೆ ತನ್ನನ್ನು ಕರೆದೊಯ್ಯುವುದಿಲ್ಲವೆಂಬುದು ಅವನಿಗೆ ಹೊಳೆಯಿತು. ತಂದೆಗೆ ತಿಳಿಯದಂತೆ, ಆತನ ಹಿಂದೆ ಹಿಂದೆ ಹೋಗಲು ಮಲ್ಲೇಶಿ ಆಗಲೇ ನಿಶ್ಚಯಿಸಿದ. ತನ್ನ ನಿರ್ಧಾರವನ್ನು ಕಾರ್ಯಗತಗೊಳಿಸುವ ಉದ್ದೇಶದಿಂದಲೊ ಏನೊ, ಗಾಢವಾಗಿ ನಿದ್ದೆಮಾಡುತ್ತಿರುವಂತೆ ನಟಿಸಿದ. ಪುಲ್ಲಯ್ಯ, ಮಗ ನಿದ್ದೆಮಾಡುತ್ತಿದ್ದಾನೆಂದುಕೊಂಡು, ಅವನನ್ನು ಪಕ್ಕಕ್ಕೆ ಮಲಗಿಸಿ, ನಿಧಾನವಾಗಿ ಹೊರಟ. ಕಳ್ಳನಿದ್ರೆಯಲ್ಲಿದ್ದ ಮಲ್ಲೇಶಿ, ಅರೆಗಣ್ಣು ತೆರೆದು, ತಂದೆ ಹೋಗುವುದನ್ನೇ ನೋಡುತ್ತಿದ್ದ.

ತಂದೆ ಹೋಗಿ ರಸ್ತೆಯ ಕೊನೆಯಲ್ಲಿ ನಿಂತಿದ್ದ ಇತರ ಇಬ್ಬರನ್ನು ಸೇರಿಕೊಂಡದ್ದನ್ನು ಮಲ್ಲೇಶಿ ನೋಡಿದ. ಕೂಡಲೇ ಎದ್ದು ಹೊರಟಲ್ಲಿ, ಅವರ ಕಣ್ಣಿಗೆ ಬೀಳಬಹುದೆಂಬ ಸಂದೇಹ ಮೂಡಿದ್ದರಿಂದ, ಸ್ವಲ್ಪ ಹೊತ್ತು ಹಾಗೆಯೇ ಮಲಗಿದ್ದ ಮಲ್ಲೇಶಿ, ಅಲ್ಲಿಂದಲೇ ಅವರ ಚಲನವಲನಗಳನ್ನು ಗಮನಿಸುತ್ತಿದ್ದ.

ಪುಲ್ಲಯ್ಯ, ರಾಮಣ್ಣ ಮತ್ತು ಚಂದ್ರಯ್ಯ, ರಸ್ತೆಯ ಒಂದು ಪಕ್ಕಕ್ಕೆ ನಿಂತಿದ್ದರು. "ಆ ಮನೆಯವರೆಲ್ಲಾ ಯಾರದೊ ಲಗ್ನಕ್ಕ ಹೋಗ್ಯಾರ. ಆ ಮನಿ ಒಳಗ ಅವನೊಬ್ಬನss ಇದ್ದಾನ. ಒಂಟಿಯಾಗಿ, ಮಾಳಿಗಿ ಮ್ಯಾಲೆ ಮಲಕೊಂಡಾನ. ಆದರ, ಅವನ ಹತ್ತಿರ ಪಿಸ್ತೂಲು ಅದ. ನಾವು ಮೈಯೆಲ್ಲಾ ಕಣ್ಣು ಮಾಡಿಕೊಂಡು ಈ ಕೆಲಸ ಮಾಡಬೇಕಾಗ್ಯದ...... ಈಗ ನಾವು ಹೊರಟಾಗ, ಅಥವಾ ಮತ್ತೆ ಯಾವಾಗಾದರೂ ಪೋಲೀಸರು ತಡವರ ಸಿನೆಮಾ ನೋಡಲಿಕ್ಕೆ ಹೋಗಿದ್ವಿ ಅಂತ ಹೇಳಬೇಕು"— ಎಂದೆಲ್ಲಾ ಎಚ್ಚರಿಕೆ ನೀಡಿದ ಚಂದ್ರಯ್ಯ, ಆ ಇಬ್ಬರ ಕೈಗಳನ್ನೂ ತನ್ನ ಕೈಯಲ್ಲಿಟ್ಟುಕೊಂಡು, "ನಮ್ಮ ಹಣೆಯ ಬರಹ ಕೆಟ್ಟಿದ್ದು, ನಮ್ಮ ಪೈಕಿ ಯಾರೇ ಆಗಲಿ ಸಿಕ್ಕಿಹಾಕಿಕೊಂಡರ, ದೇವರಾಣೆಯಾಗಿ ಉಳಿದ ಇಬ್ಬರ ಹೆಸರನ್ನು ಹೇಳಾಣೆಲ್ಲ"—ಎಂದು ಪ್ರಮಾಣ ಮಾಡಿಸಿದ. ಯಾರಾದರೂ ಸಿಗಿಬಿದ್ದಲ್ಲಿ, ಉಳಿದ ಇಬ್ಬರು ಕೂಡಲೇ ಸಿಕ್ಕಿಹಾಕಿಕೊಂಡವನ ಮನೆಗೆ ಹೋಗಿ, ಪೋಲೀಸರು ಹೊಡೆದರೂ, ಬಡಿದರೂ ತಮಗೇನೂ ತಿಳಿಯದೆಂದು ಮನೆಯವರು ಹೇಳುವಂತೆ ಮಾಡಬೇಕೆಂದೂ ಸಹ ತಿಳಿಸಿದ.

ಮೂವರೂ ಮುಂದೆ ಹೆಜ್ಜೆ ಹಾಕತೊಡಗಿದರು. ಅದುವರೆಗೆ ಹಾಸಿಗೆಯ ಮೇಲೆ ಒರಗಿಕೊಂಡ ಅವರನ್ನು ನೋಡುತ್ತಿದ್ದ ಮಲ್ಲೇಶಿ ಎದ್ದು ಕುಳಿತ. ಆಗಲೇ ಅವನು ಚಂದ್ರಯ್ಯನನ್ನು ಗುರುತಿಸಿದ. ಅವರು ರಸ್ತೆಯ ತಿರುವಿನಲ್ಲಿ ಮರೆಯಾದಾಗ, ಮಲ್ಲೇಶಿ, ಹಾಸಿಗೆಯಿಂದೆದ್ದು, ಆ ತಿರುವಿನ ವರೆಗೂ ಹೋಗಿ ಬಗ್ಗಿ ನೋಡಿದ. ದೂರದಲ್ಲಿ ಅವರು ಹೋಗುತ್ತಿದ್ದುದು ಅವನಿಗೆ ಕಾಣಿಸಿತು. ಮಲ್ಲೇಶಿ ಧೈರ್ಯಮಾಡಿ ಅವರನ್ನು ಹಿಂಬಾಲಿಸಿದ. ಪುಲ್ಲಯ್ಯ ಒಮ್ಮೆ ಹಿಂದಿರುಗಿ ನೋಡಿದನಾದರೂ, ತನ್ನ ಮಗ ತನ್ನನ್ನು ಅನುಸರಿಸುತ್ತಿರುವುದು ಅವನಿಗೆ ತಿಳಿಯಲೇ ಇಲ್ಲ....... ಮತ್ತೊಂದು ಓಣಿ ಬಂತು. ಆ ಓಣಿ ಮಲ್ಲೇಶಿಗೆ ಚಿರಪರಿಚಿತವಾಗಿತ್ತು—ಅದೆಷ್ಟೊ ಸಲ, ಅವನು ಆ ಓಣಿಯಲ್ಲಿ ಅಡ್ಡಾಡಿದ್ದ...... ಅಲ್ಲಿನ ಹುಡುಗರು ಗೋಲಿ ಆಡುವುದನ್ನು ನೋಡಿದ್ದ...... ಅವನ ಶಾಲೆಯೂ ಸಹ ಅದೇ ಓಣಿಯ ಕೊನೆಯಲ್ಲಿತ್ತು...... ಓಣಿಯಲ್ಲಿ ಕತ್ತಲು ಕವಿದಿತ್ತಾದರೂ, ಮಲ್ಲೇಶಿಗೆ ಯಾವ ದಿಗಿಲೂ ಆಗಲಿಲ್ಲ. ಪುಲ್ಲಯ್ಯ ಮತ್ತು ಅವನ ಸಂಗಡಿಗರು ಮುಂದೆ ಮುಂದೆ ಹೊರಟಿದ್ದರು. ಮಲ್ಲೇಶಿ ಅವರ ಹಿಂದೆಹಿಂದೆ ಹೆಜ್ಜೆಹಾಕುತ್ತಿದ್ದ. ಸ್ವಲ್ಪ ದೂರ ಹೋದ ಮೇಲೆ ಅವರು ನಿಂತರು. ಆ ಕತ್ತಲಿನಲ್ಲೂ ಸಹ, ಮಲ್ಲೇಶಿ ಅವರ ಚಲನವಲನಗಳನ್ನು ಸ್ಪಷ್ಟವಾಗಿ ನೋಡುತ್ತಿದ್ದ. ಅವರು ಕಾಲುವೆಯ ದಾರಿ ಹಿಡಿದು ಅದರ ಗುಂಟ ಹೊರಟಾಗ, ಮಲ್ಲೇಶಿ, ಗೋಡೆಯ ನೆರಳಿನಲ್ಲಿ ಬಚ್ಚಿಟ್ಟುಕೊಳ್ಳುತ್ತಾ, ಅಲ್ಲಲ್ಲಿ ನಿಲ್ಲುತ್ತಾ ಅವರ ಹಿಂದೆ ಹೊರಟ. ಅವರು ಯಾವುದೊ ಒಂದು ಬಂಗಲೆಯ ಮುಂದೆ ನಿಂತಾಗ, ಮಲ್ಲೇಶಿ, ಸಮೀಪದಲ್ಲಿದ್ದ ಕಸದ ಡಬ್ಬಿಯ ಹಿಂದೆ ಹೋಗಿ ಅಡಗಿಕುಳಿತ. ಸ್ವಲ್ಪ ಹೊತ್ತಾದ ನಂತರ, ಅವನು ನಿಧಾನವಾಗಿ ತಲೆ ಎತ್ತಿ ನೋಡಿದ. ನಕ್ಷತ್ರಗಳ ಆ ಮಂದಬೆಳಕಿನಲ್ಲಿ, ಬಿಳಿಯ ಸುಣ್ಣ ಮೆತ್ತಿಕೊಂಡ ಆ ಬಂಗಲೆಯನ್ನು ಒಬ್ಬರಾದ ಮೇಲೆ ಒಬ್ಬರು ಏರುತ್ತಿರುವುದು ಅವನಿಗೆ ಕಾಣಿಸಿತು. ಆಶ್ಚರ್ಯದಿಂದ ಬಿಟ್ಟ ಕಣ್ಣು ಬಿಟ್ಟುಕೊಂಡೆ ಅವರನ್ನು ನೋಡುತ್ತಿದ್ದ. ತನ್ನ ತಂದೆಯಂತೆ ತಾನೂ ಸಹ, ಸಿಮೆಂಟಿನ ಆ ಹರನಾಳಿಗೆಯನ್ನು ಹಿಡಿದುಕೊಂಡು ಆ ಬಂಗಲೆಯ ಮೇಲೇರಿ ಹೋಗಬೇಕೆಂಬ ಆಸೆಯಿಂದ, ಮಲ್ಲೇಶಿ ಉತ್ತೇಜಿತನಾದ.... ಆದರೆ, ತಾನು ಅಲ್ಲಿಯ ವರೆಗೆ ಬಂದದ್ದು ತಂದೆಗೆ ತಿಳಿದಲ್ಲಿ...... "ಅಮ್ಮಾಗ, ರೈಲ್ವೆ ಸ್ಟೇಷನ್ನಿನ್ಯಾಗ ಆದದ್ದನ್ನು ಹೇಳಿದಾಗ ಹೊಡದನಲ್ಲ, ಹಾಂಗs ಹೊಡೀತಾನೊ—ಏನೊ. ಏನೇ ಆಗಲಿ, ನಾನಂತೂ ಬಾಯಿಬಿಡಾಣಲ್ಲ. ಅವರೇನು ಮಾಡ್ತಾರೊ, ಇಲ್ಲೆ ಕೂತು ನೋಡ್ತೀನಿ"—ಎಂದು ತೀರ್ಮಾನಿಸಿದ ಮಲ್ಲೇಶಿ, ಅಲ್ಲಿಯೇ ಅವಿತುಕೊಂಡು ಕುಳಿತ.

ಇದ್ದಕ್ಕಿದ್ದಂತೆ ನಾಯಿ ಬೊಗಳಿದ್ದು ಅವನಿಗೆ ಕೇಳಿಸಿತು. ಸಿಮೆಂಟಿನ ಹರನಾಳಿಗೆಯನ್ನು ಹಿಡಿದು ಮೇಲೇರಲು ಪ್ರಯತ್ನಿಸುತ್ತಿದ್ದ ಕೊನೆಯವನು, ನಾಯಿ ಬೊಗಳುವುದನ್ನು ಕೇಳಿ ನಿಂತ. ಸ್ವಲ್ಪ ಹೊತ್ತಾದ ಮೇಲೆ ಮತ್ತೆ ಮೇಲೇರತೊಡಗಿದ......

ನಾಯಿ ಬೊಗಳುತ್ತಲೇ ಇತ್ತು. "ಸುಮ್ಮನೆ ಮಲಗಿಕೊಳ್ಳೊ"—ಎಂದು ಯಾರೊ

ಆ ನಾಯಿಗೆ ಹೇಳಿದರು. ಆದರೂ ಅದು ಬೊಗಳುವುದನ್ನು ನಿಲ್ಲಿಸಲಿಲ್ಲ. ಆಗ, ಅರೆನಿದ್ದೆಯಲ್ಲಿದ್ದ ಆ ವ್ಯಕ್ತಿ, ಅದೇ ಪುಚ್ಚ, ಎದ್ದು ಕುಳಿತು ಸುತ್ತಲೂ ನೋಡಿದ...... ಎಲ್ಲೆಲ್ಲೂ ಕತ್ತಲು. ಅಂತಹುದರಲ್ಲಿ ಅವನ ಪಕ್ಕದಲ್ಲಿ ಕುಳಿತಿದ್ದ ನಾಯಿ ಚಂಗನೆ ಹಾರಿ, ಬೊಗಳುತ್ತಾ ಮುಂದೆ ಹೋದಾಗ ಹುಚ್ಚ ಅದನ್ನು ಅನುಸರಿಸಿದ. ನಾಯಿಯ ಹಿಂದೆ ಹೋಗಿ ನಿಂತು ಅವನು ತಲೆ ಎತ್ತಿ ಬಂಗಲೆಯತ್ತ ನೋಡುವುದಕ್ಕೂ, ಕೊನೆಯವನು, ಬಂಗಲೆಯ ಮಾಳಿಗೆಯ ಮೇಲೆ ಕಾಲಿಡುವುದಕ್ಕೂ ಸರಿಹೋಯಿತು. ಹುಚ್ಚ ಕೂಡಲೇ "ಏ ಶೀನಿ, ಕಳ್ಳರು ಬಂದಾರಲೇ ಕಳ್ಳರು. ಕಳ್ಳರು...... ಕಳ್ಳರು......" ಎಂದು ಕೂಗತೊಡಗಿದ. ಅವನ ಆ ಕೂಗು ಮತ್ತು ನಾಯಿಯ ಬೊಗಳುವಿಕೆಯಿಂದ ಶ್ರೀನಿವಾಸರಾವುಗೆ ಎಚ್ಚರವಾಯಿತು...... ಅಷ್ಟರಲ್ಲೆ ಧನ್-ಧನ್ —ಎಂದು ಏನೊ ಸಪ್ಪಳವಾಯಿತು.

ಸ್ವಲ್ಪ ಹೊತ್ತು ಭಯಂಕರವಾದ ಮೌನ ಆವರಿಸಿತು. ಕಸದ ಡಬ್ಬಿಯ ಹಿಂದೆ ಅಡಗಿ ಕುಳಿತ ಮಲ್ಲೇಶಿ ಹೆದರಿಕೊಂಡ. ಅವನು, ಸರಕ್ಕನೆ, ಆ ಕಸದ ಡಬ್ಬಿಯ ಒಳಗೆ ಇಳಿದು ತಲೆಮರೆಸಿಕೊಂಡು ಕುಳಿತ. ತನ್ನ ತಂದೆ, ಮತ್ತೆ ಆ ಹರನಾಳಿಗೆಯನ್ನು ಹಿಡಿದು ಕೆಳಗಿಳಿಯಬಹುದೆಂದು ಅವನು ನಿರೀಕ್ಷಿಸಿದ್ದ...... ಯಾರೊ ಓಡಿಹೋಗುತ್ತಿದ್ದರು. ಅವರ ಹಿಂದೆಯೇ, "ಕಳ್ಳರು, ಹಿಡೀರಿ...... ಹಿಡೀರಿ"—ಎಂಬ ಕೂಗು ಕೇಳಿಸಿತು. ಕಸದಲ್ಲಿ ಕಸವಾಗಿ ಮುದುಡಿಕೊಂಡು ಕುಳಿತಿದ್ದ ಆ ಪುಟ್ಟ ಹೃದಯ, ನಕ್ಷತ್ರದಂತಹ ತನ್ನೆರಡು ಕಣ್ಣುಗಳಿಂದ ಆಕಾಶವನ್ನೇ ನೋಡುತ್ತಿತ್ತು. ಆದರೆ, ಆ ಕಣ್ಣುಗಳು ನಿರೀಕ್ಷಿಸಿದ್ದು ನಡೆಯಲೇಇಲ್ಲ...... "ಅಪ್ಪ ಇಳಿದುಬರಲಿಲ್ಲ. ಅಪ್ಪ ಬರಲಿಲ್ಲ...... ಅಪ್ಪ ಯಾವಾಗ ಬರತಾನೊ...... ಆತ ಬರೊವರೆಗೂ ನಾನು ಇಲ್ಲಿಂದ ಹೋಗಾಣೆಲ್ಲ"—ಎಂದು, ಆ ಹಸಿಗೂಸು ಹಠದಿಂದ ಅಲ್ಲಿಯೇ ಕುಳಿತಿತ್ತು.

ಅದೆಷ್ಟೊ ಹೊತ್ತಾದ ಮೇಲೆ, ಕೋಲಾಹಲ ತಗ್ಗಿತು. ಗದ್ದಲ ಕೇಳಿ ಎದ್ದುಬಂದವರೆಲ್ಲ ಒಂಟಿಯಾಗಿ ಇಲ್ಲವೆ ಇಬ್ಬಿಬ್ಬರಾಗಿ ಹಿಂದಿರುಗುತ್ತಿದ್ದರು. ಹುಚ್ಚ ತನ್ನ ನಾಯಿಯನ್ನು ಕುರಿತು ಏನೇನೊ ಹೇಳುತ್ತಿದ್ದ...... ಕಳ್ಳರನ್ನು ಕುರಿತು ತನ್ನಷ್ಟಕ್ಕೆ ತಾನು ಮಾತನಾಡಿಕೊಳ್ಳುತ್ತಿದ್ದ. ಆದರೆ, ಮಲ್ಲೇಶಿಗೆ ಅವನು ಏನು ಹೇಳುತ್ತಿದ್ದಾನೆಂಬುದು ಕೇಳಿಸಲಿಲ್ಲ. ಅವನ ಕಿವಿಗೆ, ಆ ಹುಚ್ಚನ ಒಂದೆರಡು ಮಾತುಗಳು ಬಿದ್ದುವಾದರೂ, ಅವುಗಳ ಅರ್ಥ ಅವನಿಗಾಗಲಿಲ್ಲ. "ಅಪ್ಪನ್ನ ಅಂದ ಆ ಸ್ಟೇಷನ್ನಿನ್ಯಾಗ, ಮೈ ಹುಣ್ಣು ಆಗೋ ಹಾಂಗ ಹೊಡದರು. ಈಗ ಮತ್ತs ಆತಗ ಹೊಡೆದರೊ ಏನೊ? ಅಪ್ಪನ್ನ ಹೊಡೆದವರ್ನ ಕಚ್ಚತೀನಿ...... ಈಗs ಹೋಗ್ತೀನಿ...... ಆದರ, ಆ ಬಂಗಲೆ ಏರಲಿಕ್ಕೆ ನನಗಾಗಬೇಕಲ್ಲ. ಒಂದು ವೇಳೆ ಏರಿದರೂ, ಅಪ್ಪ ನನ್ನ ನೋಡಿ ಸಿಟ್ಟಿಗೆದ್ದು ಹೊಡದರ......? ಅಪ್ಪಗ ಯಾರಾದರೂ ಹೊಡದರ ಆ ಚಂದ್ರಯ್ಯ ಮತ್ತ ಆತ ಇನ್ನೊಬ್ಬಾತ ಸುಮ್ಮನೆ ಇರ್‍ತಾರೇನು?......" ಎಂದೆಲ್ಲ ಆ ಮುಗ್ಧ ಜೀವ ಯೋಚಿ

ಸಿತು. ಕಣ್ಣು ಭಾರವಾಗಿ, ಚಳಿಯಿಂದ ಮೈ ನಡುಗುತ್ತಿದ್ದರೂ, ಮಲ್ಲೇಶಿ ಆ ಕಸದ ಕೊಂಪೆಯಲ್ಲಿ ಕುಳಿತೆ ಇದ್ದ.

ಆ ಗೋಡೆಯನ್ನು ನೋಡಿ ನೋಡಿ, ಅವನ ಕಣ್ಣುಗಳು ನೊಂದವು. ಎಲ್ಲವೂ ಮೌನವಾಗಿತ್ತು. ಆಕಾಶದಲ್ಲಿ ಮಿಣಕುಮಿಣಕಾಗಿ ಹೊಳೆಯುತ್ತಿದ್ದ ಆ ನಕ್ಷತ್ರಗಳು ಮತ್ತು ಸುತ್ತಲೂ ಇದ್ದ ಕಸದ ರಾಶಿ ಮಾತ್ರ, ಅವನ ಸಂಗಾತಿಯಾಗಿದ್ದವು. ಕೊನೆಗೆ, ಬೇಸತ್ತ ಆ ನಿರ್ಮಲ ಜೀವಕ್ಕೆ ಒಂದು ವಿಚಾರ ಹೊಳೆಯಿತು. "ನಾನು ಎಲ್ಲೋ ಯಾವ ಧ್ಯಾನದಾಗೊ ಇದ್ದಾಗ ಅಪ್ಪಾ ಕೆಳಗಿಳಿದು ಬಂದು ಮನೀಗೆ ಹೋಗಿದ್ದರ? ಅಥವಾ ಕೂಲಿ ಕೆಲಸಕ್ಕಂತ ಬಂದರಿಗೆ ಏನಾದರೂ ಹೊರಟುಹೋಗಿದ್ದರ?"—ಎಂದುಕೊಂಡು, ನಿಧಾನವಾಗಿ ಎದ್ದು ಒಮ್ಮೆ ಸುತ್ತಲೂ ನೋಡಿದ. ಎಲ್ಲೆಲ್ಲೂ ಕತ್ತಲು. ಕಣ್ಣುಕುಕ್ಕುವ ಕತ್ತಲಿನಿಂದ ಭಯಗೊಂಡ ಮಲ್ಲೇಶಿ, ಓಡುತ್ತಾ ಮನೆ ಸೇರಿದ. ಆದರೆ, ಮನೆಯ ಅಂಗಳದಲ್ಲಿ ತಂದೆ ಇರಲಿಲ್ಲ. ತಂದೆಗಾಗಿ ಕಾತರಿಸುತ್ತಿದ್ದ ಆ ಎಳೆಯ ಕಣ್ಣುಗಳು ಬಹಳ ಹೊತ್ತಿನ ವರೆಗೆ ತೆರೆದುಕೊಂಡೇ ಇದ್ದವು.

## [ 39 ]

ನೀಲಿ, ಬೆಳಗಾದ ಕೂಡಲೆ ಮಗನನ್ನು ಎಬ್ಬಿಸಿ, "ನಿಮ್ಮಪ್ಪ ಎಲ್ಲಿಗೆ ಹೋಗ್ಯಾನ?"—ಎಂದು ಕೇಳಿದಳು. ಮಲ್ಲೇಶಿ ಅವಳಿಗೆ ಯಾವ ಉತ್ತರವನ್ನೂ ಕೊಡದೆ ಹಿತ್ತಲಿಗೆ ಹೊರಟುಹೋದ. ನೀಲಿ, ಹಿಂದೆಯೆ ಹೋಗಿ ಅವನ ರೆಟ್ಟೆ ಹಿಡಿದು ಮತ್ತೆ ಕೇಳಿದಳು. ಆ ಎಳೆಯ ಹೃದಯಕ್ಕೆ ಸುಳ್ಳು ಹೇಳಲು ನಾಲಿಗೆ ಏಳಲಿಲ್ಲ. ಆದರೆ, ತನಗೆ ತಿಳಿದುದೆಲ್ಲವನ್ನೂ ಹೇಳಿದಲ್ಲಿ ತಂದೆ ಎಲ್ಲಿ ಹೊಡೆಯುತ್ತಾನೊ—ಎಂಬ ಭೀತಿಯಿಂದ ಬಾಯಿಮುಚ್ಚಿಕೊಂಡಿದ್ದ.

ನೀಲಿ ಗದರಿದಾಗಲೂ ಅವನು ಬಾಯಿ ಬಿಡಲಿಲ್ಲ. ಎಲ್ಲಿಗಾದರೂ ಹೊರಗೆ ಹೋಗಿರಬಹುದೆಂದುಕೊಂಡು ಸುಮ್ಮನಿದ್ದಳು. ಮಲ್ಲೇಶಿ ಮನೆಯಿಂದ ಹೊರಗೆ ಹೊರಟು, ಬೀದಿಬೀದಿ ಅಲೆದ. ಆಗಲೇ ಸೂರ್ಯ ನೆತ್ತಿಗೇರಿದ್ದ. ಎಲ್ಲರೂ ತಮ್ಮ ತಮ್ಮ ಕೆಲಸಕಾರ್ಯಗಳಲ್ಲಿ ತೊಡಗಿದ್ದರು. ದಿಗಿಲುಗೊಂಡಿದ್ದ ಮಲ್ಲೇಶಿ, ತಂದೆಗಾಗಿ ಪರಿತಪಿಸುತ್ತಿದ್ದ. "ಅಪ್ಪ ಇನ್ನೂ ಬರಲಿಲ್ಲ. ಅಪ್ಪಗ ಏನು ಆಗ್ಯದೊ ಏನೊ?"—ಎಂದು ಯೋಚಿಸತೊಡಗಿದ. ಯೋಚಿಸಿ ಯೋಚಿಸಿ ಅವನ ತಲೆ ಚಿಟ್ಟುಹಿಡಿಯಿತು. ಜೊತೆಗೆ ಅವನಿಗೆ ಎಲ್ಲಿಲ್ಲದ ಕೋಪ ಬಂತು. ಅದೇ ಕೋಪದಲ್ಲಿ ಸರಸರನೆ ಮನೆಗೆ ಹೋಗಿ ಹುಡುಕಾಡತೊಡಗಿದ. ಕೊನೆಗೆ ಹಿತ್ತಲಿಗೆ ಹೋಗಿ ಒಂದು ಬಿದಿರಿನ ಭಡಿ

ತೆಗೆದುಕೊಂಡು ಮತ್ತೆ ಹೊರಹೊರಟ. ನಡುಮಧ್ಯಾಹ್ನವಾದರೂ ಗಂಡ ಮನೆಗೆ ಬರದಿದ್ದರಿಂದ ಕಳವಳಗೊಂಡಿದ್ದ ನೀಲಿ, ಮಲ್ಲೇಶಿಯನ್ನು ತಡೆದು, "ನಿಮ್ಮಪ್ಪ ಎಲ್ಲಿಗೆ ಹೋಗ್ಯಾನೊ"—ಎಂದು ಗದರಿದಳು. ಮಲ್ಲೇಶಿ ಅವಳಿಗೆ ಯಾವ ಉತ್ತರವನ್ನೂ ನೀಡದೆ ಬಾಯಿ ಮುಚ್ಚಿಕೊಂಡಾಗ, ನೀಲಿಗೆ ಸಿಟ್ಟು ಬಂತು. ಏಕೊ ಏನೊ, ಭೀತಿ ಅವಳ ಮನಸ್ಸನ್ನು ಆವರಿಸಿತ್ತು. ಏನೊ ಅಪಚಾರವಾದಂತೆ, ಮನಸ್ಸಿನ ಶಾಂತಿಯಿಲ್ಲದೆ ಒದ್ದಾಡಹತ್ತಿದಳು—ನೀಲಿ.

ನೀಲಿ ಹೊಡೆದರೂ, ಅವಳಿಗೆ ಯಾವ ಉತ್ತರವನ್ನೂ ಕೊಡದೆ, ಮಲ್ಲೇಶಿ ಮತ್ತೆ ಬೀದಿಗಿಳಿದ. ರಾತ್ರಿ ಹೊರಟ ದಾರಿಯಲ್ಲೆ ನಡೆದು, ತಾನು ಅಡಗಿಕೊಂಡು ಕುಳಿತ ಕಸದ ಡಬ್ಬಿಯ ಪಕ್ಕದಲ್ಲಿ ನಿಂತ. "ನಮ್ಮಪ್ಪ ಇದೇ ಬಂಗಲೆ ಏರಿಹೋದ. ಅಂದಮ್ಯಾಲೆ ಈ ಬಂಗಲೆಯವರು ಆತನಿಗೆ ಏನಾದರೂ ಮಾಡಿರಬಹುದು"—ಎಂದುಕೊಂಡು ಮುಂದೆ ಹೋದ. ಹಾಗೆಯೇ ದಿಟ್ಟತನದಿಂದ ಆ ಮನೆಯ ಬಾಗಿಲೊಳಗೆ ಇಣಕಿ ನೋಡಿದ. ಅಲ್ಲಿ ಮೂರು ನಾಲ್ಕು ಜನರು ಇದ್ದುದನ್ನು ನೋಡಿ, "ನಮ್ಮಪ್ಪನ್ನ ಬಿಡ್ತೀರೊ ಇಲ್ಲೊ......" ಎಂದು ಕೂಗಿದ.

ಎದುರಿಗೆ ನಿಂತಿದ್ದ ಆಳುಮನುಷ್ಯ, ಈ ಹುಡುಗನ ಆರ್ಭಟ ಕೇಳಿ ಪಿಳಿ-ಪಿಳಿ ನೋಡುತ್ತಾ ನಿಂತಿದ್ದ. ಮಲ್ಲೇಶಿ, ಕೈಯಲ್ಲಿನ ಬಿದಿರಿನ ಛಡಿಯನ್ನು ನೆಲಕ್ಕೆ ಕುಟ್ಟಿ "ನಮ್ಮಪ್ಪನ್ನ ಬಿಡದಿದ್ದರ, ಇದರಲೆ ಹೊಡದು ನಿಮ್ಮ ತಲಿ ಒಡೀತೀನಿ"—ಎಂದು ಅರಚಿದ.

ಒಳಗಿನಿಂದ ಕಾಕಿ ಬಟ್ಟೆ ಹಾಕಿಕೊಂಡಿದ್ದ ಒಬ್ಬಾತ ಹೊರಬಂದಾಗ, "ಹುಂ—ನಮ್ಮಪ್ಪನ್ನ ಬಿಡ್ರಿ"—ಎಂದು ಮತ್ತೆ ಕೂಗಿದ. ಅಲ್ಲಿ ನಿಂತಿದ್ದ ಆಳು ಏನೊ ಹೇಳಲು ಬಾಯಿ ತೆರೆದನಾದರೂ, ಮಲ್ಲೇಶಿ, ಮಾತನಾಡಲು ಆತನಿಗೆ ಅವಕಾಶವನ್ನೇ ನೀಡದೆ ಕೂಗಿಕೊಳ್ಳಹತ್ತಿದ. ಕಾಕಿಬಟ್ಟೆ ಹಾಕಿಕೊಂಡಿದ್ದ ಪೋಲೀಸ್ ಇನ್ಸ್‌ಪೆಕ್ಟರ್ ಮುಗುಳ್ನಗುತ್ತಾ ಮುಂದೆ ಬಂದು, "ಈ ಹುಡುಗಗ ಬಿಸ್ಕತ್ತು ಅಂದರ ಬಹಳ ಇಷ್ಟ. ಹೋಗು ನಾಲ್ಕು ಬಿಸ್ಕತ್ತು ತೊಗೊಂಡುಬಾ"—ಎಂದು ಆಳನ್ನು ಆಚೆ ಕಳುಹಿಸಿದ. ಅಷ್ಟರಲ್ಲಿ ಒಳಗಿದ್ದ ಇತರ ಮೂರು-ನಾಲ್ಕು ಜನ ಹೊರಬಂದರು.

ಮಲ್ಲೇಶಿಯ ಆವೇಶ ಇನ್ನೂ ತಗ್ಗಿರಲಿಲ್ಲ. ಅವನು, "ನಮ್ಮಪ್ಪನ್ನ ಬಿಡ್ರಿ, ನಮ್ಮಪ್ಪನ್ನ ಬಿಡ್ರಿ"—ಎಂದು ಕೂಗಿಕೊಳ್ಳುತ್ತಲೇ ಇದ್ದ. ಇನ್ಸ್‌ಪೆಕ್ಟರ್, ಅವನನ್ನು ಸಮಾಧಾನಪಡಿಸುತ್ತಾ, "ನಿಮ್ಮಪ್ಪ ಇಲ್ಲಿಗೆ ಬಂದಿಲ್ಲ" ಎಂದು ಹೇಳಿದ.

"ಬಂದಿಲ್ಲ? ನಿನ್ನೆ ರಾತ್ರಿ ಇಲ್ಲಿಗೆ ಬಂದನಲ್ಲ?"

"ಇಲ್ಲಿಗೆಲ್ಲಿಂದ ಬಂದ? ನಾವಂತೂ ಎಲ್ಲಾ ಬಾಗಿಲು ಹಾಕಿಕೊಂಡು ಒಳಗ ಮಲಗಿದ್ವಿ. ಅಂದಮ್ಯಾಲೆ ಆತ ಈ ಮನಿ ಒಳಗ ಹ್ಯಾಂಗ ಬಂದಾನು?"

"ನಮ್ಮಪ್ಪ ಒಬ್ಬತಾನ ಅಲ್ಲದ ಇನ್ನೂ ಇಬ್ಬರು, ಹರನಾಳಿಗಿ ಹಿಡಕೊಂಡು ಈ

ಗೋಡೆ ಹತ್ತಿ ಬಂಗಲೆದೊಳಗ ಇಳಿದದ್ದು ನಾನು ನೋಡೀನಿ. ಬಂದಿಲ್ಲಾ ಅಂತ ನೀವು ಸುಳ್ಳು ಹೇಳಿದರ ನಾನು ನಂಬಾಣಿಲ್ಲ. ಬಿಡ್ರಿ...... ನಮ್ಮಪ್ಪ ಒಳ್ಳೆಯವನು, ಅವನ್ನ ಬಿಟ್ಟುಬಿಡ್ರಿ"—ಮಲ್ಲೇಶಿ ರಂಪ ಹೂಡಿದ.

ಆ ವೇಳೆಗೆ ಬಿಸ್ಕತ್ತುಗಳು ಬಂದವು. ಇನ್ಸ್‌ಪೆಕ್ಟರ್, ಅವನ್ನು ಹಿಡಿದುಕೊಂಡು ಮಲ್ಲೇಶಿಯ ಸಮೀಪಕ್ಕೆ ಬಂದು, "ನಿಮ್ಮಪ್ಪನ್ನ ನಾವು ಬಿಡ್ತೀವಂತ...... ಮೊದಲು ನೀನು ಈ ಬಿಸ್ಕತ್ತು ತಿನ್ನು"—ಎನ್ನುತ್ತಾ, ಬಿಸ್ಕತ್ತುಗಳನ್ನು ಕೊಟ್ಟಾಗ, ಮಲ್ಲೇಶಿ ಅವನ್ನು ದೂರ ಬಿಸಾಡಿ, "ನನಗ ಇದೆಲ್ಲಾ ಬ್ಯಾಡ. ನನಗ ನಮ್ಮಪ್ಪ ಬೇಕು. ನಮ್ಮಪ್ಪನ್ನ ಬಿಡ್ರಿ"—ಎಂದು ಅರಚಿದ.

"ಒಂದು ಬಿಸ್ಕತ್ತಾದರೂ ತಿನ್ನು"—ಎಂದು ಆ ಇನ್ಸ್‌ಪೆಕ್ಟರ್ ಕೆಳಗೆ ಬಿದ್ದ ಬಿಸ್ಕತ್ತನ್ನು ಎತ್ತಿಕೊಟ್ಟರೂ, ಮಲ್ಲೇಶಿ ಅದನ್ನು ತೆಗೆದುಕೊಳ್ಳದೆ, "ನಮ್ಮಪ್ಪನ್ನ ಬಿಡ್ತೀರೊ ಇಲ್ಲೊ"—ಎನ್ನುತ್ತಾ, ಕೈಯಲ್ಲಿನ ಛಡಿಯನ್ನು ಝಳಪಿಸಿದ.

"ಸರಿ ಹಾಂಗಾದರ. ಆದರ, ನಿಮ್ಮಪ್ಪ ಯಾರು ಅಂಬೋದು ನಮಗ ಗೊತ್ತಿಲ್ಲ. ಆತನ ಹೆಸರು ಹೇಳು—ಬಿಟ್ಟುಬಿಡ್ತೀವಿ."

"ಖರೇನs?"

"ಹೂಂ."

"ನಮ್ಮಪ್ಪನ ಹೆಸರು ಗೊತ್ತಿಲ್ಲ......?—ಪುಲ್ಲಯ್ಯ."

"ಮತ್ತ ನಿಮ್ಮಪ್ಪನ ಜೊತಿಗಿದ್ದರಲ್ಲ ಅವರ ಹೆಸರು?"

"ನಮ್ಮಪ್ಪನ ಹೆಸರು ಹೇಳಿದರ ಆತನ್ನ ಬಿಟ್ಟುಬಿಡ್ತೀವಿ—ಅಂದಿ. ಈಗ ಮತ್ತೇ ನೇನೊ ಕೇಳ್ತಿಯಲ್ಲ?"

"ನಾನು ಕೇಳಿದ್ದಕ್ಕೆಲ್ಲಾ ನೀನು ಸರಿಯಾಗಿ ಉತ್ತರ ಕೊಟ್ಟರ ಬಿಟ್ಟುಬಿಡ್ತೀನಿ."

"ಮೊದಲ ನಮ್ಮಪ್ಪನ್ನ ನನಗ ತೋರಿಸು."

"ಅದೆಲ್ಲಾ ಆಗಾಣಿಲ್ಲ. ನಾನು ಕೇಳಿದ್ದಕ್ಕೆಲ್ಲ ಸರಿಯಾಗಿ ಉತ್ತರ ಕೊಟ್ಟಿ ಅಂದರ ನಿಮ್ಮಪ್ಪನ್ನ ತೋರಸ್ತೀನಿ. ಇಲ್ಲಾ ಅಂದರ ಸುಮ್ಮನೆ ಮನೀಗ ಹೋಗು."

"ಇಲ್ಲ—ನಾನು ಹೋಗಾಣಿಲ್ಲ. ನಮ್ಮಪ್ಪನ್ನ ಬಿಟ್ಟುಬಿಡು, ಆತನ ಜತಿ ಹೋಗ್ತೀನಿ" —ಮಲ್ಲೇಶಿ ಬಿಂಕದಿಂದ ಹೇಳಿದ.

"ಏ—ಈ ಹುಡುಗನ್ನ ಹೊರಗ ಹಾಕು"—ಎಂದು ಇನ್ಸ್‌ಪೆಕ್ಟರ್, ಪೇದೆಗೆ ಹೇಳಿದ. ಕನಿಷ್ಠಬಿಲ್ಲೆಯೊಬ್ಬ ಮುಂದೆಬಂದು ಮಲ್ಲೇಶಿಯ ಎಡಗೈಯನ್ನು ಹಿಡಿದ. ಮಲ್ಲೇಶಿ ತನ್ನ ಬಲಗೈಯಲ್ಲಿದ್ದ ಛಡಿಯಿಂದ, ಆ ಕನಿಷ್ಠಬಿಲ್ಲೆಗೆ ಹೊಡೆಯಲು ಕೈ ಎತ್ತಿದಾಗ, ಇನ್ಸ್‌ಪೆಕ್ಟರ್ ಅವನನ್ನು ತಡೆದು, ಛಡಿಯನ್ನು ಕಸಿದುಕೊಂಡ. ಮಲ್ಲೇಶಿ ತನ್ನನ್ನು ಹಿಡಿದುಕೊಂಡಿದ್ದ ಕನಿಷ್ಠಬಿಲ್ಲೆಯ ಕೈ ಕಚ್ಚಲು ಪ್ರಯತ್ನಿಸಿದನಾದರೂ, ಆತನಿಂದ ಬಿಡಿಸಿಕೊಳ್ಳಲು ಆಗಲಿಲ್ಲ. ಆ ಕನಿಷ್ಠಬಿಲ್ಲೆ, ಅವನನ್ನು ಎತ್ತಿಕೊಂಡು ಬಂದು ಹೊರಗೆ

ಬಿಟ್ಟುಹೋದ. ಮಲ್ಲೇಶಿ ಮನೆಯ ಹೊರಗೆ ನಿಂತು ಅಳತೊಡಗಿದ. ನಡುನಡುವೆ, ಸಿಟ್ಟಿನಿಂದ, "ನಮ್ಮಪ್ಪನ ಬಿಟ್ಟುಕೊಡದಿದ್ರ ನಿಮ್ಮನ್ನೆಲ್ಲಾ ಏನು ಮಾಡ್ತೀನೊ ನೋಡೀರಂತ...... ನಮ್ಮಪ್ಪನ ಕೈಲೆ ನಿಮಗೆಲ್ಲಾರಿಗೂ ಹೊಡಸ್ತೀನಿ...... ನಮ್ಮಪ್ಪ ನಿಮ್ಮನ್ನ...... ನಿಮ್ಮನ್ನ......" ಎಂದು ಕೂಗಾಡಿದ. ಮತ್ತೆ ಅಳತೊಡಗಿದ. ಹುಡುಗ ಯಾವುದಕ್ಕೂ ಹೆದರುವುದಿಲ್ಲವೆಂಬುದನ್ನು ಅರಿತುಕೊಂಡ ಇನ್ಸ್‌ಪೆಕ್ಟರ್ ನಗುತ್ತಾ ಹೊರಬಂದು, "ನಾನು ಕೇಳಿದ್ದಕ್ಕೆಲ್ಲಾ ಉತ್ತರ ಕೊಟ್ಟಿದ್ದಿ ಅಂದರ, ಇಷ್ಟು ಹೊತ್ತಿಗೆ ನಿಮ್ಮಪ್ಪ ನಿನ್ನ ಹತ್ತಿರ ಇರ್ತಿದ್ದ...... ಬಾ, ಒಳಗ ಬಾ, ನಿಮ್ಮಪ್ಪನ್ನ ನೋಡವಂತಿ...... ಬಾ"—ಎಂದು ಕರೆದ. ಮಲ್ಲೇಶಿ ಒಂದೇ ಪುಟಿಗೆಯಲ್ಲಿ ಒಳಗೆ ಓಡಿದ. ಇನ್ಸ್‌ಪೆಕ್ಟರ್, ಪ್ರೀತಿಯಿಂದ ಅವನ ಭುಜದ ಮೇಲೆ ಕೈಯಿಟ್ಟು, "ನಿಮ್ಮಪ್ಪ ಪುಲ್ಲಯ್ಯನಂತೂ ಒಳ್ಳೆಯವನು...... ನೀನೂ ಒಳ್ಳೆಯವನು...... ಹೌದಲ್ಲ?"—ಎಂದು ಪ್ರಸಲಾಯಿಸಿದ.

ಈ ಹೊಗಳಿಕೆಯಿಂದ ಆ ಎಳೆಯ ಜೀವ ಸಮಾಧಾನಗೊಂಡಿತು. ಮಲ್ಲೇಶಿ, ನಗುಮುಖ ಮಾಡಿಕೊಂಡು, "ಹೌದು, ನಮ್ಮಪ್ಪ ಬಹಳ ಒಳ್ಳೆಯವನು"—ಎಂದ.

ಇನ್ಸ್‌ಪೆಕ್ಟರ್, ಮಲ್ಲೇಶಿಯನ್ನು ಎತ್ತಿಕೊಂಡು ಅದು–ಇದೂ ಮಾತನಾಡುತ್ತಾ, "ನಿಮ್ಮಪ್ಪನ ಜತಿ ಇನ್ನೂ ಇಬ್ಬರು ಬಂದಿದ್ದರಲ್ಲ...... ಅವರ್‍ಯಾರು?"—ಎಂದು ಕೇಳಿದ.

"ಚಂದ್ರಯ್ಯ...... ಇನ್ನೊಬ್ಬಾತ ರಾಮಣ್ಣ ಇರಬಹುದು."

"ಅವರು ನೋಡಲಿಕ್ಕೆ ಹ್ಯಾಂಗಿದ್ದಾರ......? ದಪ್ಪಗೊ, ತೆಳ್ಳಗೊ, ಉದ್ದೊಗಿದ್ದೊ, ಹ್ಯಾಂಗಿದ್ದಾರ?"—ಇನ್ಸ್‌ಪೆಕ್ಟರ್ ತನ್ನ ಪ್ರಶ್ನೆಗಳನ್ನು ಮುಂದುವರಿಸಿದ.

"ಚಂದ್ರಯ್ಯ ಅಕ ಆತನ್ಹಾಂಗಿದ್ದಾನ. ಇನ್ನೊಬ್ಬ ನಿನ್ನ ಹಾಂಗ"—ಎಂದು ಮಲ್ಲೇಶಿ, ದಪ್ಪಗೆ ಕುಳ್ಳಗಾಗಿದ್ದ ಒಬ್ಬ ಪೇದೆಯನ್ನೂ ಎತ್ತರವಾಗಿದ್ದ ಇನ್ಸ್‌ಪೆಕ್ಟರನ್ನೂ ಬಟ್ಟು ಮಾಡಿ ತೋರಿಸಿದ. ಇದೇ ರೀತಿ, ಮುಗ್ಧನಾದ ಆ ಹುಡುಗನನ್ನು ನಗಿಸಿ, ಮಾತಿನಲ್ಲಿ ಮುಳುಗಿಸಿ ಕಳ್ಳರು ಹೇಗೆ ಮಾಳಿಗೆ ಏರಿದರೆಂಬುದನ್ನು, ತಾನು ಅದನ್ನು ನೋಡಿದುದನ್ನು, ತಾನು ಕುಳಿತುಕೊಂಡಿದ್ದ ಆ ಕಸದ ಡಬ್ಬಿಯನ್ನು ತೋರಿಸುವಂತೆ ಮನ ಒಪ್ಪಿಸಿದರು. ಎಲ್ಲವನ್ನೂ ತಿಳಿದುಕೊಂಡ ಮೇಲೆ, "ನಿಮ್ಮಪ್ಪ ಎಲ್ಲಿಯಾದರೂ ಕೆಲಸ ಮಾಡ್ತಾನೇನು?"—ಎಂದು ಇನ್ಸ್‌ಪೆಕ್ಟರ್ ಕೇಳಿದ. ಮಲ್ಲೇಶಿ ಕೂಡಲೆ, "ರಾತ್ರಿ ಹೊತ್ತು ಹಡಗುಗಳಿಂದ ಅಕ್ಕಿ ಮೂಟೆ ಇಳಸ್ತಾನ. ಹಗಲು ಮಾತ್ರ ಮನ್ಯಾಗs ಇರ್ತಾನ"—ಎಂದು ಹೇಳಿಬಿಟ್ಟ. ಇವಾದ ಮೇಲೆ, ತನ್ನ ತಂದೆಯನ್ನು ತನಗೆ ತೋರಿಸುವಂತೆ ಮಲ್ಲೇಶಿ ಆ ಇನ್ಸ್‌ಪೆಕ್ಟರ್‌ನನ್ನು ಪೀಡಿಸತೊಡಗಿದ. "ಸರಿ ಹಾಂಗಾದರ. ನೀನು ಇಲ್ಲೆ ಇರು. ನಾನು ನಿಮ್ಮಪ್ಪನ್ನ ಕರಕೊಂಡು ಬರ್‍ತೀನಿ"—ಎಂದು ಹೇಳಿದ ಇನ್ಸ್‌ಪೆಕ್ಟರ್ ಒಳಹೋದ. ಸ್ವಲ್ಪ ಹೊತ್ತಿನ ನಂತರ, ಆತ ಮತ್ತೊಬ್ಬನ ಜೊತೆಗೆ ಹೊರ

ಬಂದು, "ಯಾವುದೊ ದೊಡ್ಡ ಹಡಗು ಬಂದದಂತ. ಅದರೊಳಗಿನ ಮೂಟೆಗಳನ್ನು ಇಳಿಸಲಿಕ್ಕೆ ನಿಮ್ಮಪ್ಪ ಹೋಗ್ಯಾನ. ಮಲ್ಲೇಶಿ ಬಂದರ, ರಾತ್ರಿ ಮನೀಗೆ ಬರ್ತೀನಿ ಅಂತ ಹೇಳ್ರಿ ಅಂತ ತಿಳಿಸಿ ಹೋಗ್ಯಾನ. ನೀನು ಈಗ ಮನೀಗ ಹೋಗು. ನಿಮ್ಮಪ್ಪ ಅಲ್ಲಿಂದ ಸೀದಾ ಮನೀಗೆ ಬರ್‍ತಾನ"—ಎಂದು ತಿಳಿಸಿ ಕಳುಹಿಸಿದ.

ಇನ್ಸ್‌ಪೆಕ್ಟರ್ ಈ ಮಾತುಗಳನ್ನು ಹೇಳಿದ ರೀತಿ, ಆತನ ಈ ಮಾತುಗಳಿಗೆ ಆತನ ಜೊತೆಗೆ ಬಂದಿದ್ದ ವ್ಯಕ್ತಿ ನೀಡಿದ ಪುರಾವೆಯಿಂದ, ಪ್ರಭಾವಿತನಾದ ಮಲ್ಲೇಶಿ, ಅವರ ಮಾತನ್ನು ನಂಬಿದ. ಮಲ್ಲೇಶಿ ಮನೆಗೆ ಹೊರಟಾಗ. ಇನ್ಸ್‌ಪೆಕ್ಟರ್, ಅವನ ಹಿಂದೆ ಹಿಂದೆ ಹೆಜ್ಜೆ ಹಾಕತೊಡಗಿದ. ಮಲ್ಲೇಶಿ ಮನೆ ತಲುಪಿದಾಗ, ಇನ್ಸ್‌ಪೆಕ್ಟರ್ ಆ ಮನೆಯನ್ನು, ಆ ಪರಕು ಗುಡಿಸಲನ್ನು ದೂರದಿಂದಲೇ ನೋಡಿ ಹಿಂದಿರುಗಿದ.

"ಅಪ್ಪಾ ಸಾಮಾನು ಇಳಿಸಲಿಕ್ಕೆ ಹಡಗು ಕಟ್ಟೆಗೆ ಹೋಗ್ಯಾನ"—ಎಂದು ನೀಲಿಗೆ ಹೇಳಿದ ಮಲ್ಲೇಶಿ, ತಂದೆಯ ಬರವನ್ನೇ ನಿರೀಕ್ಷಿಸುತ್ತಾ ಕುಳಿತ.

ಸಂಜೆಯಾಯಿತು. ಕತ್ತಲೂ ಕವಿಯಿತು. ಪುಲ್ಲಯ್ಯ ಮಾತ್ರ ಹಿಂದಿರುಗಲಿಲ್ಲ. ತಂದೆ ಬರಲಿಲ್ಲವೆಂಬ ಆತಂಕ, ಆ ಎಳೆಯ ಮನಸ್ಸಿನಲ್ಲಿ ಏನೆಲ್ಲ ವಿಚಾರಗಳಿಗೆ ಎಡೆ ಮಾಡಿಕೊಟ್ಟಿತು. ಕಣ್ಣು ತುಂಬಿಬಂದವು. ನೀಲಿ, ಕೂಡ, ಗಂಡನಿಗಾಗಿ ಪರಿತಪಿಸುತ್ತ ಕುಳಿತಿದ್ದಳು. ಪಕ್ಕದ ಗುಡಿಸಲಿನವರು, ಯಾರದೊ ಮನೆಗೆ ಕಳ್ಳರು ನುಗ್ಗಿದ್ದರೆಂದೂ, ಮನೆಯ ಯಜಮಾನ ಗುಂಡು ಹಾರಿಸಿದಾಗ ಅವನ ಕೈಗೆ ಸಿಗದೆ ಕಳ್ಳರು ಪಾರಾದರೆಂದೂ ಮಾತನಾಡಿಕೊಂಡದ್ದು ನೀಲಿಯ ಕಿವಿಗೂ ಬಿದ್ದಿತ್ತು.

"ಕಳವು ಮಾಡಿ ಹೊಟ್ಟೆತುಂಬಿಕೊಳ್ಳೋದ—ಅಂದರ, ಅದೆಂತಹ ಬದುಕು—ಹೊಲಸು"—ಎಂದು ನೀಲಿ ಆಗ ಅಂದುಕೊಂಡಿದ್ದಳು.

"ಕಳವು ಮಾಡಿಕೊಂಡು ಸುಮ್ಮನೆ ಹೋಗಿದ್ದರ ಅದೂ ಒಂದು ಮಾತು. ಪಾಪ—ಆ ಯಜಮಾನನ ತಲಿ ಒಡೆದು ಹೋಗ್ಯಾರಂತ. ಈಗ ಆತ ಬದುಕು–ಸಾವಿನ ಹೋರಾಟ ನಡಸ್ಯಾನಂತ. ಆತ ಬದುಕಿದರ ಆತನ ಅದೃಷ್ಟ ಒಳ್ಳೇದು ಅನ್ನಬಹುದು...... ಪಾಪ ಈಗ ಆಸ್ಪತ್ರ್ಯಾಗ ಹಾಕ್ಯಾರಂತ......"

ಇದನ್ನು ಕೇಳಿದಾಗ ನೀಲಿ ತುಂಬ ನೊಂದುಕೊಂಡಿದ್ದಳು. ಆ ಮನೆಯ ಯಜಮಾನನ ಬಗ್ಗೆ ಅವಳಲ್ಲಿ ಆಗ ತುಂಬ ಕನಿಕರ ಮೂಡಿ, "ಪಾಪ, ಇವತ್ತು ಆತ ಏಡಮಗ್ಗಲಿಗೆ ಏನಾದರೂ ಎದ್ದಿದ್ದನೊ ಏನೊ"—ಎಂದು ಕಳಕಳಿಯಿಂದ ಹೇಳಿದ್ದಳು.

"ಆ ದುಡ್ಡು ಅವನದಲ್ಲಂತ. ಯಾರದೊ ಏನೊ, ಅವನಿಗೆ ಸಿಕ್ಕಿತ್ತು. ಹ್ಯಾಂಗ ಬಂದದೊ ಹಾಂಗs ಹೋಗಲಿ—ಅಂತ ಆ ಯಜಮಾನ ಸುಮ್ಮನೆ ಇದ್ದಿದ್ದರ, ಆತಗ ಏನೂ ಆಗತಿರಲಿಲ್ಲ. ಆದರ, ಆತ ಪಿಸ್ತೂಲು ತಗದು ಗಾಳಿ ಒಳಗ ಗುಂಡು ಹಾರಿಸಿದನಂತ. ಆದ ಆತ ಆ ಕಳ್ಳರ ಮ್ಯಾಲೆ ಗುಂಡು ಹಾರಿಸಿದ್ದರ, ಒಬ್ಬರಾದರೂ ಅಲ್ಲೇ ಬಿದ್ದು ಸಾಯ್ತಿದ್ದರು......" ಪಕ್ಕದ ಗುಡಿಸಲಿನ ಹೆಂಗಸು ಹೇಳಿದಾಗ,

"ಅವನೇನೂ ಕಡಿಮಿ ಅಲ್ಲಂತೇಳು...... ಅಂತಹವರಿಗೆ ಹೀಂಗ ಆಗಬೇಕು"—ಜೇಬುಗಳ್ಳನ ಹೆಂಡತಿ ಮೂಗುಮುರಿದಿದ್ದಳು.

"ಹಾಂಗ್ಯಾಕ ಅಂತೀಯು...... ಆ ಯಜಮಾನ ಒಳ್ಳೆಯವನಾಗಿರಲಿಕ್ಕ, ಆ ಕಳ್ಳರ ಮ್ಯಾಲೆ ಗುಂಡು ಹಾರಿಸದ, ಗಾಳಿ ಒಳಗ ಗುಂಡು ಹಾರಿಸಿ, ಆ ಕಳ್ಳರನ್ನ ಬಿಟ್ಟು ಕೊಟ್ಟ...... ಅಂತಹವನಿಗೆ ಅನ್ಯಾಯ ಆಗಬಾರದು—ಆಗಾಣಲ್ಲ. ಆತಗ ಏನೂ ಆಗದ, ಈ ಕುತ್ತಿನಿಂದ ಪಾರಾಗ್ತಾನೇಳು"—ನೀಲಿ ಹೇಳಿದ್ದಳು.

ರಾತ್ರಿ ಎಂಟು ಗಂಟೆಯಾದರೂ ಪುಲ್ಲಯ್ಯ ಬಂದಿರಲಿಲ್ಲ. ಮಲ್ಲೇಶಿ, "ಅಪ್ಪಾ...... ಅಪ್ಪಾ......" ಎಂದು ಹಲುಬಲು ಪ್ರಾರಂಭಿಸಿದ್ದ. ನೀಲಿ, ಏನು ಮಾಡಬೇಕೆಂದು ತೋಚದೆ ಕಂಗಾಲಾದಳು. ಊಟ–ತಿಂಡಿ ಯಾವುದೂ ಇಲ್ಲದೆ, ತಾಯಿ–ಮಕ್ಕಳು, ಗುಡಿಸಲಿನ ಬಾಗಿಲ ಮುಂದೆ ಕುಳಿತು, ರಸ್ತೆಯಲ್ಲಿ ಹೋಗಿಬರುವವರನ್ನು ನೋಡುತ್ತಿದ್ದರು. ರಾತ್ರಿ ಹತ್ತು ಗಂಟೆಯಾಯಿತು. ರಸ್ತೆಯಲ್ಲಿನ ಜನಸಂಚಾರ ನಿಂತಿತ್ತು. ಎಲ್ಲೆಲ್ಲೂ ಮೌನ ಆವರಿಸಿತ್ತು. ನೀಲಿ ಮತ್ತು ಮಲ್ಲೇಶಿಯ ಹೃದಯದಲ್ಲಿ ನಿರಾಶೆ ಮೂಡಿತ್ತು.

ರಸ್ತೆಯಲ್ಲಿ, ದೂರದಲ್ಲಿ ಯಾರೊ ಬರುತ್ತಿರುವುದು ಕಾಣಿಸಿತು. ಮಲ್ಲೇಶಿ, ಇದ್ದಕ್ಕಿದ್ದಂತೆ, "ಅಪ್ಪಾ...... ಅಪ್ಪಾ......"—ಎಂದು ಕೇಕೆಹಾಕುತ್ತಾ ಓಡಿದ. ತಂದೆಯ ಕಾಲುಗಳಿಗೆ ಜೋತುಬಿದ್ದು ಗಟ್ಟಿಯಾಗಿ ಅಳತೊಡಗಿದ. ಆ ಅಳುವಿನಲ್ಲೆ ನಿಷ್ಠುರವಾಗಿ ಏನೇನೊ ಹೇಳತೊಡಗಿದ. ಪುಲ್ಲಯ್ಯ ಮಗನನ್ನು ಎತ್ತಿ ಮುದ್ದಾಡಿದ. ಆದರೆ, ಕೈಗೆ ಪೆಟ್ಟು ಬಿದ್ದು ರಕ್ತ ಹರಿದಿದ್ದರಿಂದ ಕೈಗಳು ನೋಯುತ್ತಿದ್ದವು. ಹಣೆಗೆ ಏನೊ ಬಡಿದಿದ್ದರಿಂದ, ದೊಡ್ಡ ಬುಗುಟೆ ಎದ್ದಿತ್ತು. ಮಲ್ಲೇಶಿ ಉತ್ಸಾಹದಿಂದ ತಂದೆಯ ಮುಖದ ಬಳಿ ಮುಖ ಒಯ್ದಾಗ, ಅವನಿಗೆ ಆ ಬುಗುಟೆ ಬಡಿಯಿತು. "ಅಯ್ಯಾ, ಹಣೆಗೆ ಪೆಟ್ಟು ತಾಕ್ಯದಲ್ಲ......? ಅವರೇನಾದರೂ ನಿನಗ ಹೊಡೆದರೇನು?"—ಎಂದು ಕನಿಕರದಿಂದ ಕೇಳಿದ.

ಪುಲ್ಲಯ್ಯ, ಮಗನ ಈ ಪ್ರಶ್ನೆಯನ್ನು ಕೇಳಿ ದಂಗಾದ. ಸರಕ್ಕನೆ "ಅವರು–ಅವರಂದರ ಯಾರು?" ಎಂದು ಕೇಳಿದ.

"ಅದೇ ಆ ದೊಡ್ಡ ಬಂಗಲೆ ಒಳಗ ಇರೋರು. ಇವತ್ತು ರಾತ್ರಿ ಹೋಗಿ, ನಾವೂ ಅವರಿಗೆ ಹೊಡೆದು ಬರೋಣ"—ಮಲ್ಲೇಶಿ ಉತ್ಸಾಹದಿಂದ ಹೇಳಿದ.

ಪುಲ್ಲಯ್ಯ, ಈ ಮಾತು ಕೇಳಿ ನಿರ್ಜೀವವಾಗಿಬಿಟ್ಟ. ಕೂಡಲೇ ಅವನ ಬಾಯಿಯಿಂದ ಯಾವ ಮಾತೂ ಹೊರಡಲಿಲ್ಲ. ಮಗನ ಬಾಯಿ ಮುಚ್ಚಲೂ ಸಹ ಅವನಿಂದಾಗಲಿಲ್ಲ. ಮಲ್ಲೇಶಿ ಮಾತನಾಡುತ್ತಲೆ ಇದ್ದ. ಅಂದು ಮಧ್ಯಾಹ್ನ ತಾನು ಆ ಬಂಗಲೆಯ ಬಳಿ ಹೋದದ್ದು, ಅಲ್ಲಿ ನಡೆದದ್ದನ್ನು ಹೇಳಿದ ಮಲ್ಲೇಶಿ, "ಸಾಮಾನು ಇಳಿಸಲಿಕ್ಕೆ ಹಡಗು ಕಟ್ಟೆಗೆ ಹೋಗ್ತಿನೀಂತ ನೀನು ಹೇಳಿದ್ದು. ಅವರು ನನಗ ತಿಳಿಸಿದರು"—ಎಂದು

ವರದಿಯೊಪ್ಪಿಸಿದ. ಮಲ್ಲೇಶಿಯ ಮಾತುಗಳನ್ನು ಕೇಳಿ, ಏನು ನಡೆದಿರಬಹುದೆಂಬುದನ್ನು ಪುಲ್ಲಯ್ಯ ಸುಲಭವಾಗಿ ಊಹಿಸಿದ. ಅಲ್ಲಿಂದ ಮುಂದೆ ಹೆಜ್ಜೆ ಇಡಲು ಮನೆಯಲ್ಲಿ ಕಾಲಿಡಲೂ ಸಹ ಅವನಿಗೆ ಭಯವಾಯಿತು. ಎದುರಿಗೆ ನೀಲಿ ನಿಂತಿದ್ದು ಕಂಡರೂ ಕಾಣಿಸದಂತೆ, ಮಗನನ್ನು ಕೆಳಗಿಳಿಸಿ ಕೂಡಲೇ ಅಲ್ಲಿಂದ ಹಿಂದಿರುಗಿ ಓಡಿ ಹೋಗಬೇಕೆಂದುಕೊಂಡ. ಆದರೆ. ಆಕೆ, ತನ್ನನ್ನು ಹಗ್ಗದಿಂದ ಬಿಗಿದು ಎಳೆಯುತ್ತಿರುವಂತೆ ಅವನಿಗೆ ಭಾಸವಾಯಿತು. ಅದೇ ಸಮಯದಲ್ಲಿ ಮಗನ ಮೇಲೆ ವಿಪರೀತ ಕೋಪ ಬಂತು. ನೀಲಿ, ಗಂಡನತ್ತ ನಾಲ್ಕು ಹೆಜ್ಜೆ ಹಾಕಿ:

"ಹೇಳದ ಕೇಳದ ಹೋದರ ಹ್ಯಾಂಗ? ಅವನು ಮುಂಜಾನಿನಿಂದ ಒಂದs ಸಮನ ಅತ್ತುಕೋತ ಕೂತಾನ. ನನಗೂ ಗಾಬರಿಯಾಗಿತ್ತು—ಎಲ್ಲಿ ಹೋದೆಯೊ ಏನಾಯಿತೊ—ಅಂತ......" ಎಂದು ಹೇಳಿದಳು.

ನೀಲಿ ಈ ಮಾತುಗಳನ್ನು ಹೇಳುತ್ತಿರುವಾಗಲೇ ನಾಲ್ಕೂ ದಿಕ್ಕಿನಿಂದ ಯಾರೊ ಬರುತ್ತಿರುವಂತೆ ಭಾಸವಾಯಿತು. ನೀಲಿ, ಕಾಲಿನ ಸಪ್ಪಳ ಕೇಳಿ ತಿರುಗಿ ನೋಡುವುದರೊಳಗಾಗಿ ಪುಲ್ಲಯ್ಯ ಕಾಲುವೆಯತ್ತ ಓಡಿದ. ಯಾರೋ ಆತನ ಬೆನ್ನುಹತ್ತಿ ಓಡತೊಡಗಿದರು. ಅಷ್ಟರಲ್ಲಿ ಮೂರು ನಾಲ್ಕು ಬ್ಯಾಟರಿಗಳು ಬೆಳಗಿ ಬೆಳಕು ಚೆಲ್ಲಿದವು. ಆ ಬೆಳಕಿನಲ್ಲಿ, ಕೆಂಪು ಟೊಪ್ಪಿಗೆ ಹಾಕಿಕೊಂಡ ಪೋಲೀಸರು ನಿಂತದ್ದನ್ನು ನೋಡಿ, ನೀಲಿಗೆ ತೀರ ವಿಚಿತ್ರವೆನಿಸಿತು...... ಅದೆಲ್ಲವೂ ಭಯಂಕರವಾದ ಒಂದು ಕನಸಿನಂತೆ ಅವಳಿಗೆ ಭಾಸವಾಯಿತು. ಏಕೊ ಏನೊ. ಆ ಪೋಲೀಸರನ್ನು ನೋಡಿ, ಅವಳ ಕಾಲುಗಳು ಗಡಗಡನೆ ನಡುಗಹತ್ತಿದವು. ಇಷ್ಟರಲ್ಲಿ. "ಹಿಡೀರಿ...... ಹಿಡೀರಿ ಆ ಕಳ್ಳನ್ನ"—ಎಂಬ ಕೂಗು ಕೇಳಿಸಿತು.

"ಕಳ್ಳ...... ಯಾರು ಆ ಕಳ್ಳ?"

ತನ್ನ ಗಂಡನೆ? ತನ್ನ ಗಂಡ ಕಳ್ಳನೆ? ತಾನು ಕಳ್ಳನ ಹೆಂಡತಿಯೆ?—ಇಲ್ಲ, ಇಲ್ಲ.... ಇದೆಲ್ಲಾ ಬರೀ ಕನಸು...... ಕೆಟ್ಟ ಕನಸು...... ನನ್ನ ಗಂಡ ಕಳ್ಳನಲ್ಲ...... ಇದು ನಿಜವಾಗಲಾರದು......

ಕಳ್ಳನನ್ನು ಪೋಲೀಸರು ಹಿಡಿದಿದ್ದರು. ಆತನ ಕೈಗಳಿಗೆ ಬೇಡಿ ಹಾಕುವುದನ್ನು, ಆಕೆ ಕಣ್ಣಾರೆ ನೋಡಿದಳು. ಆ ವೇಳೆಗೆ ಅಕ್ಕಪಕ್ಕದ ಗುಡಿಸಲಿನ ಜನರೆಲ್ಲ ಎಚ್ಚರಗೊಂಡು ಏನು ನಡೆಯುತ್ತಿದೆ ಎಂಬುದನ್ನು ನೋಡಲು ಅಲ್ಲಿ ಬಂದು ನಿಂತಿದ್ದರು. ಅಷ್ಟೆಲ್ಲ ಜನರ ನಡುವೆ, ಪುಲ್ಲಯ್ಯ ತಲೆತಗ್ಗಿಸಿ ನಿಂತಿದ್ದ. ಅಲ್ಲಿ ಸೇರಿದ್ದ ಜನರು, ತಲಾ ಒಂದು ಮಾತು ಆಡುತ್ತಿದ್ದರು...... ಎಲ್ಲರೂ ಪುಲ್ಲಯ್ಯನನ್ನು ಹೀನಾಯವಾಗಿ ಹೀಯಾಳಿಸಹತ್ತಿದ್ದರು.

ನೀಲಿ, ಜನರ ಚುಚ್ಚು ಮಾತುಗಳನ್ನು ಕೇಳದಾದಳು—ಅಲ್ಲಿನ ದೃಶ್ಯ ನೋಡದಾದಳು. ಅವಳು ಹಿಂಡಿಹೋಗುತ್ತಿದ್ದ ತನ್ನ ಹೃದಯವನ್ನು ಹಿಡಿದುಕೊಂಡು

ಕುಸಿದು ಕುಳಿತಳು. ಪೋಲೀಸರು ಆ ಕಳ್ಳನನ್ನು ಎಳೆದುಕೊಂಡು ಹೊರಟಾಗ, ಮಲ್ಲೇಶಿ ದೊಡ್ಡ ಧ್ವನಿ ತೆಗೆದು ಅಳತೊಡಗಿದ. ನೀಲಿ, ತಲೆ ತಗ್ಗಿಸಿ ಕುಳಿತೇ ಇದ್ದಳು. ಅಲ್ಲಿ ಸೇರಿದ್ದ ಜನ ಒಬ್ಬೊಬ್ಬರಾಗಿ ಕದಲಿಹೋದರು.

ಮತ್ತೆ ಎಲ್ಲವೂ ಮೌನವಾಯಿತು. ಎಲ್ಲವೂ ಕತ್ತಲಮಯವಾಗಿತ್ತು.—ಆ ಕತ್ತಲಲ್ಲಿ ತಾನು ಏಕಾಕಿ—ಎಂಬ ಯೋಚನೆ ಬಂದಾಗ, ನೀಲಿಗೆ ದುಃಖ ಉಮ್ಮಳಿಸಿ ಬಂತು. ಆದರೂ ಅದನ್ನು ನುಂಗಿಕೊಂಡು ರಂಪಮಾಡುತ್ತಿದ್ದ ಮಗನನ್ನು ಹಿಡಿದುಕೊಂಡು, ಗುಡಿಸಲಿನತ್ತ ಹೊರಟಳು. ಅವನನ್ನು ಎಳೆದುಕೊಂಡು ಗುಡಿಸಲು ಸೇರುವಷ್ಟರಲ್ಲಿ ಅವಳಿಗೆ ಆಯಾಸವಾಗಿತ್ತು. ಹಾಗೂ–ಹೀಗೂ ಮಾಡಿ ಗುಡಿಸಲಿನೊಳಗೆ ಕಾಲಿಟ್ಟ ನೀಲಿ, ಹಾಗೆಯೇ ಕುಸಿದು ಕೆಳಗುರುಳಿದಳು.

## [40]

ಆ ರಾತ್ರಿ, ಪೋಲೀಸರು ಎಷ್ಟೇ ನಯವಾಗಿ ಕೇಳಿದರೂ, ಹೆದರಿಸಿದರೂ, ಪುಲ್ಲಯ್ಯ ತನಗೇನೂ ತಿಳಿಯದೆಂದೇ ವಾದಿಸಿದ. ಕೊನೆಗೆ ಬೆತ್ತದಿಂದ ಏಟು ತಿಂದು ಮೈ ಹಣ್ಣಾದರೂ. ಪುಲ್ಲಯ್ಯ ಬಾಯಿಬಿಡಲಿಲ್ಲ. ಬೇಸತ್ತ ಪೋಲೀಸರು, ಏನು ಮಾಡಬೇಕೆಂಬುದು ತೋಚದೆ, ಅವನನ್ನು ಲಾಕ್–ಅಪ್‌ನಲ್ಲಿ ಹಾಕಿದರು. ಲಾಕ್–ಅಪ್‌ನಲ್ಲಿ ಕುಸಿದು ಕುಳಿತವನು, ನೋವಿನಿಂದ ನರಳುತ್ತಾ, ಏನೇನೊ ಗೊಣಗತೊಡಗಿದ. ತನಗೆ ತಾನೆ ಬಯ್ದುಕೊಂಡ. ತಲೆ ಚಚ್ಚಿಕೊಂಡ. ರಾತ್ರಿಯನ್ನು ಹಾಗೆಯೇ ಕಳೆದ. ಬೆಳಗಿನ ಜಾವ ಸ್ವಲ್ಪ ಕಣ್ಣು ಹತ್ತಿತ್ತು. ಆದರೆ ಕನಸು ಬಿದ್ದು, ಆ ಕನಸಿನಲ್ಲೂ ಪೋಲೀಸರು ಬಂದಾಗ ಪುಲ್ಲಯ್ಯ ಧಿಗ್ಗನೆ ಎದ್ದು ಕುಳಿತ. ಬೆತ್ತದ ಪೆಟ್ಟಿನಿಂದ ಮೈಯೆಲ್ಲಾ ಹಸಿರುಗಟ್ಟಿದ್ದನ್ನು ನೋಡಿ ನೊಂದುಕೊಂಡ. ಕುಳಿತ ಸ್ಥಳದಿಂದ ಕದಲಲೂ ಸಹ ಆಗದಷ್ಟು ಮೈಕೈ ನೋಯುತ್ತಿದ್ದವು. ಆ ನೋವಿನಲ್ಲೂ, "ಮಲ್ಲೇಶಿ ಎಷ್ಟು ಅಳ್ತಾನೊ ಏನೊ? ನೀಲಿ, ಮುಂದಿನ ದಿನಗಳನ್ನು ಹ್ಯಾಂಗ ಕಳೀತಾಳೊ ಏನೊ? ಹ್ಯಾಂಗ ಬದುಕತಾಳೊ ಏನೊ"—ಎಂದು ಚಿಂತಿಸತೊಡಗಿದ.

ನಿಂತರೆ ನಿಲ್ಲಲಾಗದೆ, ಕುಳಿತುಕೊಳ್ಳಲೂ ಆಗದೆ, ಹಸಿವೆಯಿಂದ ಒದ್ದಾಡಹತ್ತಿದ. ತನ್ನ ದೇಹದಲ್ಲಿನ ಪ್ರತಿಯೊಂದು ಕೀಲೂ ಮುರಿದಂತೆ, ಮಾಂಸಖಂಡಗಳು ಕರಗಿ ನೀರಾದಂತೆ ಪುಲ್ಲಯ್ಯನಿಗೆ ಭಾಸವಾಯಿತು.

ಆ ದಿನ, ಪುಲ್ಲಯ್ಯನನ್ನು ಸೆಂಟ್ರಲ್ ಜೈಲಿಗೆ ಕಳುಹಿಸಿದರು.

ಅಂದು ರಾತ್ರಿ, ನೀಲಿ, ಎಷ್ಟು ಪ್ರಯತ್ನಪಟ್ಟರೂ ನಿದ್ರೆ ಬಾರದಿದ್ದಾಗ, ಕಣ್ಣುಬಿಟ್ಟುಕೊಂಡೆ ಮಲಗಿದ್ದಳು. ಮಲ್ಲೇಶಿ ಮಾತ್ರ, ಅತ್ತು ಅತ್ತು ಮಲಗಿದ್ದ. ನೀಲಿ, ತನ್ನ

ಗಂಡನ ಬಗ್ಗೆ ಯೋಚಿಸತೊಡಗಿದ್ದಳು. ಗಂಡ, ಇಷ್ಟು ದಿನಗಳಿಂದ ಸುಳ್ಳು ಹೇಳುತ್ತಾ ಬಂದರೂ, ತಾನು ಆತನನ್ನು ಹೇಗಾದರೂ ನಂಬಿದೆನೆಂದು, ನೀಲಿ ಪೇಚಾಡಿದಳು. "ಆತಗ ಕೆಲಸ ಸಿಗದಿದ್ದರ, ನಾನು ಎಲ್ಲಿಯಾದರೂ ಕೂಲಿ ಕೆಲಸ ಮಾಡಿ, ನಾಲ್ಕು ಮನಿ ಪಾತ್ರಿ ತೊಳದು ಸಂಸಾರ ಸಾಗಸ್ತಿದ್ದೆ. ನಮ್ಮ ಹಣೆಯ ಬರೆಹ ಸರಿಯಾಗಿರದಾಗ ಯಾವ ಕೆಲಸ ಮಾಡಿದರೂ ಅಷ್ಟಽ...... ಈಗ, ಏನು ಮಾಡಿದರೂ ಕಳ್ಳ—ಎಂಬ ಈ ಕಳಂಕ ತೊಳೆದುಕೊಳ್ಳಲಿಕ್ಕೆ ಆಗಾಣಿಲ್ಲ. ಒಬ್ಬರ ತಲಿ ಒಡೆದರ, ಅದರ ಪಾಪ ನಮ್ಮ ಬೆನ್ನುಬಿಡ್ತದೇನು? ಇಲ್ಲಿ ಅಲ್ಲದಿದ್ದರೂ, ಅಲ್ಲಿ ಆ ಯಮಲೋಕದಾಗ, ಪಾಪದ ಋಣ ತೀರಿಸಲಿಕ್ಕೇ ಬೇಕು. ಆಯ್ತು ನಮ್ಮ ದುರ್ದೈವ—ಆಗಬೇಕಾದ್ದು ಆಗಿ ಹೋಯ್ತು"—ಎಂದುಕೊಂಡು ನೀಲಿ ಪಕ್ಕಕ್ಕೆ ತಿರುಗಿ ಮಲಗಿದಳು.

ಆಗ, ನೀಲಿಗೆ, ಥಕ್ಕನೆ ತನ್ನ ಅಜ್ಜಿಯ ನೆನಪಾಯಿತು. ಆ ಮುದುಕಿ, ಸಾಯುವುದಕ್ಕೆ ಮುಂಚೆ ಹೇಳಿದ ಮಾತುಗಳನ್ನು ನೆನಸಿಕೊಂಡಳು. "ಹೌದು, ಅಜ್ಜಿ ಹೇಳಿದ್ದು ಖರೇನಽ. ಆತನ ದುರದೃಷ್ಟ ಅಂತ ನಾನು ಸುಮ್ಮನ ಕೂತರ, ಹುಡುಗರ ಗತಿ ಏನು? ಏನು ಕಳಕೊಂಡರೂ, ಹ್ಯಾಂಗಾದರೂ ಬದುಕಬಹುದಂತ; ಆದರ ಧೈರ್ಯ ಕಳ ಕೊಂಡರ ಬದುಕೋದು ಕಷ್ಟ"—ಎಂದು ಮನಸ್ಸು ಗಟ್ಟಿಮಾಡಿಕೊಂಡ ನೀಲಿ. ಮನಸ್ಸಿನಲ್ಲೆ ನೀಲಮ್ಮದೇವಿಗೆ ನಮಸ್ಕರಿಸಿದಳು.

ಬೆಳಗಾದಾಗ, ಅಕ್ಕಪಕ್ಕದ ಜನರು ನೀಲಿಯನ್ನು ಒಂದು ತೆರನಾಗಿ ನೋಡಹತ್ತಿದರು. "ಕಳ್ಳನ ಹೆಂಡತಿ—ಕಳ್ಳಿ"—ಎಂದು ಒಬ್ಬ ಮಹಾತಾಯಿ ಮೂದಲಿಸಿದಳು. "ಇವಳಿಗೆ ತಿಳೀದಽ ಅವನು ಕಳವು ಮಾಡಲಿಕ್ಕೆ ಹ್ಯಾಂಗ ಹೋದಾನು......? ಇಂತಹವರಿಗೆ, ದುಡ್ಡಿಗೆ ಆಸೆಪಟ್ಟು ಮನಿ ಬಾಡಗಿ ಕೊಟ್ಟರ, ಓಣಿಯೊಳಗ ಇರೊ ನಮ್ಮಂತಹವರ ಮಾನ ಹೋಗ್ತದ"—ಯಾವನೊ ಮಾನವಂತ ಮುದುಕ ಬೊಬ್ಬೆ ಇಟ್ಟ. "ಅವನದಂತೂ ಆಯಿತು. ಈಗ ಈಕಿ ಸಂಗತಿ ನೋಡ್ರಿ—ಗುರುತು-ಪರಿಚಯ ಇಲ್ಲದವರಿಗೆ ವಠಾರದಾಗ ಇರಲಿಕ್ಕೆ ಅವಕಾಶ ಕೊಡೋದ ತಪ್ಪು"—ಇನ್ನೊಬ್ಬಳು ಹಂಗಿಸಿದಳು. "ಆಯ್ತು, ಈ ಒಬ್ಬಾತನಿಂದ, ಪೋಲೀಸ್‌ನವರು ಇಲ್ಲಿ ಇರೋರ ಮ್ಯಾಲೆಲ್ಲಾ ನಿಗಾ ಇಡ್ತಾರ...... ಸುಮ್ಮಸುಮ್ಮನೆ ನಾವು ಅವರ ಗುಮಾನಿಗೆ ಒಳಗಾದ್ವಿ"—ಜೇಬುಗಳ್ಳ ಕೂಗಾಡಿದ.

ನೀಲಿ, ಅವರ ಈ ಚುಚ್ಚುಮಾತುಗಳನ್ನು ಕೇಳಿಯೂ, ಕೇಳಿಸದವಳಂತೆ ನಿಂತಿದ್ದಳು. ಮನಸ್ಸಿನಲ್ಲಿ ಮಾತ್ರ, "ಎಂತಹ ಪರಿಸ್ಥಿತಿ ಬಂದರೂ ಎದುರಿಸುವ ಶಕ್ತಿ ಕೊಡು ತಾಯಿ"—ಎಂದು ಮನಸ್ಸಿನಲ್ಲೆ ದೇವರನ್ನು ಪ್ರಾರ್ಥಿಸಿದಳು. ಸಂಯಮದಿಂದ ವರ್ತಿಸಿದಳು. ಆದರೆ, ತಂದೆಗಾಗಿ ಅಳುತ್ತಿದ್ದ ಮಲ್ಲೇಶಿಯನ್ನು ನೋಡಿದಾಗ ಮಾತ್ರ ಅವಳ ಧೈರ್ಯ ಉಡುಗಿಹೋಯಿತು.

ಪೋಲೀಸರು ಮಲ್ಲೇಶಿಯನ್ನು ಕರೆದೊಯ್ದು ಏನೇನೊ ಕೇಳಿದರು. ಆದರೆ,

ಮಲ್ಲೇಶಿ, ಅಳುವುದನ್ನು ಬಿಟ್ಟು ಏನನ್ನೂ ಹೇಳಲಿಲ್ಲ. ಆತನಿಂದ ಹೆಚ್ಚಿನ ಮಾಹಿತಿ ಪಡೆಯುವಲ್ಲಿ ಪೋಲೀಸರು ವಿಫಲರಾದರು. ತಂದೆಗಾಗಿ ಒಂದೇ ಸಮನೆ ಅಳುತ್ತಿದ್ದ ಮಗನನ್ನು ಸಮಾಧಾನಪಡಿಸಲು ನೀಲಿ ಕೂಡ ಪ್ರಯತ್ನಿಸಿದಳು. ಕೊನೆಗೆ, ಮರುದಿನ ತಾನೇ ಅವನನ್ನು ಕರೆದುಕೊಂಡುಬರುವುದಾಗಿ ಪೋಲೀಸರಿಗೆ ಹೇಳಿಕಳುಹಿಸಿದಳು.

ಮಲ್ಲೇಶಿ, ರಾತ್ರಿ ಸುಮಾರು ಒಂಬತ್ತು ಗಂಟೆಯವರೆಗೆ ಅತ್ತು ಅತ್ತು ಮಲಗಿದ. ಮಗಳು ಊಟ ಮಾಡಿ ಮಲಗಿದ್ದಳು. ನೀಲಿಗೆ ಹಸಿವಾಗುತ್ತಿದ್ದರೂ, ಊಟ ಮಾಡಲು ಮನಸ್ಸಾಗದೆ ಸುಮ್ಮನೆ ಕುಳಿತಿದ್ದಳು. ಅಷ್ಟರಲ್ಲಿ ಒಬ್ಬ ಸಾಧು, ದೇವರ ನಾಮ ಜಪಿಸುತ್ತ ನೇರವಾಗಿ ಅವಳ ಗುಡಿಸಲಿಗೆ ಬಂದು ನಿಂತ. ನೀಲಿ, ಮೌನವಾಗಿ ಎದ್ದು ಹೋಗಿ, ಮನೆಯಲ್ಲಿ ಇದ್ದುದನ್ನೇ ತಂದು ಅವನ ಜೋಳಿಗೆಗೆ ಹಾಕಿದಾಗ, "ಯಾಕಮ್ಮಾ —ತುಂಬ ಕಷ್ಟದಾಗ ಇದ್ದಿ ಏನು?"—ಎಂದು ಆ ಸನ್ಯಾಸಿ ಕೇಳಿದ.

ನೀಲಿ, 'ಹೂಂ'ಗುಟ್ಟಿದಳು.

"ನನಗ ಗೊತ್ತದ ಮಗಳೇ...... ನಿನ್ನ ಗಂಡ, ಪಾಪ, ಪೋಲೀಸರ ಕೈಯಾಗ ಸಿಗಿಬಿದ್ದಾನ. ಅತು, ಆಗೋದು ಆಗಿಹೋಗ್ಯದ—ನಾನು ಹೇಳಿದ್ಹಾಂಗ ಕೇಳದಿ ಅಂದರ, ನೀನೂ ಸುಖಪಡತಿ—ಇದು ಭಗವಂತನ ಆಜ್ಞೆ."

"ಸರೆ, ಅದೇನು ಮಾಡಬೇಕೂ ಹೇಳ್ರಿ"—ನೀಲಿ ತುಂಬ ವಿನೀತಳಾಗಿ ಕೇಳಿದಳು.

ಆ ಸಾಧು. ಅಲ್ಲಿಯೇ ನೆಲದ ಮೇಲೆ ಕುಳಿತ. ನೀಲಿ, ಆತನಿಂದ ಸ್ವಲ್ಪ ದೂರದಲ್ಲಿ ಕುಳಿತಳು. "ನಿನ್ನ ಗಂಡನ್ನ ಈಗಾಗಲೇ ನಾನು ಭೆಟ್ಟಿಯಾಗೀನಿ. ಪೋಲೀಸರು ಏನು ಕೇಳಿದರು, ನನಗ ಒಂದೂ ಗೊತ್ತಿಲ್ಲಂತ ಹೇಳು. ನಿನ್ನ ಮಗನೂ ಸಹ ಬಾಯಿಬಿಡದ್ಹಾಂಗ ನೋಡಿಕೊ. ಅವರು ಹೊಡೆದರೂ–ಬಯ್ದರೂ ಬಾಯಿಬಿಡದಿದ್ದರ, ನಾಳೆ ಇಷ್ಟು ಹೊತ್ತಿಗೆ ನಿನ್ನ ಗಂಡ ನಿನ್ನ ಹತ್ತಿರ ಇರತಾನ"—ಸಾಧು ನಿಧಾನವಾಗಿ ಹೇಳಿದ.

ನೀಲಿ, ಆ ಸಾಧುವನ್ನು ಒಮ್ಮೆ ತಲೆ ಎತ್ತಿ ನೋಡಿ, ಮತ್ತೆ ತಲೆ ಕೆಳಗೆ ಹಾಕಿಕೊಂಡು, "ನೀವು ದೊಡ್ಡವರು. ಸಂತರು; ಲೋಕ ಕಂಡವರು. ನಾನು ಅಜ್ಞಾನಿ, ಪರಪಂಚ ಅರೀದವಳು. ನೀವೇನೊ ಇದನ್ನು ಮಾಡು, ಇದನ್ನು ಮಾಡಬ್ಯಾಡ ಅಂತ ಹೇಳ್ತೀರಿ. . . . ಪೋಲೀಸರ ಕಣ್ಣಿಗೆ, ಲೋಕದ ಕಣ್ಣಿಗೆ ಮಣ್ಣು ಎರಚಬಹುದಾದರೂ ದೇವರ ಕಣ್ಣು ಮುಚ್ಚಲಿಕ್ಕೆ, ದೇವರಿಗೆ ಮೋಸಮಾಡಲಿಕ್ಕೆ ಎಂದೇ ಆಗಲಿ ಆಗಾಣಿಲ್ಲ. ನ್ಯಾಯ, ಕೊನೆಯವರೆಗೂ ನ್ಯಾಯನss. ಅನ್ಯಾಯವನ್ನು ಬಚ್ಚಿಟ್ಟುಕೊಳ್ಳಲಿಕ್ಕೆ ಆಗಾಣಿಲ್ಲ. ಅನ್ಯಾಯ ಬಚ್ಚಿಟ್ಟುಕೊಂಡು ನ್ಯಾಯಕ್ಕ ಅಪಚಾರ ಮಾಡಬೇಕಂತ ಹೇಳ್ತೀರೇನು?...... ಆ ಮನೆಯ ಯಜಮಾನ—ದೇವರು ಆತನ್ನ ಸುಖವಾಗಿಡಲಿ—ನನ್ನ ಗಂಡನ್ನ ಗುಂಡು ಹೊಡೆದು ಸಾಯಿಸಬಹುದಾಗಿತ್ತು. ಅಂತಹದು, ಆತ ಗಾಳಿ ಒಳಗ ಗುಂಡು ಹಾರಿಸಿ, ನನ್ನ ಗಂಡನ ಜೀವ ಉಳಿಸಿದ. ಈಗ ಆ ಧಣೇರಿಗೆ ಅಪಚಾರ ಮಾಡಂತಿರೇನು?"— ಎಂದು ನಮ್ರವಾಗಿ ಕೇಳಿದಳು.

"ಅದೆಲ್ಲಾ ನನಗ ಗೊತ್ತಿಲ್ಲ. ನಾನು ಹೇಳಿದ್ದು ಕೇಳಲಿಲ್ಲ ಅಂದರ ಇಲ್ಲದ ಸಂಕಟ ಪಡಬೇಕಾಗ್ತದ—ಹೊಟ್ಟೆಗಿಲ್ಲದ ಕೈಯಾಗ ಚಿಪ್ಪುಹಿಡಕೊಂಡು ಭಿಕ್ಷೆ ಬೇಡಬೇಕಾಗ್ತದ. ಅಷ್ಟs ಅಲ್ಲದ ನಿನ್ನ ಗಂಡನಿಂದಲೂ ದೂರ ಆಗಬೇಕಾಗ್ತದ...... ನಿನ್ನ ಗಂಡನs, ಇದನ್ನೆಲ್ಲಾ ನಿನಗ ಹೇಳು ಅಂತ ನನ್ನ ಕಳಿಸ್ಯಾನ. ನನ್ನ ಕೆಲಸ ನಾನು ಮಾಡೀನಿ"—ಎಂದು ಎಚ್ಚರಿಕೆ ನೀಡುವ ಧ್ವನಿಯಲ್ಲಿ ಹೇಳಿದಾಗ, ನೀಲಿ ಮೌನವಾಗಿಯೇ ಇದ್ದಳು. ಹಾಗೆಯೇ ಸ್ವಲ್ಪ ಹೊತ್ತು ಕೂತಿದ್ದಾಗ, ಅವಳಿಗೆ ಆ ಸಾಧುವಿನ ಮಾತಿನ ಮರ್ಮ ತಿಳಿಯಿತು. "ನನ್ನ ಗಂಡ ಇದನ್ನೆಲ್ಲ ಹೇಳಿಕಳಿಸ್ಯಾನಂತ ಸುಳ್ಳು ಹೇಳಿದ ಮಾತ್ರಕ್ಕೆ, ಎಲ್ಲಾನೂ ನಿಜ ಆಗಾಣಿಲ್ಲ. ನಿಜವಾಗಿದ್ದುದನ್ನು ಎಂದೇ ಆಗಲಿ ಬಚ್ಚಿಡಲು ಸಾಧ್ಯವಿಲ್ಲ. ಈ ಜಗತ್ತಿನ್ಯಾಗ ನೀತಿ, ನಿಜಾಯಿತಿ, ನ್ಯಾಯ ಇರದs ಹೋಗಿದ್ದರ, ಮಳಿ ಬರ್‍ತಿರಲಿಲ್ಲ. ಬಿಸಿಲು ಬೀಳ್ತಿರಲಿಲ್ಲ. ರಾತ್ರಿ—ಹಗಲು—ಎಂಬ ತಾರತಮ್ಯ ಇರ್‍ತಿರಲಿಲ್ಲ. ಏನೊ ನಾನಂತೂ ಸಣ್ಣವಳು. ನಿಮ್ಮಂತಹ ಸಾಧು ಸಂತರಿಗೆ ಹೇಳುವ ಶಕ್ತಿ ನನಗಿಲ್ಲ—ನಾನಂತೂ ಈಗ ಕಣ್ಣಾಗ ಕೆಂಡ ಹಾಕಿಕೊಂಡಿಲ್ಲ; ಬೋನಿನಾಗ ಬಿದ್ದ ಇಲಿ ಹಾಂಗ ಒದ್ದಾಡ್ತಿಲ್ಲ. ಎಲ್ಲಕ್ಕೂ ದೇವರಿದ್ದಾನ. ಆ ದೇವರ ಹೆಸರು ಹೇಳಿಕೊಂಡು ನಾನು ಮಾಡೋದು ಮಾಡ್ತೀನಿ—ಆಗೋದು ಆಗಲಿ"—ಎಂದು ಹೇಳಿ, ನೀಲಿ ಅಲ್ಲಿಂದೆದ್ದು ಒಳಗೆ ಹೋದಳು.

ಸನ್ಯಾಸಿಯ ವೇಷದಲ್ಲಿ ಬಂದಿದ್ದ ಚಂದ್ರಯ್ಯ, ಏನೂ ಮಾಡಲಾಗದೆ, ನಿರಾಶನಾಗಿ ಹೊರಟುಹೋದ. ಹೊರಡುವುದಕ್ಕೂ ಮುಂಚೆ, "ಅವಸರ ಪಡಬೇಡ. ಸರಿಯಾಗಿ ಯೋಚಿಸು. ನಿನ್ನ ಗಂಡ, ಮತ್ತs ನಿನಗ ಈ ಜನ್ಮದಾಗ ಸಿಗಲಿಕ್ಕಿಲ್ಲ. ನೀನು ನಾನು ಹೇಳಿದ್ಹಾಂಗ ಮಾಡಲಿಲ್ಲ ಅಂದರ, ಅವರು ಅವನ ಜೀವ ಹಿಂಡಿ ಸಾಯಿಸ್ತಾರ—ಆ ಮ್ಯಾಲೆ, ನೀನು ನಿನ್ನ ಮಕ್ಕಳು ಭಿಕ್ಷೆ ಬೇಡಬೇಕಾದೀತು"—ಎಂದು ಎಚ್ಚರಿಕೆ ನೀಡಿದ. ಅಂದು ರಾತ್ರಿ, ನೀಲಿಗೆ ನಿದ್ದೆಯೇ ಬರಲಿಲ್ಲ.

ನೀಲಿಯ ತಲೆಯಲ್ಲಿ ಏನೆಲ್ಲ ವಿಚಾರಗಳು ತುಂಬಿಕೊಂಡಿದ್ದವು. "ಕುಡ್ಡ ವೆಂಕಣ್ಣನ್ನ ಕಳ್ಳ—ಎಂದು ಹೀಯಾಳಿಸಿ, ಅವನ ಮ್ಯಾಲೆ ಹರಿಹಾಯ್ತಿದ್ದ...... ನಮ್ಮ ವಂಶ ಘನವಾದದ್ದು, ನಮ್ಮ ಕುಟುಂಬ ಮರ್ಯಾದಸ್ಥರ ಕುಟುಂಬ, ನಾನೂ ಘನವಾಗಿ ಬಾಳಿ, ಮರ್ಯಾದೆಯಿಂದ ಜೀವಸ್ತೀನಿ—ಎಂದೆಲ್ಲ ಕೊಚ್ಚಿಕೊಂಡು, ಎಂತಹ ಹೊತ್ತು ಬಂದರೂ ಕಳ್ಳತನಕ್ಕ ಇಳಿಯೂದಿಲ್ಲಂತ ಪದೆಪದೆ ಹೇಳ್ತಿದ್ದ. ಈ ಊರಿಗೆ ಬಂದ ಹೊಸದರಾಗ, ಒಂಟಿಯಾಗಿ ಕಳ್ಳರನ್ನು ಹಿಡಿಯೊ ಸಾಹಸ ಮಾಡಿದ್ದ...... ಅಂದು, ಸ್ಟೇಷನ್ನಿನ್ಯಾಗ ಕಳವುಮಾಡಲು ಹೋಗಿ ಸಿಕ್ಕಿಹಾಕಿಕೊಂಡ ದಿವಸ, ಸತ್ತರೂ ಮತ್ತೆ ಇಂತಹ ಕೆಲಸಕ್ಕಿಳಿಯಾಣಿಲ್ಲಾಂತ ಪಣತೊಟ್ಟಿದ್ದ. ಊರಾಗ ಇರೋವರೆಗೂ ಒಬ್ಬರಿಗೂ ಅನ್ಯಾಯಮಾಡದ, ತನ್ನಲ್ಲಿದ್ದುದನ್ನೆ ಇತರರಿಗೆ ಕೊಟ್ಟು ಒಳ್ಳೆಯವನೆನಿಸಿಕೊಂಡಿದ್ದ.... ಅಂತಹವನು ಈಗ ಕಳ್ಳತನಕ್ಕಿಳಿದಾನಂದರ ನಂಬಲಿಕ್ಕೆ ಆಗಾಣಿಲ್ಲ. ......ಮಣ್ಣಿನ

ಮಗನಾಗಿ, ಎಲ್ಲದಕ್ಕೂ ಭೂದೇವಿಯನ್ನು ನಂಬಿ, ಬೆವರು ಸುರಿಸಿ ಬೆಳೆ ತೆಗೆದು ಬದುಕಿ ಕೊಂಡಿದ್ದ...... ಆ ಮೇಲೆಯೂ ಕೂಡ, ದುಡಿದು ತಿನ್ನುವ ಹಠ ಬೆಳೆಸಿಕೊಂಡಿದ್ದ.... ಈಗ ಅವನು ಪರರ ಆಸ್ತಿಗೆ, ಪರರ ದುಡ್ಡಿಗೆ ಆಸೆಪಟ್ಟು ಕಳವು ಮಾಡಲು ಹೋಗಿದ್ದ ನೆಂದರೆ, ನಂಬಲಿಕ್ಕೆ ಆಗವಲ್ದು...... ಇಲ್ಲ, ಇಲ್ಲ...... ನನ್ನ ಗಂಡ ಇಂತಹ ಕೆಟ್ಟ ಕೆಲಸಕ್ಕ ತಾನಾಗಿ ಹೋಗಿಲ್ಲ, ನನ್ನ ಗಂಡ ಏನೇನೂ ತಿಳಿಯದ ಮುಗ್ಧಜೀವಿ. ಆತನಷ್ಟು ಸಂಭಾವಿತರು ಇನ್ನೊಬ್ಬರಿಲ್ಲ...... ನಾನೇ ಬಹುಶಃ ತಪ್ಪು ತಿಳಿದು, ಆತ ಕಳ್ಳತನಕ್ಕ ಹೋಗಿದ್ದ ಅಂದುಕೊಂಡಿದ್ದೆ......"

ಆ ಕ್ಷಣದಲ್ಲಿ, ಯಾರೊ ಬರುತ್ತಿರುವಂತೆ ಹೆಜ್ಜೆಯ ಸಪ್ಪಳಾದವು. "ಅಕ್ಕs, ನನ್ನ ಗಂಡ ಕಳ್ಳನಲ್ಲ ಅಂತ, ಪೋಲೀಸರು ಅವನ್ನ ಬಿಟ್ಟುಕೊಟ್ಟಾರ ಅಂತ ಕಾಣಸ್ತದ......" ಅದೇ ನಿರೀಕ್ಷಣೆಯಲ್ಲಿ ಸ್ವಲ್ಪ ಹೊತ್ತು ಬಾಗಿಲನ್ನೆ ನೋಡುತ್ತಾ ಕುಳಿತಳು. ಆದರೆ, ಅತ್ತ ಬಂದವರು ಹಾಗೆಯೇ ಮುಂದೆ ಹೊರಟುಹೋದಾಗ, ಅವಳಿಗೆ ನಿರಾಶೆ ಯಾಯಿತು—ಸ್ವಲ್ಪ ಹೊತ್ತಿನ ನಂತರ, ಕಳೆದ ರಾತ್ರಿ ನಡೆದ ಘಟನೆಗಳು ಅವಳ ಕಣ್ಣಿನ ಮುಂದೆ ಸುಳಿದುಹೋದವು. "ತಾನು ಕಳವು ಮಾಡಲಿಕ್ಕೆ ಹೋಗಿರದಿದ್ದರ, ಪೋಲೀಸ ರನ್ನ ನೋಡಿ, ಓಡಿ ಯಾಕ ಹೋಗ್ತಿದ್ದ......? ಮೈಮ್ಯಾಲೆಲ್ಲಾ ಗಾಯಗಳಾಗಿದ್ದವು— ಕೆಟ್ಟವರ ಸಹವಾಸ ಮಾಡಿ, ಕೆಟ್ಟ ಕೆಲಸ ಮಾಡದೇ ಇದ್ದಿದ್ದರ ಪೋಲೀಸರು ಯಾಕ ಬರತಿದ್ದರು......? ಬಂದರೂ ಕೈಗೆ ಬೇಡಿ ಹಾಕಿ, ಯಾಕ ಹಿಡಕೊಂಡು ಹೋಗ್ತಿದ್ದರು? ನವಿರಿ ಒಳಗ ಆತ ಅಧಿಕಾರಿಗಳ ಮ್ಯಾಲೆ ಕೈಮಾಡಿದ್ದು ತಪ್ಪಾಗಿತ್ತು—ಅಂತಲೇ ಅಗ ಪೋಲೀಸರು ಆತನ್ನ ಹಿಡಕೊಂಡು ಹೋಗಿದ್ದರು. ಈಗ ಕೂಡ ಏನೊ ಅಪರಾಧ ಮಾಡ್ಯಾನ. ಇರದಿದ್ದರ, ಆ ಸನ್ಯಾಸಿ ಕೈಲೆ ಸುಳ್ಳು ಹೇಳು ಅಂತ, ಹೇಳಿಕಳಸ್ತಿದ್ದಿಲ್ಲ. ನಾನು ಇದ್ದದ್ದು ಇದ್ದ ಹಾಂಗ ಹೇಳಿದರ, ನನ್ನ ಗಂಡಗ ಏನಾಗ್ತದೊ—ಏನೊ? ಆತನ್ನ ಬಿಟ್ಟರ, ನನಗ ಇನ್ಯಾರಿದ್ದಾರ? ಆತನಿಗಾಗಿ ಏನು ಬೇಕಾದ್ದು ಮಾಡ್ತೀನಿ. ಆತ ಬದುಕಬೇಕು. ನನ್ನ ಮಾಂಗಲ್ಯ ಉಳಿಯಬೇಕು......" ನೀಲಿ ಮನನಮಾಡಿಕೊಂಡಳು. ಆದರೆ, ಸ್ವಲ್ಪ ಹೊತ್ತಿನಲ್ಲೆ, ಅವಳ ನಂಬಿಕೆಗಳು, ಅವಳ ದೈವಭಕ್ತಿ ಒಂದೆಡೆಯಾಗಿ ನಿಂತು, ಅವಳ ಅಭಿಮಾನವನ್ನು ಕೆಣಕಿದವು. ಅಭಿಮಾನ ಮತ್ತು ಅಭಿವ್ಯಕ್ತಿಗಳ ನಡುವೆ ಘರ್ಷಣೆ ನಡೆದು, ಬೆಳಗಾಗುವುದರ ಒಳಗಾಗಿ, "ಸುಳ್ಳು ಹೇಳಿಯಾದರೂ ನನ್ನ ಗಂಡನ್ನ ನಾನು ಬದುಕಿಸಿಕೊಳ್ತೀನಿ...... ಛೆ, ಛೆ, ಸುಳ್ಳು ಹೇಳಿ ಆತನ್ನ ಬಿಡಿಸಿಕೊಂಡರ, ಆತ ಮಾಡಿದ ತಪ್ಪಿಗೆ, ಅಪರಾಧಕ್ಕೆ ಶಿಕ್ಷೆ ಆಗದಿದ್ದರ ಅದು ಅನ್ಯಾಯ ಆಗ್ತದ. ಎಂದಾದರೂ ನ್ಯಾಯಕ್ಕ ಜಯ ಆಗ್ತದ ಹೊರತಾಗಿ ಅನ್ಯಾಯಕ್ಕಲ್ಲ, ಏನಾದರೂ, ಸತ್ಯಕ್ಕ ಸಾವಿಲ್ಲ. ನಾನು ನಿಜವನ್ನೇ ಹೇಳ್ತೀನಿ. ಮುಂದಾಗೋದಕ್ಕ ದೇವರಿದ್ದಾನ...... ನನ್ನ ಗಂಡಗ ಏನಾರ ಆಗಲಿ...... ನನಗ ಏನಾರ ಆಗಲಿ...... ನನ್ನ ಮಕ್ಕಳಿಗೂ ಏನಾರ ಆಗಲಿ.... ನಾನು ಮಾತ್ರ ನಿಜ ಹೇಳ್ತೀನಿ...... ನಿಜ ಹೇಳಿ ಹೊಟ್ಟೆಗಿಲ್ಲದ ಸತ್ತರೂ, ಅದರಿಂದ

ನನಗ ಸಂತೋಷ ಆಗ್ತದ ಹೊರತಾಗಿ, ದುಃಖ ಆಗಾಣಿಲ್ಲ. ನಾನು ನಿಜ ಹೇಳ್ತೀನಿ. . . ."
ಎಂದು ನೀಲಿ ನಿರ್ಧರಿಸಿದಳು.

ಬೆಳಗಿನ ಜಾವ ಪೋಲೀಸರು ಬಂದು, ಅವಳನ್ನೂ, ಮಲ್ಲೇಶಿಯನ್ನೂ ಕರೆದುಕೊಂಡು ಹೋದರು. ಮಲ್ಲೇಶಿಯ ಎದುರಿಗೆ ಆರು ಜನರನ್ನು ಸಾಲಾಗಿ ನಿಲ್ಲಿಸಿ, ಆ ರಾತ್ರಿ ಪುಲ್ಲಯ್ಯನ ಜೊತೆಗಿದ್ದವರು ಅವರಲ್ಲಿ ಯಾರಾದರೂ ಇದ್ದಲ್ಲಿ ಗುರುತಿಸುವಂತೆ ಹೇಳಿದರು. ಮಲ್ಲೇಶಿ ಸಿಟ್ಟಿನಿಂದ ನನಗೇನೂ ತಿಳಿಯದು ಎಂದ. ನೀಲಿ ಅವನನ್ನು ಸಮಾಧಾನ ಮಾಡಿ ಪರಿಪರಿಯಾಗಿ ಕೇಳಿಕೊಂಡಾಗ, ಅವರಲ್ಲಿ, ಆ ರಾತ್ರಿ ಪುಲ್ಲಯ್ಯನ ಜೊತೆಗಿದ್ದವರು ಯಾರೂ ಇಲ್ಲವೆಂದು ತಿಳಿಸಿದ. ಆಗ, ಆ ಇನ್ಸ್‌ಪೆಕ್ಟರ್ ಮತ್ತೆ ತನ್ನ ಚಾಣಾಕ್ಷತನವನ್ನು ಉಪಯೋಗಿಸಿದ. ಆತ ಒಂದು ಬಲೂನನ್ನು ತಂದು ಊದಿ, ನೀನು ಇದನ್ನು ಊದಬಲ್ಲೆಯಾ—ಎಂದು ಮಲ್ಲೇಶಿಯನ್ನು ಕೇಳಿದ. ಮಲ್ಲೇಶಿ, ಆತನಿಗಿಂತ ಚೆನ್ನಾಗಿ ಊದಿ ತೋರಿಸಿದ. ಎಂಟು–ಹತ್ತು ಬಿಸ್ಕತ್ತುಗಳನ್ನಿಟ್ಟು, ನೀನು ಇವನ್ನು ತಿನ್ನಬಲ್ಲೆಯಾ—ಎಂದು ಕೇಳಿದಾಗ, ಮಲ್ಲೇಶಿ ಅವನ್ನು ಗಬಗಬನೆ ತಿಂದು ಹಾಕಿದ. ಆ ಮೇಲೆ, ಹೀಗೆಯೇ ಅದೂ–ಇದೂ ಮಾತನಾಡುತ್ತಾ, "ನಿಮ್ಮಪ್ಪ ಏನು ಮಾಡಿದಾ ಅಂತ ನಿನಗ ಗೊತ್ತದ ಏನು? ನಿಮ್ಮಪ್ಪನ್ನ ನಾವು ಯಾವಾಗೊ ಬಿಟ್ಟು ಬಿಟ್ಟೇವಿ. ಆತ. ತನ್ನ ಆ ಇಬ್ಬರು ಸ್ನೇಹಿತರ ಮನೀಗೆ ಹೋಗ್ತೀನಿಂತ ಹೇಳಿಹೋದವನು, ಎಲ್ಲಿಗೆ ಹೋದನೊ ಏನೊ? ನಿನಗ ಅವರ ಮನಿ ಗೊತ್ತಿದ್ದರ ಹೇಳು. ಅಲ್ಲಿ ಏನಾದರೂ ಇದ್ದಾನೇನೊ ನೋಡೋಣ"—ಇನ್ಸ್‌ಪೆಕ್ಟರ್ ಕೇಳಿದ.

"ರಾಮಣ್ಣನ ಮನಿ ಗೊತ್ತದ"—ಮಲ್ಲೇಶಿ ಹೇಳಿದ.

"ಮತ್ತs ಆ ಚಂದ್ರಯ್ಯನದು?"

"ಇಲ್ಲ."

"ಹೋಗ್ಲಿ, ನಿಮ್ಮಪ್ಪನ ಜತಿ ನೀನು ಎಲ್ಲೆಲ್ಲಿಗೆ ಹೋಗಿದ್ದಿ ತೋರಸ್ತೀಯಾ?"

"ಓ......" ಎಂದು ಮಲ್ಲೇಶಿ ಒಪ್ಪಿಕೊಂಡಾಗ, ಆ ಇನ್ಸ್‌ಪೆಕ್ಟರ್ ಆತನನ್ನು ಕರೆದುಕೊಂಡು ಹೊರಟ. ಮಲ್ಲೇಶಿ, ಇನ್ಸ್‌ಪೆಕ್ಟರ್‌ನನ್ನು ನೇರವಾಗಿ ಹೋಟಲಿಗೆ ಕರೆದೊಯ್ದ. ಹೋಟಲಿನ ಮಾಲೀಕ, ಮಲ್ಲೇಶಿ ಆಗಾಗ ಯಾರೊ ಇಬ್ಬರ ಜೊತೆಗೆ ಅಲ್ಲಿಗೆ ಬರುತ್ತಿದ್ದದನ್ನು ತಿಳಿಸಿದನಲ್ಲದೆ, ಒಮ್ಮೊಮ್ಮೆ ಅವರ ಜೊತೆ ಒಬ್ಬ ಕುಳ್ಳನೂ ಬರುತ್ತಿದ್ದನೆಂದು ಹೇಳಿದ. ಅವರು ಎಲ್ಲಿರುತ್ತಾರೆ—ಏನು ಮಾಡುತ್ತಾರೆಂಬುದು ತನಗೆ ತಿಳಿಯದೆಂದೂ ಸಹ ಆವನು ವಿವರಿಸಿದ. ಅವರ ಮನೆಯನ್ನು ತೋರಿಸದಿದ್ದಲ್ಲಿ ಅವನನ್ನೆ ಹಿಡಿದು ಒಯ್ಯುವುದಾಗಿ ಇನ್ಸ್‌ಪೆಕ್ಟರ್ ಬೆದರಿಕೆ ಹಾಕಿದಾಗ, ಆ ಹೋಟಲಿನ ಮಾಲೀಕ ಅವರ ಜೊತೆ ಬಂದು, ದೂರದಿಂದಲೇ ರಾಮಣ್ಣನ ಮನೆ ತೋರಿಸಿ ಹೊರಟುಹೋದ. "ನಿಮ್ಮಪ್ಪ ಚಂದ್ರಯ್ಯನ ಮನ್ಯಾಗ ಇದ್ದಾನೇನೊ. ಆತನ ಮನಿ ಎಲ್ಲಿ ಅದ ಅಂತ ಕೇಳಿಕೊಂಡು ಬರತೀನಿ. ನೀನು ಇವರ ಜೊತಿಗಿರು"—

ಎಂದು ಹೇಳಿ ಇನ್ಸ್‌ಪೆಕ್ಟರ್ ಮುಂದೆ ಹೋದ. ಮಲ್ಲೇಶಿ, ಕನಿಷ್ಠ ಬಿಲ್ಲೆಗಳ ಜೊತೆಗೆ ನಿಂತ.

ಅವರು ಸ್ಟೇಷನ್ನಿಗೆ ಹಿಂದಿರುಗಿದಾಗ, ನೀಲಿ ಅಲ್ಲಿಯೇ ಕುಳಿತಿದ್ದಳು. ಆಕೆಯನ್ನು ನೋಡಿ, ಇನ್ಸ್‌ಪೆಕ್ಟರ್‌ನಿಗೆ ಅವಳ ಮೇಲೆ ಕನಿಕರ ಹುಟ್ಟಿತು. ತಾನು ಕೇಳಿದ ಪ್ರಶ್ನೆಗಳಿಗೆಲ್ಲಾ, ಯಾವುದನ್ನೇ ಆಗಲಿ ಮರೆಮಾಚದೆ ಉತ್ತರ ನೀಡುತ್ತಿದ್ದ ನೀಲಿಯ ಬಗ್ಗೆ, ಆತನ ಮನಸ್ಸಿನಲ್ಲಿ ಗೌರವಭಾವನೆ ಮೂಡಿತ್ತು. ಆಕೆಗೆ ತನ್ನ ಕೈಲಾದ ಸಹಾಯ ಮಾಡಬೇಕೆಂದುಕೊಂಡನಾದರೂ, ಉದ್ಯೋಗಧರ್ಮ ಆತನಿಗೆ ಅಡ್ಡಿಯಾಗಿ, ಅವಳು ಹೇಳಿದ್ದನ್ನೆಲ್ಲ ಬರೆದುಕೊಂಡ.

ಸ್ಟೇಷನ್ನಿನಿಂದ ಹೊರಗೆ ಕಾಲಿಟ್ಟ ನೀಲಿ, ಮತ್ತೆ ಒಳಹೋಗಿ, "ಆ ಮನೆಯ ಯಜಮಾನ್ರು ಹ್ಯಾಂಗಿದ್ದಾರ್ರಿ ಸಾಹೇಬರ?"—ಎಂದು ಇನ್ಸ್‌ಪೆಕ್ಟರ್‌ನನ್ನು ಕೇಳಿದಳು. "ಗಂಡಾಂತರದಿಂದ ಪಾರಾಗ್ಯಾನ. ಪ್ರಾಣಕ್ಕೇನೂ ಅಪಾಯ ಇಲ್ಲ"—ಎಂದು ಆತ ಹೇಳಿದಾಗ, "ಒಳ್ಳೆಯವರಿಗೆ ದೇವರು ಒಳ್ಳೇದs ಮಾಡ್ತಾನ"—ಎನ್ನುತ್ತಾ ಮುಂದೆ ಹೊರಟಳು. ಆಗ ಇನ್ಸ್‌ಪೆಕ್ಟರ್, "ಅವನು ಒಳ್ಳೆಯವನಂತ ಹ್ಯಾಂಗ ಹೇಳತೀದಿ? ಅವನ ಹತ್ತಿರ ದುಡ್ಡು ಅದಂತ, ಅವನು ಒಳ್ಳೆಯವನಿರಬಹುದು ಅಂತ ತಿಳಿದಿ ಏನು?" —ಎಂದು ನಕ್ಕ.

"ಅವನು ಒಳ್ಳೆಯವನಾಗಿರದಿದ್ದರ, ಕಳ್ಳರ ಮ್ಯಾಲೆ ಗುಂಡು ಹಾರಿಸದ, ಗಾಳಿ ಒಳಗ, ಗುಂಡು ಹಾರಿಸಿ ಅವರ ಜೀವ ಉಳಿಸ್ತಿದ್ನ?"—ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಳ್ಳುತ್ತಾ, ಮಲ್ಲೇಶಿಯನ್ನು ಕರೆದುಕೊಂಡು ಹೊರಟಳು. ಹಾಗೆ ಹೋಗುತ್ತಾ, ಬೀದಿಯಲ್ಲಿನ ನಾಲ್ಕೈದು ಮನೆಗಳಿಗೆ ಹೋಗಿ, ತನ್ನ ಕಷ್ಟ ಹೇಳಿಕೊಂಡು ಮುಸುರೆ ತಿಕ್ಕುವ ಕೆಲಸವಾದರೂ ಕೊಡಬೇಕೆಂದು ಅಂಗಲಾಚಿದಳು.

ಒಂದು ಮನೆಯಲ್ಲಿ, ತೀರ ಕಡಿಮೆ ದುಡ್ಡಿಗೆ ಕೆಲಸಮಾಡಲು ಒಪ್ಪಿಕೊಂಡಳು. ಅದಕ್ಕೂ ಕೂಡ, ಆ ಮನೆಯ ಯಜಮಾನತಿ ಹಾಕಿದ ಏನೆಲ್ಲಾ ಷರತ್ತುಗಳನ್ನು ನೀಲಿ ಒಪ್ಪಬೇಕಾಯಿತು. ಅಂದೇ ಕೆಲಸಕ್ಕೆ ನಿಂತು, ಪಾತ್ರೆಗಳನ್ನು ತೊಳೆದು ಮನೆಗೆ ಹೊರಟಾಗ, ಅವಳಂತಹವಳೇ ಇನ್ನೊಬ್ಬಳು ಎದುರಾಗಿ, "ಆ ಮನ್ಯಾಗ ಕೆಲಸ ಮಾಡ್ತಿ ಏನು?" ಎಂದು ಕೇಳಿದಳು.

"ಹೌದಮ್ಮ."

"ಅವರು ಮನುಷ್ಯರಲ್ಲ, ರಾಕ್ಷಸರು. ಕೊಡೋದು ಎಷ್ಟೊ ಏನೊ. ಆಗಲಿ, ರಕ್ತ ಹೀರಿ ಬಿಡ್ತಾರ. ಅದಕ್ಕ ಆ ಮನ್ಯಾಗ ಯಾರs ಆಗಲಿ ಬಹಳ ದಿವಸ ಕೆಲಸಕ್ಕ ನಿಲ್ಲಾಣಿಲ್ಲ. ಯಾರು, ಆ ಮನಿ ಕೆಲಸಕ್ಕ ಹೋಗೋದೂ ಇಲ್ಲ."

"ಏನೊ ಕಷ್ಟಕಾಲದಾಗ ಕೆಲಸ ಕೊಟ್ಟಾರ. ಕೈಲಾಗೊವರೆಗೂ ಕೆಲಸ ಮಾಡ್ತೀನಿ. ಏನೇ ಆಗಲಿ, ಆಕೀನೂ ಮನುಷ್ಯಳು—ಹೆಣ್ಣುಮಗಳು. ಇಂದಿಲ್ಲ ನಾಳೆ, ಆಕೀಗೂ ನನ್ನ ಮ್ಯಾಲೆ ಕರುಣೆ ಬರಬಹುದು"—ಎಂದು ಹೇಳಿ ನೀಲಿ ಮುಂದೆ ಹೆಜ್ಜೆ ಹಾಕಿದಳು.

## [ 41 ]

ಚಂದ್ರಯ್ಯ ಮತ್ತು ರಾಮಣ್ಣ ಕೂಡ, ಪೋಲೀಸರ ಕೈಗೆ ಸಿಕ್ಕರು. ಮೆಜಿಸ್ಟ್ರೇಟರ ನ್ಯಾಯಾಲಯದಲ್ಲಿ, ಅವರ ವಿಚಾರಣೆ ಪ್ರಾರಂಭವಾಯಿತು. ಮೂವರು ಆಪಾದಿತರನ್ನು ನ್ಯಾಯಾಲಯದ ಕಟಾಂಜನದಲ್ಲಿ ನಿಲ್ಲಿಸಿ, ಅವರ ವಿರುದ್ಧದ ನೇರ ಆರೋಪಣೆಗಳನ್ನು ಓದಿಹೇಳಲಾಯಿತು. ಆದರೆ, ಆಪಾದಿತರು ತಾವು ನಿರ್ದೋಷಿಗಳೆಂದು ಹೇಳಿದರು.

ಆಗ, ಸರ್ಕಾರಿ ವಕೀಲರು ಆಪಾದಿತರ ಮೇಲಿನ ಆರೋಪಣೆಗಳನ್ನು ಸಾಕ್ಷಿ ಸಹಿತ ಮಂಡಿಸಿ ಸಮರ್ಥಿಸುವುದು ಅನಿವಾರ್ಯವಾಯಿತು. ಮೊದಲು ಸಾಕ್ಷಿ ನೀಡಲು, ನೀಲಿಯನ್ನೆ ಕರೆಸಲಾಯಿತು. ನೀಲಿ ಕಂಕುಳಲ್ಲಿದ್ದ ಮಗಳನ್ನು ಮಲ್ಲೇಶಿಯ ಮುಂದೆ ಕೂಡಿಸಿ ಒಳ ಬಂದಳು. ಹರಕು ಸೀರೆಗಳಲ್ಲಿ ಅಲ್ಪಸ್ವಲ್ಪ ಗಟ್ಟಿಯಾದುದನ್ನು ಉಟ್ಟು ಮೈತುಂಬ ಸೆರಗು ಹೊದ್ದು ಒಳಗೆ ಬಂದ ನೀಲಿಯ ಮುಖ ಬಾಡಿತ್ತು.

ತಲೆ ಕೆಳಗೆ ಹಾಕಿಕೊಂಡು, ಸಾಕ್ಷಿದಾರರಿಗಿದ್ದ ಕಟಾಂಜನವನ್ನು ಏರುತ್ತಿದ್ದಾಗ, ಅವಳ ಕಾಲುಗಳು ನಡುಗಹತ್ತಿದವು. ಹಾಗೆಯೇ ಧೈರ್ಯದಿಂದ ಮುನ್ನಡೆದು ಕಟಾಂಜನದಲ್ಲಿ ನಿಂತು ತಲೆ ಎತ್ತಿದಾಗ, ಮೂವರು ಆಪಾದಿತರೂ ಕಣ್ಣಿಗೆ ಬಿದ್ದರು. ಅವರಲ್ಲಿ ತನ್ನ ಗಂಡನೂ ಸಹ ನಿಂತಿದ್ದನ್ನು ಅವಳು ನೋಡಿದಳು. ಏಕೊ–ಏನೊ, ಆತನ ಮುಖ ನೋಡಲು ಅವಳಿಗೆ ನಾಚಿಕೆಯಾಯಿತು. ಆಗಲೇ ಅವಳ ಕಣ್ಣುಗಳಲ್ಲಿ ನೀರಾಡಿತು. ಆದರೂ ಧೈರ್ಯದಿಂದಿರಲು ಪ್ರಯತ್ನಿಸಿದಳು.

ಹೆಂಡತಿ, ಮಗ ನೀಡುವ ಸಾಕ್ಷಿಯ ಆಧಾರದ ಮೇಲೆ, ತಾನು ಮತ್ತು ತನ್ನ ಇಬ್ಬರು ಸಹಚರರು ಮುಕ್ತರಾಗುವ ಅವಕಾಶವಿದೆ ಎಂದು, ತಮ್ಮ ಪರವಾಗಿ ವಾದಿಸಲು ಸರ್ಕಾರ ನೇಮಿಸಿದ್ದ ವಕೀಲ ಹೇಳಿದ್ದನ್ನು ಪುಲ್ಲಯ್ಯ ಸ್ಮರಿಸಿಕೊಂಡ. ಚಂದ್ರಯ್ಯ ಮನೆಗೆ ಹೋಗಿ ಎಚ್ಚರಿಕೆ ನೀಡಿದ್ದು, ಪುಲ್ಲಯ್ಯನಿಗೆ ಗೊತ್ತಾಗಿತ್ತು. ಏನೇ ಆಗಲಿ, ತನಗೆ ಬಿಡುಗಡೆ ದೊರೆಯುವ ರೀತಿಯಲ್ಲಿ ನೀಲಿ ಸಾಕ್ಷಿ ನೀಡುವಳೆಂದು ಪುಲ್ಲಯ್ಯ ದೃಢವಾಗಿ ನಂಬಿದ್ದ.

ನ್ಯಾಯಾಲಯದ ಕಿರಿಯ ಕಾರಕೂನ ಮುಂದೆ ಬಂದು, "ಏನಮ್ಮಾ—ಪ್ರಮಾಣ ವಚನ ಸ್ವೀಕರಿಸಬೇಕು. ನಾನು ಹೇಳಿದ್ಹಾಂಗ ಹೇಳ್ರಿ—ದೇವರ ಸನ್ನಿಧಿ......"

"ಅದು ಯಾಕ ಬೇಕರಿ ಸಾಹೇಬರ, ಎಲ್ಲೆಲ್ಲೂ ದೇವರು ಇದ್ದಾನ ಅಂದಮ್ಯಾಲೆ?"..

"ಹೌದಮ್ಮ, ಆದರ ಹೀಂಗ ಪ್ರಮಾಣ ವಚನ ಸ್ವೀಕರಿಸೋದು ಅನಿವಾರ್ಯ"—

ಎಂದು ಆ ಕಿರಿಯ ಕಾರಕೂನ ಹೇಳಿದಾಗ, ನೀಲಿ, ಆತನನ್ನು ಅನುಸರಿಸಿ ಪ್ರಮಾಣವಚನ ಸ್ವೀಕರಿಸಿದಳು.

ಇದಾದ ನಂತರ, ನೀಲಿ, ತನ್ನೆಲ್ಲ ಬೇಸರವನ್ನು, ಭಯವನ್ನು ಮರೆತುಬಿಟ್ಟಳು. ಯಾವ ಸಂಕೋಚವೂ ಇಲ್ಲದೆ, ಕೇಳಿದ್ದಕ್ಕೆಲ್ಲಾ ಉತ್ತರ ಕೊಡಲು ಅವಳು ಮುಂದಾದಳು.

ಸಹಾಯಕ ಸರ್ಕಾರಿ ವಕೀಲ, ಅವಳನ್ನು ಪ್ರಶ್ನಿಸಲು ಪ್ರಾರಂಭಿಸಿದ:

"ನಿನ್ನ ಹೆಸರು?"

"ನೀಲಮ್ಮ."

"ನಿನ್ನ ಗಂಡನ ಹೆಸರು?"

"ಪುಲ್ಲಯ್ಯ."

"ಈ ಮುವ್ವರಲ್ಲಿ ನಿನ್ನ ಗಂಡ ಯಾರು ತೋರಿಸು?"

"ನಡುವ ನಿಂತಾತನ ನನ್ನ ಗಂಡ."

ಅನಂತರ ಕೇಳಲಾದ ಎಲ್ಲಾ ಪ್ರಶ್ನೆಗಳಿಗೂ, ನೀಲಿ ಯಾವ ಮುಚ್ಚುಮರೆಯಿಲ್ಲದೆ ಉತ್ತರ ಕೊಡಲು ಪ್ರಾರಂಭಿಸಿದಾಗ, ಪುಲ್ಲಯ್ಯನ ಕಣ್ಣುಗಳು ಕೆಂಡಕಾರಿದವು. ಅವನಿಗೆ ಎಲ್ಲಿಲ್ಲದ ಕೋಪ ಬಂತಾದರೂ, ಏನೂ ಮಾಡಲಾಗದೆ, ಒಳಗೊಳಗೇ ಕುದಿಯುತ್ತಿದ್ದ.

ಒಂದು ದಿನ, ಸ್ಟೇಷನ್ನಿನಲ್ಲಿ ಯಾರದೊ ಜೇಬಿಗೆ ಕೈಹಾಕಿ ಸಿಕ್ಕಿಕೊಂಡ. ಆ ಮೇಲೆ ರಾತ್ರಿಯಲ್ಲಿ, ಹಡಗುಗಳಿಂದ ಸರಕು ಇಳಿಸಬೇಕಾಗಿದೆ—ಎಂದು ಹೇಳಿ ಹೋಗತೊಡಗಿದ. ಒಂದು ದಿನ ಯಾರೊ ದುಡ್ಡು ಕೊಟ್ಟರೆಂದು ಹೇಳಿ ಸೀರೆ ತಂದುಕೊಟ್ಟ. ಊರಿನಲ್ಲಿ ಪ್ರೊಕ್ಯೂರಮೆಂಟಿಗಾಗಿ ಬಂದ ಅಧಿಕಾರಿಗಳ ಮೇಲೆ ಕೈಮಾಡಿ ಜುಲ್ಮಾನೆ ತುಂಬಿದ...... ಎಂದೆಲ್ಲ ನೀಲಿ ಎಲ್ಲವನ್ನೂ ಹೇಳಿದಳು. ಕೊನೆಗೆ, ಈ ಕನ್ನಹಾಕುವ ಪ್ರಯತ್ನ ನಡೆದ ರಾತ್ರಿ ಮತ್ತು ಮರುದಿನ ನಡೆದ ಘಟನೆಗಳನ್ನೂ ಸಹ ನೀಲಿ ವಿವರಿಸಿದಳು. ತನ್ನ ಗಂಡನ ಜೊತೆಗೆ ನಿಂತಿದ್ದ ಉಳಿದ ಇಬ್ಬರನ್ನು ತಾನು ಎಂದೇ ಆಗಲಿ ನೋಡಿಲ್ಲವೆಂದೂ, ಅವರು ಎಂದೇ ಆಗಲಿ ತಮ್ಮ ಮನೆಗೆ ಬಂದಿಲ್ಲವೆಂದೂ ನೀಲಿ ಸ್ಪಷ್ಟವಾಗಿ ತಿಳಿಸಿದಳು.

ನೀಲಿಯ ಸಾಕ್ಷಿ ಕೇಳಿ, ಆಪಾದಿತರ ವಕೀಲ ನಿಸ್ಸಹಾಯಕನಾದ. ಆದರೂ ತನ್ನ ಪ್ರಯತ್ನ ಬಿಟ್ಟುಕೊಡಬಾರದೆಂದು—

"ನಿನ್ನ ಗಂಡನ ಗುಣ—ಎಂಥಾದ್ದು ತಿಳಿಸ್ತೀಯಾ?"—ಎಂದು ಕೇಳಿದ.

ನೀಲಿ ಇದಕ್ಕೆ ಉತ್ತರ ಕೊಡಲಿಲ್ಲ.

"ಹೋಗಲಿ, ನಿನ್ನ ಗಂಡನ ಬಗ್ಗೆ ನಾಲ್ಕು ಜನರು ಎಂತಹ ಅಭಿಪ್ರಾಯ ಇಟ್ಟುಕೊಂಡಾರ ತಿಳಿಸು."

"ನನ್ನಜ್ಜಿ ಸಾಯೋವಾಗ ಹೇಳಿದ್ದಳು—ನಿನ್ನ ಗಂಡ, ಕೈಸುಟ್ಟರ ಗಡಗಿ ಒಗದ

ಹೋಗೊ ಜಾತಿಗೆ ಸೇರಿದವ—ಅಂತ...... ಈ ಊರಿಗೆ ಬಂದ ಮ್ಯಾಲೆ ಯಾರು ಏನು ಅಂದುಕೊಂಡರೂ ಏನೊ, ಅದು ನನಗ ತಿಳೀದು."

"ನಿನ್ನ ಗಂಡ ಎಳ್ಳಷ್ಟೂ ಕೈಲಾಗದವನು ಅಂದಮ್ಯಾಲೆ, ನಿನಗ ಆವನ ಮ್ಯಾಲೆ ಸಿಟ್ಟು ಇರಬೇಕು."

"ಸಿಟ್ಟುಮಾಡಿಕೊಂಡು ಯಾರನ್ನ ಆಗಲಿ ಹಾದಿಗೆ ಹಚ್ಚಲಿಕ್ಕೆ ಆಗಾಣಲ್ಲ......"

"ನಿನ್ನ ಗಂಡ ಆಗಾಗ ಸಿಟ್ಟಿಗೆದ್ದು ನಿನ್ನ ಹೊಡೀತಿದ್ದ-ಬಡೀತಿದ್ದ. ಆದಕ್ಕs ನಿನಗ ಆತನ್ನ ಕಂಡರ ಅಸಮಾಧಾನ ಇರಬೇಕು—ಹೌದಲ್ಲೊ?"

"ಇಲ್ಲದ್ದಲ್ಲ ಯಾಕ ಚುಚ್ಚಿ ಕೇಳ್ತೀರಿ?"

"ನಿನ್ನ ಮತ್ತು ನಿನ್ನ ಗಂಡನ ನಡುವಣ ಸಂಬಂಧ ಸರಿಯಿರಲಿಲ್ಲ ಅಂಬೋದನ್ನ ಒಪ್ಪಿಕೋತೀಯಾ?"

"ಇಲ್ಲ. ನನ್ನ ಗಂಡ, ಎಂದs ಆಗಲಿ ನನ್ನ ಬಯ್ಯಿದಿಲ್ಲ-ಹೊಡೆದಿಲ್ಲ. ನೀವು ಏನs ಹೇಳ್ರಿ, ಇದನ್ನ ನಾನು ಒಪ್ಪಾಣಲ್ಲ. ನಮ್ಮ ಊರಾಗ ಕುಡ್ಡ ವೆಂಕಣ್ಣ ಕಳವು ಮಾಡ್ತಾನಂತ ಆತನ ಮ್ಯಾಲೆ ಹರಿಹಾಯ್ತಿದ್ದ. ಕಳ್ಳತನ-ಸುಳ್ಳತನ—ಅಂದರ ಕೆಂಡಕಾರತ್ತಿದ್ದ. ಅಂತಹವನು ಈಗ ಹೀಗಾಗತಾನಂತ ನಾನು ಕನಸಿನ್ಯಾಗೂ ಅಂದುಕೊಂಡಿರಲಿಲ್ಲ. ......ಆತ ಹೇಳಿದ್ದನ್ನೆಲ್ಲಾ ನಂಬಿದೆ...... ಮೋಸ ಮಾಡಿದ. ನಾನು ಹೇಳಿದ ಮಾತು ಕೇಳಿ ಊರಾಗs ಇದ್ದು ಏನೊ ಒಂದು ಕೆಲಸ ಮಾಡಿಕೊಂಡಿದ್ದರ, ಇಂದ ಈ ಪರಿಸ್ಥಿತಿ ಬರ್‍ತಿರಲಿಲ್ಲ...... ನನ್ನ ಮಾತು ಕೇಳಿದ್ದನಂದರ, ಈ ಪಾಪಕ್ಕ ಕೈಹಾಕೊ ಗತೀನೂ ಬರತಿರಲಿಲ್ಲ......"

ನೀಲಿ ಇದನ್ನೆಲ್ಲಾ ಹೇಳುತ್ತಿದ್ದಾಗ, ಫುಲ್ಲಯ್ಯನಿಗೆ ಮಿತಿಮೀರಿದ ಕೋಪ ಬಂತು. "ನಿನ್ನ ಸಲುವಾಗಿಯೇ ನಾನು ಇದೆಲ್ಲಾ ಮಾಡಿದೆ—ಆದರ ಈಗ ನೀನೆ ನನಗ ಮೋಸ ಮಾಡಿದಿ"—ಎಂದು ಕೂಗಿ ಹೇಳಬೇಕೆಂದುಕೊಂಡ. ಆದರೆ, ತಾನು ಬಾಯಿಬಿಟ್ಟಲ್ಲಿ, ತನ್ನ ಗುಟ್ಟು ರಟ್ಟಾಗುವದೆಂಬ ಭೀತಿಯಿಂದ ತೆಪ್ಪಗಿದ್ದ.

ನೀಲಿ ಸಾಕ್ಷಿ ಹೇಳುವುದು ಮುಗಿಯಿತು. ಇನ್ನು ಮಲ್ಲೇಶಿಯ ಸರದಿ. ಮಲ್ಲೇಶಿಯನ್ನು ಒಳಗೆ ಕರೆತರುವುದಕ್ಕೂ ಮುಂಚೆ—ಮಗುವಿಗೆ ತಂದೆಯ ಮೇಲೆ ಎಲ್ಲಿಲ್ಲದ ಪ್ರೀತಿ-ಅಭಿಮಾನಗಳಿವೆ. ತಂದೆ ಎದುರಿಗಿದ್ದಲ್ಲಿ, ಅವನು ಸಾಕ್ಷಿ ನೀಡುವುದಕ್ಕೆ ತೊಂದರೆಯಾಗಬಹುದು. ಆದ್ದರಿಂದ, ಫುಲ್ಲಯ್ಯನನ್ನು ಮರೆಯಲ್ಲಿ ಕೂಡಿಸಬೇಕೆಂದು ಸರ್ಕಾರಿ ವಕೀಲರು ಮಾಡಿಕೊಂಡ ಮನವಿಯನ್ನು, ಮ್ಯಾಜಿಸ್ಟ್ರೇಟರು ಮಾನ್ಯಮಾಡಿದರು.

ಮಲ್ಲೇಶಿಯನ್ನು ಕರೆತರಲಾಯಿತು. ಸಾಕ್ಷಿ ಹೇಳುವವರಿಗಾಗಿರುವ ಕಟಾಂಜನ ಏರಿ ನಿಂತ ಮಲ್ಲೇಶಿ, ಒಮ್ಮೆ ಸುತ್ತಲೂ ನೋಡಿದ. ಕೈಯಲ್ಲಿ ಹಿಡಿದಿದ್ದ ಚಿತ್ರವನ್ನು ಆಚೆ ಬಿಸಾಕಲು ಎಷ್ಟು ಹೇಳಿದರೂ ಕೇಳದೆ, ಅದನ್ನು ಕೈಯಲ್ಲಿ ಹಿಡಿದೆ ಇದ್ದ. ಸರ್ಕಾರಿ ವಕೀಲ ನಗುತ್ತಾ ಮುಂದೆ ಬಂದು,

"ನೀನು ತುಂಬಾ ಒಳ್ಳೆಯವನ್ಹಾಂಗ ಕಾಣಿಸ್ತೀದಿ...... ಎಲ್ಲಿ ನಿನ್ನ ಹೆಸರು ಹೇಳು ನೋಡೋಣ"—ಎಂದು ಕೇಳಿದ.

"ಮಲ್ಲೇಶಿ."

"ನಿಮ್ಮಪ್ಪನ ಹೆಸರು?"

"ಏನು?—ನಿಮಗ ನಮ್ಮಪ್ಪನ ಹೆಸರು ಗೊತ್ತಿಲ್ಲ—ಪುಲ್ಲಯ್ಯ."

"ಓಹೊ, ಪುಲ್ಲಯ್ಯನs. ಒಳ್ಳೆಯ ಹೆಸರು."

"ನಮ್ಮಪ್ಪ ಬಹಳ ಒಳ್ಳೆಯವನು—ಅದಕ್ಕ ಆತನ ಹೆಸರು ಒಳ್ಳೇದದ—ಅಂದ ಹಾಂಗ ನಿಮ್ಮ ಹೆಸರು?"

"ಗೋವಿಂದ ರಾವ್."

"ಛೆ, ಛೆ, ಬಹಳ ದೊಡ್ಡ ಹೆಸರು—ಚಲೊ ಇಲ್ಲ."

"ಸರಿ ಹಾಂಗಾದರ, ನೀ ಹೇಳಿದ್ಹಾಂಗ ನನ್ನ ಹೆಸರು ಸಣ್ಣದು ಮಾಡಿಕೊಳ್ಳೀನಿ...... ಈಗ ಹೇಳು...... ಅಂದು ರಾತ್ರಿ ನೀನು–ನಿಮ್ಮಪ್ಪ, ಗುಡಿಸಲಿನ ಮುಂದಿನ ಅಂಗಳ ದಾಗ ಮಲಗಿದ್ದರೇನು?"

"ಅಂದs ಯಾಕ—ನಾವು ದಿನಾಲೂ ಅಲ್ಲೆ ಮಲಗ್ತಿದ್ವಿ. ನಾನು, ನಮ್ಮಪ್ಪನ ಎದಿ ಮ್ಯಾಲೆ ಹಾಯಾಗಿ ಮಲಗತಿದ್ದೆ."

"ಹಾಂಗಾದರ ಅವತ್ತು ಏನಾಯಿತು ಹೇಳು ನೋಡೋಣ?"

"ಅವತ್ತು ಅಂದರ......?"

"ಅಂದರ, ನಿಮ್ಮಪ್ಪ ನಿನ್ನ ಬಿಟ್ಟುಹೋದನಲ್ಲ...... ಅವತ್ತು ರಾತ್ರಿ ಏನಾತು ಹೇಳು."

"ಅದನ್ನೆಲ್ಲಾ ಹೇಳೀನಲ್ಲ? ಈಗ ಮತ್ಯಾಕ ಹೇಳಬೇಕು?"

"ಇವರೆಲ್ಲ ಕೇಳಿಲ್ಲ. ಇದೊಂದು ಸರೆ ಹೇಳಿಬಿಡು. ನೀನು ಜಾಣ...... ಹೇಳು ನೋಡೋಣ?"

ಮಲ್ಲೇಶಿ ತನ್ನ ಕೈಯಲ್ಲಿದ್ದ ಬೆತ್ತವನ್ನು ತನ್ನ ಕಾಲಬಳಿ ಇಟ್ಟು, ಕಟಾಂಜನಕ್ಕೆ ಜೋತುಬಿದ್ದು, ಕಾಲು ಎತ್ತಿ ಸುತ್ತಲೂ ನೋಡಿದ. ಕಿರಿದಾದ ಚಲ್ಲಣ, ಭುಜದ ಮೇಲೆಲ್ಲಾ ಹರಿದ ಅಂಗಿ, ಮುಖದ ಮೇಲೆ ಬೀಳುತ್ತಿದ್ದ ಕಪ್ಪು ಕೂದಲು, ಪುಟ್ಟದಾದ ದಂತಪಂಕ್ತಿ, ಸಿಹಿಮಾತು......

"ಅಂದು ರಾತ್ರಿ, ಪಕ್ಕದ ಮನೆ ಹೆಂಗಸಿನ ಜೊತೆಗೆ ಮಾತನಾಡುತ್ತಾ ಕುಳಿತಿದ್ದ ಅಮ್ಮನ ಹತ್ತಿರ ಕೂತಿದ್ದೆ. ಬೇಸರ ಬಂದಾಗ ಎದ್ದು, ಅಪ್ಪನ ಹತ್ತಿರ ಹೋಗಿ ಆತನ ಎದಿ ಮ್ಯಾಲೆ ಮಲಗಿಕೊಂಡಿದ್ದೆ. ಮಧ್ಯಾಹ್ನ ಮಲಗಿದ್ದೆ, ಅದಕ್ಕ ನಿದ್ದಿ ಬಂದಿರಲಿಲ್ಲ. ಸುತ್ತಲೂ ಕತ್ತಲು. ಆ ಕತ್ತಲನ್ನು ನೋಡುತ್ತಾ, ಅಜ್ಜಿ ಕಲಿಸಿದ ಹಾಡುಗಳನ್ನು ಹೇಳುತ್ತಿದ್ದೆ. ಅದು ಯಾವಾಗಲೊ ನಿದ್ದೆ ಬಂತು...... ಫಕ್ಕನೆ ಎಚ್ಚರಾದಾಗ, ಅಪ್ಪ

ಎಲ್ಲಿಗೊ ಹೊರಟಿದ್ದ. ನಾನೂ ಮೇಲೆದ್ದೆ. ನಮ್ಮಪ್ಪ ಮತ್ತೆ ವಾಪಸ್ ಬಂದು, ನನ್ನ ಮಲಗಿಸಿ ಚೌಚೌ ಮಾಡಿದ. ಏನೇ ಆಗಲಿ, ಅಪ್ಪ ಎಲ್ಲಿ ಕೆಲಸಮಾಡ್ತಾನ, ಎಂತಹ ಹಡಗಿನಿಂದ ಸಾಮಾನು ಇಳಿಸ್ತಾನ ನೋಡಬೇಕು ಅಂದುಕೊಂಡು, ನಿದ್ದಿ ಬಂದವರ ಹಾಂಗ ಮಲಗಿದೆ...... ನಮ್ಮಪ್ಪ, ನಾನು ಮಲಗೀನಿ ಅಂತ ತಿಳಿದು ಎದ್ದು ಹೊರ ಟಾಗ, ನಾನೂ ಆತನ ಹಿಂದ, ಆತಗ ತಿಳಿಯದ್ಹಾಂಗ ಹೊರಟೆ......"

"ಆಗ ನಿಮ್ಮಪ್ಪನ ಜತಿ ಇನ್ನೂ ಇಬ್ಬರು ಇದ್ದರಲ್ಲ—ಅವರ್‍ಯಾರು?"

"ರಾಮಣ್ಣ ಮತ್ತು ಚಂದ್ರಯ್ಯ."

"ಅಲ್ಲಿ ನಿಂತಾರಲ್ಲಾ, ಅವರ ಏನು?"

"ಹೌದು"—ಎಂದು ಹೇಳಿದ ಮಲ್ಲೇಶಿ, ರಾಮಣ್ಣನನ್ನು ನೇರವಾಗಿ ಉದ್ದೇಶಿಸಿ, "ನಮಗ ಬೊಂಡಾ ತಿನ್ನಿಸಿ ಚಹಾ ಕುಡಿಸಿದಾತ ನೀನs ಹೌದಲ್ಲೊ" ಎಂದು ಕೇಳಿದ.

ಸರ್ಕಾರಿ ವಕೀಲ ನಡುವೆಯೆ ಮಾತನಾಡಿ, "ಅದು ಸರೆ, ನೀನು ಅವರ ಹಿಂದೆ ಹೋದಿ. ಆಮ್ಯಾಲೆ ಏನಾಯಿತು?"—ಎಂದು ಕೇಳಿದ.

"ಏನಾಯಿತs?"—ಮಲ್ಲೇಶಿ ಸ್ವಲ್ಪ ಹೊತ್ತು ಯೋಚಿಸಿ ಮತ್ತೆ ಹೇಳತೊಡಗಿದ: "ನಾನು ಅವರ ಹಿಂದೆ ಹಿಂದೆ ಹೊರಟೆ. ಅವರು ಆ ದೀಪದ ಕಂಬದ ಹತ್ತಿರ ನಿಂತರು. ಅಪ್ಪ ನೋಡಿದರ ಹೊಡೀತಾನ ಅಂಬೊ ಅಂಜಿಕೀಗೆ, ನಾನು ಅಲ್ಲೆ ಬಚ್ಚಿಟ್ಟುಕೊಂಡೆ.... ಅವರು ಮುಂದೆ ಹೊರಟಾಗ, ನಾನೂ ಅವರ ಬೆನ್ನುಹತ್ತಿದೆ...... ಅವರು ಆ ಓಣಿ ಯೊಳಗಿನ ಆ ಬಂಗಲೆ ಹತ್ತತೊಡಗಿದರು. ಅದನ್ನ ನೋಡಿ, ನಾನೂ ಆ ಮಾಳಿಗಿ ಹತ್ತಿ ದರ ಎಷ್ಟು ಚಲೊ ಇರತದಂತ ಯೋಚಿಸಿದೆ—ಆದರ, ನಾನು ಅಲ್ಲಿ ವರೆಗೂ ಹೋಗಿದ್ದು ಅಪ್ಪಗ ಗೊತ್ತಾದರ ಹೊಡೀತಾನೇನೊ ಅಂದುಕೊಂಡು, ಅಲ್ಲೆ ಸಮೀಪ ದಲ್ಲಿದ್ದ ಕಸದ ಡಬ್ಬಿ ಪತ್ತಿರ ಅಡಗಿಕೊಂಡು ಕುಳಿತೆ. ಅವರು, ಹಗನಾಳಗಿ ಹಿಡಿದು ಕೊಂಡು ಮ್ಯಾಲೆ ಏರಿದರು.......ಅಷ್ಟರೊಳಗ ಯಾವುದೊ ನಾಯಿ ಭೌ-ಭೌ ಅಂತ ಬೊಗಳಿತು—ಯಾರದೊ ಧ್ವನೀನೂ ಕೇಳಿಸಿತು. ನಾನು ಹೆದರಿಕೊಂಡು, ಕಸದ ಡಬ್ಬಿ ಒಳಗ ಇಳಿದು ಕೂತುಬಿಟ್ಟೆ....... ಆಮ್ಯಾಲೆ, ನಾನು ನಮ್ಮಪ್ಪನ್ನ ನೋಡಲೇ ಇಲ್ಲ. ಮರುದಿವಸ ರಾತ್ರಿ ಮಾತ್ರ ನಮ್ಮಪ್ಪ ಬಂದ. ಆದರ, ಪೋಲೀಸರು ಆತನ್ನ ಹಿಡ ಕೊಂಡು ಹೋದರು—ಆಮ್ಯಾಲೆ ನಾನು ಆತನ್ನ ನೋಡೇ ಇಲ್ಲ"—ಎಂದು ಹೇಳಿದ. ಎಲ್ಲವನ್ನೂ ಧೈರ್ಯವಾಗಿ ಹೇಳಿದ ಮಲ್ಲೇಶಿ, ತಂದೆಯನ್ನು ಪೋಲೀಸರು ಹಿಡಿದು ಕೊಂಡು ಹೋದುದನ್ನು ಹೇಳುವಾಗ ಮಾತ್ರ ಕಣ್ಣಲ್ಲಿ ನೀರು ತಂದುಕೊಂಡ.

"ಅಂದು ಪೋಲೀಸರು ನಮ್ಮಪ್ಪನ್ನ ಕರಕೊಂಡು ಹೋದರು. ನಾನು ಎಷ್ಟು ಅತ್ತರೂ ನಮ್ಮಪ್ಪನ್ನ ಬಿಟ್ಟಿಲ್ಲ. ಅವರು ನಮ್ಮಪ್ಪಗ ಏನು ಮಾಡ್ಯಾರೊ ಏನೊ? ಕೇಳಿದರ, ಅಲ್ಲಿಗೆ ಹೋಗ್ಯಾನ, ಇಲ್ಲಿಗೆ ಹೋಗ್ಯಾನ ಅಂತ ಹೇಳ್ತಾರ ಆತು...... ಅಪ್ಪ ಎಲ್ಲಿದ್ದಾನ ಅಂತ ಅಮ್ಮನ್ನ ಕೇಳಿದರ, ಊರಿಗೆ ಹೋಗ್ಯಾನ ಅಂತ ಹೇಳ್ತಾಳು.

ಊರಿಗೆ ಹೋಗಿದ್ದರ, ಆತ ನನಗ ಹೇಳದೇ ಹೋಗ್ತಿದ್ದನೇನು......? ಒಂದು ವೇಳೆ ಹೋಗಿದ್ದರೂ, ನನ್ನ ಬಿಟ್ಟು ಇಷ್ಟು ದಿನ ಇರತಿದ್ದನೇನು?" —ಎಂದು ಹೇಳುತ್ತಿರುವಾಗಲೇ ಮಲ್ಲೇಶಿಯ ಧ್ವನಿ ಕಠೋರವಾಯಿತು. ಕೋಪದಿಂದ, ಕಾಲಬಳಿ ಇದ್ದ ಬೆತ್ತ ಎತ್ತಿಕೊಂಡು, ಕಟಾಂಜನದ ಮೇಲೆ ಹೊಡೆದು, "ಈ ಪೋಲೀಸರು ನಮ್ಮಪ್ಪನ್ನ ಏನೊ ಮಾಡ್ಯಾರ. ನೀವು ಈಗ ನಮ್ಮಪ್ಪನ್ನ ಬಿಡಲಿಲ್ಲ ಅಂದರ, ನಿಮ್ಮನ್ನೆಲ್ಲಾ ಹೊಡದು ಹಣ್ಣುಮಾಡ್ತೀನಿ...... ನಿಮ್ಮನ್ನ ಕಟ್ಟಿಹಾಕ್ತೀನಿ......" ಎಂದು ಗಟ್ಟಿಯಾಗಿ ಅರಚಿದ. ಪಕ್ಕದ ಕೋಣೆಯಲ್ಲಿ ಕುಳಿತಿದ್ದ ಪುಲ್ಲಯ್ಯ, ಮಗನ ಕೂಗು ಕೇಳಿ ಕಂಗಾಲಾದ. ಅದುವರೆಗಿದ್ದ ಕೋಪ–ತಾಪಗಳನ್ನು ಮರೆತು, ಸರಕ್ಕನೆ ಓಡಿಬಂದು—"ಮಲ್ಲೇಶಿ...... ಮಲ್ಲು......" ಎನ್ನುತ್ತಾ ಕಟಾಂಜನದತ್ತ ಧಾವಿಸಿದ. ತಂದೆಯನ್ನು ನೋಡಿ, ಮಲ್ಲೇಶಿ, "ಅಪ್ಪಾ...... ಅಪ್ಪಾ......" ಎಂದು ಕೂಗಿಕೊಳ್ಳುತ್ತಾ ಕಟಾಂಜನದಿಂದ ಕೆಳಗಿಳಿದುಬಂದ.

ನ್ಯಾಯಾಲಯದ ಜವಾನ ಮಲ್ಲೇಶಿಯನ್ನು ತಡೆದ. ಪೋಲೀಸರು ಪುಲ್ಲಯ್ಯನನ್ನು ತಡೆದು ಹಿಂದಕ್ಕೆ ಕರೆದೊಯ್ದರು.

## [ 42 ]

ನ್ಯಾಯಾಲಯದಿಂದ ಜೈಲಿಗೆ ಹಿಂದಿರುಗುವ ವೇಳೆಗೆ ಸಂಜೆಯಾಗಿತ್ತು. ಪುಲ್ಲಯ್ಯ, ಜೈಲಿನಲ್ಲಿನ ತನ್ನ ಕೊಠಡಿಯನ್ನು ಸೇರಿದೊಡನೆಯೆ, ಕುಸಿದು ಕುಳಿತ. ಮನಸ್ಸಿನಲ್ಲಿನ ಸಿಟ್ಟು ಇನ್ನೂ ಹೊಗೆಯಾಡುತ್ತಿತ್ತು. ಕಬ್ಬಿಣದ ಸರಳುಗಳ ಆ ಬಾಗಿಲು ಇರದಿದ್ದಲ್ಲಿ ಬಹುಶಃ ಅಲ್ಲಿಂದ ಓಡಿಹೋಗಿ ತನ್ನ ಹೆಂಡತಿಯ ಕುತ್ತಿಗೆ ಹಿಚುಕುತ್ತಿದ್ದನೊ ಏನೊ—

"ಅವಳೆ ಮಾಡಿದ್ದು. ನನ್ನ ಮಲ್ಲೇಶಿ, ಏನೂ ಹೇಳಬ್ಯಾಡ ಅಂದರ, ಬಾಯಿಬಿಡತಿರಲಿಲ್ಲ.—ಎಲ್ಲಾ ಆಕೀದೇ ಕಿತಾಪತಿ. ನನ್ನ ಮ್ಯಾಲಿನ ಸೇಡು ತೀರಿಸಿಕೊಳ್ಳೋವರಹಾಂಗ, ಎಲ್ಲಾನೂ ಬೊಗಳುಬಿಟ್ಟಳು. ಆಕಿಯಿಂದೇ ನಾನು ಹಾಳಾದೆ. ಗಂಗವ್ವನ ಮಾತು ಕೇಳಬೇಕಾಗಿತ್ತು...... ಆತ ಆ ಸೀತಾರಾಮಸ್ವಾಮಿ ಹೇಳಿದ್ದಾಂಗ, ಈ ಹೆಣ್ಣು ನನಗ ಮೋಸಮಾಡಿತು...... ದಾನಧರ್ಮ ಅಂತ, ಮನಿ ತೊಳೆದಳು. ರಾಜಣ್ಣನ ಮುಂದೆ ಕೈಯೊಡ್ಡಿ, ನನ್ನ ಮಾನ ಕಳೆದಳು. ನನ್ನ ಪೌರುಷ, ನನ್ನ ಗೌರವ ಎಲ್ಲಾನೂ ಮಣ್ಣು ಮುಕ್ಕುವ ಹಾಂಗ ಮಾಡಿದಳು. ನನ್ನ ಅಂತಸ್ತೇನೂ–ಆಕಿ ಅಂತಸ್ತೇನು—ಎಂದು ಯೋಚಿಸದೆ, ಜಿದ್ದಿಗೆ ಬಿದ್ದು, ಹಠಹಿಡಿದು ಅವಳನ್ನ ಲಗ್ನ ಮಾಡಿಕೊಂಡೆ. ಎಂಜಲು–ಎಂಜಲು ಅಂತ ಹಾರಾಡಿ, ಎಂಜಲಿನ ಮ್ಯಾಲೆ ಕಾಲಿಟ್ಟೆ. ನನ್ನನ್ನು ಒಲಿದುಬಂದ ಆ ರಂಭೆಯನ್ನು ಕಟ್ಟಿಕೊಂಡಿದ್ದರ, ಇಂದು ನನಗ ಈ ಗತಿ ಬರತಿರಲಿಲ್ಲ—ಚಿನ್ನದಂತಹ

ಊರು ಬಿಟ್ಟು ಬರಬೇಕಾಗ್ತಿರಲಿಲ್ಲ—ಈ ಕಲ್ಲುನೆಲದ ಮೇಲೆ ಹೀಗೆ ಉರುಳಾಡೊ ಗತಿ ಬರತಿರಲಿಲ್ಲ—ನನ್ನ ಮುದ್ದು ಮಗನಿಂದ ಈ ರೀತಿ ದೂರ ಇರಬೇಕಾಗತಿರಲಿಲ್ಲ. ಒಟ್ಟಿನಲ್ಲಿ ಅವಳಿಂದಲೇ ನನಗ ಈ ದುರ್ಗತಿ ಬಂತು. ಅವಳನ್ನು ಹೊಡೆದರೂ, ಕೊಂದರೂ ಪಾಪ ಬರಾಣಿಲ್ಲ"—ಎಂದೆಲ್ಲ ಯೋಚಿಸುತ್ತಾ, ಆವೇಶದಿಂದ ಹಣೆ ಬಡೆದುಕೊಂಡ. ಅಂದು ಅವನಿಗೆ ಊಟಕೂಡ ರುಚಿಸಲಿಲ್ಲ. ಹೆಂಡತಿಯ ಮೇಲಿನ ಸಿಟ್ಟು, ಅವನ ಅಣು-ಅಣುವನ್ನು ತುಂಬಿಕೊಂಡಿತ್ತು.

ರಾತ್ರಿಯಾಯಿತು. ಹುಚ್ಚನಂತಾಗಿದ್ದ ಪುಲ್ಲಯ್ಯ, ಬೋನಿನಲ್ಲಿ ಬಿದ್ದ ಹುಲಿಯಂತೆ ಪರದಾಡುತ್ತಿದ್ದ. ಒಂದೊಂದು ಸಲ, ತನ್ನ ಆಲೋಚನೆಗಳಿಗೆ ತಕ್ಕಂತೆ ಕೈ ಆಡಿಸುತ್ತಿದ್ದ, ಕಾಲು ಅಪ್ಪಳಿಸುತ್ತಿದ್ದ. ಆಗಾಗ, ತನ್ನಷ್ಟಕ್ಕೆ ತಾನೆ ಗಟ್ಟಿಯಾಗಿ ಮಾತನಾಡಿಕೊಳ್ಳುತ್ತಿದ್ದ. ಆವೇಶದಿಂದ ಕಬ್ಬಿಣದ ಸರಳುಗಳನ್ನು ಕಿತ್ತಲು ಹವಣಿಸಿದ.

ಅವನ ಈ ಹುಚ್ಚಾಟಗಳನ್ನು ಗಮನಿಸುತ್ತ ಕುಳಿತಿದ್ದ ಆ ಕೋಠಡಿಯಲ್ಲಿನ ಮತ್ತೊಬ್ಬ ಕೈದಿ, "ಯಾಕ ಏನಾಯಿತು? ಇಷ್ಟು ಯಾಕ ಚಡಪಡಸ್ತಿ?"—ಎಂದು ಕೇಳಿದ.

"ಆಗಲಿಕ್ಕೆ ಉಳಿದದೇನು? ಎಲ್ಲಾ ಅವಳು ಹಾಳುಮಾಡಿಬಿಟ್ಟಳು. ಈ ಬಾಗಿಲು ತಗೀಲಿಕ್ಕೆ ಬಂದರ, ಸೀದಾ ಹೋಗಿ, ಅವಳ ಕುತ್ತಿಗಿ ಹಿಚಕ್ತೀನಿ ಅತು......"

"ಯಾರ ಕುತ್ತಿಗಿ ಹಿಚಕ್ತೀ—ಯಾರು ಆಕಿ......?"

"ಆಕೀನs...... ಆ ನಾಚಿಕೆ ಇಲ್ಲದವಳು...... ಆಕಿ ನನ್ನ ಹೆಣ್ತಿ ಅಂತ ಹೇಳಲಿಕ್ಕೆ ನನಗs ನಾಚಿಕಿ ಆಗ್ತದ. ಊರಿಗೆ ಊರೆ ಬ್ಯಾಡ ಬ್ಯಾಡ ಅಂತಿರಲಿಕ್ಕೆ, ಹಠಮಾಡಿ, ಆ ಗತಿ ಇಲ್ಲದವಳ ಕೈಹಿಡಿದೆ. ಈಗ, ಆಕೀನs ನನ್ನ ವಿರುದ್ಧ ಸಾಕ್ಷಿ ಹೇಳಿದಳು......" ಎಂದು ಹೇಳುತ್ತಿದ್ದಂತೆ, ಪುಲ್ಲಯ್ಯನ ಸಿಟ್ಟು ದುಃಖದಲ್ಲಿ ಮಾರ್ಪಾಟ್ಟು, ಅವನ ಕಣ್ಣುಗಳಿಂದ ನೀರು ಹರಿಯಿತು—"ನನ್ನ ಮಲ್ಲೇಶಿನ್ನ, ನನ್ನ ಮಗನ್ನ ನೋಡ್ಲಕ್ಕೆ ಕೂಡ ಬಿಡಲಿಲ್ಲ ಅವಳು...... ನಾನು ಹೀಂಗs ಅವನಿಗಾಗಿ ಹಲುಬಿ ಸಾಯ್ತೀನೊ ಏನೊ?" —ಎಂದು ಗೋಳಿಟ್ಟ.

ಪುಲ್ಲಯ್ಯ ಬಿಕ್ಕಿಬಿಕ್ಕಿ ಅಳತೊಡಗಿದಾಗ, ಅವನ ಜೊತೆಗಿದ್ದ ಆ ಮತ್ತೊಬ್ಬ ಕೈದಿ, ಅವನ ಬೆನ್ನಿನ ಮೇಲೆ ಕೈಯಾಡಿಸಿ, ಅವನನ್ನು ಸಮಾಧಾನಪಡಿಸಿ, ಹಿಂದಕ್ಕೆ ಕರೆದೊಯ್ದು ಮಲಗಿಸಿದ. ಆ ವೇಳೆಗೆ ಸಾಕಷ್ಟು ಆಯಾಸಗೊಂಡಿದ್ದ ಪುಲ್ಲಯ್ಯ, ಸಾಂತ್ವನಗೊಂಡು ಕಣ್ಣುಮುಚ್ಚಿದ. ಅವನು ಹಾಗೆ ಕಣ್ಣುಮುಚ್ಚಿದಾಗ, ಅವನ ಪಟಲದ ಮೇಲೆ, ನ್ಯಾಯಾಲಯ, ಹೆಂಡತಿ, ಮಗ—ಎಲ್ಲವೂ ಸುಳಿದುಹೋದವು. ಕಣ್ಣು ತೆರೆದು ನೋಡಿದ. ಜೈಲಿನ ಜವಾನ, ಅತ್ತಿಂದಿತ್ತ ಗಸ್ತು ತಿರುಗುತ್ತಿದ್ದ. ಜೈಲಿನ ಹೊರಗಡೆ ಇದ್ದ ದೀಪದ ಬೆಳಕು ಕೋಠಡಿಯ ಒಳಗೂ ಬಿದ್ದಿತ್ತು. ಮಂದವಾದ ಆ ಬೆಳಕಿನಲ್ಲಿ, ಪುಲ್ಲಯ್ಯ ತನ್ನನ್ನು ಸಮಾಧಾನಪಡಿಸಿದ ವ್ಯಕ್ತಿಯನ್ನು ದಿಟ್ಟಿಸಿ ನೋಡಿದ.

ಒಂದು ನಿಮಿಷ ಅವನು ದಂಗಾದ. ಅರೆ, ಆ ಹುಚ್ಚ ಇಲ್ಲಿಗೆ ಹ್ಯಾಂಗ ಬಂದ—

ಎಂದು ಆಶ್ಚರಿಪಟ್ಟ. ಇವನು ಅದೇ ಹುಚ್ಚನಿರಬಹುದೆ? ಅಲ್ಲ, ಅಲ್ಲ...... ಹಾಗಾದರೆ ಈತ ಯಾರು? ರಾಮದಾಸುವಿನ ಹಾಗಿದ್ದಾನಲ್ಲಾ...... ಆದರೆ ರಾಮದಾಸು ಸತ್ತು ಮಣ್ಣಲ್ಲಿ ಲೀನವಾಗಿ ಅದೆಷ್ಟೋ ವರ್ಷಗಳು ಉರುಳಿವೆಯಲ್ಲ...... ಆತ ಹ್ಯಾಂಗ ಬಂದಾನು......? ಅಂದರ, ಈತ ಆ ಹುಚ್ಚನss ಇರಬೇಕು. ಆದರ...... ಆ ಹುಚ್ಚನ್ನ ಇಲ್ಲಿ ಈ ಜೇಲಿನೊಳಗ ಹ್ಯಾಂಗ ಬಿಟ್ಟಾರು?......ಈತ ಇವತ್ತು ಮುಂಜಾನಂತೂ ಈ ಖೋಲಿಯೊಳಗ ಇರಲಿಲ್ಲ...... ಈಗ ಹ್ಯಾಂಗ ಬಂದ? ಯಾರಿರಬಹುದು ಈತ?

"ಏನಪಾ, ದುಃಖ ಕಡಿಮಿ ಆಯ್ತ?"—ಎಂದು ಆತ ಸಾವಧಾನವಾಗಿ ಕೇಳಿದಾಗ, ಪುಲ್ಲಯ್ಯ ಹೂಂಗುಟ್ಟಿದ.

ರಾತ್ರಿ ಸಾಕಷ್ಟು ಹೊತ್ತಾಗಿದ್ದರೂ ಪುಲ್ಲಯ್ಯನಿಗೆ ನಿದ್ದೆ ಬಂದಿರಲಿಲ್ಲ. ಆತನ ಜೊತೆಗಿದ್ದ ಕೈದಿಗೂ ಸಹ ನಿದ್ದೆ ಬಂದಿರಲಿಲ್ಲ. ಆ ಕೈದಿಯೆ, "ನಿದ್ದಿ ಬಂದಿಲ್ಲೇನಪಾ?" —ಎಂದು ಕೇಳಿದ.

ಆತನ ಧ್ವನಿ ಕೇಳಿ, ಪುಲ್ಲಯ್ಯನ ಮೈ ಜುಂ—ಅಂದಿತು. ಆ ಧ್ವನಿಯನ್ನು ಎಲ್ಲೋ ಕೇಳಿದಂತೆ ಭಾಸವಾಯಿತು. ಆತನ ಆ ಧ್ವನಿ ಪುಲ್ಲಯ್ಯನ ಹೃದಯದಲ್ಲಿನ ತುಮುಲವನ್ನು ಶಮನಗೊಳಿಸಿತು.

ಸ್ವಲ್ಪ ಹೊತ್ತಾದ ಮೇಲೆ ಪುಲ್ಲಯ್ಯ ಎದ್ದು ಕುಳಿತಾಗ, ಆತನೂ ಎದ್ದು ಕುಳಿತು, "ನಿನಗ ಈ ಗತಿ ಯಾಕ ಬಂತಪ?"—ಎಂದು ಕೇಳಿದ. ಪುಲ್ಲಯ್ಯನಿಗೆ, ತನ್ನ ಜೀವನದ ಹೊತ್ತಿಗೆಯನ್ನು ಆತನ ಮುಂದೆ ಬಿಚ್ಚಿಡುವ ಆಸೆ ತಲೆದೋರಿತು. ತಾನು ಯಾರೆಂಬುದನ್ನು ಅರಿಯದ, ತನ್ನ ಮುಖಪರಿಚಯವನ್ನೂ ಸಹ ಹೊಂದಿರದ ಆ ವ್ಯಕ್ತಿಯ ಮುಂದೆ, ತನ್ನ ದುಃಖವನ್ನು ತೋಡಿಕೊಳ್ಳಬೇಕೆಂದೆನಿಸಿತು. ಪುಲ್ಲಯ್ಯ, ಯಾವ ಅಳುಕೂ ಇಲ್ಲದೆ, ತನ್ನ ಜೀವನದಲ್ಲಿ ಆಗಿಹೋದ ಎಲ್ಲಾ ಘಟನೆಗಳನ್ನೂ ಹೇಳಿ, ಕೊನೆಗೆ ತನ್ನ ದುಃಸ್ಥಿತಿಯನ್ನು ವಿವರಿಸಿದ. ಆತ, ಅದನ್ನೆಲ್ಲಾ ಕೇಳಿ ನಿಟ್ಟುಸಿರು ಬಿಟ್ಟ ಅಷ್ಟೆ. ಆದರೆ, ಯಾವ ಮಾತನ್ನೂ ಆಡಲಿಲ್ಲ. ಕೊನೆಗೆ, "ಈಗ ರಾತ್ರಿ ಬಹಳ ಆಗ್ಯಾದ. ನೀನೂ ಆಯಾಸಗೊಂಡಿದಿ, ಮಲಗಿಕೊ"—ಎಂದು ಹೇಳಿ ತನ್ನ ಹಾಸಿಗೆಯ ಮೇಲೆ ಉರುಳಿಕೊಂಡ.

ಬೆಳಕು ಹರಿಯುವುದಕ್ಕೆ ಮುಂಚೆಯೇ ಪುಲ್ಲಯ್ಯನಿಗೆ ಎಚ್ಚರವಾಯಿತು. ಅವನು ಎದ್ದು ಕುಳಿತು ಸುತ್ತಲೂ ನೋಡಿದ. ರಾತ್ರಿ, ತನ್ನ ಕಷ್ಟಸುಖಗಳನ್ನು ವಿಚಾರಿಸಿದ ಆ ವ್ಯಕ್ತಿ, ಚಕ್ಕಳ—ಮುಕ್ಕಳ ಹಾಕಿಕೊಂಡು, ಯಾವುದೊ ಧ್ಯಾನದಲ್ಲಿರುವಂತೆ ಕಣ್ಣು ಮುಚ್ಚಿ ಕುಳಿತಿದ್ದ. ಆತ ಹಾಗೆ ಕುಳಿತದ್ದನ್ನು ನೋಡಿ, ಪುಲ್ಲಯ್ಯನಿಗೆ, ನೀಲಮ್ಮಳ ಗುಡಿಯಲ್ಲಿ ದೇವಿಯ ಧ್ಯಾನ ಮಾಡುತ್ತಿದ್ದ ರಾಮದಾಸುವಿನ ನೆನಪಾಯಿತು. ಪುಲ್ಲಯ್ಯ ಅದನ್ನೆ ಆಲೋಚಿಸುತ್ತಾ ಕುಳಿತಿದ್ದಾಗ, ಆತ "ಎಚ್ಚರಾತೇನಪಾ?"—ಎಂದು ಕೇಳಿದ.

ಪುಲ್ಲಯ್ಯ, ಎದ್ದು ಆತನ ಬಳಿ ಹೋಗಿ ಕುಳಿತ. ಆ ಕತ್ತಲೆಯಲ್ಲಿ ಆತನ ಮುಖ ಸ್ಪಷ್ಟ ವಾಗಿ ಕಾಣಲಿಲ್ಲವಾದರೂ, ಆತನ ಮುಖದ ಮೇಲೆ ಒಂದು ತೆರನಾದ ತೇಜಸ್ಸು ಇದ್ದುದನ್ನು ಪುಲ್ಲಯ್ಯ ಗಮನಿಸಿದ.

ಆತ ವಾತ್ಸಲ್ಯದಿಂದ ಪುಲ್ಲಯ್ಯನ ಬೆನ್ನಿನ ಮೇಲೆ ಕೈ ಆಡಿಸುತ್ತಾ—"ಒಂದು ಕಾಲ ದಾಗ, ನನಗೂ ಕೂಡ, ನಿನ್ನ ಹಾಂಗ ಆಗಿತ್ತು. ನಾನೂ, ನನ್ನ ಸಂಗಡಿಗರನ್ನ ನನ್ನವರನ್ನ ಅಸಹ್ಯವಾಗಿ ಕಾಣತಿದ್ದೆ. ಆಗ, ನನಗ, ನನ್ನದು ಅಂಬೋ ಸಂಪತ್ತು ಇತ್ತು. ಆದರ, ಮನುಷ್ಯನ ಹಾಂಗ ನಾನು ಬದುಕು ನಡಸಲಿಲ್ಲ. ಮನುಷ್ಯನಾಗಿ ಉಳೀಲಿಕ್ಕೆ ಕೈಲಾ ಗದ—ಈ ಜೈಲಿನ್ಯಾಗ ಬಂದು ಬಿದ್ದೆ. ಈಗ ನನ್ನದೂ ಅಂಬೋದು, ನನ್ನ ಹತ್ತಿರ ಏನೇನೂ ಇಲ್ಲ. ಆದರೂ, ಮನುಷ್ಯನಾಗಿ, ಮನುಷ್ಯರ ಜೊತೆ ಮುಂದಿನ ಬಾಳುವೆ ನಡೆಸಲು ನಾನು ಇಲ್ಲಿಂದ ಹೋಗ್ತೀನಿ. ಈ ಗಾಳಿ, ನೀರು, ಬೆಳಕು—ಮುಂತಾದ ಪಂಚಭೂತಗಳು ತಮ್ಮ ಧರ್ಮವನ್ನು ಪಾಲಿಸಿಕೊಂಡು ಬರುತ್ತಿರುವಾಗ, ಈ ಪಂಚ ಭೂತಗಳಿಂದ ಕೂಡಿದ ಮನುಷ್ಯರಾದ ನಾವು, ನಮ್ಮ ಧರ್ಮ ಪಾಲಿಸಿಕೊಂಡು ಬರ ದಿದ್ದರ ಅನ್ಯಾಯ ಆಗ್ತದ...... ನಿನಗ ಯಾರೂ ಮೋಸ ಮಾಡಿಲ್ಲ—ಸುಳ್ಳು ಆಡಿ, ನಿನಗ ನೀನss ಮೋಸಮಾಡಿಕೊಂಡಿ—ಆದದ್ದು ಆಯ್ತು. ಈಗ ಏನss ಆಗಲಿ, ಯಾವ ಪರಿಸ್ಥಿತಿನೇ ಬರಲಿ, ಧೈರ್ಯವಾಗಿರು."

"ಸತ್ಯವನ್ನು ಮರೆಮಾಚದೆ, ಇದ್ದುದನ್ನು ಇದ್ದಂತೆ ಹೇಳುವ ಧೈರ್ಯವುಳ್ಳ ಹೆಣ್ಣು ನಿನ್ನ ಹೆಂಡತಿ—ಎಂಬೊ ಗರ್ವ ನಿನಗಿಲ್ಲ. ಧೈರ್ಯದಿಂದ, ಕಳ್ಳರನ್ನು ಹಿಡಿದುಕೊಟ್ಟವ ನಿನ್ನ ಮಗ ಅಂದರ ನಿನಗ ಹೆಮ್ಮೆ ಆಗೋದಿಲ್ಲ?...... ಈ ವಿಷಯದಾಗ ನಿನಗಿಂತ ಅದೃಷ್ಟವಂತರು ಯಾರೂ ಇಲ್ಲ...... ಈ ಜನ್ಮದೊಡನೆ ಎಲ್ಲಾ ಮುಗಿದು ಹೋಯಿತು ಅಂದುಕೊಳ್ಳಬ್ಯಾಡ. ಮನುಷ್ಯರಾದವರು ಮುಕ್ತಿ ಪಡೆಯಲಿಕ್ಕೆ, ಅದೆಷ್ಟು ಜನ್ಮ ತಳೆಯಬೇಕಾಗ್ತದೊ ಏನೊ......? ಒಂದು ಕಡ್ಡಿಯಿಂದ, ಚಕ್ರ ತಯಾರಿಸಲಿಕ್ಕೆ ಆಗಾಣಿಲ್ಲ. ಚಕ್ರ ತಯಾರಾಗಿ, ಉರುಳಿಕೊಂಡು ರಸ್ತೆ ಸೇರಬೇಕಾದರ, ಅದೆಷ್ಟು ಜನ್ಮ ಬೇಕೊ ಏನೊ......? ನೀನು ಈಗ ಜೈಲು ಸೇರಿದಿ ಆಯ್ತು. ಮುಂದ ಅವರ ಗತಿ ಏನು ಅಂಬೋದು ನೀನು ಮೊದಲೇ ಯೋಚಿಸಲಿಲ್ಲ......ಆಯ್ತು. ಈಗ ಆ ತಾಯಿಯನ್ನು, ಆ ಸಾಧ್ವಿಯನ್ನು ಅವಳ ಧರ್ಮ ರಕ್ಷಿಸ್ತದ...... ಆಕಿ ಯಾವ ಪಾಪನೂ ಮಾಡಿಲ್ಲ......" ಎಂದು ಹೇಳಿ, ಆತ ಎದ್ದು ಹೋದ.

ಅದೇ ಹೊತ್ತಿಗೆ ಜೈಲಿನ ಕೊಠಡಿಯ ಬಾಗಿಲು ತೆರೆದದ್ದರಿಂದ, ಆತ ಹೊರಗೆ ನಡೆದ. ಪುಲ್ಲಯ್ಯ ಮಾತ್ರ, ಕುಳಿತ ಸ್ಥಳದಿಂದ ಏಳಲಿಲ್ಲ. ಬೆಳಗಾಯಿತು. ದಿನನಿತ್ಯದ ಕೆಲಸ ಗಳು ಪ್ರಾರಂಭವಾದವು. ಆದರೆ ಪುಲ್ಲಯ್ಯ ಮಾತ್ರ ಇನ್ನೂ ಯೋಚನೆಗಳಲ್ಲಿ ಮುಳುಗಿದ್ದ. ರಾತ್ರಿ ಸರಿಯಾಗಿ ನಿದ್ದೆ ಮಾಡಿರಲಿಲ್ಲವಾದ್ದರಿಂದ, ಕಣ್ಣುಗಳು ಕೆಂಪಾ ಗಿದ್ದವು. ಆದಾಗ್ಯೂ, ಜೈಲಿನ ಅಧಿಕಾರಿಗಳು ಹೇಳಿದ ಕೆಲಸಗಳನ್ನು ಮಾಡುತ್ತಲೇ ಇದ್ದ.

ಆ ಕೆಲಸಕಾರ್ಯಗಳನ್ನು ಮಾಡುತ್ತಿದ್ದಾಗಲೂ ಆ ವ್ಯಕ್ತಿ ಹೇಳಿದ ಮಾತುಗಳು, ಪದೆಪದೆ ಅವನ ಜ್ಞಾಪಕಕ್ಕೆ ಬರುತ್ತಿದ್ದವು.

ಪುಲ್ಲಯ್ಯ, ಮಧ್ಯಾಹ್ನ ಜೈಲಿನಲ್ಲಿನ ತನ್ನ ಕೊಠಡಿಗೆ ಹಿಂದಿರುಗಿದಾಗ, ಆ ವ್ಯಕ್ತಿ ಆಗಲೇ ಹೊರಟುಹೋಗಿದ್ದ. ಆತ ಮತ್ತೆ ಬರಬಹುದು—ಆತನನ್ನು ಸರಿಯಾಗಿ ನೋಡಬಹುದು—ಎಂದು ಪುಲ್ಲಯ್ಯ ಕಾದಿದ್ದ. ಆದರೆ ಆತ ಬರಲೇ ಇಲ್ಲ. ಬೆಳಿಗ್ಗೆಯೆ ಆತನನ್ನು ಬಿಡುಗಡೆ ಮಾಡಲಾಯಿತೆಂದು ಜವಾನ ಹೇಳಿದಾಗ, ಪುಲ್ಲಯ್ಯ ತುಂಬ ನೊಂದುಕೊಂಡ.

ಸಂಜೆಯಾದರೂ, ಪುಲ್ಲಯ್ಯ ಇನ್ನೂ ಮಂಕು–ಮಂಕಾಗಿಯೇ ಇದ್ದ. ಕತ್ತಲಾಗುತ್ತಿದ್ದಂತೆಯೇ ಬಿರುಗಾಳಿ ಎದ್ದಿತು. ಕಸ–ಕಡ್ಡಿ—ಎಲ್ಲವೂ ಗಾಳಿಯಲ್ಲಿ ತೂರಿಕೊಂಡು ಹೋದವು. ಉತ್ತರದಿಕ್ಕಿನಲ್ಲಿದ್ದ ಕರಿಯ ಮೋಡಗಳೂ ಸಹ, ಗಾಳಿಯಲ್ಲಿ ತೇಲಿಕೊಂಡು ಹೋದವು. ಗಾಳಿ ನಿಂತಾಗ, ಆಕಾಶ ನೀಲಿಯಾಗಿತ್ತು.

ಪುಲ್ಲಯ್ಯ, ತನ್ನ ಜೀವನ ನಡೆದುಬಂದ ದಾರಿಯನ್ನು ಕುರಿತು ಯೋಚಿಸುತ್ತಿದ್ದ ...... ಮದುವೆ...... ಮದುವೆಗೆ ಮುಂಚೆ ತನ್ನ ಮಗ ಹೇಗಿರಬೇಕೆಂದು ಕನಸು ಕಂಡದ್ದು...... ತನ್ನ ಮಗ ದೊಡ್ಡವನಾದ ಮೇಲೆ, ತನ್ನಂತೆಯೇ ಗಿರಿಜಾಮೀಸೆ ಬಿಟ್ಟು ಮೆರೆಯಬೇಕು...... ನಾಲ್ಕು ಜನರಲ್ಲಿ ಧೈರ್ಯವಂತನೆನ್ನಿಸಿಕೊಳ್ಳಬೇಕು...... ......ಅವನನ್ನು, ಗರಡಿಯಲ್ಲಿ ಸಾಮುಮಾಡಿಸಿ ಜಟ್ಟಿಯನ್ನಾಗಿ ಮಾಡಬೇಕು...... ಕೊಟ್ಟ ಮಾತನ್ನು ದಿಟ್ಟತನದಿಂದ ಪಾಲಿಸಿಕೊಂಡು ಬರುವಂತೆ ಮಾಡಬೇಕು...... ಕಳ್ಳರನ್ನು ಹಿಡಿಯುವ ಸರದಾರನನ್ನಾಗಿ ತರಬೇತಿಗೊಳಿಸಬೇಕು...... ನನ್ನ ಮಗ ಕಳ್ಳರನ್ನು ಹಿಡಿಯುವ ಗಂಡುಗಲಿ ಆಗಬೇಕು...... ಹೌದು, ನನ್ನ ಮಗ ಕಳ್ಳರನ್ನು ಹಿಡಿದು ಗಂಡುಗಲಿ ಆಗ್ತಾನ...... ಅವತ್ತು, ಆತ ಭವಿಷ್ಯ ಹೇಳಿದ್ದ, ನನ್ನ ಮಗ ಕೋಟಿ ಜನರೊಳಗ ಒಬ್ಬನಾಗಿ ಕೀರ್ತಿ ಪಡಿತಾನಂತ,...... ಹೌದು ನನ್ನ ಮಗ ಕೋಟಿ ಜನರೊಳಗ ಒಂದು ರತ್ನ ಆಗ್ತಾನ...... ನಾನು ಅಂದುಕೊಂಡದ್ದು ಆಗ್ಲದ...... ನನ್ನ ಮಗ, ನನ್ನ ಮಲ್ಲೇಶಿ, ಸತ್ಯಸಂಧನಾಗಿ, ಸತ್ಯವನ್ನೇ ಹೇಳ್ತಾನ...... ಇನ್ನು ನಾನು ದುಃಖಪಡಬೇಕಾಗಿಲ್ಲ...... ನನಗ ಯಾವ ದುಃಖಾನೂ ಇಲ್ಲ......

ಮಗನ ಬಗ್ಗೆ ಹೀಗೆ ಯೋಚಿಸುತ್ತಿರುವಾಗಲೇ, ಹೆಂಡತಿಯ ರೂಪ ಕಣ್ಣಿನ ಮುಂದೆ ಸುಳಿಯಿತು. ಮುಗ್ಧವಾದ ಮುಖ...... ನ್ಯಾಯಾಲಯದ ಕಟಾಂಜನದಲ್ಲಿ ನಿಂತುಕೊಂಡು, ಸ್ವಲ್ಪವೂ ಹೆದರದೆ, ಕಂಗಾಲಾಗದೆ, ಇದ್ದುದನ್ನು ಇದ್ದಂತೆ ಹೇಳಿದಾಗಿನ ಅವಳ ಮುಖದ ಮೇಲಿನ ವರ್ಚಸ್ಸು...... ಆ ತೇಜಸ್ಸು...... ಆ ಮುಂಚೆ ಎಲ್ಲಿಯೊ ನೋಡಿದಂತೆ ಪುಲ್ಲಯ್ಯನಿಗೆ ಭಾಸವಾಯಿತು. ಆಕೆಯ ಮುಖದ ಮೇಲಿನ ಆ ಪವಿತ್ರ ತೇಜಸ್ಸನ್ನು ನೋಡಲಾಗದೆ, ಆಗ ಆತ ತಲೆಕೆಳಗೆ ಹಾಕಿದ್ದ. ಆಗ ಆತನಿಗೆ ತಲೆ ಎತ್ತಲೂ ಸಹ ನಾಚಿಕೆಯಾಗಿತ್ತು.

ಅಂದು, ರಾತ್ರಿ, ಎಲ್ಲರೊಡನೆ ಊಟಕ್ಕೆ ಕುಳಿತಾಗ, ತುತ್ತು ಗಂಟಲಿನಲ್ಲಿ ಇಳಿಯಲಿಲ್ಲ. ಅನ್ನ ಕಲೆಸುತ್ತಿದ್ದನಾದರೂ, ಮನಸ್ಸು, ಹೆಂಡತಿ–ಮಕ್ಕಳ ಬಗ್ಗೆ ಯೋಚಿಸುತ್ತಿತ್ತು. ಬಲವಂತದಿಂದ ತುತ್ತು ನುಂಗುತ್ತಿದ್ದನಾದರೂ, ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯತೊಡಗಿತ್ತು. ಅರ್ಧಕ್ಕೆ ಊಟ ಬಿಟ್ಟು ಎದ್ದುಬಂದ.

ಪುಲ್ಲಯ್ಯ, ರಾತ್ರಿ ಎಲ್ಲಾ ಹಾಸಿಗೆಯ ಮೇಲೆ ಹೊರಳಾಡುತ್ತಲೇ ಇದ್ದ. "ನನ್ನ ಹೆಂಡತಿ—ನನ್ನ ಮಗ, ಸುಳ್ಳು ಹೇಳದ, ನಿಜವನ್ನೆ ಹೇಳಿದರು. ಅದಕ್ಕs ಇರಬಹುದು, ಆ ಮನೆಯ ಯಜಮಾನ ಅಷ್ಟು ಪೆಟ್ಟಾದರೂ ಬದುಕಿ ಉಳಿದ...... ನಾನು ಕೆಟ್ಟವನಾದೆ...... ಕೆಟ್ಟವರ ಸಂಗ ಮಾಡಿ, ಕೆಟ್ಟುದನ್ನೆಲ್ಲಾ ಕಲಿತೆ...... ನಾನೇ ಬದಲಾದೆ. ಈಗ ನಾನು, ನನ್ನ ಹೆಂಡತಿ–ಮಕ್ಕಳಿಗೆ ಸರಿಸಾಟಿಯಾಗಿ ನಿಲ್ಲಲಾರೆ. ನನಗೆ, ಈ ಜೇಲೆ ಗುಣ. ನನ್ನ ಹೆಣ್ತಿ—ನನ್ನ ಮಗ, ನನಗ ಯಾವುದು ಒಳ್ಳೆಯದೊ ಅದನ್ನೇ ಮಾಡಿದರು. ನಾನು ಇಲ್ಲಿಯವರ ಹಾಂಗ, ಯಾವುದಾದರೂ ಕೆಲಸ ಕಲೀತೀನಿ. ಇಲ್ಲಿಂದ ಬಿಡುಗಡೆ ಆದಮ್ಯಾಲೆ, ಮರ್ಯಾದೆಯಿಂದ ಬಾಳ್ತೀನಿ"—ಎಂದು ಪುಲ್ಲಯ್ಯ ತೀರ್ಮಾನಿಸಿದ.

ಪುಲ್ಲಯ್ಯನ ಮನಸ್ಸು ಒಂದು ಸ್ತಿಮಿತಕ್ಕೆ ಬಂತು. ಆತ ಹಾಗೆಯೇ ತಲೆ ಎತ್ತಿ ಆಕಾಶದತ್ತ ನೋಡಿದ. ಅಲ್ಲಿ, ಯಾರಯಾರದೊ ಪ್ರತಿಬಿಂಬಗಳು ಕಾಣಿಸಿದವು. ಸ್ವಲ್ಪ ಹೊತ್ತಿನ ನಂತರ, ಅವನ ಸ್ಮೃತಿಪಟಲದ ಮೇಲೆ, ಮತ್ತೆ ಅವನ ಮಗನ ಪ್ರತಿಬಿಂಬ ಮೂಡಿತು. ಅವನು ಹುಟ್ಟುವುದಕ್ಕೂ ಮುಂಚೆ ತನಗಿದ್ದ ಗರ್ವ...... ಅವನು ಹುಟ್ಟಿದಾಗ ತನಗಾದ ಸಂತೋಷ...... ಎಲ್ಲವನ್ನೂ ಸ್ಮರಿಸಿಕೊಂಡು, "ನನ್ನ ಮಗ ನನ್ನ ಹೆಸರು ನಮ್ಮ ಮನೆತನದ ಗೌರವ ಉಳಿಸಿದ"—ಎಂದುಕೊಂಡ. ನಿಮಿಷನಿಮಿಷಕ್ಕೆ ಮಗನನ್ನು ಎತ್ತಿ ಮುದ್ದಾಡುವ ಇಚ್ಛೆ ಉತ್ಕಟವಾಯಿತು. ಕೊನೆಗೆ, ಮನಸ್ಸಿನಲ್ಲೆ ಅವನನ್ನು ಎತ್ತಿಕೊಂಡು, ಕಲ್ಲುನೆಲಕ್ಕೆ ಮುತ್ತುಕೊಟ್ಟ...... ಅವನ ಕಣ್ಣುಗಳಿಂದ ಹರಿದ ನೀರು, ಕಲ್ಲುನೆಲದ ಮೇಲೆ ತೊಟ್ಟಿಕ್ಕಿತು.

ಸ್ವಲ್ಪ ಹೊತ್ತಿನ ನಂತರ, ರಾತ್ರಿಯ ಜವಾನ ಅತ್ತ ಬಂದಾಗ, ಪುಲ್ಲಯ್ಯ ಅವನನ್ನು ಕರೆದು, "ಬಂದರಿಗೆ ಹೋಗುವ ಹಾದಿ ಒಳಗ ನನ್ನ ಮನಿ ಅದ...... ಹೋಗಿ ನನ್ನ ಮಗನ್ನ ಕರಕೊಂಡು ಬಂದು ತೋರಸ್ತೀಯಾ? ದೇವರು ನಿನಗ ಒಳ್ಳೇದು ಮಾಡ್ತಾನ"—ಎಂದು ಅಂಗಲಾಚಿದ.

"ಏ ಇಲ್ಲದ್ದೊಂದು ಕೇಳಬ್ಯಾಡ. ಜೇಲರ್ ಸಾಹೇಬ್ರು ಏನಾರ ಬಂದ್ರ, ನಮ್ಮಿಬ್ಬರ ಜೀವಾನs ಹೋದೀತು. ಹೋಗಿ ಸುಮ್ಮನೆ ಮಲಗಿಕೊ"—ಎಂದು ಹೇಳಿ ಜವಾನ ಹೊರಟುಹೋದ.

ಪುಲ್ಲಯ್ಯ, ಕಬ್ಬಿಣದ ಆ ಸರಳುಗಳನ್ನು ಹಿಡಿದುಕೊಂಡು ದುಃಖಿಸುತ್ತಾ ಅಲ್ಲೆ ನಿಂತಿದ್ದ.

# [ 43 ]

ನೀಲಿ ನ್ಯಾಯಾಲಯವನ್ನು ತಲುಪುವ ವೇಳೆಗೆ ಬಿಸಿಲು ಮೇಲೇರಿತ್ತು. ನ್ಯಾಯಾಲಯದ ಆವರಣದಲ್ಲಿದ್ದ ಮರದ ಕೆಳಗೆ ಮಕ್ಕಳನ್ನು ಕೂಡಿಸಿಕೊಂಡು ಕುಳಿತಿದ್ದಳು. ನಡು ಮಧ್ಯಾಹ್ನವಾದರೂ, ನ್ಯಾಯಾಧೀಶರು ಅವಳನ್ನು ಕರೆಸಲಿಲ್ಲ.

ಹಸಿವು ಪೀಡಿಸುತ್ತಿತ್ತು. ಮಕ್ಕಳಿಗೆ ಏನು ಕೊಡಬೇಕೆಂಬ ಚಿಂತೆ ಅವಳನ್ನು ಕಾಡುತ್ತಿತ್ತು. ಇಂತಹುದರಲ್ಲಿ ಅವಳು ಬಸುರಿ ಬೇರೆ. ಬಸುರಿಯಿಂದ ಕೆಲಸವಾಗುವುದಿಲ್ಲವೆಂದು ಹೇಳಿ, ಅವಳು ಕೆಲಸ ಮಾಡುತ್ತಿದ್ದ ಮನೆಯ ಯಜಮಾನತಿ, ಅವಳನ್ನು ಕೆಲಸದಿಂದ ವಜಾ ಮಾಡಿದ್ದಳು. ಹಡೆದ ಮೇಲೆ, ನೀರು ಹಾಕಿಕೊಂಡು ಮತ್ತೆ ಕೆಲಸಕ್ಕೆ ಬಾ—ಎಂದು ಸ್ಪಷ್ಟವಾಗಿ ಹೇಳಿದ್ದಳು. ತನ್ನ ಬಸಿರು–ಬಾಣಂತನ ಮುಗಿಯುವವರೆಗೆ ಹೊಟ್ಟೆಯ ಗತಿ ಏನು? ಮಗನಾದರೂ ಕೈಗೆ ಬಂದಿದ್ದಲ್ಲಿ, ಅವನಾದರೂ ಗಳಿಸಿ ತರುವಂತಿದ್ದಲ್ಲಿ ದಿನಗಳನ್ನು ದೂಡಬಹುದಾಗಿತ್ತು. ಆದರೆ ಈಗ...... ಮುಂದೇನು ಎಂಬ ಪ್ರಶ್ನೆ ಅವಳನ್ನು ಕಾಡತೊಡಗಿತ್ತು. ಏನಾದರೂ ಕೆಲಸ ಮಾಡಬೇಕೆಂದರೂ ಕೈಲಾಗುತ್ತಿರಲಿಲ್ಲ. ರಾತ್ರಿ, ಬರೀ ನೀರು ಕುಡಿದು ಮಲಗಿದ್ದಳು. ಆದರಿಂದ ಮತ್ತಷ್ಟು ಆಯಾಸವಾಗಿತ್ತಾದರೂ, ಪ್ರಯಾಸದಿಂದ ನ್ಯಾಯಾಲಯಕ್ಕೆ ಬಂದಿದ್ದಳು. ಹಸಿದ ಹೊಟ್ಟೆ ಉರಿಯುವ ಬಿಸಿಲಿನಿಂದ ಕಣ್ಣು ತಿರುಗಲು ಪ್ರಾರಂಭವಾಗಿತ್ತು.

ಅದೇ ಸಮಯಕ್ಕೆ, ಆಪಾದಿತರನ್ನು ನ್ಯಾಯಾಲಯದಲ್ಲಿ ಹಾಜರುಪಡಿಸಿದರು. ನ್ಯಾಯಾಧೀಶರು ಏನನ್ನೆ ಆಗಲಿ ಕೇಳುವುದಕ್ಕೂ ಮುಂಚೆಯೇ, ಪುಲ್ಲಯ್ಯ, "ದ್ಯಾವ್ರ, ನಾನು ಇದ್ದದ್ದು ಇದ್ದಾಂಗ, ಖರೇ ಹೇಳ್ತೀನಿ. ನನ್ನ ಮ್ಯಾಲೆ ಕರುಣೆ ತೋರಿಸಿ ನನ್ನ ಒಂದು ಕೋರಿಕೆಯನ್ನು ಈಡೇರಸ್ರಿ. ನನ್ನ ಬೇಡಿಕೆ ಅಂತಹುದೇನೂ ದೊಡ್ಡದಲ್ಲ. ಹೊರಗ ನನ್ನ ಮಗ ಮಲ್ಲೇಶಿ ಕುಂತಿರಬೇಕು. ಅವನ್ನ ಎತ್ತಿಕೊಂಡು ತೃಪ್ತಿ ಆಗೋವರೆಗೂ ಮುದ್ದಾಡಲಿಕ್ಕೆ ನನಗ ಆಸ್ಪದ ಕೊಡ್ರಿ ಸಾಕು. ದೇವರು ನಿಮಗ ಒಳ್ಳೇದು ಮಾಡ್ತಾನ"—ಎಂದು ಬೇಡಿಕೊಂಡ.

ನ್ಯಾಯಾಧೀಶರು ಪುಲ್ಲಯ್ಯನ ಈ ಮನವಿಯನ್ನು ಒಪ್ಪಿಕೊಂಡರಾದರೂ, ಮೊದಲು ಕಳ್ಳತನಕ್ಕೆ ಸಂಬಂಧಪಟ್ಟ ವಿವರಗಳನ್ನು ಹೇಳುವಂತೆ ತಿಳಿಸಿದರು. ಪುಲ್ಲಯ್ಯ ಬೇರೆ ಸಮಯದಲ್ಲಾಗಿದ್ದರೆ, ತಾನು ಪಟ್ಟ ಬವಣೆಗಳನ್ನು, ತನಗಾದ ಅನ್ಯಾಯವನ್ನು—ಮೋಸವನ್ನು ವಿವರಿಸುತ್ತಿದ್ದ. ಆದರೆ, ಈಗ, ಮಗನನ್ನು ಎತ್ತಿಕೊಂಡು ಮುದ್ದಾಡಬೇಕೆಂಬ ಆತುರದಿಂದ, ನ್ಯಾಯಾಲಯಕ್ಕೆ ಬೇಕಾದ ನಿಜಸಂಗತಿಯನ್ನಷ್ಟೆ ಹೇಳಿದ.

"ಹರನಾಳಗಿ ಹಿಡಿದುಕೊಂಡು ಮುಂದಾಗಿ ಬಂಗಲೆ ಏರಿ ಹೋದವನು ನಾನs. ಆದರ, ಅಲ್ಲಿ, ಆ ಮನೆಯ ಯಜಮಾನ ಕೈಯಾಗ ಪಿಸ್ತೂಲು ಹಿಡಕೊಂಡು ಎದುರಾದ. ಆತ ನಮ್ಮ ಮ್ಯಾಲೆ ಎಲ್ಲಿ ಗುಂಡು ಹಾರಸ್ತಾನೊ—ಅಂಬೊ ಅಂಜಕೀಗೆ, ಅಲ್ಲೆ ಬಿದ್ದಿದ್ದ ಒಂದು ಕೋಲು ತೊಗೊಂಡು ಆತನ ತಲಿಮ್ಯಾಲೆ ಹೊಡದೆ. ಅಷ್ಟರಾಗ ಯಾರೋ ಕೂಗಿಕೊಂಡರು. ಎಲ್ಲಿ ಸಿಗಿಬೀಳ್ತಿವೊ ಎಂಬೊ ಹೆದರಿಕೆಗೆ, ಅಲ್ಲಿನ ಸಾಮಾನುಗಳಿಗೆ ಕೈಹಚ್ಚದ, ಒಂದು ಉಸುರಿಗೆ ಅಲ್ಲಿಂದ ಓಡಿ ಪಾರಾದ್ವೆ"—ಪುಲ್ಲಯ್ಯ ತಿಳಿಸಿದ.

"ಸರೆ, ನಿನ್ನ ಜೊತೀಗೆ ಕಳ್ಳತನಕ್ಕ ಬಂದವರು ಇವರs ಏನು?"—ಎಂದು ನ್ಯಾಯಾಧೀಶರು ಕೇಳಿದಾಗ ಮಾತ್ರ ಪುಲ್ಲಯ್ಯ ಯಾವ ಉತ್ತರವನ್ನೂ ಹೇಳಲಿಲ್ಲ.

ನ್ಯಾಯಾಧೀಶರು ಮತ್ತೆ ಅದೇ ಪ್ರಶ್ನೆಯನ್ನು ಕೇಳಿದಾಗ, "ಸಾಹೇಬ್ರ, ನನ್ನ ಕ್ಷಮಸ್ರಿ. ಆ ವಿಷಯ ಮಾತ್ರ ನನ್ನ ಕೇಳಬ್ಯಾಡ್ರಿ"—ಎಂದು ಅಂಗಲಾಚಿದ.

"ನೀನು ಯಾವುದನ್ನೂ ಮರೆಮಾಚದೆ, ಎಲ್ಲಾ ಸಂಗತಿಗಳನ್ನೂ ನಮಗ ತಿಳಿಸಬೇಕು. ಅಂದರ ನಾವು ನಿನ್ನ ಕೋರಿಕೆ ಈಡೇರಿಸಬಹುದು"—ಎಂದು ನ್ಯಾಯಾಧೀಶರು ಖಂಡಿತ ವಾಗಿ ಹೇಳಿದಾಗ, ಪುಲ್ಲಯ್ಯ ತಲೆ ಕೆಳಗೆ ಹಾಕಿಕೊಂಡು ನಿಂತ. ಅವನು ಮನಸ್ಸು ಸಣ್ಣದು ಮಾಡಿಕೊಂಡು ನಿಂತಿದ್ದಾಗ, ರಾಮಣ್ಣನ ಧ್ವನಿ ಕೇಳಿಸಿತು.

"ಸತ್ಯ ಸಂಗತಿ ಎಂದಾದರೂ ಹೊರಗ ಬೀಳ್ತದ ಸಾಹೇಬ್ರ. ನಾನು ಹೇಳ್ತೀನಿ. ಆ ಮನಿಗೆ ಕನ್ನಹಾಕಿದವರು ನಾವs ಮುವ್ವರು"—ಎಂದು ರಾಮಣ್ಣ ಹೇಳಿದಾಗ, ಪುಲ್ಲಯ್ಯನಿಗೆ ಆತನ ಮೇಲೆ ಎಲ್ಲಿಲ್ಲದ ಅಭಿಮಾನ ತಲೆದೋರಿ, ಹೆಮ್ಮೆಯಿಂದ ಆತ ನನ್ನು ನೋಡಿದ. ಅಮಾಯಕನಾದ ರಾಮಣ್ಣ ಜೀವನದಲ್ಲಿ ಪಟ್ಟ ಕಷ್ಟಗಳನ್ನು ಅನುಭವಿಸಿದ ನಷ್ಟಗಳನ್ನು ನೆನಸಿಕೊಂಡು, ಪುಲ್ಲಯ್ಯ ಆತನಿಗಾಗಿ ಮರುಗಿದ.

ಪೋಲೀಸ ಇನ್ಸ್‌ಪೆಕ್ಟರ್ ಮಲ್ಲೇಶಿಯನ್ನು ಕರೆತಂದಾಗ, ಮಲ್ಲೇಶಿ ತಂದೆಯನ್ನು ನೋಡಿ, ಆತನ ಬಳಿಗೆ ಓಡಿದ. ಪುಲ್ಲಯ್ಯ ಮಗನನ್ನು ಎತ್ತಿಕೊಂಡು ಮುದ್ದಾಡಿದ. ಮಲ್ಲೇಶಿ, "ಅಪ್ಪಾ...... ಅಪ್ಪಾ......" ಎಂದು ಸಂತೋಷದಿಂದ ಕೂಗುತ್ತಲೇ ಇದ್ದ.

ತಂದೆ–ಮಗನನ್ನು ಮನಸಾರ ಮುದ್ದಾಡಿದ. ಹಾಗೆ ಮುದ್ದಾಡುತ್ತಿದ್ದಾಗ ಆತನ ಕಣ್ಣುಗಳಿಂದ ದಳದಳನೆ ನೀರು ಹರಿಯತೊಡಗಿತ್ತು. "ನನ್ನಪ್ಪ...... ನನ್ನ ಮಗ...... ನನ್ನ ಮನೆತನದ ಗೌರವ ಉಳಿಸಿದಿ......" ಮುಂದೆ ಮಾತು ಹೊರಡಲಿಲ್ಲ. ಮಗನಿಗೆ ಏನೇನೊ ಹೇಳಬೇಕೆಂದುಕೊಂಡಿದ್ದ...... ಆದರೆ ದುಃಖ ಉಮ್ಮಳಿಸಿ ಬಂದು ಏನನ್ನೇ ಆಗಲಿ ಹೇಳಲಾಗಲಿಲ್ಲ. ತಂದೆ–ಮಗನ ಮಿಲನದ ಆ ದೃಶ್ಯ ನೋಡಿದವರ ಕಣ್ಣುಗಳಲ್ಲೂ ಸಹ ನೀರು ತರಿಸಿತು.

ಪುಲ್ಲಯ್ಯ, ಮಲ್ಲೇಶಿಯನ್ನು ಬಿಟ್ಟುಕೊಡಲೇ ಬೇಕಾಗಿತ್ತು. ಆದರೆ, ಮಲ್ಲೇಶಿ ತಂದೆಯಿಂದ ದೂರವಾಗಲು ನಿರಾಕರಿಸಿದ. ಪೋಲೀಸರು ಬಲವಂತದಿಂದ ಅವರನ್ನು ಅಗಲಿಸಿದಾಗ, ಮಲ್ಲೇಶಿ ದೊಡ್ಡ ಧ್ವನಿಯಲ್ಲಿ ಅಳಹತ್ತಿದ. ಮಗನ ಅಳು ಕೇಳಿ, ನೀಲಿ

ಕುತೂಹಲದಿಂದ ಒಳಬಂದಾಗ, ಕಣ್ಣಲ್ಲಿ ನೀರು ಸುರಿಸುತ್ತಾ ನಿಂತ ಗಂಡನ ಮುಖ ಕಾಣಿಸಿತು. ಗಂಡನ ದೀನವಾದ ಆ ಮುಖ ನೋಡಿ, ಆ ಸಮಯದಲ್ಲೂ ಸಹ ಅವಳಿಗೆ ಒಂದು ರೀತಿಯ ಸಂತೋಷವಾಯಿತು. ಆ ಮುಖದಲ್ಲಿ...... ಈ ಹಿಂದೆ ಇದ್ದ ಮುಗ್ಧತೆ ಮತ್ತೆ ಮನೆಮಾಡಿಕೊಂಡಿತ್ತು...... ಎಂದೋ ಅಳಿದುಹೋಗಿದ್ದ ಕಳೆ, ಮತ್ತೆ ಆ ಮುಖಕ್ಕೆ ಕಾಂತಿ ನೀಡಿತ್ತು...... ಗಂಡನ ಆ ಸೌಮ್ಯ ಮುಖವನ್ನು ನೋಡುತ್ತಾ, ನೀಲಿ ತನ್ನಹಸಿವನ್ನು ಮರೆತಳು. ಅಪ್ರಯತ್ನವಾಗಿ ಅವಳ ಕಣ್ಣು ಗಳಲ್ಲೂ ಸಹ ನೀರೂರಿತು—ಆ ಕ್ಷಣದಲ್ಲಿ, ಗತಿಸಿಹೋದ ದಿನಗಳು, ಮಸಕು-ಮಸಕಾಗಿ ಅವಳ ಕಣ್ಣುಗಳ ಮುಂದೆ ಸುಳಿದವು...... ಹುಣ್ಣಿಮೆಯ ರಾತ್ರಿ...... ಆತನ ಹಠ...... ಆ ಗಿರಿಜಾಮೀಸೆಗಳ ಮೇಲೆ ಕೈಯಾಡಿಸಿ...... ಅಮಾಯಕವಾದ, ಮುಗ್ಧವಾದ ಆ ಮುಖ...... ಅಂದು, ಮಗ ಹುಟ್ಟಿದಾಗ ಆ ಮುಖದ ಮೇಲೆ ಬೆಳಗಿದ ತೇಜಸ್ಸು...... ಆಯ್ತು. ಇನ್ನು ಮತ್ತೆ ಯಾವ ಕಾಲದಲ್ಲಿ ಈ ಗಂಡನನ್ನು ನೋಡುತ್ತೇನೊ ಏನೊ......

ಮಲ್ಲೇಶಿಯನ್ನು ಕರೆತಂದ ಇನ್ಸ್‌ಪೆಕ್ಟರ್ ಅವನನ್ನು ನೀಲಿಗೆ ಒಪ್ಪಿಸಿ, "ನಿನ್ನ ಗಂಡ ನಿಜ ಹೇಳಿ, ತನ್ನ ತಪ್ಪು ಒಪ್ಪಿಕೊಂಡಾನ. ಇನ್ನು ನೀನು ಇಲ್ಲಿಗೆ ಬರುವ ಅಗತ್ಯವಿಲ್ಲ"—ಎಂದು ಹೇಳಿದ.

ನೀಲಿ, ದೀನಳಾಗಿ, "ಸಾಹೇಬರ......" ಎಂದು ಏನೊ ಕೇಳಲು ಹೋದವಳು, ಮಾತು ಮರೆತಂತೆ ಸುಮ್ಮನಾಗಿಬಿಟ್ಟಳು. ಇನ್ಸ್‌ಪೆಕ್ಟರ್ ಅವಳ ಮನದ ಇಂಗಿತವನ್ನು ಅರಿತು—"ಮೂರು ನಾಲ್ಕು ತಿಂಗಳು ಜೈಲಿನ್ಯಾಗ ಇರಬೇಕಾಗ್ತದ—ಅದು ತಪ್ಪೊ ದಿಲ್ಲ"—ಎಂದು ಹೇಳಿದಾಗ, ನೀಲಿ ನಿಸ್ಸತ್ವವಾಗಿ, ನಿರ್ಜೀವವಾಗಿ ನಿಂತುಬಿಟ್ಟಳು.

ಮಲ್ಲೇಶಿಯ ಅಳುವಿನಿಂದ, ತನ್ನ ಭಾವಸಮಾಧಿಯಿಂದ ಎಚ್ಚೆತ್ತ ನೀಲಿ, ನಿಧಾನ ವಾಗಿ ಅಲ್ಲಿಂದ ಹೊರಬಂದಳು. ಅದೇ ವೇಳೆಗೆ, ಅಪರಾಧಿಗಳನ್ನು ಹೊರಗೆ ಕರೆತರ ಲಾಯಿತು. ಮಲ್ಲೇಶಿ ತನ್ನ ತಂದೆಯನ್ನು ನೋಡಿ, "ಅಮ್ಮಾ, ಅಪ್ಪನ್ನ ಕರಕೊಂಡು ಹೋಗ್ತಾರ ನೋಡು"—ಎಂದು ಒಂದೇ ಸಮನೆ ಕೂಗಿಕೊಳ್ಳತೊಡಗಿದ. ರಸ್ತೆಯಲ್ಲಿ ಹೋಗುತ್ತಿದ್ದ ಜನರು, ಅವನ ಕೂಗಾಟ ಕೇಳಿ, ತಮ್ಮತಮ್ಮಲ್ಲೇ ಮಾತಾಡಿಕೊಳ್ಳುತ್ತಾ ಮುಂದೆ ಹೋದರು.

ನೀಲಿ, ನಾಲ್ಕು ಹೆಜ್ಜೆ ಹೋಗುವುದರೊಳಗಾಗಿ ತೀರ ಬಳಲಿದಳು. ಸಂತೋಷ ದಿಂದ—ಗಂಡ ಮತ್ತೆ ಸನ್ಮಾರ್ಗದಲ್ಲಿ ನಡೆಯುವನೆಂಬ ಸಂತೋಷದಿಂದ—ತುಂಬಿದ್ದ ಹೊಟ್ಟೆ, ಈಗ ಖಾಲಿಯಾಗಿತ್ತು. ಹಸಿವು—ಬ್ರಹ್ಮಾಂಡವಾದ ಹಸಿವು—ಅವಳ ಶಕ್ತಿ ಯನ್ನು ಉಡುಗಿಸಿತ್ತು. ಕಣ್ಣುಗಳು ಕೆರಳಿ ಉರಿಯತೊಡಗಿದ್ದವು. ಆದರೂ ಮುಂದೆ ಹೋಗಲು ಪ್ರಯತ್ನಿಸಿದಳು. ಕೈಲಾಗದೆ ಜೋಲಿಹೋಗುತ್ತಿತ್ತಾದರೂ, ಹೇಗಾದರೂ ಮನೆಮುಟ್ಟಬೇಕೆಂದುಕೊಂಡಳು. ಇನ್ನೇನು ಮನೆ ಬಂದೇಬಿಟ್ಟಿತು...... ಮನೆ...... !

ಅದು ತನ್ನ ಮನೆಯೆ......? ಆ ಮನೆಗೆ ಹೋದೊಡನೆ, ಅವಳ ಕೈಯಲ್ಲಿ ಬಾಡಿಗೆಯ ದುಡ್ಡು ಹಾಕದಿದ್ದಲ್ಲಿ, ಅವಳು ಸುಮ್ಮನಿರುವಳೆ...... ಮನೆಯಿಂದ ಹೊರಹಾಕುವು ದಂತೂ ದಿಟ...... ಅಥವಾ...... ಈಗಾಗಲೇ ಆ ಮನೆಗೆ ಬೀಗ ಹಾಕಿದ್ದಾಳೊ ಏನೊ......? ಮತ್ತೆ ಆ ಮನೆಯಲ್ಲಿ ಕಾಲಿಡಲು ಅವಳು ಅವಕಾಶ ನೀಡಲಿಕ್ಕಿಲ್ಲ...... ಏನೆಲ್ಲ ಯೋಚನೆಗಳು ಅವಳನ್ನು ಕಾಡತೊಡಗಿದ್ದವು.

ಆಗಲೆ ಸಂಜೆಯಾಗಿತ್ತು. ಕೆಲಸಕಾರ್ಯಗಳಿಗೆ ಹೋಗಿದ್ದ ಜನರು ಮನೆಗಳಿಗೆ ಹಿಂದಿರುಗುತ್ತಿದ್ದರು. ಕಾರು, ಬಸ್ಸು, ರಿಕ್ಷಾಗಳ ಸಂಚಾರ ಹೆಚ್ಚಾಗಿತ್ತು. ಎಲ್ಲರೂ ಅವಸರವಸರವಾಗಿ ಹೋಗುತ್ತಿದ್ದರು. ಆದರೆ, ಆಕೆಗೆ ಮಾತ್ರ ಮುಂದಡಿಯಿಡಲು ಆಗಲಿಲ್ಲ. ಹಸಿವು...... ಅವಳಿಗೊಂದೆ ಅಲ್ಲ. ಅವಳ ಹೊಟ್ಟೆಯಲ್ಲಿದ್ದ ಮಗುವಿಗೂ ಸಹ ಹಸಿವು...... ಆ ಹಸಿವು ಅವಳ ಅಂಗಾಂಗಗಳನ್ನು ವ್ಯಾಪಿಸಿ ಅವಳನ್ನು ಕ್ಷೀಣ ಗೊಳಿಸಿತು.

ಆ ರಸ್ತೆಯಲ್ಲಿ ಒಂದು ಶಿವಾಲಯವಿತ್ತು. ಅದರ ಮುಂದೆ, ಅದೆಷ್ಟೊ ಭಿಕ್ಷುಕರು ಕುಳಿತಿದ್ದರು. ಅಲ್ಲಿಯೇ ಪಕ್ಕದಲ್ಲಿ ಹಣ್ಣಿನ ಅಂಗಡಿಗಳಿದ್ದವು...... ತಿಂಡಿಗಳಿಂದ ತುಂಬಿದ ಅಂಗಡಿಗಳಿದ್ದವು. ನಾಲ್ಕು ಬಾಳೆಹಣ್ಣು ತಿಂದರೆ ಹೊಟ್ಟೆ ಶಾಂತವಾಗ ಬಹುದು—ಆದರೆ ಹಣ್ಣು ಕೊಳ್ಳಲು ದುಡ್ಡು......? ಗುಡಿಗೆ ಅದೆಷ್ಟೊ ಭಕ್ತರು—ಜರೀಸೀರೆ, ಆಭರಣಗಳಿಂದ ಸಾಲಂಕೃತರಾದ ಹೆಂಗಸರು, ಪಂಚೆಯುಟ್ಟು ಠೀವಿಯಿಂದ ನಡೆಯುತ್ತಿದ್ದ ಗಂಡಸರು—ಕಾರುಗಳಲ್ಲಿ, ರಿಕ್ಷಾಗಳಲ್ಲಿ ಬರುತ್ತಿದ್ದರು. ಗುಡಿಯ ಮುಂದೆ ಸಾಕಷ್ಟು ಜನ ಜಂಗುಳಿ ಇತ್ತು. ಆ ಗುಡಿಯ ಮುಂದೆ ಹೊರಟಿದ್ದಾಗಲೇ, ನೀಲಿಗೆ ತಲೆತಿರುಗಿದಂತಾಗಿ ಅಲ್ಲಿಯೇ ಕುಸಿದು ಕುಳಿತಳು. ಅಲ್ಲಿ, ಪಕ್ಕದಲ್ಲೆ ಕುಳಿತಿದ್ದ ಭಿಕ್ಷುಕಿಯೊಬ್ಬಳು, ತಮ್ಮ ಪಂಕ್ತಿಗೆ ಇನ್ನೊಬ್ಬಳು ಬಂದು ಸೇರಿದಳೆಂದು ಬಿರಿಬಿರಿ ನೋಡಿದಳು. ಇನ್ನೊಬ್ಬ ಭಿಕ್ಷುಕ, ಅವಳನ್ನು ಹರಿದು ತಿನ್ನುವಂತೆ ನೋಡಿದ.

ನೀಲಿ, ಮೇಲೇಳಲು ಕೈಲಾಗದೆ, ನಿರಾಶೆಯಿಂದ ಮಕ್ಕಳನ್ನು ನೋಡಿದಳು. ಮಲ್ಲೇ ಶಿಯ ದುಃಖ ಇನ್ನೂ ಕೆಡಿಮೆಯಾಗಿರಲಿಲ್ಲ. ಹೊಟ್ಟೆಯಲ್ಲಿನ ಕೂಸು ಕೂಡ, "ಅಮ್ಮಾ ಹಸಿವು"—ಎಂದು ಕೂಗಿಕೊಳ್ಳುತ್ತಿರುವಂತೆ ನೀಲಿಗೆ ಭಾಸವಾಯಿತು.

ಈ ಹೆಣ್ಣುಮಗಳು—ಯೌವನದಲ್ಲಿ ಲತೆಯಂತೆ ಬಳುಕುತ್ತಾ, ವಯ್ಯಾರದಿಂದ ತಿರುಗುತ್ತಾ, ಆಡುತ್ತಾ–ಹಾಡುತ್ತಾ ಹಾಯಾಗಿದ್ದಳು...... ಮದುವೆಯಾಗಿ ಮಲ್ಲಿಗೆ ಯಂತೆ ಅರಳಿ, ಮುಗ್ಧವಾದ—ತುಂಬಿದ ಜೀವನ ನಡೆಸಿದಳು...... ಹೆಂಡತಿಯಾಗಿ, ಹಠಮಾರಿಯಾದ ಗಂಡನ ಕಣ್ಣು ತೆರೆದಳು...... ಸೊಸೆಯಾಗಿ ಮನೆಯ ಗೌರವವನ್ನು ಕಾಪಾಡಿದಳು...... ಗೃಹಿಣಿಯಾಗಿ ಮನೆಗೆ ಬಂದವರಿಗೆಲ್ಲಾ ಇದ್ದುದನ್ನೆ ಕೊಟ್ಟು ಸತ್ಕರಿಸಿದಳು...... ಬಡವರಿಗೆ ನೆರವಾಗಿ, ಭಿಕ್ಷುಕರಿಗೆ ತಾಯಿಯಾಗಿ ಬದುಕಿದಳು.... ಒಂದು ದಿನವೂ ಕೂಡ, ತಾನು ಕೊಟ್ಟದ್ದನ್ನು ಹಿಂದಿರುಗಿ ಪಡೆಯಲಿಲ್ಲ......

ತನ್ನಲ್ಲಿದ್ದುದನ್ನೆ ಇತರರೊಡನೆ ಹಂಚಿಕೊಂಡಳಾದರೂ, ಇತರರ ಮುಂದೆ ಕೈ ಎತ್ತಲಿಲ್ಲ...... ಆದರೆ, ಇಂದು, ಅವಳ ಪವಿತ್ರವಾದ ಕೈಗಳು ಬರಿದಾಗಿದ್ದವು. ಹೊಟ್ಟೆಯ ಕೂಗನ್ನು ಸಹಿಸಲಾಗದೆ ಬೇಡಲು—ಭಿಕ್ಷೆ ಬೇಡಲು ಅವಳ ಕೈ ನಡುಗಿದವು...... ಬೇಡಲು ಕೈಗಳನ್ನು ಮೇಲೆತ್ತಬೇಕೆಂದುಕೊಂಡರೂ, ಅವು ಕೆಳಗೆ ಇರುತ್ತಿದ್ದವು...... ಕೊನೆಗೆ ಅತಿ ಪ್ರಯಾಸದಿಂದ, ಅವಳು ತನ್ನ ಕೈಗಳನ್ನು ಎದೆಯವರೆಗೂ ಮೇಲೆತ್ತಿ, ಭಿಕ್ಷೆ ಬೇಡುವವರಂತೆ ಹಿಡಿದು ತಲೆತಗ್ಗಿಸಿದಾಗ...... ಆ ಕೈಗಳ ಮೇಲೆ, ಅವಳ ಬೊಗಸೆಯಲ್ಲಿ...... ಆಕೆಯ ಎರಡೂ ಕಣ್ಣುಗಳಿಂದ ಹರಿದುಬಂದ...... ಎರಡು.... ಕೇವಲ ಎರಡೇ ಎರಡು ಮುತ್ತಿನ ಹನಿಗಳು ಉರುಳಿಬಿದ್ದವು.

— ಸಮಾಪ್ತಿ —

